ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೧೭

# ಬ್ರಹ್ಮಾಂಡಪುರಾಣಂ

(ಕನ್ನಡ ಅನುವಾದಸಹಿತ)

ಸಂಚಿಕೆ ೩

ಅನುವಾದಕ :

ಆಸ್ಥಾನ ವಿದ್ವಾನ್ ಪಾಟಣಕರ ಚಂದ್ರಶೇಖರಭಟ್ಟ.

---

ಮೈಸೂರು :

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

೧೯೪೫

# ವಿಷಯಾನುಕ್ರಮಣೀ

---

# ಪ್ರ ಸ್ತಾ ವ ನೆ

ಬ್ರಹ್ಮಾಂಡ ಪುರಾಣದಲ್ಲಿ ಮೂರನೆಯ ಸಂಚಿಕೆಯು ಈಗ ವಾಚಕರ ದೃಷ್ಟಿಗೆ ಗೋಚರವಾಗುವ ಸಮಯವು ಒದಗಿದೆ. ಅನೇಕಾದ್ಭುತಾರ್ಥಗಳನ್ನೊಳಗೊಂಡ ಈ ಭಾಗವು ವಾಚಕರ ಮನ್ನಣೆಗೆ ಪಾತ್ರವಾಗಿ ಮುಂದಿನ ಸಂಚಿಕೆಗಳ ಪ್ರಕಾಶಕ್ಕೆ ಅಸಾಧಾರಣವಾದ ಸಹಕಾರವನ್ನು ಮಾಡಲೆಂದು ಅರಿಕೆಮಾಡಿಕೊಳ್ಳುತ್ತೇನೆ.

ಈ ಸಂಚಿಕೆಯಲ್ಲಿ ಪರಿಮಾಣಕ್ಕೆ ತಕ್ಕಂತೆ ಇಪ್ಪತ್ತನಾಲ್ಕು ಅಧ್ಯಾಯಗಳು ಮಾತ್ರ ಸೇರಿಕೊಂಡಿವೆ. ಇವುಗಳಲ್ಲಿ ಮೊದಲು ಕೆಲವು ಅಧ್ಯಾಯಗಳಲ್ಲಿ ಕಶ್ಯಪ ಮುನಿ ಮುಂತಾದ ಸಪ್ತರ್ಷಿಗಳ ಉತ್ಪತ್ತಿ ; ಮತ್ತು ಅವರ ವಂಶ ವೃಕ್ಷದ ಬೆಳವಣಿಗೆಗಳು ವರ್ಣಿಸಲ್ಪಟ್ಟಿವೆ. ಮುಂದೆ ಅನೇಕ ಅಧ್ಯಾಯಗಳಲ್ಲಿ ಶ್ರಾದ್ಧಕಲ್ಪವನ್ನು ವಿಸ್ತಾರವಾಗಿ ವರ್ಣಿಸಿದೆ. ನಾವು ಆ ವಿಷಯವನ್ನು ಆಸ್ತಿಕತೆಯಿಂದ ಗಮನಿಸುವುದು ಆವಶ್ಯಕವು. "ದೇವಕಾರ್ಯಾದಪಿ ಸದಾ ಪಿತೃಕಾರ್ಯಂ ವಿಶಿಷ್ಯತೇ" ಎಂದು ಪಿತೃಕಾರ್ಯಕ್ಕೆ ಪ್ರಾಶಸ್ತ್ಯವು ಕೀರ್ತಿಸಲ್ಪಟ್ಟಿರುವುದು.

ಇಂತಹ ಶ್ರಾದ್ಧ ವಿಧಾನಗಳಲ್ಲಿ ನಾಸ್ತಿಕರ ವಿಚಿತ್ರವಾದ ಆಕ್ಷೇಪಗಳು ತತ್ಕಾಲದಲ್ಲಿ ಸರ್ವರಿಗೂ ಹೃದಯಂಗಮವಾಗಿ ಕೇಳಿಸುತ್ತಿವೆ; ಮೃತರಾದ ಜಂತುಗಳಿಗೆ ಶ್ರಾದ್ಧಾನ್ನವು ತೃಪ್ತಿಯನ್ನು ಕೊಡುವುದಾದರೆ ಆರಿಹೋದ ದೀಪಕ್ಕೆ ಎಣ್ಣೆಯನ್ನು ಸುರಿದರೆ ದೀಪವು ಉರಿಯಲಾರಂಭಿಸಬಹುದು ; ಮತ್ತು ದೇಶಾಂತರ ಪ್ರವಾಸಿಗಳಿಗೆ ಬುತ್ತಿಯನ್ನು ಕಟ್ಟಿಕೊಡುವ ಬದಲು ಅವರಿಗೋಸ್ಕರ ಮನೆಯಲ್ಲಿ ಶ್ರಾದ್ಧವನ್ನು ಆಚರಿಸಿದರೆ ಸುಲಭವಾಗಿ ಅವರಿಗೆ ತೃಪ್ತಿಯು ದೊರೆಯಬಹುದು ; ಇದೆಲ್ಲ ನಾಸ್ತಿಕರ ಆಕ್ಷೇಪವಾಗ್ಜಾಲದ ಸಾರವು.

ಇದಕ್ಕೆ ಶಾಸ್ತ್ರಾಧಾರ-ಯುಕ್ತಿ-ಆಸ್ತಿಕತೆಗಳಿಂದ ಸಮಾಧಾನಗಳನ್ನು ಚಿಂತಿಸಬೇಕು. ಶಾಸ್ತ್ರದಲ್ಲಿ ಪ್ರಾಣಿಗೆ ಮರಣಾನಂತರದಲ್ಲಿ ಹಿಂದಿನ ಸುಕೃತ-ದುಷ್ಕೃತಗಳ ಫಲವನ್ನು ಅನುಭವಿಸಲು ಮತ್ತೊಂದು ದೇಹವು ಬರುವುದೆಂದು ಹೇಳಿದೆ. ದೇಹಾಂತರದಲ್ಲಿರುವ ಜೀವನಿಗೆ ಪುತ್ರದತ್ತವಾದ ಶ್ರಾದ್ಧಾನ್ನವು ತೃಪ್ತಿಯನ್ನು ಕೊಡುವುದು. ಲೋಕದಲ್ಲಿ ವಸ್ತುಗಳಿಗೆ ಪೂರ್ವರೂಪವು ಹೋಗಿ ರೂಪಾಂತರವುಂಟಾಗುತ್ತ ವಸ್ತುಪರಿಣಾಮಪ್ರವಾಹವು ಚಲಿಸುತ್ತಿರುವುದಲ್ಲವೆ! ಸಂಪೂರ್ಣವಾಗಿ ವಸ್ತುತತ್ತ್ವಕ್ಕೆ ನಾಶವಿಲ್ಲ. ಪೂರ್ವರೂಪ-ರೂಪಾಂತರಗಳಿಗೆ ಅನಿರ್ವಚನೀಯವಾದ ತಾರತಮ್ಯವು ಇರುವುದು. ಆದುದರಿಂದ ಪೂರ್ವಾಪರದಶೆಗಳಲ್ಲಿ ಐಕ್ಯಪ್ರತ್ಯಭಿಜ್ಞಾನವು ದುರ್ಲಭವಾಗುವುದು. ಬೀಜದಿಂದ ಅಂಕುರಾದಿಗಳ ಮೂಲಕ ಮಹಾವೃಕ್ಷವು ಜನಿಸುವುದು.

ಅದು ಅಗ್ನಿಯಿಂದ ಸುಟ್ಟು ಭಸ್ಮವಾಗುವುದು. ಅಥವಾ ನಿರ್ಜೀವವಾದರೆ ಕ್ರಮವಾಗಿ ಮಣ್ಣಿನ ಪಾಲಾಗುವುದು. ಈ ಎಲ್ಲ ಅವಸ್ಥೆಗಳಲ್ಲಿಯೂ ಆಕಾರ-ಪರಿಮಾಣಗಳಲ್ಲಿ ತಾರತಮ್ಯವು ಉಂಟಾಗುವುದು. ಈ ಪರಿಣಾಮಗಳು ಕೆಲವು ನಿಮಿತ್ತ ವಿಶೇಷಗಳಿಂದ ಸ್ಥೂಲರೂಪಗಳಿಗೆ ತತ್‌ಕ್ಷಣದಲ್ಲಿ ಸಂಭವಿಸುವುವು. ಕೆಲವು ಅದೃಶ್ಯವಾದ ಸೂಕ್ಷ್ಮರೂಪಗಳಿಂದ ಆಗುವುವು. ಗೆಜ್ಜಲುಹಿಡಿದ ಮರವು ಸ್ವಲ್ಪ ಹೊತ್ತಿನಲ್ಲಿ ಮಣ್ಣಾಗುವುದು. ಇದು ಸ್ಥೂಲರೂಪದ ಪರಿಣಾಮವು. ದುಂಬಿಗಳು ಪುಷ್ಪದ ಸಾರಾಂಶವನ್ನು ಹೀರಿ ಅದರಿಂದ ಮಧುರಸವನ್ನು ನಿರ್ಮಿಸುವುವು, ಮಧುರಸವು ಪುಷ್ಪದ ಸೂಕ್ಷ್ಮಾಂಶದ ಪರಿಣಾಮವು.

ಹೀಗಿರಲು ಪುತ್ರನು ಶ್ರದ್ಧಾ-ಭಾವನಾಪೂರ್ವಕವಾಗಿ ಆಚರಿಸಿದ ಶ್ರಾದ್ಧ ಕರ್ಮದಲ್ಲಿ ವಿನಿಯೋಗಿಸಿದ ಮಂತ್ರಮಯವಾದ ಹವಿಸ್ಸು ಸೂಕ್ಷ್ಮಾಂಶದಿಂದ ಪಿತೃ ಪ್ರೀತಿಕರವಾದ ಆಹಾರರೂಪವನ್ನು ಹೊಂದಿ ಪಿತೃವರ್ಗವನ್ನು ಹೊಂದುವುದೆಂಬುದು ಅಸಮಂಜಸವಲ್ಲ. ಸೂಕ್ಷ್ಮಾಂಶವು ಈ ರೀತಿಯ ಪರಿಣಾಮವನ್ನು ಹೊಂದಲಾರದೆಂಬುದು ಪ್ರತ್ಯಕ್ಷಾದಿ ಪ್ರಮಾಣಶೂನ್ಯವಾದ ನಾಸ್ತಿಕತೆಯ ಪರಾಕಾಷ್ಠೆಯವಾದವು. ವಸ್ತುಗಳಿಗೆ ನಿಮಿತ್ತ ವಿಶೇಷಗಳಿಂದ ಆಗುವ ವಿಚಿತ್ರ ಸನ್ನಿವೇಶ-ಶಕ್ತಿಗಳು ವೈಜ್ಞಾನಿಕರಿಗೂ ಸಮ್ಮತವಾಗಿವೆ. "ಅಪಾಡ್ತ್ವವ್ಯಾನಿ ಸುರಭೀಣಿ ಕೃತ್ವಾ" ಎಂಬಿವೇ ಮುಂತಾದ ಶಾಸ್ತ್ರಪ್ರಾಮಾಣ್ಯದಿಂದ ಸತ್ಕರ್ಮಗಳಲ್ಲಿ ವಿನಿಯೋಗಿಸುವ ವಸ್ತುಗಳು ಉದ್ದಿಷ್ಟ ದೇವತೆಯ ಮಹಿಮೆಯಿಂದ ರೂಪಾಂತರವನ್ನು ಹೊಂದಿ ಆಯಾಯ ಉದ್ದೇಶಕ್ಕೆ ತಕ್ಕಂತೆ ಪ್ರೀತಿಯನ್ನು ಕೊಟ್ಟು ಶ್ರೇಯಃಸಾಧನಗಳಾಗುವುವೆಂಬುದಾಗಿ ಆಸ್ತಿಕರು ನಂಬಿರುವರು. ಹೀಗೆ ಪಿತೃಕರ್ಮಾನುಷ್ಠಾನವನ್ನು ಭಕ್ತಿಯಿಂದ ಆಚರಿಸಿ ಪಿತೃ ಪ್ರಸಾದಕ್ಕೆ ಭಾಗಿಯಾದವರು ಸಮೃದ್ಧಿಯಿಂದ ಬಾಳುವರು.

ಶ್ರಾದ್ಧಕಲ್ಪದ ವರ್ಣನೆಯು ಮುಗಿದ ಬಳಿಕ ಪರಶುರಾಮನ ಚರಿತ್ರೆಯು ಉಪಕ್ರಮವಾಗಿ ಅದು ಮುಂದಿನ ಸಂಚಿಕೆಯಲ್ಲಿ ವಿಶೇಷವಾಗಿ ಅನುವೃತ್ತವಾಗುವುದು. ಈ ರೀತಿಯಾಗಿ ಅಮೋಘವಿಷಯಗಳನ್ನು ಪ್ರತಿಪಾದಿಸುತ್ತ ಈ ಸಂಚಿಕೆಯು ಕೊನೆಗಂಡಿರುವುದು.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ. ಸಿ. ಎಸ್. ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನಮಾಡಿರುತ್ತೇನೆ. ಇದು ಉತ್ತಮರೀತಿಯಿಂದ ಅಂದವಾಗಿರುವಂತೆ ಮುದ್ರಿಸಲ್ಪಟ್ಟಿರುತ್ತದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆಮಾಡಲು ಅವಕಾಶಮಾಡಿಕೊಟ್ಟ ಮಹನೀಯರಿಗೆ ತುಂಬ ಕೃತಜ್ಞನಾಗಿರುತ್ತೇನೆ.

ಅನುವಾದಕ

ಶ್ರೀಃ

# ಬ್ರಹ್ಮಾಂಡಪುರಾಣಂ

## ಪ್ರಥಮೋಽಧ್ಯಾಯಃ

**ಶಾಂಶಪಾಯನ ಉವಾಚ :—**

**ಪಾದಶ್ಲೋಕೋ ದ್ವಿತೀಯಸ್ತು ಅನುಷಂಗೇನ ನಸ್ತ್ವಯಾ ।**
**ತೃತೀಯಂ ವಿಸ್ತರಾತ್ ಪಾದಂ ಸೋಪೋದ್ಘಾತಂ ಪ್ರವರ್ತಯ ॥ ೧ ॥**

**ಸೂತ ಉವಾಚ :—**

**ಕೀರ್ತಯಿಷ್ಯೇ ತೃತೀಯಂ ವಃ ಸೋಪೋದ್ಘಾತಂ ಸವಿಸ್ತರಮ್ ।**
**ಪಾದಂ ಸಮುಚ್ಚಯಾದ್ವಿಪ್ರಾ ಗದತೋ ಮೇ ನಿಬೋಧತ ॥ ೨ ॥**

**ಮನೋರ್ವೈವಸ್ವತಸ್ಯೇಮಂ ಸಾಂಪ್ರತಂ ತು ಮಹಾತ್ಮನಃ ।**
**ವಿಸ್ತರೇಣಾನುಪೂರ್ವ್ಯಾ ಚ ನಿಸರ್ಗಂ ಶೃಣುತ ದ್ವಿಜಾಃ ॥ ೩ ॥**

**ಚತುರ್ಯುಗೈಕಸಪ್ತತ್ಯಾ ಸಂಖ್ಯಾತಂ ಪೂರ್ವಮೇವ ತು ।**
**ಸಹ ದೇವಗಣೈಶ್ಚೈವ ಋಷಿಭಿರ್ದಾನವೈಃ ಸಹ ॥ ೪ ॥**

---

೧. ಶಾಂಶಪಾಯನ ಮಹರ್ಷಿಯು ಹೀಗೆ ಹೇಳಿದನು. ಮುನಿಯೇ, ನಿನ್ನಿಂದ ಅನುಷಂಗಪಾದವೆಂಬ ಎರಡನೆಯ ಪಾದವು ನಮಗೆ ಉಪದೇಶಿಸಲ್ಪಟ್ಟಿತು. ಈಗ ಉಪೋದ್ಘಾತಪಾದವೆಂಬ ಮೂರನೆಯ ಪಾದವನ್ನು ವಿಸ್ತಾರವಾಗಿ ಬೋಧಿಸು.

೨. ಸೂತಮುನಿಯು ಪ್ರತ್ಯುತ್ತರವಿತ್ತನು. ನಾನು ಉಪೋದ್ಘಾತವೆಂಬ ಮೂರನೆಯ ಪಾದವನ್ನು ಸಂಪೂರ್ಣವಾಗಿ ವಿಸ್ತಾರದಿಂದ ಹೇಳುವೆನು. ಅವನ್ನು ವರ್ಣಿಸುವ ನನ್ನ ಮಾತನ್ನು ಶ್ರವಣಮಾಡಿರಿ.

೩. ದ್ವಿಜರೇ ! ಮಹಾತ್ಮನಾದ ವೈವಸ್ವತಮನುವಿನ ಈ ವರ್ತಮಾನವಾದ ಸೃಷ್ಟಿಕ್ರಮವನ್ನು ವಿಸ್ತಾರ ಮತ್ತು ಆನುಪೂರ್ವಿಗಳಿಂದ ಕೂಡಿ ಹೇಳುವುದನ್ನು ಕೇಳಿ.

೪. ಆ ಮನ್ವಂತರವು ಹಿಂದೆ ಎಪ್ಪತ್ತು ಚತುರ್ಯುಗಪರಿವೃತ್ತಿಯಿಂದ ಕೂಡಿದೆ

1

**ಪಿತೃಗಂಧರ್ವಯಕ್ಷೈಶ್ಚ ರಕ್ಷೋಭೂತಮಹೋರಗೈಃ ।**
**ಮಾನುಷೈಃ ಪಶುಭಿಶ್ಚೈವ ಪಕ್ಷಿಭಿಃ ಸ್ಥಾವರೈಃ ಸಹ ॥ ೫ ॥**

**ಮನ್ವಾದಿಕಂ ಭವಿಷ್ಯಾಂತಮಾಖ್ಯಾನೈರ್ಬಹುಭಿರ್ಯುತಮ್ ।**
**ವಕ್ಷ್ಯೇ ವೈವಸ್ವತಂ ಸರ್ಗಂ ನಮಸ್ಕೃತ್ವಾ ವಿವಸ್ವತೇ ॥ ೬ ॥**

**ಆದ್ಯೇ ಮನ್ವಂತರೇಽತೀತಾಃ ಸರ್ಗಪ್ರಾವರ್ತಕಾಸ್ತು ಯೇ ।**
**ಸ್ವಾಯಂಭುವೇಽಂತರೇ ಪೂರ್ವಂ ಸಪ್ತಾಸನ್ ಯೇ ಮಹರ್ಷಯಃ ॥ ೭ ॥**

**ಚಾಕ್ಷುಷಸ್ಯಾಂತರೇಽತೀತೇ ಪ್ರಾಪ್ತೇ ವೈವಸ್ವತೇ ಪುನಃ ।**
**ದಕ್ಷಸ್ಯ ಚ ಋಷೀಣಾಂ ಚ ಭೃಗ್ವಾದೀನಾಂ ಮಹೌಜಸಾಮ್ ॥ ೮ ॥**

**ಶಾಪಾನ್ಮಹೇಶ್ವರಸ್ಯಾಸೀತ್ ಪ್ರಾದುರ್ಭಾವೋ ಮಹಾತ್ಮನಾಮ್**
**ಭೂಯಃ ಸಪ್ತರ್ಷಯಸ್ತ್ವೇವಮುತ್ಪನ್ನಾಃ ಸಪ್ತ ಮಾನಸಾಃ ॥ ೯ ॥**

---

ಎಂದು ಎಣಿಸಲ್ಪಟ್ಟಿದೆ. ಮತ್ತು ದೇವಗಣ ಋಷಿ ದಾನವರ ಸಂಬಂಧದಿಂದ ಕೂಡಿರುವುದೂ ಆಗಿದೆ.

೫. ಮತ್ತು ಪಿತೃ, ಗಂಧರ್ವ, ಯಕ್ಷ, ರಾಕ್ಷಸ, ಭೂತ, ಸರ್ಪ, ಮನುಷ್ಯ, ಪಶು, ಪಕ್ಷಿ ಮತ್ತು ಸ್ಥಾವರಗಳ ಅನೇಕ ಆಖ್ಯಾನಗಳಿಂದ ಕೂಡಿಕೊಂಡಿದೆ.

೬. ಹಾಗೂ ಅನೇಕ ಆಖ್ಯಾನಗಳಿಂದ ಕೂಡಿದ, ಮನ್ವಾದಿ ಮೊದಲುಗೊಂಡು ಭವಿಷ್ಯದ ವರೆಗಿನ ಸೂರ್ಯನಿಂದ ಉಂಟಾದ ಸೃಷ್ಟಿ ಕ್ರಮವನ್ನು ಮೂಲಪುರುಷನಾದ ಸೂರ್ಯದೇವನಿಗೆ ನಮಸ್ಕರಿಸಿ ವರ್ಣಿಸುವೆನು.

೭. ಮೊದಲನೆಯ ಮನ್ವಂತರದಲ್ಲಿ ಸೃಷ್ಟಿಪ್ರವರ್ತಕರಾದ ಏಳು ಮಹರ್ಷಿಗಳು ಪೂರ್ವದ ಸ್ವಾಯಂಭುವ ಎಂಬ ಮನ್ವಂತರದಲ್ಲಿಯೂ ಸೃಷ್ಟಿನಿಯಾಮಕರಾಗಿದ್ದರು.

೮. ಚಾಕ್ಷುಷವೆಂಬ ಮನ್ವಂತರವು ಕಳೆದು ವೈವಸ್ವತವೆಂಬ ಮನ್ವಂತರವು ಪ್ರಾರಂಭವಾಗಲು ಮಹಾ ತೇಜಸ್ವಿಗಳಾದ ಭೃಗು ಮುಂತಾದ ಮಹರ್ಷಿ, ದಕ್ಷಬ್ರಹ್ಮ ಮುಂತಾದವರು ಜನಿಸಿದರು.

೯. ಆ ಮಹಾತ್ಮರಿಗೆ ಈಶ್ವರನ ಶಾಪದಿಂದ ಮತ್ತೆ ಜನ್ಮವು ಉಂಟಾಯಿತು. ಹೀಗೆ ಮಾನಸರಾದ ಏಳು ಮಂದಿ ಸಪ್ತರ್ಷಿಗಳು ಮತ್ತೆ ಹುಟ್ಟಿದರು.

ಪುತ್ರತ್ವೇ ಕಲ್ಪಿತಾಶ್ಚೈವ ಸ್ವಯಮೇವ ಸ್ವಯಂಭುವಾ ।
ಪ್ರಜಾಸಂತಾನಕೃದ್ಭಿಸ್ತೈರುತ್ಪದದ್ಭಿರ್ಮಹಾತ್ಮಭಿಃ ॥ ೧೦ ॥

ಪುನಃ ಪ್ರವರ್ತಿತಃ ಸರ್ಗೋ ಯಥಾಪೂರ್ವಂ ಯಥಾಕ್ರಮಮ್ ।
ತೇಷಾಂ ಪ್ರಸೂತಿಂ ವಕ್ಷ್ಯಾಮಿ ವಿಶುದ್ಧಜ್ಞಾನಕರ್ಮಣಾಮ್ ॥ ೧೧ ॥

ಸಮಾಸವ್ಯಾಸಯೋಗಾಭ್ಯಾಂ ಯಥಾವದನುಪೂರ್ವಶಃ ।
ಯೇಷಾಮನ್ವಯಸಂಭೂತೈರ್ಲೋಕೋಽಯಂ ಸಚರಾಚರಃ ॥ ೧೨ ॥

ಋಷಯ ಊಚುಃ :—

ಕಥಂ ಸಪ್ತರ್ಷಯಃ ಪೂರ್ವಮುತ್ಪನ್ನಾಃ ಸಪ್ತ ಮಾನಸಾಃ ।
ಪುತ್ರತ್ವೇ ಕಲ್ಪಿತಾಶ್ಚೈವ ತನ್ನೋ ನಿಗದ ಸತ್ತಮ ॥ ೧೩ ॥

ಸೂತ ಉವಾಚ :—

ಪೂರ್ವಂ ಸಪ್ತರ್ಷಯಃ ಪ್ರೋಕ್ತಾ ಯೇ ವೈ ಸ್ವಾಯಂಭುವೇಽಂತರೇ
ಮನೋರಂತರಮಾಸಾದ್ಯ ಪುನರ್ವೈವಸ್ವತಂ ಕಿಲ ॥ ೧೪

---

೧೦. ಬ್ರಹ್ಮನಿಂದ ಪ್ರಜಾಸಂತತಿಯನ್ನು ಹೆಚ್ಚಾಗಿ ವೃದ್ಧಿಮಾಡಲು ಮತ್ತೆ ಮತ್ತೆ ಜನ್ಮವೆತ್ತುವ ಆ ಮಹಾತ್ಮರು ತಾನಾಗಿ ಪುತ್ರರೂಪದಿಂದ ಕಲ್ಪಿಸಲ್ಪಟ್ಟರುವರು.

೧೧. ಅವರಿಂದ ಪೂರ್ವಸರ್ಗವನ್ನು ಅನುಸರಿಸಿ ಕ್ರಮವಾಗಿ ಸೃಷ್ಟಿಯು ಪ್ರವರ್ತಿಸಲ್ಪಟ್ಟಿತು. ಶುದ್ಧವಾದ ಜ್ಞಾನ ಮತ್ತು ಕರ್ಮಯೋಗಗಳಿಂದ ಕೂಡಿದ ಆ ಮಹಾತ್ಮರ ವಂಶಾವಳಿಯನ್ನು ಹೇಳುತ್ತೇನೆ.

೧೨. ಆ ವಂಶಾವಳಿಯು ಸಂಗ್ರಹ ಮತ್ತು ವಿಸ್ತಾರಗಳಿಂದ ಕ್ರಮವಾಗಿ ವರ್ಣಿಸಲ್ಪಡುವುದು. ಅವರ ವಂಶದಿಂದ ಹುಟ್ಟಿದ ಮಹಾತ್ಮರಿಂದ ಚರ, ಅಚರ ಮತ್ತು ಗ್ರಹನಕ್ಷತ್ರಗಳಿಂದ ಅಲಂಕರಿಸಲ್ಪಟ್ಟ ಈ ಸರ್ವಲೋಕವು ಮತ್ತೆ ಪೂರ್ಣ ಮಾಡಲ್ಪಟ್ಟಿತು.

೧೩. ಋಷಿಗಳು ಪ್ರಶ್ನಿಸಿದರು :—ಹಿಂದೆ ಮಾನಸರಾದ ಏಳುಮಂದಿ ಸಪ್ತರ್ಷಿಗಳು ಹೇಗೆ ಹುಟ್ಟಿದರು. ಮತ್ತು ಬ್ರಹ್ಮನು ಅವರನ್ನು ಪುತ್ರರೂಪವಾಗಿ ಹೇಗೆ ಕಲ್ಪಿಸಿದನು. ಸಾಧುವಾದ ಮುನಿಯೇ, ನಮಗೆ ಅದನ್ನು ವರ್ಣಿಸು.

೧೪. ಸೂತಮುನಿಯು ಇಂತೆಂದನು:— ಪೂರ್ವದ ಸ್ವಾಯಂಭುವ ಮನ್ವಂತರ

ಭವಾಭಿಶಾಪಸಂವಿದ್ಧಾ ಅಪ್ರಾಪ್ತಾಸ್ತೇ ತದಾ ತಪಃ ।
ಉಪಪನ್ನಾ ಜನೇ ಲೋಕೇ ಸಕೃದಾಗಮನಾಸ್ತು ತೇ ॥ ೧೫ ॥

ಊಚುಃ ಸರ್ವೇ ಸದಾನ್ಯೋನ್ಯಂ ಜನಲೋಕೇ ಮಹರ್ಷಯಃ ।
ಏತ ಏವ ಮಹಾಭಾಗಾಃ ವಾರುಣೇ ವಿತತೇಽಧ್ವರೇ ॥ ೧೬ ॥

ಸರ್ವೇ ವಯಂ ಪ್ರಸೂಯಾಮಶ್ಚಾಕ್ಷುಷಸ್ಯಾಂತರೇ ಮನೋಃ ।
ಪಿತಾಮಹಾತ್ಮಜಾಃ ಸರ್ವೇ ತನ್ನಃ ಶ್ರೇಯೋ ಭವಿಷ್ಯತಿ ॥ ೧೭ ॥

ಏವಮುಕ್ತ್ವಾ ತು ತೇ ಸರ್ವೇ ಚಾಕ್ಷುಷಸ್ಯಾಂತರೇ ಮನೋಃ ।
ಸ್ವಾಯಂಭುವೇಽಂತರೇ ಪ್ರಾಪ್ತಾಃ ಸೃಷ್ಟ್ಯರ್ಥಂ ತೇ ಭವೇನ ತು ॥ ೧೮ ॥

ಜಜ್ಞಿರೇ ಹ ಪುನಸ್ತೇ ವೈ ಜನಲೋಕಾದಿಹಾಗತಾಃ ।
ದೇವಸ್ಯ ಮಹತೋ ಯಜ್ಞೇ ವಾರುಣೀಂ ಬಿಭ್ರತಸ್ತನುಮ್ ॥ ೧೯ ॥

---

ದಲ್ಲಿ ಹೇಳಲ್ಪಟ್ಟಿರುವ ಸಪ್ತರ್ಷಿಗಳು ವೈವಸ್ವತವೆಂಬ ಮನ್ವಂತರವನ್ನು ಕ್ರಮವಾಗಿ ಹೊಂದಿದರು.

೧೫. ಅವರು ಈಶ್ವರನ ಶಾಪದಿಂದ ಪೀಡಿಸಲ್ಪಟ್ಟವರಾಗಿ ತಮ್ಮ ತಪೋ ಮಹಿಮೆಯನ್ನು ಕಳೆದುಕೊಂಡು ಒಂದು ಆವರ್ತಿಯಿಂದ ಆಗಮನವುಳ್ಳವರಾಗಿ ಜನೋಲೋಕದಲ್ಲಿ ಹುಟ್ಟಿದರು.

೧೬. ಆ ಎಲ್ಲ ಮಹಾಶಯರಾದ ಮಹರ್ಷಿಗಳು ಜನಲೋಕದಲ್ಲಿ ವರುಣ ದೇವತೆಯ ವಿಸ್ತಾರವಾದ ಯಾಗವು ನಡೆಯುತ್ತಿರಲು ಅನ್ಯೋನ್ಯವಾಗಿ ಮಾತನಾಡಿದರು.

೧೭. ನಾವೆಲ್ಲರು ಚಾಕ್ಷುಷನೆಂಬ ಮನುವಿನ ಮನ್ವಂತರಾವಧಿಯಲ್ಲಿ ಬ್ರಹ್ಮನ ಪುತ್ರರಾಗಿ ಜನ್ಮವನ್ನು ಹೊಂದೋಣ, ಅದರಿಂದ ನಮ್ಮೆಲ್ಲರಿಗೆ ಶ್ರೇಯಸ್ಸು ಲಭಿಸುವುದು.

೧೮. ಚಾಕ್ಷುಷಮನುವಿನ ಮನ್ವಂತರದಲ್ಲಿ ಅವರೆಲ್ಲರೂ ಈ ರೀತಿಯಾಗಿ ಹೇಳಿ ಸ್ವಾಯಂಭುವ ಮನ್ವಂತರವನ್ನು ಹೊಂದಿ, ಈಶ್ವರನಿಂದ ಸೃಷ್ಟಿವಿಸ್ತಾರಕ್ಕೋಸ್ಕರ ಮತ್ತೆ ಪ್ರೇರೇಪಿಸಲ್ಪಟ್ಟರು.

೧೯. ಅವರು ಜನಲೋಕದಿಂದ ಇಲ್ಲಿಗೆ ಬಂದು ಯಜ್ಞದಲ್ಲಿ ವರುಣಮೂರ್ತಿಯನ್ನು ಧರಿಸಿರುವ ಮಹಾದೇವನ ಸಂಕಲ್ಪದಂತೆ ಮತ್ತೆ ಹುಟ್ಟಿದರು.

ಬ್ರಹ್ಮಣೋ ಜುಹ್ವತಃ ಶುಕ್ರಮಗ್ನೌ ಪೂರ್ವಂ ಪ್ರಜೇಪ್ಸಯಾ ।
ಋಷಯೋ ಜಜ್ಞಿರೇ ಪೂರ್ವೇ ದ್ವಿತೀಯಮಿತಿ ನಃ ಶ್ರುತಮ್ ॥ ೨೦ ॥

ಭೃಗ್ವಂತರಾ ಮರೀಚಿಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।
ಅತ್ರಿಶ್ಚೈವ ವಸಿಷ್ಠಶ್ಚ ಹ್ಯಷ್ಟೌ ತೇ ಬ್ರಹ್ಮಣಃ ಸುತಾಃ ॥ ೨೧ ॥

ತಥಾಸ್ಯ ವಿತತೇ ಯಜ್ಞೇ ದೇವಾಃ ಸರ್ವೇ ಸಮಾಗತಾಃ ।
ಯಜ್ಞಾಂಗಾನಿ ಚ ಸರ್ವಾಣಿ ವಷಟ್ಕಾರಶ್ಚ ಮೂರ್ತಿಮಾನ್ ॥ ೨೨ ॥

ಮೂರ್ತಿಮಂತಿ ಚ ಸಾಮಾನಿ ಯಜೂಂಷಿ ಚ ಸಹಸ್ರಶಃ ।
ಋಗ್ವೇದಶ್ಚಾಭವತ್ತತ್ರ ಯಶ್ಚ ಕ್ರಮವಿಭೂಷಿತಃ ॥ ೨೩ ॥

ಯಜುರ್ವೇದಶ್ಚ ವೃತ್ತಾಢ್ಯ ಓಂಕಾರವದನೋಜ್ಜ್ವಲಃ ।
ಸ್ಥಿತೋ ಯಜ್ಞಾರ್ಥಸಂಪೃಕ್ತಃ ಸೂಕ್ತಬ್ರಾಹ್ಮಣಮಂತ್ರವಾನ್ ॥ ೨೪ ॥

---

೨೦. ಅಗ್ನಿಯಲ್ಲಿ ಪ್ರಜಾಕಾಮನೆಯಿಂದ ಶುದ್ಧವಾದ ವೀರ್ಯವನ್ನು ಹೋಮ ಮಾಡುತ್ತಿರುವ ಬ್ರಹ್ಮನಿಂದ ಋಷಿಗಳು ದ್ವಿತೀಯ ಜನ್ಮವನ್ನು ಹೊಂದಿದರೆಂದು ನಾವು ಕೇಳಿರುವೆವು.

೨೧. ಭೃಗು, ಅಂಗಿರ, ಮರೀಚಿ ಪುಲಸ್ತ್ಯ, ಪುಲಹ, ಕ್ರತು, ಅತ್ರಿ ಮತ್ತು ವಸಿಷ್ಠ ಎಂಬ ಎಂಟುಮಂದಿ ಋಷಿಗಳು ಬ್ರಹ್ಮನ ಪುತ್ರರಾಗಿ ಜನಿಸಿದರು.

೨೨. ಹಾಗೆಯೇ ಬ್ರಹ್ಮನ ವಿಸ್ತಾರವಾದ ಯಜ್ಞದಲ್ಲಿ ಸಮಸ್ತ ದೇವತೆಗಳೂ ಬಂದರು. ಮತ್ತು ಎಲ್ಲ ಯಜ್ಞಾಂಗಗಳೂ ವಷಟ್ಕಾರವೂ ಮೂರ್ತಿಮತ್ತಾಗಿ ಬಂದವು.

೨೩. ಹಾಗೆ ಸಾಮಮಂತ್ರಗಳು, ಯಜುರ್ವೇದಗಳು, ಸಾವಿರಾರು ಸಂಖ್ಯೆಯಿಂದ ಮೂರ್ತಿಮತ್ತಾಗಿ ಸಮೀಪಕ್ಕೆ ಬಂದವು. ಹಾಗೆ ಕ್ರಮಪಾಠದಿಂದ ಅಲಂಕರಿಸಲ್ಪಟ್ಟ ಋಗ್ವೇದವು ಸನ್ನಿಧಿಗೆ ಬಂತು.

೨೪ ಮತ್ತು ನಾನಾ ಚರಿತ್ರೆಗಳಿಂದ ಪೂರ್ಣವಾದ, ಓಂಕಾರವೆಂಬ ಮುಖದಿಂದ ಶೋಭಿಸುವ ಯಜುರ್ವೇದವು ಸೂಕ್ತ ಬ್ರಾಹ್ಮಣ ಮತ್ತು ಮಂತ್ರವೆಂಬ ವಿಭಾಗಗಳಿಂದ ಕೂಡಿ ಯಜ್ಞಾರ್ಥದ ಸಂಬಂಧವನ್ನು ಹೊಂದಿತು.

**ಸಾಮವೇದಶ್ಚ ವೃತ್ತಾಢ್ಯಃ ಸರ್ವಗೇಯಪುರಃಸರಃ ।**
**ವಿಶ್ವಾವಸ್ವಾದಿಭಿಃ ಸಾರ್ಧಂ ಗಂಧರ್ವೈಃ ಸಂಭೃತೋಽಭವತ್ ॥ ೨೫ ॥**

**ಬ್ರಹ್ಮವೇದಸ್ತಥಾ ಘೋರೈಃ ಕೃತ್ವಾ ವಿಧಿಭಿರನ್ವಿತಃ ।**
**ಪ್ರತ್ಯಂಗಿರಸಯೋಗೈಶ್ಚ ದ್ವಿಶರೀರಶಿರೋಽಭವತ್ ॥ ೨೬ ॥**

**ಲಕ್ಷಣಾ ವಿಸ್ತರಾಃ ಸ್ತೋಭಾ ನಿರುಕ್ತಸ್ವರಭಕ್ತಯಃ ।**
**ಆಶ್ರಯಸ್ತು ವಷಟ್ಕಾರೋ ನಿಗ್ರಹಪ್ರಗ್ರಹಾವಪಿ ॥ ೨೭ ॥**

**ದೀಪ್ತಿಮೂರ್ತಿರಿಲಾದೇವೀ ದಿಶಶ್ಚ ಸದಿಗೀಶ್ವರಾಃ ।**
**ದೇವಕನ್ಯಾಶ್ಚ ಪತ್ನ್ಯಶ್ಚ ತಥಾ ಮಾತರ ಏವ ಚ ॥ ೨೮ ॥**

**ಆಯಯುಃ ಸರ್ವ ಏವೈತೇ ದೇವಸ್ಯ ಯಜತೋ ಮಖೇ ।**
**ಮೂರ್ತಿಮಂತಃ ಸುರೂಪಾಖ್ಯಾ ವರುಣಸ್ಯ ವಪುರ್ಭೃತಃ ॥ ೨೯ ॥**

---

೨೫. ಹಾಗೆಯೇ ದಿವ್ಯಚರಿತ್ರೆಗಳಿಂದ ಕೂಡಿದ ಸರ್ವವಿಧ ಗಾನದಿಂದ ಪೂರ್ಣವಾದ ಸಾಮವೇದವು ವಿಶ್ವಾವಸು ಮುಂತಾದ ಗಂಧರ್ವರಿಂದ ಕೂಡಿ ಪೂರ್ಣವಾಗಿತ್ತು.

೨೬. ಹಾಗೆಯೇ ಬ್ರಹ್ಮವೇದವೆಂಬ ಅಥರ್ವವೇದವು ಘೋರವಾದ ನಾನಾ ವಿಧಾನಗಳಿಂದ ಕೂಡಿ ಪ್ರತ್ಯಂಗಿರಸ ಮುನಿಗಳ ಯೋಗದಿಂದ ಎರಡು ಶರೀರ ಮತ್ತು ಶಿರಸ್ಸುಗಳಿಂದ ಕೂಡಿಕೊಂಡಿತ್ತು.

೨೭. ಮತ್ತು ಲಕ್ಷಣ, ವಿಸ್ತಾರ, ಸ್ತೋಭ, ನಿರ್ವಚನ, ಸ್ವರಭಕ್ತಿ, ನಿಗ್ರಹ, ಪ್ರಗ್ರಹ ಮತ್ತು ಆಶ್ರಯಭೂತವಾದ ವಷಟ್ಕಾರ ಇವುಗಳು ಯಜ್ಞಶಾಲೆಗೆ ಬಂದುವು.

೨೮. ಮತ್ತು ಕಾಂತಿಪುಂಜದ ಮೂರ್ತಿಯುಳ್ಳ ಭೂದೇವಿ ದಿಕ್ಕು ದಿಕ್ಪತಿಗಳು ದೇವಕನ್ಯೆ ದೇವಪತ್ನಿ ಮತ್ತು ಮಾತೃ ದೇವತೆಗಳು ಅಲ್ಲಿಗೆ ಬಂದರು.

೨೯. ಶರೀರವನ್ನು ಧರಿಸಿ ಯಜ್ಞಾನುಷ್ಠಾನವನ್ನು ಕೈಗೊಂಡಿರುವ ವರುಣ ದೇವನ ಯಜ್ಞದಲ್ಲಿ ಇವರೆಲ್ಲರೂ ಸುಂದರರೂಪದಿಂದ ಕೂಡಿದ ಮೂರ್ತಿವಂತರಾಗಿ ಬಂದರು.

ಸ್ವಯಂಭುವಸ್ತು ತಾ ದೃಷ್ಟ್ವಾ ರೇತಃ ಸಮುಪತದ್ಭುವಿ ।
ಬ್ರಹ್ಮರ್ಷಿಭಾವಿನೋಽರ್ಥಸ್ಯ ವಿಧಾನಾಚ್ಚ ನ ಸಂಶಯಃ ॥ ೩೦ ॥

ಧೃತ್ವಾ ಜುಹಾವ ಹಸ್ತಾಭ್ಯಾಂ ಸ್ರುವೇಣ ಪರಿಗೃಹ್ಯ ಚ ।
ಆಸ್ರುವಜ್ಜುಹುಯಾಂಚಕ್ರೇ ಮಂತ್ರವಚ್ಚ ಪಿತಾಮಹಃ ॥ ೩೧ ॥

ತತಃ ಸ ಜನಯಾಮಾಸ ಭೂತಗ್ರಾಮಂ ಪ್ರಜಾಪತಿಃ ।
ತಸ್ಯಾರ್ವಾಕ್‌ತೇಜಸಶ್ಚೈವ ಜಜ್ಞೇ ಲೋಕೇಷು ತೈಜಸಮ್ ॥ ೩೨ ॥

ತಮಸಾ ಭಾವಿ ಯಾಪ್ಯತ್ವಂ ಯಥಾ ಸತ್ತ್ವಂ ತಥಾ ರಜಃ ।
ಆಜ್ಯಸ್ಥಾಲ್ಯಾಮುಪಾದಾಯ ಸ್ವಶುಕ್ರಂ ಹುತವಾಂಶ್ಚ ಹ ॥ ೩೩ ॥

ಶುಕ್ರೇ ಹುತೇಽಥ ತಸ್ಮಿಂಸ್ತು ಪ್ರಾದುರ್ಭೂತಾ ಮಹರ್ಷಯಃ ।
ಜ್ವಲಂತೋ ವಪುಷಾ ಯುಕ್ತಾಃ ಸಪ್ರಭಾವೈಃ ಸ್ವಕೈರ್ಗುಣೈಃ ॥ ೩೪ ॥

---

೩೦. ಅವರನ್ನು ನೋಡಿ ಬ್ರಹ್ಮರ್ಷಿಗಳಿಂದ ಸಂಕಲ್ಪಿಸಲ್ಪಟ್ಟ ಅರ್ಥವು ಅವಶ್ಯಭಾವಿಯಾದ್ದರಿಂದ ಸ್ವಯಂಭು ಪ್ರಜಾಪತಿಯ ರೇತಸ್ಸು ಭೂಮಿಯಲ್ಲಿ ಬಿದ್ದಿತು. ಈ ವಿಷಯದಲ್ಲಿ ಸಂದೇಹವಿಲ್ಲ.

೩೧. ಬ್ರಹ್ಮನು ಅದನ್ನು ಕೈಗಳಿಂದ ಧರಿಸಿ ಸ್ರುವಪಾತ್ರದಿಂದ ತೆಗೆದುಕೊಂಡು ಮಂತ್ರಯುಕ್ತವಾಗಿ ಅಗ್ನಿಯಲ್ಲಿ ಸುರಿಸುತ್ತ ಹೋಮಮಾಡಿದನು.

೩೨. ತರುವಾಯ ಆ ಪ್ರಜಾಪತಿಯು ಅನೇಕ ಭೂತಸಮೂಹವನ್ನು ಸೃಷ್ಟಿ ಮಾಡಿದನು. ಅಧೋಮುಖವಾದ ತೇಜಸ್ಸರ್ಗದಿಂದ ಕೂಡಿದ ಆ ಬ್ರಹ್ಮನ ವೀರ್ಯವು ಲೋಕಗಳಲ್ಲಿ ನಾನಾವಿಧವಾಗಿ ಹುಟ್ಟಿತು.

೩೩. ಅವಶ್ಯ ಭವಿತವ್ಯತೆಯಿಂದ ತಮಸ್ಸು, ಸತ್ತ್ವ ಮತ್ತು ರಜೋಗುಣಗಳ ಸಂಕರ್ಪವುಳ್ಳ ಸ್ವಶುಕ್ರವನ್ನು ಆಜ್ಯಸ್ಥಾಲಿಯಲ್ಲಿ ತೆಗೆದುಕೊಂಡು ಹೋಮ ಮಾಡಿದನು.

೩೪. ಆ ವೀರ್ಯವು ಹೋಮಮಾಡಲ್ಪಡುತ್ತಿರಲು ಮಹರ್ಷಿಗಳು ತಮ್ಮ ಪ್ರಭಾವ, ಉಜ್ವಲಗುಣಗಳಿಂದ ಕೂಡಿದ ಶರೀರದಿಂದ ಜ್ವಲಿಸುತ್ತ ಉತ್ಪನ್ನರಾದರು.

ಹುತೇ ಚಾಗ್ನೌ ಸಕೃಚ್ಛುಕ್ರೇ ಜ್ವಾಲಾಯಾ ನಿಸ್ಸೃತಃ ಕವಿಃ ।
ಹಿರಣ್ಯಗರ್ಭಸ್ತಂ ದೃಷ್ಟ್ವಾ ಜ್ವಾಲಾಂ ಭಿತ್ವಾ ವಿನಿರ್ಗತಮ್ ॥ ೩೫ ॥

ಭೃಗುಸ್ತ್ವಮಿತಿ ಚೋವಾಚ ಯಸ್ಮಾತ್ತಸ್ಮಾತ್ ಸ ವೈ ಭೃಗುಃ ।
ಮಹಾದೇವಸ್ತಥೋದ್ಭೂತೋ ದೃಷ್ಟ್ವಾ ಬ್ರಹ್ಮಾಣಮಬ್ರವೀತ್ ॥ ೩೬ ॥

ಮಮೈಷ ಪುತ್ರಕಾಮಸ್ಯ ದೀಕ್ಷಿತಸ್ಯ ತ್ವಯಾ ಪ್ರಭೋ ।
ವಿಜಜ್ಞೇ ಪ್ರಥಮಂ ದೇವ ಮಮ ಪುತ್ರೋ ಭವತ್ವಯಮ್ ॥ ೩೭ ॥

ತಥೇತಿ ಸಮನುಜ್ಞಾತೋ ಮಹಾದೇವಃ ಸ್ವಯಂಭುವಾ ।
ಪುತ್ರತ್ವೇ ಕಲ್ಪಯಾಮಾಸ ಮಹಾದೇವಸ್ತದಾ ಭೃಗುಮ್ ॥ ೩೮ ॥

ವಾರುಣಾ ಭೃಗವಸ್ತಸ್ಮಾತ್ತದಪತ್ಯಂ ಚ ಸ ಪ್ರಭುಃ ।
ದ್ವಿತೀಯಂ ಚ ತತಃ ಶುಕ್ರಮಂಗಾರೇಷ್ವಜುಹೋತ್ಪ್ರಭುಃ ॥ ೩೯ ॥

---

೩೫. ಅಗ್ನಿಯಲ್ಲಿ ಶುಕ್ರವು ಒಂದುಸಲ ಹೋಮಮಾಡಲ್ಪಡುತ್ತಿರಲು ಆ ಅಗ್ನಿ ಜ್ವಾಲೆಯಿಂದ ಕವಿಯು ಹೊರಟುಬಂದನು. ಹಿರಣ್ಯಗರ್ಭನು ಅಗ್ನಿ ಜ್ವಾಲೆಯನ್ನು ಭೇದಿಸಿ ಹೊರಟುಬಂದ ಆ ಕವಿಯನ್ನು ನೋಡಿದನು.

೩೬. ಆಗ ಬ್ರಹ್ಮನು ಅವನನ್ನು ನೋಡಿ ನೀನು ಭೃಗು ಎಂದು ಹೇಳಿದನು. ಆದ್ದರಿಂದ ಅವನು ಭೃಗು ಆದನು. ಹಾಗೆ ಉತ್ಪನ್ನನಾದ ಮಹಾದೇವನು ಬ್ರಹ್ಮನನ್ನು ನೋಡಿ ಈ ರೀತಿಯಾಗಿ ಹೇಳಿದನು.

೩೭. ಪ್ರಭುವಾದ ದೇವನೇ, ಪುತ್ರಕಾಮನೆಯಿಂದ ಕೂಡಿ ಯಜ್ಞದೀಕ್ಷಿತನಾದ ನನಗೆ ನಿನ್ನಿಂದ ಮೊದಲು ಉತ್ಪನ್ನನಾದ ಇವನು ಪುತ್ರನಾಗಲಿ ಎಂದು ಹೇಳಿದನು.

೩೮. ಆಗ ಬ್ರಹ್ಮನಿಂದ ಹಾಗೆಯೇ ಆಗಲೆಂದು ಸಮ್ಮತಿಸಲ್ಪಟ್ಟ ಮಹಾದೇವನು ಆ ಭೃಗುವನ್ನು ತನಗೆ ಪುತ್ರನನ್ನಾಗಿ ಕಲ್ಪಿಸಿದನು.

೩೯. ಆದುದರಿಂದ ಭೃಗುಕುಲದಲ್ಲಿ ಹುಟ್ಟಿದವರು ವರುಣ ಸಂಭಂಧಿಗಳಾದರು. ವರುಣನ ಪ್ರಜೆಯಾದ ಆ ಭೃಗುಮುನಿಯು ಪ್ರಭುವಾದನು. ಅನಂತರದಲ್ಲಿ ಪ್ರಭುವಾದ ಬ್ರಹ್ಮನು ಎರಡನೆಯ ವೀರ್ಯ ಪುಂಜವನ್ನು ಅಗ್ನಿಯ ಅಂಗಾರಗಳಲ್ಲಿ ಹೋಮಮಾಡಿದನು.

ಅಂಗಾರೇಷ್ವಂಗಿರೋಽಂಗಾನಿ ಸಂಹತಾನಿ ತತೋಽಂಗಿರಾಃ ।
ಸಂಭೂತಿಂ ತಸ್ಯ ತಾಂ ದೃಷ್ಟ್ವಾ ವಹ್ನಿರ್ಬ್ರಹ್ಮಾಣಮಬ್ರವೀತ್॥ ೪೦ ॥

ರೇತೋಧಾಸ್ತುಭ್ಯಮೇವಾಹಂ ದ್ವಿತೀಯೋಽಯಂ ಮಮಾಸ್ತ್ವಿತಿ ।
ಏವಮಸ್ತ್ವಿತಿ ಸೋಽಪ್ಯುಕ್ತೋ ಬ್ರಹ್ಮಣಾ ಸದಸಸ್ಪತಿಃ ॥ ೪೧ ॥

ಜಗ್ರಾಹಾಗ್ನಿಸ್ತ್ವಂಗಿರಸ ಆಗ್ನೇಯಾ ಇತಿ ನಃ ಶ್ರುತಮ್ ।
ಷಟ್‌ಕೃತ್ವಾ ತು ಪುನಃ ಶುಕ್ರೇ ಬ್ರಹ್ಮಣಾ ಲೋಕಕಾರಿಣಾ ॥ ೪೨ ॥

ಹುತೇ ಸಮಭವಂಸ್ತಸ್ಮಿನ್ ಯದ್ಬ್ರಹ್ಮಾಣ ಇತಿ ಶ್ರುತಿಃ ।
ಮರೀಚಿಃ ಪ್ರಥಮಂ ತತ್ರ ಮರೀಚಿಭ್ಯಃ ಸಮುತ್ಥಿತಃ ॥ ೪೩ ॥

ಕ್ರತೌ ತಸ್ಮಿನ್ ಕ್ರತುರ್ಜಜ್ಞೇ ಯತಸ್ತಸ್ಮಾತ್ ಸ ವೈ ಕ್ರತುಃ ।
ಅಹಂ ತೃತೀಯ ಇತ್ಯತ್ರಿಸ್ತಸ್ಮಾದತ್ರಿಃ ಸ ಕೀರ್ತ್ಯತೇ ॥ ೪೪ ॥

---

೪೦. ಅನಂತರದಲ್ಲಿ ಆ ಅಂಗಗಳು ಸಂಘಾತರೂಪವಾಗಿ ಅಂಗಾರದಲ್ಲಿ ಹೋಮ ಮಾಡಿದ ನಿಮಿತ್ತದಿಂದ ಅಂಗಿರೋಮುನಿಯು ರೂಪಗಳಾದುವು. ಅವನ ಆ ವಿಧದ ಉತ್ಪತ್ತಿಯನ್ನು ಕಂಡು ಅಗ್ನಿಯು ಬ್ರಹ್ಮದೇವನನ್ನು ನೋಡಿ ಹೀಗೆ ಹೇಳಿದನು.

೪೧. ಬ್ರಹ್ಮದೇವನೇ! ನಾನು ನಿನಗೋಸ್ಕರ ರೇತೋಧಾರಣೆಯನ್ನು ಮಾಡಿರುವುದರಿಂದ ದ್ವಿತೀಯನಾದ ಈ ಪುತ್ರನು ನನ್ನವನಾಗಿ ಇರಲೆಂದು ಕೇಳಿಕೊಂಡನು. ಬ್ರಹ್ಮನಿಂದ ಹಾಗಾಗಲೆಂದು ಆ ಸದಸಸ್ಪತಿಯಾದ ಅಗ್ನಿಯು ಹೇಳಲ್ಪಟ್ಟನು.

೪೨. ಆಗ ಅಗ್ನಿಯು ಅಂಗಿರೋನಾಮಕರಾದ ಪ್ರಜೆಗಳನ್ನು ಸ್ವೀಕರಿಸಿದ್ದರಿಂದ ಅವರು ಆಗ್ನೇಯರಾದರೆಂದು ನಾವು ಕೇಳಿರುವೆವು. ಲೋಕಗಳ ಸೃಷ್ಟಿಯನ್ನು ಮಾಡುವ ಬ್ರಹ್ಮನು ವೀರ್ಯವನ್ನು ಆರುಭಾಗ ಮಾಡಿ ಮತ್ತೆ ಹೋಮ ಮಾಡಿದನು.

೪೩. ಹಾಗೆ ಆ ಆರು ಭಾಗಗಳು ಹೋಮಮಾಡಲ್ಪಡಲಾಗಿ ಮತ್ತೆ ಆರು ಮಂದಿ ಪ್ರಜಾಪತಿಗಳು ಹುಟ್ಟಿದರೆಂದು ಶ್ರುತಿಯು ಹೇಳುವುದು. ಅವರಲ್ಲಿ ಆ ಅಗ್ನಿಯ ಮರೀಚಿ= ಕಿರಣಗಳಿಂದ ಹುಟ್ಟಿದ ಮುನಿಯು ಮರೀಚಿ ಎಂದು ಪ್ರಸಿದ್ಧನಾದನು.

೪೪. ಆ ಕ್ರತು= ಯಜ್ಞದಲ್ಲಿ ಹುಟ್ಟಿದ ಎರಡನೆಯವನು ಕ್ರತು ಎಂಬ ಸಂಜ್ಞೆಯನ್ನು ಹೊಂದಿದನು. ಅನಂತರ ಮೂರನೆಯವನಾಗಿ ಹುಟ್ಟಿದ ಬ್ರಹ್ಮನು

ಕೇಶೈಸ್ತು ನಿಚಿತೈರ್ಭೂತಃ ಪುಲಸ್ತ್ಯಸ್ತೇನ ಸ ಸ್ಮೃತಃ
ಕೇಶೈರ್ಲಂಬೈಃ ಸಮುದ್ಭೂತಸ್ತಸ್ಮಾತ್ ಸ ಪುಲಹಃ ಸ್ಮೃತಃ ॥ ೪೫ ॥

ವಸುಮಧ್ಯಾತ್ ಸಮುತ್ಪನ್ನೋ ವಶೀ ತು ವಸುಮಾನ್ ಸ್ವಯಮ್ ।
ವಸಿಷ್ಠ ಇತಿ ತತ್ತ್ವಜ್ಞೈಃ ಪ್ರೋಚ್ಯತೇ ಬ್ರಹ್ಮವಾದಿಭಿಃ ॥ ೪೬ ॥

ಇತ್ಯೇತೇ ಬ್ರಹ್ಮಣಃ ಪುತ್ರಾ ಮಾನಸಾಃ ಷಣ್ಮಹರ್ಷಯಃ ।
ಲೋಕಸ್ಯ ಸಂತಾನಕರಾ ಯೈರಿಮಾ ವರ್ಧಿತಾಃ ಪ್ರಜಾಃ ॥ ೪೭ ॥

ಪ್ರಜಾಪತಯ ಇತ್ಯೇವಂ ಪಠ್ಯಂತೇ ಬ್ರಹ್ಮಣಃ ಸುತಾಃ ।
ಅಪರೇ ಪಿತರೋ ನಾಮ ಏತೈರೇವ ಮಹರ್ಷಿಭಿಃ ॥ ೪೮ ॥

ಉತ್ಪಾದಿತಾ ದೇವಗಣಾಃ ಸಪ್ತ ಲೋಕೇಷು ವಿಶ್ರುತಾಃ ।
ಅಜೇಯಾಶ್ಚ ಗಣಾಃ ಸಪ್ತ ಸಪ್ತ ಲೋಕೇಷು ವಿಶ್ರುತಾಃ ॥ ೪೯ ॥

---

ನಾನು ತೃತೀಯ= ಮೂರನೆಯವನೆಂದು ಹೇಳಿದ್ದರಿಂದ ಅತ್ರಿಮುನಿಯೆಂದು ಕರೆಯಲ್ಪಡುತ್ತಾನೆ.

೪೫. ಗಂಟುಹಾಕಿದ ಕೇಶಗಳಿಂದ ಹುಟ್ಟಿದ ಮುನಿಯು ಪುಲಸ್ತ್ಯ ಬ್ರಹ್ಮನೆಂದು ಸ್ಮರಿಸಲ್ಪಟ್ಟಿರುವನು. ಹಾಗೆ ಲಂಬಿಸುವ ಕೇಶಗಳಿಂದ ಹುಟ್ಟಿರುವ ಪ್ರಜಾಪತಿಯು ಪುಲಹಬ್ರಹ್ಮನೆಂದು ಸ್ಮರಿಸಲ್ಪಟ್ಟಿರುವನು.

೪೬. ವಸುಗಳ ಮಧ್ಯದಲ್ಲಿ ಹುಟ್ಟಿ ತಾನು ಐಶ್ವರ್ಯಸಂಪನ್ನನೂ ಮತ್ತು ಜಿತೇಂದ್ರಿಯನೂ ಆದ ಪ್ರಜಾಪತಿಯು ವಸಿಷ್ಠನೆಂದು ಬ್ರಹ್ಮವಾದಿಗಳಾದ ತತ್ತ್ವಜ್ಞರಿಂದ ಹೇಳಲ್ಪಡುತ್ತಾನೆ.

೪೭. ಹೀಗೆ ಈ ಆರುಮಂದಿ ಮಹರ್ಷಿಗಳು ಬ್ರಹ್ಮನ ಮಾನಸಪುತ್ರರಾಗಿ ಜನಿಸಿರುವರು. ಇವರು ಲೋಕಗಳ ಸಂತತಿಯು ಅವಿಚ್ಛಿನ್ನವಾಗಿ ಬೆಳೆಯುವಂತೆ ಈ ಪ್ರಜೆಗಳನ್ನು ವೃದ್ಧಿಗೊಳಿಸುತ್ತಿರುವರು.

೪೮. ಈ ಬ್ರಹ್ಮಪುತ್ರರು ಈ ರೀತಿಯಾಗಿ ಪ್ರಜಾಪತಿ ಅಥವಾ ಬ್ರಹ್ಮನೆಂದು ಹೇಳಲ್ಪಡುವರು. ಮತ್ತೆ ಕೆಲವರು ಈ ಮಹರ್ಷಿಗಳಿಂದ ಜನ್ಮವೆತ್ತಿ ಪಿತೃಗಳೆಂದು ಕರೆಯಲ್ಪಡುತ್ತಾರೆ.

೪೯. ಈ ಮಹರ್ಷಿಗಳಿಂದ ಹುಟ್ಟಿರುವ ಪ್ರಸಿದ್ಧವಾದ ಏಳು ದೇವಗಣಗಳು ಇರುವುವು. ಆ ಏಳು ಗಣಗಳು ಅಜೇಯವೆಂದು ಏಳು ಲೋಕಗಳಲ್ಲಿ ಪ್ರಸಿದ್ಧಿಯನ್ನು ಹೊಂದಿರುವರು.

ಮಾರೀಚಾ ಭಾರ್ಗವಾಶ್ಚೈವ ತಥೈವಾಂಗಿರಸೋಽಪರೇ ।
ಪೌಲಸ್ತ್ಯಾಃ ಪೌಲಹಾಶ್ಚೈವ ವಾಸಿಷ್ಠಾಶ್ಚೈವ ವಿಶ್ರುತಾಃ ॥ ೫೦ ॥

ಆತ್ರೇಯಾಶ್ಚ ಗಣಾಃ ಪ್ರೋಕ್ತಾಃ ಪಿತೄಣಾಂ ಲೋಕವರ್ಧನಾಃ ।
ಏತೇ ಸಮಾಸತಃ ಖ್ಯಾತಾಃ ಪುನರನ್ಯೇ ಗಣಾಸ್ತ್ರಯಃ ॥ ೫೧ ॥

ಅಮೂರ್ತಾಶ್ಚಾಪ್ರಕಾಶಾಶ್ಚ ಜ್ಯೋತಿಷ್ಮಂತಶ್ಚ ವಿಶ್ರುತಾಃ ।
ತೇಷಾಂ ರಾಜಾ ಯಮೋ ದೇವೋ ಯಮೈರ್ವಿಹತಕಲ್ಮಷಃ ॥ ೫೨ ॥

ಅಪರೇ ಪ್ರಜಾನಾಂ ಪತಯಸ್ತಾಞ್ಛೃಣುಧ್ವಮತಂದ್ರಿತಾಃ ।
ಕಶ್ಯಪಃ ಕರ್ದಮಃ ಶೇಷೋ ವಿಕ್ರಾಂತಃ ಶುಶ್ರವಾಸ್ತಥಾ ॥ ೫೩ ॥

ಬಹುಪುತ್ರಃ ಕುಮಾರಶ್ಚ ವಿವಸ್ವಾನ್ ಸ ಶುಚಿವ್ರತಃ ।
ಪ್ರಚೇತಸೋಽರಿಷ್ಟನೇಮಿರ್ಬಹುಲಶ್ಚ ಪ್ರಜಾಪತಿಃ ॥ ೫೪ ॥

---

೫೦. ಆ ಪಿತೃಗಣಗಳಲ್ಲಿ ಮಾರೀಚ, ಭಾರ್ಗವ, ಆಂಗಿರಸ, ಪೌಲಸ್ತ್ಯ, ಪೌಲಹ, ಮತ್ತು ವಾಸಿಷ್ಠ ಎಂಬ ಗಣಗಳು ಪ್ರಸಿದ್ಧಿಹೊಂದಿವೆ.

೫೧. ಮತ್ತು ಆತ್ರೇಯ ಎಂಬ ಗಣವನ್ನು ಸೇರಿಸಿ ಏಳು ಪಿತೃಗಣಗಳು ಲೋಕವನ್ನು ವೃದ್ಧಿಮಾಡುವರು. ಈ ಗಣಗಳು ಸಂಗ್ರಹವಾಗಿ ವರ್ಣಿಸಲ್ಪಟ್ಟಿವೆ. ಇನ್ನು ಪ್ರತ್ಯೇಕವಾಗಿ ಮೂರು ಗಣಗಳು ಪ್ರಸಿದ್ಧವಾಗಿವೆ.

೫೨. ಆ ಮೂರು ಗಣಗಳು ಅಮೂರ್ತ, ಅಪ್ರಕಾಶ, ಮತ್ತು ಜ್ಯೋತಿಷ್ಮಂತ ಎಂದು ಪ್ರಖ್ಯಾತಿಯನ್ನು ಹೊಂದಿರುವುವು. ಅವರಿಗೆ ಯಮ ನಿಯಮಾದಿಗಳಿಂದ ಪಾಪವನ್ನು ದೂರಮಾಡಿರುವ ಯಮದೇವನು ರಾಜನಾಗಿರುವನು.

೫೩. ಮತ್ತೆ ಕೆಲವರು ಪ್ರಜಾಪತಿಗಳೆಂದು ಪ್ರಸಿದ್ಧರಾಗಿರುವರು. ಮುಂದೆ ವರ್ಣಿಸುವ ಅವರ ಹೆಸರನ್ನು ಸಾವಧಾನವಾಗಿ ಕೇಳಿರಿ. ಕಶ್ಯಪ, ಕರ್ದಮ, ಶೇಷ, ವಿಕ್ರಾಂತ, ಸುಶ್ರವ ಎಂಬುವರು ಆ ಬ್ರಹ್ಮಾಧಿಕಾರವನ್ನು ನಡೆಸುವರು.

೫೪. ಮತ್ತು ಬಹುವ್ರತ, ಕುಮಾರ, ವಿವಸ್ವಾನ್, ಶುಚಿವ್ರತ, ಪ್ರಚೇತಸ ಅರಿಷ್ಟನೇಮಿ, ಬಹುಲ ಎಂಬುವರು ಪ್ರಜಾಸೃಷ್ಟಿಯನ್ನು ವೃದ್ಧಿಗೊಳಿಸಿ ಬ್ರಹ್ಮ ಪದವಿಯನ್ನು ಅಲಂಕರಿಸುವರು.

ಇತ್ಯೇವಮಾದಯೋಽನ್ಯೇಽಪಿ ಬಹವೋ ವೈ ಪ್ರಜೇಶ್ವರಾಃ ।
ಕುಶೋಚ್ಚಯಾ ವಾಲಖಿಲ್ಯಾಃ ಸಭೂತಾಃ ಪರಮರ್ಷಯಃ ॥ ೫೫ ॥

ಮನೋಜವಾಃ ಸರ್ವಗತಾಃ ಸರ್ವಭೋಗಾಶ್ಚ ತೇಽಭವನ್ ।
ಜಾತಾಶ್ಚ ಭಸ್ಮನೋ ಹ್ಯನ್ಯೇ ಬ್ರಹ್ಮರ್ಷಿಗಣಸಂವೃತಾಃ ॥ ೫೬ ॥

ವೈಖಾನಸಾ ಮುನಿಗಣಾಸ್ತಪಃಶ್ರುತಪರಾಯಣಾಃ ।
ನಸ್ತೋ ದ್ವಾವಸ್ಯ ಚೋತ್ಪನ್ನಾವಶ್ವಿನೌ ರೂಪಸಮ್ಮತೌ ॥ ೫೭ ॥

ವಿದುರ್ಜನ್ಮರ್ಕ್ಷರಜಸೋ ತಥಾ ತನ್ನೇತ್ರಸಂಚರಾತ್ ।
ಅನ್ಯೇ ಪ್ರಜಾನಾಂ ಪತಯಃ ಶ್ರೋತ್ರೇಭ್ಯಸ್ತಸ್ಯ ಜಜ್ಞಿರೇ ॥ ೫೮ ॥

ಋಷಯೋ ರೋಮಕೂಪೇಭ್ಯಸ್ತಥಾ ಸ್ವೇದಮಲೋದ್ಭವಾಃ ।
ಅಯನೇ ಋತವೋ ಮಾಸಾರ್ಧಮಾಸಾಃ ಪಕ್ಷಸಂಧಯಃ ॥ ೫೯ ॥

---

೫೫. ಹೀಗೆ ಹಿಂದೆ ಹೇಳಿರುವ ಮಹಾತ್ಮರು ಮತ್ತು ಇನ್ನೂ ಅನೇಕ ಮಹಾತ್ಮರು ಪ್ರಜಾನಾಥರಾಗಿರುವರು. ಅವರು ಕುಶೋಚ್ಚಯ, ವಾಲಖಿಲ್ಯ, ಸಭೂತ, ಮುಂತಾದ ಪವಿತ್ರನಾಮಾಂಕಿತರಾದ ಮಹರ್ಷಿಗಳಾಗಿರುವರು.

೫೬. ಅವರು ಮನೋವೇಗ, ಸರ್ವಲೋಕಸಂಚಾರ, ಸರ್ವ ಭೋಗಾನುಭವ, ಮಂತಾದ ಮಹಾ ಗುಣಗಳಿಂದ ಶೋಭಿತರಾಗಿದ್ದರು. ಇನ್ನು ಕೆಲವರು ಭಸ್ಮದಿಂದ ಪಾವನವಾದ ಉತ್ಪತ್ತಿಯನ್ನು ಹೊಂದಿ ಬ್ರಹ್ಮರ್ಷಿ ಗಣಕ್ಕೆ ಸಮ್ಮತರಾದರು.

೫೭. ಕೆಲವು ಮಹರ್ಷಿಗಳು ತಪಸ್ಸು ವೇದಾಧ್ಯಯನಗಳಲ್ಲಿ ಆಸಕ್ತರಾಗಿ ವೈಖಾನಸರೆಂದು ಕೀರ್ತಿಸಲ್ಪಟ್ಟರು. ಹಾಗೆ ಈ ಬ್ರಹ್ಮನ ಮೂಗಿನಿಂದ ಸೌಂದರ್ಯದಿಂದ ಶೋಭಿಸುವ ಇಬ್ಬರು ಅಶ್ವಿನೀ ದೇವತೆಗಳು ಜನಿಸಿದರು.

೫೮. ಮತ್ತು ಬ್ರಹ್ಮನ ನೇತ್ರದ ಚಾಂಚಲ್ಯದಿಂದ ಋಕ್ಷರಜಸ್ಸಿನ ಜನ್ಮವಾದುದನ್ನು ಪ್ರಾಜ್ಞರು ತಿಳಿದಿರುವರು. ಇನ್ನು ಅನೇಕ ಪ್ರಜಾಪ್ರಭುಗಳು ಬ್ರಹ್ಮನ ಶ್ರೋತ್ರೇಂದ್ರಿಯದಿಂದ ಜನಿಸಿರುವರು.

೫೯. ಆ ಬ್ರಹ್ಮನ ರೋಮಕೂಪಗಳ ಬೆವರಿನ ಮಲದಿಂದ ಅನೇಕ ಮಹರ್ಷಿಗಳು ಹುಟ್ಟಿರುವರು. ಮತ್ತು ಅಯನ, ಋತು, ಮಾಸ, ಪಕ್ಷ, ಸಂಧಿಗಳು ಬ್ರಹ್ಮನ ಅವಯವಗಳಿಂದ ಹುಟ್ಟಿರುವುವು.

ವತ್ಸರಾ ಯೇ ತ್ವಹೋರಾತ್ರಾಃ ಪಿತ್ತಂ ಜ್ಯೋತಿಶ್ಚ ದಾರುಣಮ್ ।
ರೌದ್ರಂ ಲೋಹಿತಮಿತ್ಯಾಹುರ್ಲೋಹಿತಂ ಕನಕಂ ಸ್ಮೃತಮ್ ॥ ೬೦ ॥

ತತ್ತೈಜಸಮಿತಿ ಪ್ರೋಕ್ತಂ ಧೂಮಾಶ್ಚ ಪಶವಃ ಸ್ಮೃತಾಃ ।
ಯೇ ಚಿರ್ಷಸ್ತಸ್ಯ ತೇ ರುದ್ರಾಸ್ತಥಾದಿತ್ಯಾಃ ಸಮುದ್ಗತಾಃ ॥ ೬೧ ॥

ಅಂಗಾರೇಭ್ಯಃ ಸಮುತ್ಪನ್ನಾ ಅರ್ಚಿಷೋ ದಿವ್ಯಮಾನುಷಾಃ ।
ಆದಿಭೂತೋಽಸ್ಯ ಲೋಕಸ್ಯ ಬ್ರಹ್ಮಾ ತ್ವಂ ಬ್ರಹ್ಮಸಂಭವಃ ॥ ೬೨ ॥

ಸರ್ವಕಾಮಪಮಿತ್ಯಾಹುಸ್ತಥಾ ವಾಕ್ಯಮುದಾಹರನ್ ।
ಬ್ರಹ್ಮಾ ಸುರಗುರುಸ್ತತ್ರ ತ್ರಿದಶೈಃ ಸಂಪ್ರಸಾದಿತಃ ॥ ೬೩ ॥

ಇಮೇ ವೈ ಜನಯಿಷ್ಯಂತಿ ಪ್ರಜಾಃ ಸರ್ವಾಃ ಪ್ರಜೇಶ್ವರಾಃ ।
ಸರ್ವೇ ಪ್ರಜಾನಾಂ ಪತಯಃ ಸರ್ವೇ ಚಾಪಿ ತಪಸ್ವಿನಃ ॥ ೬೪ ॥

---

೬೦. ಮತ್ತು ಸಂವತ್ಸರಗಳೂ, ಅಹೋರಾತ್ರಗಳೂ, ಹೀಗೆಯೇ ಹುಟ್ಟಿರುವುದಲ್ಲದೆ ಭಯಂಕರ ರೌದ್ರ, ಮತ್ತು ಹೊಂಬಣ್ಣವೂ ಆದ ಪಿತ್ತರೂಪವಾದ ಜ್ಯೋತಿಸ್ಸು ಸುವರ್ಣ ರೂಪವಾಗಿ ಪರಿಣಮಿಸಿತೆಂದು ಸ್ಮರಿಸಲ್ಪಟ್ಟಿದೆ.

೬೧. ಆ ಸುವರ್ಣವು ತೈಜಸವೆಂದು ಹೇಳಲ್ಪಟ್ಟಿದೆ. ಆ ಅಗ್ನಿಯ ಧೂಮಗಳು ಪಶುಗಳಾಗಿ ಸ್ಮರಿಸಲ್ಪಟ್ಟಿವೆ. ಆ ಯಜ್ಞದ ಜ್ವಾಲೆಗಳು ರುದ್ರ ಮತ್ತು ಆದಿತ್ಯ ರೂಪದಿಂದ ಉತ್ಪನ್ನರಾದರು.

೬೨. ಆ ಯಜ್ಞದ ಅಂಗಾರ ಮತ್ತು ಜ್ವಾಲೆಗಳಿಂದ ದಿವ್ಯ ಮಾನುಷ ಪ್ರಜೆಗಳು ಹುಟ್ಟಿದರು. ಹೀಗೆ ಈ ಲೋಕಕ್ಕೆ ಆದಿಭೂತನಾದ ಮತ್ತು ಪರಮಾತ್ಮನಿಂದ ಹುಟ್ಟಿರುವ ಬ್ರಹ್ಮನು ನೀನಾಗಿದ್ದೀ.

೬೩. ಹೀಗೆ ಯಜ್ಞವು ಸರ್ವ ಕಾಮಗಳನ್ನು ಕೊಡುವುದೆಂದು ಅಭಿಪ್ರಾಯ ಗರ್ಭಿತವಾದ ವಾಕ್ಯವನ್ನು ಹೇಳುತ್ತಿದ್ದ ದೇವಗುರುವಾದ ಬ್ರಹ್ಮನು ದೇವತೆಗಳಿಂದ ಪ್ರಸನ್ನನಾಗಿ ಮಾಡಲ್ಪಟ್ಟನು.

೬೪. ಪ್ರಜಾನಾಥರು ಸಮಸ್ತ ಜಾತಿಯ ಪ್ರಜೆಗಳನ್ನೂ ಕ್ರಮವಾಗಿ ಸೃಷ್ಟಿಸುತ್ತಾರೆ. ಇವರೆಲ್ಲರೂ ಮುಖ್ಯರಾದ ಪ್ರಜಾಪತಿಗಳೂ ಮಹಾ ತಪಸ್ವಿಗಳೂ ಆಗಿರುವರು.

ತ್ವತ್ಪ್ರಸಾದಾದಿಮಾಂಲ್ಲೋಕಾನ್ ಧಾರಯೇಯುರಿಮಾಃ ಕ್ರಿಯಾಃ ।
ತ್ವದ್ವಂಶವರ್ಧನಾಃ ಶಶ್ವತ್ ತವ ತೇಜೋವಿವರ್ಧನಾಃ ॥ ೬೫ ॥

ಭವೇಯುರ್ವೇದವಿದ್ವಾಂಸಃ ಸರ್ವೇ ವಾಕ್ಪತಯಸ್ತಥಾ ।
ವೇದಮಂತ್ರಧರಾಃ ಸರ್ವೇ ಪ್ರಜಾಪತಿಸಮುದ್ಭವಾಃ ॥ ೬೬ ॥

ಶ್ರಯಂತು ಬ್ರಹ್ಮ ಸತ್ಯಂ ತು ತಪಶ್ಚ ಪರಮಂ ಭುವಿ ।
ಸರ್ವೇ ಹಿ ವಯಮೇತೇ ಚ ತವೈವ ಪ್ರಸವಃ ಪ್ರಭೋ ॥ ೬೭ ॥

ಬ್ರಹ್ಮ ಚ ಬ್ರಾಹ್ಮಣಾಶ್ಚೈವ ಲೋಕಾಶ್ಚೈವ ಚರಾಚರಾಃ ।
ಮರೀಚಿಮಾದಿತಃ ಕೃತ್ವಾ ದೇವಾಶ್ಚ ಋಷಿಭಿಃ ಸಹ ॥ ೬೮ ॥

ಅಪತ್ಯಾನೀತಿ ಸಂಚಿಂತ್ಯ ತ್ವಪತ್ಯೇ ಕಾಮಯಾಮಹೇ ।
ತಸ್ಮಿನ್ ಯಜ್ಞೇ ಮಹಾಭಾಗಾ ದೇವಾಶ್ಚ ಋಷಯಶ್ಚ ಯೇ ॥ ೬೯ ॥

---

೬೫. ಇವರು ನಿನ್ನ ಅನುಗ್ರಹದಿಂದ ಈ ಯಜ್ಞಾದಿಕರ್ಮಗಳನ್ನು ಲೋಕಗಳನ್ನು ಮತ್ತು ನಿನ್ನ ವಂಶವನ್ನು ಅಭಿವೃದ್ಧಿಗೊಳಿಸುವರು. ಮತ್ತು ನಿನ್ನ ತೇಜಸ್ಸನ್ನು ಹೆಚ್ಚಿಸುವರೂ ಆಗಿರುವರು.

೬೬. ಎಲ್ಲರೂ ವೇದಪರಿಜ್ಞಾನವುಳ್ಳವರೂ ಬೃಹಸ್ಪತಿ ಸಮಾನರೂ ಆಗಿರುವರು. ಮತ್ತು ವೇದಮಂತ್ರಗಳನ್ನು ಧರಿಸಿರುವವರೂ ಸಾಕ್ಷಾತ್ತಾಗಿ ಬ್ರಹ್ಮದೇವನಿಂದ ಉತ್ಪನ್ನರೂ ಆಗಿರುವರು.

೬೭. ಭೂಲೋಕದಲ್ಲಿ ಸತ್ಯರೂಪವಾದ ಬ್ರಹ್ಮಪ್ರಾಪ್ತಿಗೆ ಸಾಧನವಾದ ಶ್ರೇಷ್ಠವಾದ ತಪಸ್ಸನ್ನು ಎಲ್ಲರೂ ಆಶ್ರಯಿಸಲಿ. ಪ್ರಭುವೇ, ಈ ನಾವೆಲ್ಲರೂ ಕೂಡ ನಿನ್ನ ಪ್ರಜಾಕೋಟಿಯಲ್ಲಿ ಸೇರಿರುವೆವು.

೬೮. ವೇದ, ಬ್ರಾಹ್ಮಣವರ್ಣ, ಚರಾಚರಲೋಕ ದೇವ ಮತ್ತು ಋಷಿ ಈ ಎಲ್ಲಾ ವರ್ಗಗಳು ಮರೀಚಿ ಮುನಿಯನ್ನು ಮೂಲನನ್ನಾಗಿಟ್ಟುಕೊಂಡು ಪ್ರಕಾಶವಾಗಿರುವುವು.

೬೯. ನಾವು ಅವರನ್ನು ನಿನ್ನ ಪ್ರಜೆಯೆಂದು ಇಷ್ಟಪಡುತ್ತೇವೆ. ಹೀಗೆ ನೀನು ಮಾಡಿರುವ ಯಜ್ಞ ಸಮಾರಂಭದಲ್ಲಿ ದೇವ, ಋಷಿ ಮುಂತಾದ ಮಹಾತ್ಮರು ಜನಿಸಿರುವರು.

ಏತೇ ತ್ವದ್ವಂಶಸಂಭೂತಾಃ ಸ್ಥಾನಕಾಲಾಭಿಮಾನಿನಃ ।
ತವ ತೇನೈವ ರೂಪೇಣ ಸ್ಥಾಪಯೇಯುರಿಮಾಃ ಪ್ರಜಾಃ ॥ ೭೦ ॥

ಯುಗಾದಿನಿಧನಾಶ್ಚಾಪಿ ಸ್ಥಾಪಯಂತು ಇತಿ ದ್ವಿಜಾಃ ।
ತತೋಽಬ್ರವೀಲ್ಲೋಕಗುರುಃ ಪರಮಿತ್ಯಭಿಧಾರಯನ್ ॥ ೭೧ ॥

ಏತದೇವ ವಿನಿಶ್ಚಿತ್ಯ ಮಯಾ ಸೃಷ್ಟಾ ನ ಸಂಶಯಃ ।
ಭವತಾಂ ವಂಶಸಂಭೂತಾಃ ಪುನರೇತೇ ಮಹರ್ಷಯಃ ॥ ೭೨ ॥

ತೇಷಾಂ ಭೃಗೋಃ ಕೀರ್ತಯಿಷ್ಯೇ ವಂಶಂ ಸರ್ವಂ ಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ಪ್ರಥಮಸ್ಯ ಪ್ರಜಾಪತೇಃ ॥ ೭೩ ॥

ಭಾರ್ಯೇ ಭೃಗೋರಪ್ರತಿಮೇ ಉತ್ತಮಾಭಿಜನೇ ಶುಭೇ ।
ಹಿರಣ್ಯಕಶಿಪೋಃ ಕನ್ಯಾ ದಿವ್ಯಾ ನಾಮ ಪರಿಶ್ರುತಾ ॥ ೭೪ ॥

---

೭೦. ಇವರು ವಿಶಾಲವಾದ ನಿನ್ನ ವಂಶದಲ್ಲಿ ಹುಟ್ಟಿ ಸ್ಥಾನ, ಕಾಲ ಇವುಗಳ ಅಭಿಮಾನದಿಂದ ಕೂಡಿ ನಿನ್ನ ಮಹನೀಯ ರೂಪದಿಂದ ಈ ಪ್ರಜೆಗಳನ್ನು ಪತಿಷ್ಠೆಗೊಳಿಸುವರು.

೭೧. ಈ ದ್ವಿಜರು ಯುಗದ ಆದಿ ಮೊದಲ್ಗೊಂಡು ಸಮಾಪ್ತಿವರೆಗೆ ಲೋಕಗಳನ್ನು ಸ್ಥಾಪಿಸಲಿ, ಎಂದು ಮುನಿಗಳು ಹೇಳಿದ ತರುವಾಯ ಲೋಕಸ್ವಾಮಿಯಾದ ಬ್ರಹ್ಮದೇವನು ಶ್ರೇಷ್ಠವಾದ ವಚನವನ್ನು ಆಡಿದನು.

೭೨. ನಾನು ಈ ಅರ್ಥವನ್ನು ನಿಶ್ಚಯಿಸಿಕೊಂಡು ಈ ವಂಶಾವಳಿಯನ್ನು ಸೃಷ್ಟಿಮಾಡಿರುವೆನು. ಇದರಲ್ಲಿ ಸಂಶಯವಿಲ್ಲ. ನಿಮ್ಮ ವಂಶದಲ್ಲಿ ಮಹಾತ್ಮರಾದ ಮುನಿಗಳು ಹುಟ್ಟಿರುವರು.

೭೩. ಇವರಲ್ಲಿ ಮಹಾತ್ಮನೂ ಮೊದಲನೆಯ ಪ್ರಜಾಪತಿ ಸ್ವರೂಪನೂ ಆದ ಭೃಗುಮುನಿಯ ವಂಶ ಸೃಷ್ಟಿಯನ್ನು ವಿಸ್ತಾರ ಮತ್ತು ಕ್ರಮಗಳಿಂದ ಕೂಡಿ ಕೀರ್ತನ ಮಾಡುವೆನು.

೭೪. ಭೃಗುಮುನಿಗೆ ಉತ್ತಮವಾದ ವಂಶದಲ್ಲಿ ಹುಟ್ಟಿದ ಮಂಗಳಕರರಾದ ಮತ್ತು ನಿರುಪಮ ಸುಂದರಿಯರಾದ ಇಬ್ಬರು ಪತ್ನಿಯರಿದ್ದರು. ಅವರಲ್ಲಿ ಒಬ್ಬಳು ಹಿರಣ್ಯಕಶಿಪುವಿನ ಮಗಳೂ ದಿವ್ಯಾ ಎಂಬ ಹೆಸರಿನಿಂದ ಪ್ರಖ್ಯಾತಳೂ ಆಗಿದ್ದಳು.

ಪುಲೋಮ್ನಶ್ಚೈವ ಪೌಲೋಮೀ ದುಹಿತಾ ವರವರ್ಣಿನೀ ।
ಭೃಗೋಸ್ತ್ವಜನಯದ್ದಿವ್ಯಾ ಪುತ್ರಂ ಬ್ರಹ್ಮವಿದಾಂ ವರಮ್ ॥ ೭೫ ॥

ದೇವಾಸುರಾಣಾಮಾಚಾರ್ಯಂ ಶುಕ್ರಂ ಕವಿವರಂ ಗ್ರಹಮ್ ।
ಶುಕ್ರ ಏವೋಶನಾ ನಿತ್ಯಮತಃ ಕಾವ್ಯೋಽಪಿ ನಾಮತಃ ॥ ೭೬ ॥

ಪಿತೄಣಾಂ ಮಾನಸೀ ಕನ್ಯಾ ಸೋಮಪಾನಾಂ ಯಶಸ್ವಿನೀ ।
ಶುಕ್ರಸ್ಯ ಭಾರ್ಯಾ ಗೌರ್ನಾಮ ವಿಜಜ್ಞೇ ಚತುರಃ ಸುತಾನ್ ॥ ೭೭ ॥

ತ್ವಷ್ಟಾ ಚೈವ ವರತ್ರೀ ಚ ಶಂಡಾಮರ್ಕೌ ಚ ತಾವುಭೌ ।
ತೇಜಸಾದಿತ್ಯಸಂಕಾಶಾ ಬ್ರಹ್ಮಕಲ್ಪಾಃ ಪ್ರಭಾವತಃ ॥ ೭೮ ॥

ರಜತಃ ಪೃಥುರಶ್ಮಿಶ್ಚ ವಿದ್ವಾನ್ ಯಶ್ಚ ಬೃಹಂಗಿರಾಃ ।
ವರತ್ರಿಣಃ ಸುತಾ ಹ್ಯೇತೇ ಬ್ರಹ್ಮಿಷ್ಠಾ ದೈತ್ಯಯಾಜಕಾಃ ॥ ೭೯ ॥

---

೭೫. ಶ್ರೇಷ್ಠಯುವತಿಯಾದ ಮತ್ತೊಬ್ಬಳು ಪುಲೋಮನ ಮಗಳು ಪೌಲೋಮಿ ಎಂದು ಪ್ರಸಿದ್ಧಳು ಆಗಿದ್ದಳು. ದಿವ್ಯಾ ಎಂಬ ಭೃಗುಮುನಿಯ ಪತ್ನಿಯು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಒಬ್ಬ ಪುತ್ರನನ್ನು ಪ್ರಸವಿಸಿದಳು.

೭೬. ಆ ಪುತ್ರನು ದೇವ ಮತ್ತು ಅಸುರರಿಗೆ ಆಚಾರ್ಯನೂ ಶುಕ್ರ ಎಂಬ ಗ್ರಹ ಸ್ವರೂಪನೂ ಕವಿಶ್ರೇಷ್ಠನೂ ಮತ್ತು ಉಶನಾ, ಕಾವ್ಯ ಎಂಬ ಸಂಜ್ಞೆಯಿಂದ ವ್ಯವಹರಿಸಲ್ಪಡುವವನೂ ಆಗಿದ್ದನು.

೭೭. ಸೋಮಪಾನವನ್ನು ಮಾಡಿದ ಪಿತೃದೇವರ ಮಾನಸ ಕನ್ಯೆಯೂ ಕೀರ್ತಿವಂತಳೂ ಆದ ಗೌ ಎಂಬ ಶುಕ್ರನ ಪತ್ನಿಯು ನಾಲ್ಕು ಮಂದಿ ಪುತ್ರರನ್ನು ಪಡೆದಳು.

೭೮. ಆ ನಾಲ್ಕು ಮಂದಿ ಪುತ್ರರು ತ್ವಷ್ಟ, ವರತ್ರೀ, ಶಂಡ, ಅಮರ್ಕ ಎಂಬ ಹೆಸರುಳ್ಳವರಾಗಿದ್ದರು. ಮತ್ತು ಅವರು ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನರೂ ಪ್ರಭಾವದಲ್ಲಿ ಬ್ರಹ್ಮನಿಗೆ ಸಮಾನರೂ ಆಗಿದ್ದರು.

೭೯. ಅವರಲ್ಲಿ ವರತ್ರೀ ಎಂಬುವನಿಗೆ ರಜತ, ಪೃಥುರಶ್ಮಿ ಮತ್ತು ಜ್ಞಾನಿಯಾದ ಬೃಹಂಗಿರ ಎಂಬುವ ಬ್ರಹ್ಮಿಷ್ಠರೂ ದೈತ್ಯರಿಗೆ ಪುರೋಹಿತರೂ ಆದ ಪುತ್ರರು ಜನಿಸಿದರು.

ಇಜ್ಯಾಧರ್ಮವಿನಾಶಾರ್ಥಂ ಮನುಮೇತ್ಯಾಭ್ಯಯಾಜಯನ್ ।
ನಿರಸ್ಯಮಾನಂ ವೈ ಧರ್ಮಂ ದೃಷ್ಟ್ವೇಂದ್ರೋ ಮನುಮಬ್ರವೀತ್ ॥ ೮೦ ॥

ಏತೈರೇವ ತು ಕಾಮಂ ತ್ವಾಂ ಪ್ರಾಪಯಿಷ್ಯಾಮಿ ಯಾಜನಮ್ ।
ಶ್ರುತ್ವೇಂದ್ರಸ್ಯ ತು ತದ್ವಾಕ್ಯಂ ತಸ್ಮಾದ್ದೇಶಾದಪಾಕ್ರಮನ್ ॥ ೮೧ ॥

ತಿರೋಭೂತೇಷು ತೇಷ್ವಿಂದ್ರೋ ಮನುಪತ್ನೀಮಚೇತನಾಮ್ ।
ಗ್ರಹೇಣ ಮೋಚಯಿತ್ವಾ ಚ ತತಶ್ಚಾನುಸಸಾರ ತಾಮ್ ॥ ೮೨ ॥

ತತ ಇಂದ್ರವಿನಾಶಾಯ ಯತಮಾನಾನ್ಮುನೀಂಸ್ತು ತಾನ್ ।
ತಾನಾಗತಾನ್ ಪುನರ್ದೃಷ್ಟ್ವಾ ದುಷ್ಟಾನಿಂದ್ರೋ ವಿಹಸ್ಯ ತು ॥ ೮೩ ॥

ತತಸ್ತಾನದಹತ್ ಕ್ರುದ್ಧೋ ವೇದ್ಯರ್ಧೇ ದಕ್ಷಿಣೇ ತತಃ ।
ತೇಷಾಂ ತು ಧೃಷ್ಯಮಾಣಾನಾಂ ತತ್ರ ಶಾಲಾವೃಕೈಃ ಸಹ ॥ ೮೪ ॥

---

೮೦. ಯಜ್ಞ ಯಾಗ ಧರ್ಮವನ್ನು ನಾಶಪಡಿಸಲು ರಜತ ಮುಂತಾದವರು ಮನುರಾಜನನ್ನು ಸಂಧಿಸಿ ಯಾಗ ಮಾಡಿಸಿದರು. ಹೀಗೆ ಧರ್ಮವು ಲೋಪವಾಗುವುದನ್ನು ನೋಡಿ ಇಂದ್ರನು ಮನುರಾಜನನ್ನು ಕುರಿತು ಹೇಳಿದನು.

೮೧. ನಾನು ನನ್ನ ಇಷ್ಟದಂತೆ ಇವರಿಂದ ನಿನಗೆ ಯಜ್ಞಾನುಷ್ಠಾನವಾಗುವಂತೆ ಮಾಡುವೆನು. ಇಂದ್ರನ ಈ ಮಾತನ್ನು ಕೇಳಿ ಅವರು ಆ ಸ್ಥಳದಿಂದ ದೂರ ಹೋದರು.

೮೨. ಆ ಮುನಿಗಳು ಅಲ್ಲಿಂದ ಅದೃಶ್ಯರಾಗಲು ಇಂದ್ರನು ಅಚೇತನಳಾಗಿದ್ದ ಮನುರಾಜನ ಪತ್ನಿಯನ್ನು ಗ್ರಹಾವೇಶದಿಂದ ಬಿಡಿಸಿ ಅವಳನ್ನು ಹಿಂಬಾಲಿಸಿದನು.

೮೩. ಅನಂತರದಲ್ಲಿ ಇದನ್ನು ತಿಳಿದು ಇಂದ್ರನ ಸಂಹಾರಕ್ಕೋಸ್ಕರ ಪ್ರಯತ್ನ ಮಾಡಿ ಅಲ್ಲಿಗೆ ಬಂದಿರುವ ದುಷ್ಟರಾದ ಆ ಮುನಿಗಳನ್ನು ಇಂದ್ರನು ಪ್ರತ್ಯಕ್ಷವಾಗಿ ನೋಡಿ ನಕ್ಕನು.

೮೪. ತರುವಾಯ ಕೋಪಗೊಂಡಿರುವ ಆ ಇಂದ್ರನು ಆ ಯಜ್ಞವೇದಿಯ ಬಲಭಾಗದ ಅರ್ಧದಲ್ಲಿ ಅವರನ್ನು ದಹಿಸಿದನು. ಹೀಗೆ ತಿರಸ್ಕರಿಸಲ್ಪಡುತ್ತಿರುವ ಆ ಮುನಿಗಳ ತಲೆಗಳು ತೋಳಗಳೊಡನೆ ಬಿದ್ದು ಹೊರಳಾಡಿದವು.

ಶೀರ್ಷಾಣಿ ನ್ಯಪತಂಸ್ತಾನಿ ಖರ್ಜೂರಾ ಹ್ಯಭವಂಸ್ತತಃ ।
ಏವಂ ವರತ್ರಿಣಃ ಪುತ್ರಾ ಇಂದ್ರೇಣ ನಿಹತಾಃ ಪುರಾ ॥ ೮೫ ॥

ಜಯಂತ್ಯಾಂ ದೇವಯಾನೀ ತು ಶುಕ್ರಸ್ಯ ದುಹಿತಾऽಭವತ್ ।
ತ್ರಿಶಿರಾ ವಿಶ್ವರೂಪಸ್ತು ತ್ವಷ್ಟುಃ ಪುತ್ರೋऽಭವನ್ ಮಹಾನ್ ॥ ೮೬ ॥

ಯಶೋಧರಾಯಾಮುತ್ಪನ್ನೋ ವೈರೋಚನ್ಯಾಂ ಮಹಾಯಶಾಃ ।
ವಿಶ್ವರೂಪಾऽನುಜಶ್ಚೈವ ವಿಶ್ವಕರ್ಮಾ ಚ ಯಃ ಸ್ಮೃತಃ ॥ ೮೭ ॥

ಭೃಗೋಸ್ತು ಭೃಗವೋ ದೇವಾ ಜಜ್ಞಿರೇ ದ್ವಾದಶಾತ್ಮಜಾಃ ।
ದಿವ್ಯಾ ನು ಸುಷುವೇ ಕನ್ಯಾ ಕಾವ್ಯಸ್ಯೈವಾऽನುಜಾಃ ಪ್ರಭೋಃ ॥ ೮೮ ॥

ಭುವನೋ ಭಾವನಶ್ಚೈವ ಅಂತ್ಯಶ್ಚಾಂತ್ಯಾಯನಸ್ತಥಾ ।
ಕ್ರತುಃ ಶುಚಿಃ ಸ್ವಮೂರ್ಧಾ ಚ ವ್ಯಾಜಶ್ಚ ವಸುದಶ್ಚ ಯಃ ॥ ೮೯ ॥

---

೮೫. ಕೆಳಕ್ಕೆ ಬಿದ್ದ ಅವರ ತಲೆಗಳು ಕೂಡಲೆ ಖರ್ಜೂರವಾಗಿ ಪರಿಣಮಿಸಿದವು. ಹೀಗೆ ಪೂರ್ವದಲ್ಲಿ ಆ ವರತ್ರಿ ಎಂಬುವನ ಪುತ್ರರು ಇಂದ್ರನಿಂದ ಸಂಹರಿಸಲ್ಪಟ್ಟರು.

೮೬. ಜಯಂತಿ ಎಂಬ ಸ್ತ್ರೀಯಲ್ಲಿ ಶುಕ್ರನಿಗೆ ದೇವಯಾನಿ ಎಂಬ ಮಗಳು ಹುಟ್ಟಿದಳು. ತ್ವಷ್ಟ ಎಂಬುವನಿಗೆ ಮೂರು ತಲೆಗಳಿಂದ ಕೂಡಿದ ವಿಶ್ವರೂಪನೆಂಬ ಮಹಾಪುತ್ರನು ಇದ್ದನು.

೮೭. ಆ ವಿಶ್ವರೂಪನ ತಮ್ಮನೂ ಮಹಾಯಶಸ್ವಿಯೂ ಆದ ವಿಶ್ವಕರ್ಮ ಎಂಬುವನು ವಿರೋಚನಾಸುರನ ಮಗಳಾದ ಯಶೋಧರೆಯಲ್ಲಿ ಹುಟ್ಟಿದನು.

೮೮. ಭೃಗುಮುನಿಗೆ ಭೃಗುಗಣವೆಂಬ ಸಂಕೇತವುಳ್ಳ ಹನ್ನೆರಡು ಮಂದಿ ದೇವತೆಗಳು ಪುತ್ರರಾಗಿ ಜನಿಸಿದರು. ಅವರು ದಿವ್ಯಾ ಎಂಬ ಕನ್ಯೆಯಲ್ಲಿ ಪ್ರಭುವಾದ ಶುಕ್ರನಿಗೆ ಅನುಜರಾಗಿ ಹುಟ್ಟಿದರು.

೮೯. ಆ ಹನ್ನೆರಡು ಮಂದಿ ಪುತ್ರರು ಈ ಹೆಸರುಗಳಿಂದ ಪ್ರಖ್ಯಾತರಾದರು. ಅವರಲ್ಲಿ ಭುವನ, ಭಾವನ, ಅಂತ್ಯ, ಆಂತ್ಯಾಯನ, ಕ್ರತು, ಶುಚಿ, ಸ್ವಮೂರ್ಧಾ, ವ್ಯಾಜ, ವಸುದ—ಎಂಬ ಒಂಭತ್ತು ನಾಮಾಂಕಿತರು ಸೇರಿರುವರು.

ಪ್ರಭವಶ್ಚಾವ್ಯಯಶ್ಚೈವ ದ್ವಾದಶೋಽಧಿಪತಿಃ ಸ್ಮೃತಃ ।
ಇತ್ಯೇತೇ ಭೃಗವೋ ದೇವಾಃ ಸ್ಮೃತಾ ದ್ವಾದಶ ಯಜ್ಞಿಯಾಃ ॥ ೯೦ ॥

ಪೌಲೋಮ್ಯಜನಯತ್ ಪುತ್ರಂ ಬ್ರಹ್ಮಿಷ್ಠಂ ವಶಿನಂ ದ್ವಿಜಮ್ ।
ವ್ಯಾದಿತಃ ಸೋಽಷ್ಟಮೇ ಮಾಸಿ ಗರ್ಭಃ ಕ್ರೂರೇಣ ರಕ್ಷಸಾ ॥ ೯೧ ॥

ಚ್ಯವನಾಚ್ಚ್ಯವನಃ ಸೋಽಥ ಚೇತನಾತ್ತು ಪ್ರಚೇತನಃ ।
ಪ್ರಚೇತಾಶ್ಚ್ಯವನಃ ಕ್ರೋಧಾದ್ದಗ್ಧವಾನ್ ಪುರುಷಾದಕಾನ್ ॥ ೯೨ ॥

ಜನಯಾಮಾಸ ಪುತ್ರೌ ದ್ವೌ ಸುಕನ್ಯಾಯಾಂ ಸ ಭಾರ್ಗವಃ ।
ಆಪ್ರವಾನಂ ದಧೀಚಂ ಚ ತಾವುಭೌ ಸಾಧುಸಮ್ಮತೌ ॥ ೯೩ ॥

ಸಾರಸ್ವತಃ ಸರಸ್ವತ್ಯಾಂ ದಧೀಚಸ್ಯೋದಪದ್ಯತ ।
ಋಚೀ ಪತ್ನೀ ಮಹಾಭಾಗಾ ಆಪ್ರವಾನಸ್ಯ ನಾಹುಷೀ ॥ ೯೪ ॥

---

೯೦. ಮತ್ತು ಪ್ರಭವ, ಅವ್ಯಯ, ಅಧಿಪತಿ ಎಂಬ ಮೂವರು ಸೇರಿ ಹನ್ನೆರಡು ಮಂದಿಯೆಂದು ಸ್ಮರಿಸಲ್ಪಟ್ಟಿರುವರು. ಈ ಭೃಗುಗಣದ ಹನ್ನೆರಡು ಮಂದಿ ದೇವತೆಗಳು ಯಜ್ಞಕ್ಕೆ ಅರ್ಹರಾದರು.

೯೧. ಪೌಲೋಮಿಯು ಬ್ರಹ್ಮಿಷ್ಠನೂ ಜಿತೇಂದ್ರಿಯನೂ ಆದ ಒಬ್ಬ ಪುತ್ರನನ್ನು ಪ್ರಸವಿಸಿದಳು. ಅವನು ಗರ್ಭಸ್ಥಿತಿಯಲ್ಲಿ ಎಂಟನೆಯ ಮಾಸದಲ್ಲಿ ಒಬ್ಬ ಕ್ರೂರ ರಾಕ್ಷಸನಿಂದ ಭಕ್ಷಿಸಲ್ಪಟ್ಟನು.

೯೨. ತರುವಾಯ ಅಲ್ಲಿಂದ ಚ್ಯುತನಾಗಿ ಬಂದಿದ್ದರಿಂದ ಚ್ಯವನ, ಚೇತರಿಸಿದ್ದರಿಂದ ಪ್ರಚೇತನ ಎಂಬ ಮಹಿಮೆಯನ್ನು ಸೂಚಿಸುವ ಹೆಸರಿನಿಂದ ಪ್ರಸಿದ್ಧನಾದನು. ಆ ಪ್ರಚೇತ ಅಥವಾ ಚ್ಯವನನು ಕೋಪದಿಂದ ಪುರುಷಭಕ್ಷಕರಾದ ರಾಕ್ಷಸರನ್ನು ದಹಿಸಿದನು.

೯೩. ಭೃಗು ಪುತ್ರನಾದ ಆ ಚ್ಯವನನು ಸುಕನ್ಯಾ ಎಂಬ ತನ್ನ ಪತ್ನಿಯಲ್ಲಿ ಆಪ್ರವಾನ ದಧೀಚ ಎಂದು ಶಿಷ್ಟ ಸಮ್ಮತರಾದ ಇಬ್ಬರು ಪುತ್ರರನ್ನು ಹೊಂದಿದನು.

೯೪. ದಧೀಚ ಮುನಿಗೆ ಸರಸ್ವತಿಯೆಂಬ ಪತ್ನಿಯಲ್ಲಿ ಸಾರಸ್ವತ ಎಂಬ ಪುತ್ರನು ಹುಟ್ಟಿದನು. ಆಪ್ರವಾನನಿಗೆ ಮಹಾಭಾಗ್ಯಳಾದ ಮತ್ತು ನಹುಷರಾಜನ ಪುತ್ರಿಯಾದ ಋಚೀ ಎಂಬುವಳು ಪತ್ನಿಯಾಗಿದ್ದಳು.

ತಸ್ಯಾಮೌರ್ವ ಋಷಿರ್ಜಜ್ಞೇ ಊರುಂ ಭಿತ್ವಾ ಮಹಾಯಶಾಃ ।
ಔರ್ವಸ್ಯಾಸೀದೃಚೀಕಸ್ತು ದೀಪ್ತೋಽಗ್ನಿಸಮತೇಜಸಾ ॥ ೯೫ ॥

ಜಮದಗ್ನಿರ್ಋಚೀಕಸ್ಯ ಸತ್ಯವತ್ಯಾಮಜಾಯತ ।
ಭೃಗೋಶ್ಚರುವಿಪರ್ಯಾಸೇ ರೌದ್ರವೈಷ್ಣವಯೋಃ ಪುರಾ ॥ ೯೬ ॥

ಜಮನಾದ್ವೈಷ್ಣವಸ್ಯಾಗ್ನೇರ್ಜಮದಗ್ನಿರಜಾಯತ ।
ರೇಣುಕಾ ಜಮದಗ್ನೇಶ್ಚ ಶಕ್ರತುಲ್ಯಪರಾಕ್ರಮಮ್ ॥ ೯೭ ॥

ಬ್ರಹ್ಮಕ್ಷತ್ರಮಯಂ ರಾಮಂ ಸುಷುವೇಽಮಿತತೇಜಸಮ್ ।
ಔರ್ವಸ್ಯಾಸೀತ್ ಪುತ್ರಶತಂ ಜಮದಗ್ನಿಪುರೋಗಮಮ್ ॥ ೯೮ ॥

ತೇಷಾಂ ಪುತ್ರಸಹಸ್ರಾಣಿ ಭಾರ್ಗವಾಣಾಂ ಪರಸ್ಪರಾತ್ ।
ಋಷ್ಯಂತರೇಷು ವೈ ಬಾಹ್ಯಾ ಬಹವೋ ಭಾರ್ಗವಾಃ ಸ್ಮೃತಾಃ ॥ ೯೯ ॥

---

೯೫. ಅವಳಲ್ಲಿ ಮಹಾಕೀರ್ತಿವಂತನಾದ ಔರ್ವಮಹರ್ಷಿಯು ಆಕೆಯ ತೊಡೆಯನ್ನು ಭೇದಿಸಿ ಜನಿಸಿದನು. ಆ ಔರ್ವಮುನಿಗೆ ಅಗ್ನಿಗೆ ಸಮಾನವಾದ ತೇಜಃಪುಂಜದಿಂದ ಜ್ವಲಿಸುತ್ತಿದ್ದ ಋಚೀಕ ಎಂಬ ವಿಪ್ರನು ಜನಿಸಿದನು.

೯೬. ಆ ಋಚೀಕನಿಗೆ ಸತ್ಯವತಿಯೆಂಬ ಸಾಧ್ವೀಮಣಿಯಲ್ಲಿ ಜಮದಗ್ನಿ ಎಂಬ ಕುಮಾರನು ಹುಟ್ಟಿದನು ಪೂರ್ವದಲ್ಲಿ ಭೃಗುಮುನಿಯು ಯಜ್ಞವನ್ನು ಆಚರಿಸುತ್ತಿರುವಾಗ ರುದ್ರ ವಿಷ್ಣುದೇವತೆಗಳ ಹವಿಸ್ಸುಗಳು ತ್ಯಾಗಮಾಡುವ ಸಮಯದಲ್ಲಿ ವಿಪರ್ಯಾಸವನ್ನು ಹೊಂದಿದುವು.

೯೭. ಆ ವಿಪರ್ಯಾಸದಿಂದ ವೈಷ್ಣವ ಹವಿಸ್ಸನ್ನು ಅಗ್ನಿಯು ಸ್ವೀಕರಿಸಿದುದರಿಂದ ಹುಟ್ಟಿದ ಕುಮಾರನು ಜಮದಗ್ನಿ ಎಂದು ನಾಮಾಂಕಿತನಾದನು. ಜಮದಗ್ನಿಯ ಭಾರ್ಯೆಯಾದ ರೇಣುಕಾದೇವಿಯು ಇಂದ್ರನಿಗೆ ಸಮಾನವಾದ ವೀರ್ಯವುಳ್ಳ ಪುತ್ರನನ್ನು ಪ್ರಸವಿಸಿದಳು.

೯೮. ಆ ಕುಮಾರನು ಬಹ್ಮ-ಕ್ಷತ್ರರ ಎರಡು ಮಹಿಮೆಯಿಂದ ಪ್ರಕಾಶಿಸುವವನೂ ಅಪಾರವಾದ ತೇಜಸ್ಸಿನಿಂದ ಕೂಡಿದವನೂ ಆಗಿದ್ದನು. ಔರ್ವಮುನಿಗೆ ಜಮದಗ್ನಿ ಮುಂತಾದ ಒಂದು ನೂರುಮಂದಿ ಪುತ್ರರು ಹುಟ್ಟಿದರು.

೯೯. ಆ ಭಾರ್ಗವರ ವಂಶಾವಳಿಯಲ್ಲಿ ಪರಸ್ಪರವಾಗಿ ಸಾವಿರಾರು ಮಂದಿ ಮಕ್ಕಳು ಜನಿಸಿವರು. ಋಷಿ ಸಮೂಹದಲ್ಲಿ ಅನೇಕ ವಿಧರಾದ ಭಾರ್ಗವ ಪುತ್ರರು ಸ್ಮರಿಸಲ್ಪಟ್ಟಿರುವರು.

**ವತ್ಸಾ ವಿದಾ ಆರ್ಷ್ಟಿಷೇಣಾ ಯಸ್ಕಾ ವೈನ್ಯಾಶ್ಚ ಶೌನಕಾಃ ।**
**ಮಿತ್ರೇಯುಃ ಸಪ್ತಮಾ ಹ್ಯೇತೇ ಪಕ್ಷಾ ಜ್ಞೇಯಾಸ್ತು ಭಾರ್ಗವಾಃ ॥ ೧೦೦ ॥**

**ಶೃಣುತಾಂಗಿರಸೋ ವಂಶಮಗ್ನೇಃ ಪುತ್ರಸ್ಯ ಧೀಮತಃ ।**
**ಯಸ್ಯಾನ್ವವಾಯೇ ಸಂಭೂತಾ ಭಾರದ್ವಾಜಾಃ ಸಗೌತಮಾಃ ॥ ೧೦೧ ॥**

**ದೇವಾಶ್ಚಾಂಗಿರಸೋ ಮುಖ್ಯಾಸ್ತ್ರಿಷಿಮಂತೋ ಮಹೌಜಸಃ ।**
**ಸುರೂಪಾ ಚೈವ ಮಾರೀಚೀ ಕಾರ್ದಮಿಾ ಚ ತಥಾ ಸ್ವರಾಟ್ ॥ ೧೦೨ ॥**

**ಪಥ್ಯಾ ಚ ಮಾನವೀ ಕನ್ಯಾ ತಿಸ್ರೋ ಭಾರ್ಯಾ ಹ್ಯಥರ್ವಣಃ ।**
**ಅಥರ್ವಣಸ್ತು ದಾಯಾದಾಸ್ತಾಸು ಜಾತಾಃ ಕುಲೋದ್ವಹಾಃ ॥ ೧೦೩ ॥**

**ಉತ್ಪನ್ನಾ ಮಹತಾ ಚೈವ ತಪಸಾ ಭಾವಿತಾತ್ಮನಃ ।**
**ಬೃಹಸ್ಪತಿಂ ಸುರೂಪಾಯಾಂ ಗೌತಮಂ ಸುಷುವೇ ಸ್ವರಾಟ್॥ ೧೦೪ ॥**

---

೧೦೦. ವತ್ಸ, ಬಿದ, ಆರ್ಷ್ಟಿಷೇಣ, ಯಾಸ್ಕ, ವೈನ್ಯ, ಶೌನಕ ಮತ್ತು ಮಿತ್ರೇಯು ಎಂಬುದಾಗಿ ಏಳು ವಿಧವಾಗಿ ಭಾರ್ಗವ ಪುತ್ರರ ಪಂಗಡಗಳು ಬೆಳೆದುವು.

೧೦೧. ಮುಂದೆ ಯಾವ ಅಂಗಿರೋಮುನಿಯ ವಂಶದಲ್ಲಿ ಭಾರದ್ವಾಜ, ಮತ್ತು ಗೌತಮ ಮುಂತಾದವರು ಜನಿಸಿರುವರೋ, ಅಂತಹ ಜ್ಞಾನಿಯೂ, ಅಗ್ನಿಪುತ್ರನೂ ಆದ ಅಂಗಿರೋ ಮುನಿಯ ವಂಶವನ್ನು ಕೇಳಿರಿ.

೧೦೨. ಅಂಗಿರೋ ಮುನಿಯ ಪ್ರಜೆಗಳಲ್ಲಿ ಮಹಾವರ್ಚಸ್ವಿಗಳಾದ ತ್ರಿಷಿಮಾ ಎಂಬ ದೇವಗಣಗಳು ಮುಖ್ಯರಾಗಿರುವರು. ಅಥರ್ವ ಮುನಿಗೆ ಮೂರು ಮಂದಿ ಪತ್ನಿಯರಲ್ಲಿ ಮರೀಚಿ ಋಷಿಯ ಪುತ್ರಿಯಾದ ಸುರೂಪಾ, ಕರ್ದಮ ಪ್ರಜಾಪತಿ ಪುತ್ರಿಯಾದ ಸ್ವರಾಟ್ ಎಂಬುವರು ಇಬ್ಬರು ಪತ್ನಿಯರಾಗಿರುವರು.

೧೦೩. ಮತ್ತೊಬ್ಬಳು ಮನುವಿನ ಮಗಳಾದ ಪಥ್ಯಾ ಎಂಬುವಳಾಗಿರುವಳು. ಅವರಲ್ಲಿ ಅಥರ್ವಮುನಿಗೆ ವಂಶ ಪ್ರತಿಷ್ಠಾಪಕರೂ ದಾಯ ಭಾಗಾರ್ಹರೂ ಆದ ಅನೇಕ ಪುತ್ರರು ಜನಿಸಿದರು.

೧೦೪. ಆ ಪುತ್ರರು ಮಹತ್ತಾದ ತಪಃಶಕ್ತಿಯಿಂದ ಸಂಸ್ಕೃತವಾದ ಅಂತಃ ಕರಣವುಳ್ಳವರಾಗಿ ಸುರೂಪಾ ದೇವಿಯಲ್ಲಿ ಹುಟ್ಟಿರುವರು. ಸ್ವರಾಟ್ ಎಂಬುವಳು ಬೃಹಸ್ಪತಿ, ಗೌತಮ, ಮತ್ತು ಮುಂದೆ ಹೇಳುವ ಪುತ್ರರನ್ನು ಹೊಂದಿದಳು.

ಅಯಾಸ್ಯಂ ವಾಮದೇವಂ ಚ ಉತಥ್ಯಮುಶಿಜಂ ತಥಾ ।
ಧೃಷ್ಣಿಃ ಪುತ್ರಸ್ತು ಪಥ್ಯಾಯಾಃ ಸಂವರ್ತಶ್ಚೈವ ಮಾನಸಃ ॥ ೧೦೫ ॥

ಕಿತವಶ್ಚಾಪ್ಯಯಾಸ್ಯಸ್ಯ ಶರದ್ವಾಂಶ್ಚಾಪ್ಯುತಥ್ಯಜಃ ।
ಅಥೋಶಿಜೋ ದೀರ್ಘತಮಾ ಬೃಹದುಕ್ಥೋ ವಾಮದೇವಜಃ॥ ೧೦೬ ॥

ಧೃಷ್ಣೇಃ ಪುತ್ರಃ ಸುಧನ್ವಾ ತು ಋಷಭಶ್ಚ ಸುಧನ್ವನಃ ।
ರಥಕಾರಾಃ ಸ್ಮೃತಾ ದೇವಾ ಋಭವೋ ಯೇ ಪರಿಶ್ರುತಾಃ ॥ ೧೦೭ ॥

ಬೃಹಸ್ಪತೇರ್ಭರದ್ವಾಜೋ ವಿಶ್ರುತಃ ಸುಮಹಾಯಶಾಃ ।
ಬೃಹಸ್ಪತೇರ್ಯವೀಯಾಂಸೋ ದೇವಾ ಆಂಗಿರಸಾಃ ಸ್ಮೃತಾಃ ॥ ೧೦೮ ॥

ಔರಸಾಂಗಿರಸಃ ಪುತ್ರಾಃ ಸುರೂಪಾಯಾಂ ವಿಜಜ್ಞಿರೇ ।
ಆಥಾರ್ಯಾಯುರ್ದನುರ್ದಕ್ಷೋ ದಮಃ ಪ್ರಾಣಸ್ತಥೈವ ಚ॥ ೧೦೯ ॥

---

೧೦೫. ಅಯಾಸ್ಯ, ವಾಮದೇವ, ಉತಥ್ಯ, ಮತ್ತು ಉಶಿಜ ಎಂಬ ಪುತ್ರರು ಸ್ವರಾಟ್ ಎಂಬಾಕೆಯಲ್ಲಿ ಹುಟ್ಟಿದವರಾಗಿರುವರು. ಧೃಷ್ಣಿ, ಸಂವರ್ತ ಎಂಬ ಈರ್ವರು ಪಥ್ಯಾ ಎಂಬಾಕೆಯಲ್ಲಿ ಹುಟ್ಟಿದ ಮಾನಸ ಪುತ್ರರಾಗಿರುವರು.

೧೦೬. ಅಯಾಸ್ಯನಿಗೆ ಕಿತವ, ಉತಥ್ಯನಿಗೆ ಶರದ್ವಾನ್, ಉಶಿಜನಿಗೆ ದೀರ್ಘತಮ, ಮತ್ತು ವಾಮದೇವನಿಗೆ ಬೃಹದುಕ್ಥ ಎಂಬುವರು ಪುತ್ರರಾದರು.

೧೦೭. ಸುಧನ್ವನು ಧೃಷ್ಣಿ ಎಂಬುವನ ಪುತ್ರನಾಗಿಯೂ ಋಷಭ ಎಂಬುವನು ಸುಧನ್ವನ ಪುತ್ರನಾಗಿಯೂ ಜನಿಸಿದರು. ಮತ್ತು ಋಭು ಎಂಬ ಗಣದೇವತೆಗಳು ರಥಕಾರರೆಂದು ಪ್ರಸಿದ್ಧರಾಗಿ ಜನಿಸಿರುವರೆಂದು ಸ್ಮರಿಸಲ್ಪಟ್ಟಿದೆ.

೧೦೮. ಬೃಹಸ್ಪತಿಗೆ ಮಹಾಯಶಸ್ವಿಯಾಗಿ ಪ್ರಸಿದ್ಧನಾದ ಭರದ್ವಾಜಮುನಿಯು ಪುತ್ರತ್ವವನ್ನು ಹೊಂದಿದನು. ಅಂಗಿರೋ ವಂಶದಲ್ಲಿ ಉತ್ಪನ್ನರಾದ ದೇವಗಣವು ಬೃಹಸ್ಪತಿಗಿಂತ ಕಿರಿಯರಾಗಿರುವರು.

೧೦೯. ಔರಸಾಂಗಿರಸರೆಂದು ಪ್ರಸಿದ್ಧಿ ಹೊಂದಿರುವ ಪುತ್ರರು ಸುರೂಪಾದೇವಿಯಲ್ಲಿ ಹುಟ್ಟಿದರು. ಅವರು ಮುಂದೆ ಹೇಳುವಂತೆ ಹತ್ತು ಮಂದಿಯಾಗಿದ್ದರು. ಆಥಾರಿ, ಆಯು, ದನು, ದಕ್ಷ, ದಮ, ಪ್ರಾಣ, ಎಂಬುವರು ಅವರಲ್ಲಿ ಸೇರಿದವರಾಗಿದ್ದರು.

ಹವಿಷ್ಮಾಂಶ್ಚ ಹವಿಷ್ಣುಶ್ಚ ಋತಃ ಸತ್ಯಶ್ಚ ತೇ ದಶ ।
ಅಯಾಸ್ಯಾಶ್ಚಾಪ್ಯುತಥ್ಯಾಶ್ಚ ವಾಮದೇವಾಸ್ತಥೌಶಿಜಾಃ ॥ ೧೧೦ ॥

ಭಾರದ್ವಾಜಾಃ ಸಾಂಕೃತಯೋ ಗರ್ಗಾಃ ಕಣ್ವರಥೀತರಾಃ ।
ಮುದ್ಗಲಾ ವಿಷ್ಣುವೃದ್ಧಾಶ್ಚ ಹರಿತಾಃ ಕಪಯಸ್ತಥಾ ॥ ೧೧೧ ॥

ತಥಾ ರೂಕ್ಷಭರದ್ವಾಜಾ ಆರ್ಷಭಾಃ ಕಿತವಸ್ತಥಾ ।
ಏತೇ ಹ್ಯಾಂಗಿರಸಾಂ ಪಕ್ಷಾ ವಿಜ್ಞೇಯಾ ದಶ ಪಂಚ ಚ ॥ ೧೧೨ ॥

ಋಷ್ಯಂತರೇಷು ವೈ ಬಾಹ್ಯಾ ಬಹವೋಽಂಗಿರಸಃ ಸ್ಮೃತಾಃ ।
ಮರೀಚೇರಪಿ ವಕ್ಷ್ಯಾಮಿ ಭೇದಮುತ್ತಮಪೂರುಷಮ್ ॥ ೧೧೩ ॥

ಯಸ್ಯಾನ್ವವಾಯೇ ಸಂಭೂತಂ ಜಗತ್ಸ್ಥಾವರಜಂಗಮಮ್ ।
ಮರೀಚಿರಾಪಶ್ಚಕಮೋ ನಾಭಿಧ್ಯಾಯನ್ ಪ್ರಜೇಪ್ಸಯಾ ॥ ೧೧೪ ॥

---

೧೧೦. ಮತ್ತು ಹವಿಷ್ಮಾನ್, ಹವಿಷ್ಣು, ಋತ ಮತ್ತು ಸತ್ಯ ಎಂಬುವರು ಸೇರಿ ಹತ್ತು ಮಂದಿಯಾದರು. ಅಯಾಸ್ಯ, ಉತಥ್ಯ, ವಾಮದೇವ, ಔಶಿಜ ಎಂಬುವರು ಅಂಗಿರೋ ಮುನಿಯ ವಂಶದಲ್ಲಿ ಹುಟ್ಟಿದ ಪ್ರಜೆಗಳು.

೧೧೧. ಭಾರದ್ವಾಜ, ಸಾಂಕೃತಿ, ಗರ್ಗ, ಕಣ್ವ, ರಥೀತರ, ಮುದ್ಗಲ, ವಿಷ್ಣುವೃದ್ಧ, ಹರಿತ ಮತ್ತು ಕಪಿ ಎಂಬುವರು ಅಂಗಿರೋಮುನಿಯ ವಂಶದಲ್ಲಿ ಹುಟ್ಟಿದ ಮಹರ್ಷಿಗಳಾಗಿರುವರು.

೧೧೨. ಮತ್ತು ರೂಕ್ಷಭರದ್ವಾಜ, ಆರ್ಷಭ, ಕಿತವ ಎಂಬುವರು ಸೇರಿ ಈ ಹದಿನೈದು ಗಣಗಳು ಅಂಗಿರೋ ಮುನಿಯ ವಂಶದಲ್ಲಿ ಹುಟ್ಟಿದವರೆಂದು ತಿಳಿಯಬೇಕು.

೧೧೩. ಮತ್ತು ಬೇರೆ ಋಷಿಗಳ ಗಣದಲ್ಲಿ ಸೇರಿ ಬಾಹ್ಯರಾದ ಅಂಗಿರ ಮುನಿಯ ಪ್ರಜೆಗಳನೇಕರು ಸ್ಮರಿಸಲ್ಪಟ್ಟಿರುವರು. ಇನ್ನು ಮುಂದೆ ಉತ್ತಮ ಪುರುಷರಿಂದ ಕೂಡಿದ ಮರೀಚಿ ಮುನಿಯ ವಂಶವನ್ನು ಹೇಳುತ್ತೇನೆ.

೧೧೪. ಯಾವ ಮರೀಚಿ ಮುನಿಯ ವಂಶದಲ್ಲಿ ಚರ ಮತ್ತು ಅಚರ ಪ್ರಾಣಿಗಳು ಹುಟ್ಟಿರುವುವೊ. ಆ ಮುನಿಯು ಸಂಕಲ್ಪಿಸಿ ಪ್ರಜಾಪ್ರಾಪ್ತಿಯ ಇಚ್ಛೆಯಿಂದ ಜಲವನ್ನು ಕಾಮಿಸಿದನು.

ಪುತ್ರಃ ಸರ್ವಗುಣೋಪೇತಃ ಪ್ರಜಾವಾನ್ ಪ್ರಭವೇದಿತಿ ।
ಸಂಯುಜ್ಯಾತ್ಮಾನಮೇವಂ ತು ತಪಸಾ ಭಾವಿತಃ ಪ್ರಭುಃ ॥ ೧೧೫ ॥

ಆಹತಾಶ್ಚ ತತಃ ಸರ್ವಾ ಆಪಃ ಸಮಭವಂಸ್ತದಾ ।
ತಾಸು ಪ್ರಣಿಹಿತಾತ್ಮಾನಮೇಕಂ ಸೋಽಜನಯತ್ ಪ್ರಭುಃ ॥ ೧೧೬ ॥

ಪುತ್ರಮಪ್ರತಿಮಂ ನಾಮ್ನಾಽರಿಷ್ಟನೇಮಿಂ ಪ್ರಜಾಪತಿಮ್ ।
ಪುತ್ರಂ ಮರೀಚಿಸ್ತಪಸಿ ನಿರತಃ ಸೋಽಪ್ಸ್ವತೀತಪತ್ ॥ ೧೧೭ ॥

ಪ್ರಧ್ಯಾಯ ಹಿ ಸತೀಂ ವಾಚಂ ಪುತ್ರಾರ್ಥೀ ಸಲಿಲೇ ಸ್ಥಿತಃ ।
ಸಪ್ತ ವರ್ಷಸಹಸ್ರಾಣಿ ತತಃ ಸೋಽಪ್ರತಿಮೋಽಭವತ್ ॥ ೧೧೮ ॥

ಕಶ್ಯಪಃ ಸವಿತುರ್ವಿದ್ವಾಂಸ್ತೇಜಸಾ ಬ್ರಹ್ಮಣಾ ಸಮಃ ।
ಮನ್ವಂತರೇಷು ಸರ್ವೇಷು ಬ್ರಹ್ಮಣೋಽಂಶೇನ ಜಾಯತೇ ॥ ೧೧೯ ॥

---

೧೧೫. ಪ್ರಭುವಾದ ಮರೀಚಿ ಮುನಿಯು ತಪಃಶಕ್ತಿಯ ಸಂಸ್ಕಾರದಿಂದ ಕೂಡಿ ಆತ್ಮವನ್ನು ಯೋಗಾಭ್ಯಾಸದಲ್ಲಿರಿಸಿ ನಿಖಿಲ ಗುಣಗಳಿಂದ ಕೂಡಿರುವ ಮತ್ತು ಪ್ರಜಾವಂತನಾದ ಪುತ್ರನು ಹುಟ್ಟಬೇಕೆಂದು ಸಂಕಲ್ಪಿಸಿದನು.

೧೧೬. ಆಗ ಎಲ್ಲ ಜಲಗಳೂ ಸಂಘಾತ ರೂಪವನ್ನು ಹೊಂದಿದುವು. ಅವುಗಳಲ್ಲಿ ಆತ್ಮನ ಧ್ಯಾನಬಲದಿಂದ ಒಬ್ಬ ಪುತ್ರನನ್ನು ಹೊಂದಿದನು

೧೧೭. ಮರೀಚಿ ಮುನಿಯು ನಿರುಪಮನಾದ ಅರಿಷ್ಟನೇಮಿ ಎಂಬ ಹೆಸರಿನ ಪ್ರಜಾಪತಿಯನ್ನು ತಪಶ್ಶಕ್ತಿಯಿಂಧ ಪುತ್ರನನ್ನಾಗಿ ಹೊಂದಿದನು. ಆ ಅರಿಷ್ಟನೇಮಿಯು ಜಲದಲ್ಲಿ ತಪಸ್ಸನ್ನು ಮಾಡಿದನು.

೧೧೮. ಆ ಅರಿಷ್ಟ ನೇಮಿಯು ವಾಕ್ ಎಂಬ ಸತಿಯನ್ನು ಧ್ಯಾನಿಸಿ ಜಲದಲ್ಲಿ ನಿಂತು ಏಳುಸಾವಿರ ವರ್ಷಗಳವರೆಗೆ ಪುತ್ರಕಾಮನೆಯಿಂದ ತಪವನ್ನು ಆಚರಿಸಿದನು ಆಗ ನಿರುಪಮನಾದ ಪುತ್ರನು ಜನಿಸಿದನು.

೧೧೯. ಆ ಪುತ್ರನು ಸೂರ್ಯದೇವನಿಂದ ಜ್ಞಾನವನ್ನು ಆರ್ಜಿಸಿದವನೂ ಬ್ರಹ್ಮನಿಗೆ ಸಮಾನವಾದ ತೇಜಸ್ಸು ಉಳ್ಳವನೂ, ಮತ್ತು ಕಶ್ಯಪ ಎಂಬ ಹೆಸರುಳ್ಳವನೂ ಆಗಿ ಬ್ರಹ್ಮನ ಅಂಶದಿಂದ ಪ್ರತಿಯೊಂದು ಮನ್ವಂತರದಲ್ಲಿಯೂ ಜನಿಸುವನು.

ಕನ್ಯಾನಿಮಿತ್ತಮತ್ಯುಕ್ತೋ ದಕ್ಷೇಣ ಕುಪಿತಃ ಪ್ರಭುಃ ।
ಅಪಿಬತ್ ಸ ತದಾ ಕಶ್ಯಂ ಕಶ್ಯಂ ಮದ್ಯಮಿಹೋಚ್ಯತೇ ॥ ೧೨೦ ॥

ಹಾಸ್ಯೇ ಕಶಿರ್ಹಿ ವಿಜ್ಞೇಯೋ ವಾಙ್ಮನಃ ಕಶ್ಯಮುಚ್ಯತೇ ।
ಕಶ್ಯಂ ಮದ್ಯಂ ಸ್ಮೃತಂ ವಿಪ್ರೈಃ ಕಶ್ಯಪಾನಾತ್ತು ಕಶ್ಯಪಃ ॥ ೧೨೧ ॥

ಕಶೇತಿ ನಾಮ ಯದ್ವಾಚೋ ವಾಚಾ ಕ್ರೂರಮುದಾಹೃತಮ್ ।
ದಕ್ಷಾಭಿಶಪ್ತಃ ಕುಪಿತಃ ಕಶ್ಯಪಸ್ತೇನ ಸೋಽಭವತ್ ॥ ೧೨೨ ॥

ತಸ್ಮಾಚ್ಚ ಕಶ್ಯಪಾಯೋಕ್ತೋ ಬ್ರಹ್ಮಣಾ ಪರಮೇಷ್ಠಿನಾ ।
ತಸ್ಮೈ ಪ್ರಾಚೇತಸೋ ದಕ್ಷಃ ಕನ್ಯಾಸ್ತಾಃ ಪ್ರತ್ಯಪಾದಯತ್ ॥ ೧೨೩ ॥

ಸರ್ವಾಶ್ಚ ಬ್ರಹ್ಮವಾದಿನ್ಯಃ ಸರ್ವಾ ವೈ ಲೋಕಮಾತರಃ ।
ಇತ್ಯೇತಮೃಷಿಸರ್ಗಂ ತು ಪುಣ್ಯಂ ಯೋ ವೇದ ವಾರುಣಮ್ ॥ ೧೨೪ ॥

---

೧೨೦. ಅವನು ದಕ್ಷಬ್ರಹ್ಮನಿಂದ ಕನ್ಯೆಯ ನಿಮಿತ್ತವಾಗಿ ಅತಿಯಾಗಿ ಹೇಳಲ್ಪಟ್ಟು ಕುಪಿತನಾಗಿ ಆಗ ಮದ್ಯವನ್ನು ಪಾನಮಾಡಿದನು. ಕಶ್ಯ ಎಂಬ ಶಬ್ದವು ಮದ್ಯವನ್ನು ಬೋಧಿಸುತ್ತದೆ.

೧೨೧. ಮತ್ತು ಕಶಿ ಎಂಬ ಧಾತುವು ಹಾಸ್ಯವೆಂಬ ಅರ್ಥದಲ್ಲಿ ನಿರ್ದೇಶಿಸಲ್ಪಟ್ಟಿದೆ. ವಾಕ್ ಮತ್ತು ಮನಸ್ಸುಗಳು ಕಶ್ಯ ಎಂದು ಕರೆಯಲ್ಪಡುತ್ತವೆ. ಮದ್ಯವನ್ನು ಕಶ್ಯವೆಂದು ಕರೆಯುವುದುಂಟು. ಇಂತಹ ಕಶ್ಯ=ಮದ್ಯವನ್ನು ಪಾನಮಾಡಿದ್ದರಿಂದ ಇತರರಂತೆ ಕಶ್ಯಪನೆಂದು ಪ್ರಸಿದ್ಧನಾದನು.

೧೨೨. ಕಶ ಎಂಬುದು ವಾಕ್ಕಿಗೆ ಹೆಸರಾಗಿದೆ. ಇಂತಹ ಕ್ರೂರವಾಕ್ಯವನ್ನು ನುಡಿದು ದಕ್ಷಬ್ರಹ್ಮನಿಂದ ಶಪಿಸಲ್ಪಟ್ಟು ಕೋಪಗೊಂಡಿದ್ದರಿಂದ ಆ ಮುನಿಯು ಕಶ್ಯಪನೆಂದು ಪ್ರಸಿದ್ಧನಾದನು.

೧೨೩ ಆಗ ಪ್ರಚೇತಸನ ಪುತ್ರನಾದ ದಕ್ಷನು ಪರಮೇಷ್ಠಿಯಾದ ಬ್ರಹ್ಮನಿಂದ ಆಜ್ಞಾಪಿಸಲ್ಪಟ್ಟವನಾಗಿ ಆ ಕನ್ನಿಕೆಯರನ್ನು ಕಶ್ಯಪ ಋಷಿಗೆ ಅರ್ಪಿಸಿದನು.

೧೨೪. ಅವರೆಲ್ಲರೂ ಬ್ರಹ್ಮವಾದಿನಿಯರೂ ಮತ್ತು ಲೋಕಕ್ಕೆ ಜನನಿಯರೂ ಆಗಿರುವರು. ಈ ರೀತಿಯಾಗಿ ವರುಣನೆಂಬ ಮೂಲದಿಂದ ಹುಟ್ಟಿರುವ ಈ ಋಷಿಸೃಷ್ಟಿಯು ಬಹಳ ಪವಿತ್ರವಾದುದು.

**ಆಯುಷ್ಮಾನ್ ಪುಣ್ಯವಾನ್ ಶುದ್ಧಃ ಸುಖಮಾಪ್ನೋತಿ ಶಾಶ್ವತಮ್ ।**
**ಧಾರಣಾಚ್ಛ್ರವಣಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೧೨೫ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಪ್ರಥಮೋಽಧ್ಯಾಯಃ**

---

೧೨೫. ಇದನ್ನು ಶ್ರವಣಮಾಡಿದವನು ಆಯುಷ್ಯ, ಪುಣ್ಯ,ಪವಿತ್ರತೆ ಮತ್ತು ಶಾಶ್ವತ ಸುಖ ಮುಂತಾದ ಫಲವನ್ನು ಹೊಂದುವನು. ಮತ್ತು ಈ ಚರಿತ್ರೆಯ ಧಾರಣ-ಶ್ರವಣಗಳಿಂದ ಸರ್ವ ಪಾಪಗಳೂ ದೂರವಾಗುವುವು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಒಂದನೆಯ ಅಧ್ಯಾಯವು ಮುಗಿದುದು.

---

# ದ್ವಿತೀಯೋಽಧ್ಯಾಯಃ

**ಸೂತ ಉವಾಚ :—**

**ವಿನಿವೃತ್ತೇ ಪ್ರಜಾಸರ್ಗೇ ಷಷ್ಠೇ ವೈ ಚಾಕ್ಷುಷಸ್ಯ ಹ ।**
**ಪ್ರಜಾಃ ಸೃಜೇತಿ ವ್ಯಾದಿಷ್ಟಃ ಸ್ವಯಂ ದಕ್ಷಃ ಸ್ವಯಂಭುವಾ ॥ ೧ ॥**

**ಸಸರ್ಜ ಸರ್ವಭೂತಾನಿ ಗತಿಮಂತಿ ಧ್ರುವಾಣಿ ಚ ।**
**ಮಾನಸಾನಿ ಚ ಭೂತಾನಿ ಸ ಪೂರ್ವಮಸೃಜತ್ ಪ್ರಭುಃ ॥ ೨ ॥**

**ಋಷೀನ್ ದೇವಾಂಶ್ಚ ಗಂಧರ್ವಾನ್ ಮನುಷ್ಯೋರಗರಾಕ್ಷಸಾನ್ ।**
**ಯಕ್ಷಭೂತಪಿಶಾಚಾಂಶ್ಚ ವಯಃಪಶುಮೃಗಾಂಸ್ತಥಾ ॥ ೩ ॥**

**ಯದಾಸ್ಯ ಮನಸಾ ಸೃಷ್ಟಾ ನ ವ್ಯವರ್ಧಂತ ತಾಃ ಪ್ರಜಾಃ ।**
**ಅಪಧ್ಯಾತಾ ಭಗವತಾ ಮಹಾದೇವೇನ ಧೀಮತಾ ॥ ೪ ॥**

---

೧. ಸೂತಮುನಿಯು ಹೀಗೆ ಹೇಳಿದನು :—ಚಾಕ್ಷುಷ ಮನುವಿನ ಆರನೆಯ ಪ್ರಜಾಸೃಷ್ಟಿ ಅಧಿಕಾರವು ಕಳೆಯಲಾಗಿ ಬ್ರಹ್ಮನಿಂದ ಸಾಕ್ಷಾತ್ತಾಗಿ ದಕ್ಷಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಬೇಕೆಂದು ಆಜ್ಞಾಪಿಸಲ್ಪಟ್ಟನು.

೨. ಆಗ ಪ್ರಭುವಾದ ದಕ್ಷಬ್ರಹ್ಮನು ಸ್ಥಾವರ ಜಂಗಮವೆಂಬ ಸರ್ವ ಪ್ರಾಣಿಗಳನ್ನೂ ಮತ್ತು ಮಾನಸಭೂತಗಳನ್ನೂ ಸೃಷ್ಟಿಮಾಡಿದನು.

೩. ಅವನು ಸೃಷ್ಟಿಸಿರುವ ಪ್ರಜೆಗಳು ಋಷಿ, ದೇವ, ಗಂಧರ್ವ, ಮನುಷ್ಯ, ಸರ್ಪ, ರಾಕ್ಷಸ, ಯಕ್ಷ, ಭೂತ, ಪಿಶಾಚ, ಪಕ್ಷಿ, ಪಶು ಮತ್ತು ಮೃಗ ಮುಂತಾದುವುಗಳಾಗಿದ್ದುವು.

೪. ದಕ್ಷನಿಂದ ಮನಸ್ಸಿನ ಧ್ಯಾನದಿಂದ ಸೃಷ್ಟಿಸಲ್ಪಟ್ಟ ಪ್ರಜೆಗಳು ವೃದ್ಧಿ ಹೊಂದಲಿಲ್ಲ. ಆಗ ಪೂಜ್ಯನೂ ಪ್ರಾಜ್ಞನೂ ಆದ ಮಹಾದೇವನಿಂದ ಧ್ಯಾನಿಸುವುದನ್ನು ನಿಲ್ಲಿಸಲ್ಪಟ್ಟರು.

ಸ ಮೈಥುನೇನ ಭಾವೇನ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ಅಸಿಕ್ನೀಮಾವಹದ್ಭಾರ್ಯಾಂ ವೀರಣಸ್ಯ ಪ್ರಜಾಪತೇಃ ॥ ೫ ॥

ಸುತಾಂ ಸುಮಹತಾ ಯುಕ್ತಾಂ ತಪಸಾ ಲೋಕಧಾರಿಣೀಮ್ ।
ಯಯಾ ಧೃತಮಿದಂ ಸರ್ವಂ ಜಗತ್ ಸ್ಥಾವರ ಜಂಗಮಮ್ ॥ ೬ ॥

ಅತ್ರಾಪ್ಯುದಾಹರಂತೀಮೌ ಶ್ಲೋಕೌ ಪ್ರಾಚೇತಸಾಂ ಪ್ರತಿ ।
ದಕ್ಷಸ್ಯೋಪ್ಯಹತೋ ಭಾರ್ಯಾಮಸಿಕ್ನೀಂ ವೈರಿಣೀಂ ಪ್ರತಿ ॥ ೭ ॥

ಕೂಪಾನಾಂ ನಿಯುತಂ ದಕ್ಷಂ ಸರ್ಪಿಣಾಂ ಸಾಭಿಮಾನಿನಾಮ್ ।
ನದೀಗಿರಿಷ್ವಸಜ್ಜಂತಂ ಪೃಷ್ಠತೋಽನುಯಯೌ ಪ್ರಭುಮ್ ॥ ೮ ॥

ತಂ ದೃಷ್ಟ್ವಾ ಋಷಿಭಿಃ ಪ್ರೋಕ್ತಂ ಪ್ರತಿಷ್ಠಾಸ್ಯತಿ ವೈ ಪ್ರಜಾಃ ।
ಪ್ರಥಮೋಽತ್ರ ದ್ವಿತೀಯಸ್ತು ದಕ್ಷಃ ಸ ಹಿ ಪ್ರಜಾಪತಿಃ ॥ ೯ ॥

---

೫. ಆಗ ಅವನು ಮೈಥುನ ಧರ್ಮದಿಂದ ವಿವಿಧರಾದ ಪ್ರಜೆಗಳನ್ನು ಸೃಷ್ಟಿಸಬೇಕೆಂದು ಇಷ್ಟಪಟ್ಟವನಾಗಿ ವೀರಣನೆಂಬ ಪ್ರಜಾಪತಿಯ ಪುತ್ರಿಯಾದ ಅಸಿಕ್ನಿಯನ್ನು ಮದುವೆಯಾದನು.

೬. ಅವಳು ತಪಶ್ಶಕ್ತಿಯಿಂದ ಲೋಕವನ್ನು ಧರಿಸಿರುವವಳೂ ಸ್ಥಾವರ ಜಂಗಮ ಪ್ರಾಣಿಗಳಿಂದ ಕೂಡಿದ ಸಮಸ್ತ ಜಗತ್ತಿನ ನಿಯಾಮಕಳೂ ಆಗಿದ್ದಳು.

೭. ಪೂರ್ವದಲ್ಲಿ ವೀರಣ ಪ್ರಜಾಪತಿಯ ಪುತ್ರಿಯಾದ ಅಸಿಕ್ನಿ ಎಂಬಾಕೆಯನ್ನು ಪಾಣಿಗ್ರಹಣ ಮಾಡುತ್ತಲಿದ್ದ ಪ್ರಚೇತಸನ ಪುತ್ರನಾದ ದಕ್ಷಪ್ರಜಾಪತಿಯ ವಿಷಯದಲ್ಲಿ ಪ್ರಾಜ್ಞರು ಈ ಎರಡು ಶ್ಲೋಕಗಳನ್ನು ಪ್ರಶಂಸಿಸುವರು.

೮. ನದೀ-ಪರ್ವತ ಮುಂತಾದ ಯಾವ ಎಡೆಯಲ್ಲಿಯೂ ಆಸಕ್ತಿಯಿಲ್ಲದೆ ಭ್ರಮಿಸುತ್ತಿದ್ದ ಪ್ರಭುವಾದ ದಕ್ಷನನ್ನು ಅಭಿಮಾನದಿಂದ ಕೂಡಿರುವ ಮತ್ತು ಸರ್ಪಗಳಿಂದ ಶೋಭಿಸುವ ಒಂದು ಲಕ್ಷ ಸಂಖ್ಯೆಯ ಬಾವಿಗಳು ಹಿಂಬಾಲಿಸಿ ಪ್ರಯಾಣ ಮಾಡಿದುವು.

೯. ಹೀಗೆ ಭ್ರಮಿಸುತ್ತಲಿದ್ದ ದಕ್ಷಪ್ರಜಾಪತಿಯನ್ನು ಉದ್ದೇಶಿಸಿ ಮಹರ್ಷಿಗಳು ಇಂತೆಂದರು—ಪ್ರಥಮನಾದ ಬ್ರಹ್ಮದೇವನಿಗೆ ಸಮಾನನಾಗಿ ದ್ವಿತೀಯ ಪ್ರಜಾಪತಿಯೆಂತಿರುವ ಈ ದಕ್ಷಬ್ರಹ್ಮನು ಪ್ರಜೆಗಳನ್ನು ಪ್ರತಿಷ್ಠೆಗೊಳಿಸುವನು, ಎಂಬುದು ಋಷಿಗಳು ಉದಾಹರಿಸುತ್ತಿದ್ದ ಪ್ರಶಂಸಾ ಪದ್ಯಗಳ ಅರ್ಥವು.

ಅಥಾಗಚ್ಛದ್ಯಥಾಕಾಲಂ ಪ್ರಹೀಣಾಂ ನಿಯುತಂ ತು ಯತ್ ।
ಅಸಿಕ್ನೀಂ ವೈರಿಣೀಂ ತತ್ರ ದಕ್ಷಃ ಪ್ರಾಚೇತಸೋಽವಹತ್ ॥ ೧೦ ॥

ಅಥ ಪುತ್ರಸಹಸ್ರಂ ಸ ವೈರಿಣ್ಯಾಮಮಿತೌಜಸಮ್ ।
ಅಸಿಕ್ನ್ಯಾಂ ಜನಯಾಮಾಸ ದಕ್ಷಃ ಪ್ರಾಚೇತಸಃ ಪ್ರಭುಃ ॥ ೧೧ ॥

ತಾಂಸ್ತು ದೃಷ್ಟ್ವಾ ಮಹಾತೇಜಾಃ ಸ ವಿವರ್ಧಯಿಷುಃ ಪ್ರಜಾಃ ।
ದೇವರ್ಷಿಪ್ರಿಯಸಂವಾದೋ ನಾರದೋ ಬ್ರಹ್ಮಣಃ ಸುತಃ ॥ ೧೨ ॥

ನಾಶಾಯ ವಚನಂ ತೇಷಾಂ ಶಾಪಾಯೈವಾತ್ಮನೋಽಬ್ರವೀತ್ ।
ಯಃ ಕಶ್ಯಪಸುತಸ್ಯಾಥ ಪರಮೇಷ್ಠೀ ವ್ಯಜಾಯತ ॥ ೧೩ ॥

ಮಾನಸಃ ಕಶ್ಯಪಸ್ಯಾಸೀದ್ದಕ್ಷಶಾಪವಶಾತ್ ಪುನಃ ।
ತಸ್ಮಾತ್ ಸ ಕಾಶ್ಯಪಸ್ಯಾಥ ದ್ವಿತೀಯೋ ಮಾನಸೋಽಭವತ್ ॥ ೧೪ ॥

---

೧೦. ಹೀಗೆ ಕಾಲಾನುಸಾರವಾಗಿ ಒಂದು ಲಕ್ಷ ಕೂಪಗಳು ಹಿಂಬಾಲಿಸುತ್ತಿರುವಷ್ಟರಲ್ಲಿ ಪ್ರಚೇತಸಪುತ್ರನಾದ ದಕ್ಷನು ವೀರಣನ ಪುತ್ರಿಯಾದ ಅಸಿಕ್ನಿಯನ್ನು ಮದುವೆಯಾದನು.

೧೧. ಅನಂತರದಲ್ಲಿ ಪ್ರಭುವೂ ಪ್ರಚೇತಸ ಪುತ್ರನೂ ಆದ ದಕ್ಷ ಪ್ರಜಾಪತಿಯು ವೀರಣ ಪ್ರಜಾಪತಿಯ ಪುತ್ರಿಯಾದ ಅಸಿಕ್ನಿಯಲ್ಲಿ ಅಪಾರವಾದ ಶಕ್ತಿಯಿಂದ ಕೂಡಿದ ಒಂದು ಸಹಸ್ರ ಸಂಖ್ಯೆಯ ಪುತ್ರರನ್ನು ಸೃಷ್ಟಿಸಿದನು.

೧೨. ಮಹಾ ತೇಜಸ್ವಿಯೂ, ಪ್ರಜೆಗಳನ್ನು ವೃದ್ಧಿಪಡಿಸುವ ಕುತೂಹಲದಿಂದ ಕೂಡಿದವನೂ, ದೇವ, ಋಷಿ ಮುಂತಾದವರಲ್ಲಿ ಪ್ರಿಯವಾದ ಸಲ್ಲಾಪವುಳ್ಳವನೂ ಮತ್ತು ಬ್ರಹ್ಮನ ಪುತ್ರನೂ ಆದ ನಾರದ ಮುನಿಯು ಆ ಪುತ್ರರನ್ನು ನೋಡಿ ಈ ರೀತಿಯಾಗಿ ಹೇಳಿದನು.

೧೩. ನಾರದನು ಆ ಸಹಸ್ರ ಪುತ್ರರನ್ನು ಉದ್ದೇಶಿಸಿ ಹೇಳಿದ ವಚನವು ಅವರ ನಾಶಕಾರಕವೂ ತನಗೆ ಶಾಪವನ್ನು ಉಂಟುಮಾಡುವುದೂ ಆಗಿತ್ತು. ಅದರಿಂದ ಆ ನಾರದ ಪ್ರಜಾಪತಿಯು ಕಶ್ಯಪ ಮುನಿಯಲ್ಲಿ ದ್ವಿತೀಯ ಮಾನಸಪುತ್ರನಾಗಿ ಜನಿಸಿದನು.

೧೪. ಈ ನಾರದನು ಕಶ್ಯಪಮುನಿಯ ಪುತ್ರನು. ಇವನು ದಕ್ಷಪ್ರಜಾಪತಿಯ

ಸ ಹಿ ಪೂರ್ವಂ ಸಮುತ್ಪನ್ನೋ ನಾರದಃ ಪರಮೇಷ್ಠಿನಃ ।
ತೇನ ವೃಕ್ಷಸ್ಯ ಪುತ್ರಾ ವೈ ಹರ್ಯಶ್ವಾ ಇತಿ ವಿಶ್ರುತಾಃ ॥ ೧೫ ॥

ಧರ್ಮಾರ್ಥಂ ನಾಶಿತಾಃ ಸರ್ವೇ ವಿಧಿನಾ ಚ ನ ಸಂಶಯಃ ।
ತಸ್ಯೋದ್ಯತಸ್ತದಾ ದಕ್ಷಃ ಕ್ರುದ್ಧಃ ಶಾಪಾಯ ವೈ ಪ್ರಭುಃ ॥ ೧೬ ॥

ಬ್ರಹ್ಮರ್ಷೀನ್ ವೈ ಪುರಸ್ಕೃತ್ಯ ಯಾಚಿತಃ ಪರಮೇಷ್ಠಿನಾ ।
ತತೋಽಭಿಸಂಧಿಂ ಚಕ್ರೇ ವೈ ದಕ್ಷಶ್ಚ ಪರಮೇಷ್ಠಿನಾ ॥ ೧೭ ॥

ಕನ್ಯಾಯಾಂ ನಾರದೋ ಮಹ್ಯಂ ತವ ಪುತ್ರೋ ಭವೇದಿತಿ ।
ತತೋ ದಕ್ಷಃ ಸುತಾಃ ಪ್ರಾದಾತ್ ಪ್ರಿಯಾಂ ವೈ ಪರಮೇಷ್ಠಿನೇ ।
ತಸ್ಮಾತ್ ಸ ನಾರದೋ ಜಜ್ಞೇ ಭೂಯಃ ಶಾಪಭಯಾದೃಷಿಃ ॥ ೧೮ ॥

---

ಶಾಪ ಬಲದಿಂದ ಕಶ್ಯಪಮುನಿಯಲ್ಲಿ ದ್ವಿತೀಯನಾದ ಮಾನಸ ಪುತ್ರನಾಗಿ ಜನಿಸಿರುವನು.

೧೫. ಇವನು ಪೂರ್ವದಲ್ಲಿ ಬ್ರಹ್ಮದೇವನಲ್ಲಿ ಜನ್ಮ ಎತ್ತಿದ್ದನು. ಆಗಲೇ ಹರ್ಯಶ್ವ ಎಂಬ ಪ್ರಸಿದ್ಧ ನಾಮಾಂಕಿತರು ವೃಕ್ಷಗಳಿಗೆ ಪುತ್ರರಾಗಿ ಜನ್ಮವೆತ್ತಿದ್ದರು.

೧೬. ಆಗ ನಾರದನು ಧರ್ಮ ಪ್ರತಿಷ್ಠೆಯ ಉದ್ದೇಶದಿಂದ ಮತ್ತು ವಿಧಿಬಲದಿಂದ ಹರ್ಯಶ್ವರನ್ನು ನಾಶಮಾಡಿದನು. ಆಗ ಪ್ರಭುವಾದ ದಕ್ಷಬ್ರಹ್ಮನು ಕುಪಿತನಾಗಿ ಆ ನಾರದನಿಗೆ ಶಾಪ ಕೊಡಲು ಉದ್ಯುಕ್ತನಾದನು.

೧೭. ಆಗ ಬ್ರಹ್ಮದೇವನು ಅನೇಕ ಬ್ರಹ್ಮರ್ಷಿಗಳನ್ನು ಪುರಸ್ಕರಿಸಿ ಅವರ ಸಂಗಡ ಬಂದು ದಕ್ಷನನ್ನು ಕೇಳಿಕೊಳ್ಳಲಾಗಿ ದಕ್ಷನು ಬ್ರಹ್ಮದೇವನೊಡನೆ ಒಂದು ವಿಧದಿಂದ ಸಂಧಿಯ ಒಪ್ಪಂದವನ್ನು ಮಾಡಿಕೊಂಡನು.

೧೮. ಬ್ರಹ್ಮನು ಪಾಣಿಗ್ರಹಣ ಮಾಡಿರುವ ತನ್ನ ಕನ್ಯೆಯಲ್ಲಿ ನಾರದನು ಪುತ್ರನಾಗಿ ಜನಿಸಲೆಂಬ ತನ್ನ ಇಷ್ಟದಲ್ಲಿ ಬ್ರಹ್ಮನ ಸಮ್ಮತಿಯನ್ನು ಪಡೆದನು. ಅನಂತರದಲ್ಲಿ ದಕ್ಷನು ತನ್ನ ಮಗಳನ್ನು ಬ್ರಹ್ಮನಿಗೆ ಪ್ರದಾನ ಮಾಡಿದನು. ದಕ್ಷನ ಶಾಪ ಭಯದಿಂದ ನಾರದ ಋಷಿಯು ಮತ್ತೆ ಅವನಲ್ಲಿ ಜನ್ಮತಾಳಿದನು.

ಶಾಂಶಪಾಯನ ಉವಾಚ :—

ಕಥಂ ವೈ ನಾಶಿತಾಃ ಪೂರ್ವಂ ನಾರದೇನ ಸುರರ್ಷಿಣಾ ।
ಪ್ರಜಾಪತಿಸುತಾಸ್ತೇ ವೈ ಶ್ರೋತುಮಿಚ್ಛಾಮಿ ತತ್ತ್ವತಃ ॥ ೧೯ ॥

ಸೂತ ಉವಾಚ :—

ದಕ್ಷ ಪುತ್ರಾಶ್ಚ ಹರ್ಯಶ್ವಾ ವಿವರ್ಧಯಿಷವಃ ಪ್ರಜಾಃ ।
ಸಮಾಗತಾ ಮಹಾವೀರ್ಯಾ ನಾರದಸ್ತಾನುವಾಚ ಹ ॥ ೨೦ ॥

ಬಾಲಿಶಾ ಬತ ಯೂಯಂ ವೈ ನ ಪ್ರಜಾನೀಥ ಭೂತಲಮ್ ।
ಅಂತರೂರ್ಧ್ವಮಧಶ್ಚೈವ ಕಥಂ ಸ್ರಕ್ಷ್ಯಥ ವೈ ಪ್ರಜಾಃ ॥ ೨೧ ॥

ತೇ ತು ತದ್ವಚನಂ ಶ್ರುತ್ವಾ ಪ್ರಯಾತಾಃ ಸರ್ವತೋದಿಶಮ್ ।
ಅದ್ಯಾಪಿ ನ ನಿವರ್ತಂತೇ ಸಮುದ್ರಸ್ಥಾ ಇವಾಪಗಾಃ ॥ ೨೨ ॥

---

೧೯. ಶಾಂಶಪಾಯನ ಮುನಿಯು ಮುಂದಿನ ಚರಿತ್ರವನ್ನು ಪ್ರಶ್ನಿಸಿದನು. ದೇವರ್ಷಿಯಾದ ನಾರದ ಮುನಿಯು ಪ್ರಜಾಪತಿಯ ಪುತ್ರರನ್ನು ಯಾವ ಕಾರಣದಿಂದ ನಾಶಮಾಡಿದನು? ಎಂಬುದನ್ನು ತಾತ್ತ್ವಿಕವಾಗಿ ಶ್ರವಣಮಾಡಲು ಇಷ್ಟವುಳ್ಳವನಾಗಿದ್ದೇನೆ.

೨೦. ಸೂತಮುನಿಯು ಪ್ರತ್ಯುತ್ತರವಿತ್ತನು. ಮಹಾ ವೀರ್ಯಸಂಪನ್ನರೂ ಹರ್ಯಶ್ವ ಎಂದು ಪ್ರಸಿದ್ಧರೂ ಆದ ದಕ್ಷಪ್ರಜಾಪತಿಯ ಪುತ್ರರು ಪ್ರಜೆಗಳನ್ನು ಅಭಿವೃದ್ಧಿಪಡಿಸುವ ಉದ್ದೇಶವನ್ನು ಹೊಂದಿದರು. ಆಗ ಅವರನ್ನು ಕುರಿತು ನಾರದ ಮುನಿಯು ಹೇಳಿದನು.

೨೧. ಹರ್ಯಶ್ವರೆ! ನೀವು ಅಜ್ಞರು. ನೀವು ಈ ಭೂಮಂಡಲದ ಊರ್ಧ್ವ, ಅಧೋಭಾಗ, ಮಧ್ಯಗಳನ್ನು ತಿಳಿದಿರುವುದಿಲ್ಲ. ಹೀಗಿರಲು ಪ್ರಜೆಗಳನ್ನು ನೀವು ಸೃಷ್ಟಿಸುವುದು ಹೇಗೆ?

೨೨. ಆ ಹರ್ಯಶ್ವರು ಈ ನಾರದ ವಚನವನ್ನು ಕೇಳಿ ಸಕಲ ದಿಕ್ಕುಗಳಿಗೆ ಪ್ರಯಾಣಮಾಡಿದವರು ಸಮುದ್ರವನ್ನು ಸೇರಿದ ನದಿಗಳು ಮತ್ತೆ ಹಿಂತಿರುಗದಂತೆ ಇವತ್ತಿಗೂ ಹಿಂದಿರುಗಿ ಬರಲಿಲ್ಲ.

ಅಥ ತೇಷು ಪ್ರಣಷ್ಟೇಷು ದಕ್ಷಃ ಪ್ರಾಚೇತಸಃ ಪುನಃ ।
ವೈರಿಣ್ಯಾಮೇವ ಪುತ್ರಾಣಾಂ ಸಹಸ್ರಮಸೃಜತ್ ಪ್ರಭುಃ ॥ ೨೩ ॥

ಪ್ರಜಾ ವಿವರ್ಧಯಿಷವಃ ಶಬಲಾಶ್ವಾಃ ಪುನಸ್ತು ತೇ ।
ಪೂರ್ವಮುಕ್ತಂ ವಚಸ್ತದ್ವೈ ಶ್ರಾವಿತಾ ನಾರದೇನ ಹ ॥ ೨೪ ॥

ಅನ್ಯೋನ್ಯಮೂಚುಸ್ತೇ ಸರ್ವೇ ಸಮ್ಯಗಾಹ ಋಷಿಃ ಸ್ವಯಮ್ ।
ಭ್ರಾತೃಣಾಂ ಪದವೀ ಚೈವ ಗಂತವ್ಯಾ ನಾತ್ರ ಸಂಶಯಃ ॥ ೨೫ ॥

ಜ್ಞಾತ್ವಾ ಪ್ರಮಾಣಂ ಪೃಥ್ವ್ಯಾ ವೈ ಸುಖಂ ಸ್ರಕ್ಷ್ಯಾಮಹೇ ಪ್ರಜಾಃ ।
ಪ್ರಕಾಶಾಃ ಸ್ವಸ್ಥಮನಸಾ ಯಥಾವದನುಶಾಸಿತಾಃ ॥ ೨೬ ॥

ತೇಽಪಿ ತೇನೈವ ಮಾರ್ಗೇಣ ಪ್ರಯಾತಾಃ ಸರ್ವತೋದಿಶಮ್ ।
ಅದ್ಯಾಪಿ ನ ನಿವರ್ತಂತೇ ವಿಸ್ತಾರಾಯಾಮಲಿಪ್ಸವಃ ॥ ೨೭ ॥

---

೨೩. ಹೀಗೆ ಆ ಹರ್ಯಶ್ವರೆಂಬ ಪುತ್ರರು ನಷ್ಟರಾಗಲು ಪ್ರಚೇತಸ ಪುತ್ರನೂ ಪ್ರಭುವೂ ಆದ ದಕ್ಷನು ಮತ್ತೆ ವೀರಣನ ಪುತ್ರಿಯಲ್ಲಿ ಸಹಸ್ರಪುತ್ರರನ್ನು ಸೃಷ್ಟಿ ಮಾಡಿದನು.

೨೪ ಮತ್ತೆ ಪ್ರಜೆಗಳನ್ನು ವೃದ್ಧಿಗೊಳಿಸಬೇಕೆಂಬ ಕುತೂಹಲ ಉಳ್ಳ ಆ ಶಬಲಾಶ್ವರು ನಾರದನಿಂದ ಹಿಂದೆ ಹೇಳಲ್ಪಟ್ಟ ಮಾತನ್ನು ಕೇಳಿದರು.

೨೫. ಆಗ ಅವರೆಲ್ಲರೂ ಪರಸ್ಪರವಾಗಿ ಮಾತನಾಡಿಕೊಂಡರು. ನಾರದ ಮುನಿಯು ನಿಜವನ್ನು ಹೇಳಿರುವನು, ನಾವು ಸಹೋದರರ ಮಾರ್ಗವನ್ನು ಅವಲಂಬಿಸ ಬೇಕು. ಇದರಲ್ಲಿ ಸಂಶಯವಿಲ್ಲ.

೨೬. ನಾವು ಭೂಮಿಯ ಪರಿಮಾಣವನ್ನು ತಿಳಿದು ಸುಖವಾಗಿ ಪ್ರಜೆಗಳನ್ನು ಸೃಷ್ಟಿಸೋಣ- ತಾತ್ತ್ವಿಕವಾಗಿ ಉಪದೇಶಹೊಂದಿ ಪ್ರಕಾಶರೂಪವಾದ ಜ್ಞಾನದಿಂದ ಮನಸ್ಸಿನಲ್ಲಿ ಸ್ವಸ್ಥತೆಯನ್ನು ಹೊಂದೋಣ.

೨೭. ಹೀಗೆ ಯೋಚಿಸಿಕೊಂಡು ಅವರೆಲ್ಲರೂ ಹಿಂದೆ ಸಹೋದರರು ಹೋಗಿ ರುವ ದಾರಿಯಿಂದ ಭೂಮಿಯ ವಿಸ್ತಾರ-ದೀರ್ಘ ಪರಿಮಾಣಗಳನ್ನು ತಿಳಿಯಲು ಸರ್ವ ಪ್ರದೇಶಗಳಿಗೆ ಹೋಗಿ ಇಂದಿಗೂ ಹಿಂದಿರುಗಲಿಲ್ಲ.

ತತಃ ಪ್ರಭೃತಿ ವೈ ಭ್ರಾತಾ ಭ್ರಾತುರನ್ವೇಷಣೇ ರತಃ ।
ಪ್ರಯಾತೋ ನಶ್ಯತಿ ಕ್ಷಿಪ್ರಂ ತನ್ನ ಕಾರ್ಯಂ ವಿಜಾನತಾ ॥ ೨೮ ॥

ನಷ್ಟೇಷು ಶಬಲಾಶ್ವೇಷು ದಕ್ಷಃ ಕ್ರುದ್ಧೋಽಶಪದ್ವಿಭುಃ ।
ನಾರದಂ ನಾಶಮೇಹೀತಿ ಗರ್ಭವಾಸಂ ವಸೇತಿ ಚ ॥ ೨೯ ॥

ತದಾ ತೇಷ್ವಪಿ ನಷ್ಟೇಷು ಮಹಾತ್ಮಾ ಸ ಪ್ರಭುಃ ಕಿಲ ।
ಷಷ್ಟಿಂ ದಕ್ಷೋಽಸೃಜತ್ ಕನ್ಯಾ ವೈರಣ್ಯಾಮೇವ ವಿಶ್ರುತಾಃ ॥ ೩೦ ॥

ತಾಸ್ತದಾ ಪ್ರತಿಜಗ್ರಾಹ ಪತ್ನ್ಯರ್ಥಂ ಕಶ್ಯಪಃ ಸುತಾಃ ।
ಧರ್ಮಃ ಸೋಮಶ್ಚ ಭಗವಾಂಸ್ತಥಾ ಚಾನ್ಯೇ ಮಹರ್ಷಯಃ ॥ ೩೧ ॥

ಇಮಾಂ ವಿಸೃಷ್ಟಿಂ ದಕ್ಷಸ್ಯ ಕೃತ್ಸ್ನಾಂ ಯೋ ವೇದ ತತ್ತ್ವತಃ ।
ಆಯುಷ್ಮಾನ್ ಕೀರ್ತಿಮಾನ್ ಧನ್ಯಃ ಪ್ರಜಾವಾಂಶ್ಚ ಭವತ್ಯುತ ॥ ೩೨ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಿತೀಯೋಽಧ್ಯಾಯಃ

---

೨೮. ಆ ಮೊದಲುಗೊಂಡು ಸಹೋದರನನ್ನು ಹುಡುಕಲು ಅವನ ದಾರಿಯನ್ನು ಅವಲಂಬಿಸಿ ಪ್ರಯಾಣ ಮಾಡಿದವನು ಶೀಘ್ರವಾಗಿ ನಾಶವನ್ನು ಹೊಂದುತ್ತಾನೆ. ಆದುದರಿಂದ ಜ್ಞಾನಿಯಾದವನು ಹಾಗೆ ಮಾಡಲಾಗದು.

೨೯. ಪ್ರಭುವಾದ ದಕ್ಷನು ಶಬಲಾಶ್ವರು ಹಾಗೆ ನಾಶ ಹೊಂದಲಾಗಿ ಕೋಪಗೊಂಡು ನಾರದ ಮುನಿಗೆ ನೀನು ನಾಶ ಹೊಂದು ಮತ್ತು ಗರ್ಭವಾಸವನ್ನು ಅನುಭವಿಸು ಎಂದು ಶಪಿಸಿದನು,

೩೦. ಮಹಾತ್ಮನೂ ಪ್ರಭುವೂ ಆದ ದಕ್ಷಪ್ರಜಾಪತಿಯು ಅವರು ನಾಶವಾದ ನಂತರದಲ್ಲಿ ಆ ಅಸಿಕ್ನಿ ಎಂಬ ಭಾರ್ಯೆಯಲ್ಲಿ ಮತ್ತೆ ಪ್ರಸಿದ್ಧರಾದ ಅರವತ್ತು ಮಂದಿ ಕನ್ನಿಕೆಯರನ್ನು ಸೃಷ್ಟಿಸಿದನು.

೩೧. ಆಗ ಪೂಜ್ಯರಾದ ಕಶ್ಯಪ, ಧರ್ಮ, ಸೋಮ ಮತ್ತು ಅನೇಕ ಮಹರ್ಷಿಗಳು ದಕ್ಷ ಕನ್ನಿಕೆಯರನ್ನು ಪತ್ನಿಯರನ್ನಾಗಿ ಸ್ವೀಕರಿಸಿದರು.

೩೨. ದಕ್ಷಪ್ರಜಾಪತಿಯ ಈ ಸೃಷ್ಟಿ ಪ್ರಪಂಚವನ್ನು ಸಂಪೂರ್ಣವಾಗಿಯೂ ತಾತ್ವಿಕವಾಗಿಯೂ ತಿಳಿದ ಮಾನವನು ಆಯುಷ್ಯ, ಕೀರ್ತಿ ಪ್ರಜೆ ಮುಂತಾದ ಫಲಗಳನ್ನು ಹೊಂದಿ ಧನ್ಯನಾಗುವನು.

ಬ್ರಹ್ಮಾಂಡಪುರಾಣವಲ್ಲಿ ಉತ್ತರಾರ್ಧದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.

## ತೃತೀಯೋಽಧ್ಯಾಯಃ

**ಋಷಯ ಊಚುಃ**

**ದೇವಾನಾಂ ದಾನವಾನಾಂ ಚ ದೈತ್ಯಾನಾಂ ಚೈವ ಸರ್ವಶಃ ।**
**ಉತ್ಪತ್ತಿಂ ವಿಸ್ತರೇಣೈವ ಬ್ರೂಹಿ ವೈವಸ್ವತೇಽಂತರೇ ॥ ೧ ॥**

**ಸೂತ ಉವಾಚ :—**

**ಧರ್ಮಸ್ಯೈವ ಪ್ರವಕ್ಷ್ಯಾಮಿ ನಿಸರ್ಗಂ ತಂ ನಿಬೋಧತ ।**
**ಅರುಂಧತೀ ವಸುರ್ಜಾಮಾ ಲಂಬಾ ಭಾನುರ್ಮರುತ್ವತೀ ॥ ೨ ॥**

**ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ತಥೈವ ಚ ।**
**ಧರ್ಮಸ್ಯ ಪತ್ನ್ಯೋ ದಶ ತಾ ದಕ್ಷಃ ಪ್ರಾಚೇತಸೋ ದದೌ ॥ ೩ ॥**

**ಸಾಧ್ಯಾಪುತ್ರಾಸ್ತು ಧರ್ಮಸ್ಯ ಸಾಧ್ಯಾ ದ್ವಾದಶ ಜಜ್ಞಿರೇ ।**
**ದೇವೇಭ್ಯಸ್ತಾನ್ ಪರಾನ್ ದೇವಾನ್ ದೈವಜ್ಞಾಃ ಪರಿಚಕ್ಷತೇ ॥ ೪ ॥**

---

೧. ಋಷಿಗಳು ಪ್ರಶ್ನೆ ಮಾಡಿದರು:—ಸೂತಮುನಿಯೇ ವೈವಸ್ವತ ಮನ್ವಂತರದಲ್ಲಿ ದೇವ, ದಾನವ ಮತ್ತು ದೈತ್ಯ ಮುಂತಾದ ಸಮಸ್ತ ಪ್ರಜೆಗಳ ಉತ್ಪತ್ತಿಯನ್ನು ವಿಸ್ತಾರವಾಗಿ ವರ್ಣಿಸು.

೨. ಸೂತಮುನಿಯು ಪ್ರತ್ಯುತ್ತರವಿತ್ತನು :-ಧರ್ಮಪ್ರಜಾಪತಿಯ ಪ್ರಸಿದ್ಧವಾದ ಸೃಷ್ಟಿ ಕ್ರಮವನ್ನು ಹೇಳುತ್ತೇನೆ, ಶ್ರವಣಮಾಡಿರಿ. ಅರುಂಧತಿ, ವಸು, ಜಾಮ, ಲಂಬ, ಭಾನು, ಮರುತ್ವತೀ ಎಂಬುವರು ಧರ್ಮಪ್ರಜಾಪತಿಯ ಪತ್ನಿಯರಾಗಿರುವರು.

೩. ಮತ್ತು ಸಂಕಲ್ಪ, ಮುಹೂರ್ತ, ಸಾಧ್ಯ, ವಿಶ್ವ-ಎಂಬುವರು ಸೇರಿ ಹತ್ತು ಮಂದಿ ಕನ್ನಿಕೆಯರು ಪ್ರಾಚೇತಸ ದಕ್ಷಪ್ರಜಾಪತಿಯಿಂದ ಧರ್ಮಪ್ರಜಾಪತಿಗೆ ದಾನ ಮಾಡಲ್ಪಟ್ಟರು.

೪. ಇದರಲ್ಲಿ ಸಾಧ್ಯಾ ದೇವಿಯಲ್ಲಿ ಧರ್ಮಪ್ರಜಾಪತಿಗೆ ಹನ್ನೆರಡು ಮಂದಿ ಸಾಧ್ಯ ಎಂಬ ದೇವತೆಗಳು ಜನಿಸಿದರು. ದೇವಸ್ವರೂಪವನ್ನು ಅರಿತ ವಿದ್ವಾಂಸರು ಸಾಧ್ಯದೇವತೆಗಳನ್ನು ದೇವತಾ ಸಮೂಹದಲ್ಲಿ ಮುಖ್ಯರನ್ನಾಗಿ ವರ್ಣಿಸುತ್ತಾರೆ.

ಬ್ರಹ್ಮಣಾ ನ್ವೈ ಮುಖಾತ್ ಸೃಷ್ಟಾ ಜಯಾ ದೇವಾಃ ಪ್ರಜೇಪ್ಸಯಾ ।
ಸರ್ವೇ ಮಂತ್ರಶರೀರಾಸ್ತೇ ಸ್ಮೃತಾ ಮನ್ವಂತರೇಷ್ವಿಹ ॥ ೫ ॥

ದರ್ಶಶ್ಚ ಪೌರ್ಣಮಾಸಶ್ಚ ಬೃಹದ್ಯಚ್ಚ ರಥಂತರಮ್ ।
ವಿತ್ತಿಶ್ಚೈವ ವಿವಿತ್ತಿಶ್ಚ ಆಕೂತಿಃ ಕೂತಿರೇವ ಚ ॥ ೬ ॥

ವಿಜ್ಞಾತಾ ಚೈವ ವಿಜ್ಞಾತೋ ಮನೋ ಯಜ್ಞಸ್ತಥೈವ ಚ ।
ನಾಮಾನ್ಯೇತಾನಿ ತೇಷಾಂ ನ್ವೈ ಯಜ್ಞಾನಾಂ ಪ್ರಥಿತಾನಿ ಚ ॥ ೭ ॥

ಬ್ರಹ್ಮಶಾಪೇನ ತೇ ಜಾತಾಃ ಪುನಃ ಸ್ವಾಯಂಭುವೇ ಜಿತಾಃ ।
ಸ್ವಾಯಂಭುವೇ ವೈ ತುಷಿತಾಃ ಸತ್ಯಾಶ್ಚೈವೋತ್ತಮೋ ಪುನಃ ॥ ೮ ॥

ತಾಮಸೇ ಹರಯೋ ನಾಮ ವೈಕುಂಠಾ ರೇವತಾಂತರೇ ।
ತೇ ಸಾಧ್ಯಾಶ್ಚಾಕ್ಷುಷೇ ನಾಮ್ನಾ ಛಂದಜಾ ಜಜ್ಞಿರೇ ಸುರಾಃ ॥ ೯ ॥

---

೫. ಬ್ರಹ್ಮನಿಂದ ಪ್ರಜಾಕಾಮನೆಯಿಂದ ಜಯರೆಂಬ ದೇವತೆಗಳು ಮುಖದಿಂದ ಸೃಷ್ಟಿಸಲ್ಪಟ್ಟರು. ಅವರೆಲ್ಲರು ಎಲ್ಲ ಮನ್ವಂತರಗಳನಯೂ ಮಂತ್ರಮಯವಾದ ದೇಹವುಳ್ಳವರೆಂದು ಸ್ಮರಿಸಲ್ಪಟ್ಟಿರುವರು.

೬. ಆ ಜಯದೇವತೆಗಳಿಗೆ ಮುಂದೆ ಹೇಳುವಂತೆ ಪ್ರಸಿದ್ಧವಾದ ಹೆಸರುಗಳಿದ್ದುವು. ದರ್ಶ, ಪೌರ್ಣಮಾಸ, ಬೃಹತ್, ರಥಂತರ, ವಿತ್ತಿ, ವಿವಿತ್ತಿ ಆಕೂತಿ, ಕೂತಿ, ಎಂಬುವು ಮೊದಲನೆಯ ಎಂಟು ಮಂದಿಯ ಹೆಸರು.

೭. ವಿಜ್ಞಾತ, ವಿಜ್ಞಾತಿ, ಮನ, ಯಜ್ಞ ಎಂಬುವು ಸೇರಿ ಈ ಹನ್ನೆರಡು ಜಯ ದೇವತೆಗಳ ಪ್ರಸಿದ್ಧವಾದ ಹೆಸರುಗಳಾಗಿದ್ದುವು.

೮. ಅವರು ಬ್ರಹ್ಮನ ಶಾಪದಿಂದ ಸ್ವಾಯಂಭುವ ಮನ್ವಂತರದಲ್ಲಿ ಜಿತದೇವರೆಂದು ಸ್ವಾರೋಚಿಷ ಮನ್ವಂತರದಲ್ಲಿ ತುಷಿತದೇವರೆಂದು ಉತ್ತಮ ಮನ್ವಂತರದಲ್ಲಿ ಸತ್ಯದೇವರೆಂದು ಮತ್ತೆ ಮತ್ತೆ ಜನ್ಮವನ್ನೆತ್ತಿದರು.

೯. ತಾಮಸಮನ್ವಂತರದಲ್ಲಿ ಹರಿದೇವತೆಗಳೆಂದೂ ರೇವತಮನ್ವಂತರದಲ್ಲಿ ವೈಕುಂಠದೇವರೆಂದೂ ಚಾಕ್ಷುಷ ಮನ್ವಂತರದಲ್ಲಿ ಸಾಧ್ಯ ಅಥವಾ ಛಂದಜದೇವತೆಗಳೆಂದು ಹೆಸರಿನಿಂದ ಜನಿಸಿದರು.

ಧರ್ಮಪುತ್ರಾ ಮಹಾಭಾಗಾಃ ಸಾಧ್ಯಾ ಯೇ ದ್ವಾದಶಾಮರಾಃ ।
ಪೂರ್ವಂ ಸಮನುಸೂಯಂತೇ ಚಾಕ್ಷುಷಸ್ಯಾಂತರೇ ಮನೋಃ ॥ ೧೦ ॥

ಸ್ವಾರೋಚಿಷೇಽಂತರೇಽತೀತಾ ದೇವಾ ಯೇ ವೈ ಮಹೌಜಸಃ ।
ತುಷಿತಾ ನಾಮ ತೇಽನ್ಯೋನ್ಯಮೂಚುರ್ವೈ ಚಾಕ್ಷುಷೇಽಂತರೇ ॥ ೧೧ ॥

ಕಿಂಚಿಚ್ಛಿಷ್ಟೇ ತದಾ ತಸ್ಮಿನ್ ದೇವಾ ವೈ ತುಷಿತಾಬ್ರುವನ್ ।
ಏತಾಮೇವ ಮಹಾಭಾಗಾಂ ವಯಂ ಸಾಧ್ಯಾಂ ಪ್ರವಿಶ್ಯ ವೈ ॥ ೧೨ ॥

ಮನ್ವಂತರೇ ಭವಿಷ್ಯಾಮಸ್ತನ್ನಃ ಶ್ರೇಯೋ ಭವಿಷ್ಯತಿ ।
ಏವಮುಕ್ತ್ವಾ ತು ತೇ ಸರ್ವೇ ಚಾಕ್ಷುಷಸ್ಯಾಂತರೇ ಮನೋಃ ॥ ೧೩ ॥

ತಸ್ಯಾಂ ದ್ವಾದಶ ಸಂಭೂತಾ ಧರ್ಮಾತ್ ಸ್ವಾಯಂಭುವಾತ್ಮನಃ ।
ನರನಾರಾಯಣೌ ತತ್ರ ಜಜ್ಞಾತೇ ಪುನರೇವ ಹಿ ॥ ೧೪ ॥

---

೧೦. ಮಹಾತ್ಮರೂ ಧರ್ಮಪ್ರಜಾಪತಿಯ ಪುತ್ರರೂ ಆದ ಹನ್ನೊಂದು ಮಂದಿ ಸಾಧ್ಯ ಎಂಬ ದೇವತೆಗಳು ಪೂರ್ವದಲ್ಲಿ ಚಾಕ್ಷುಷ ಮನುವಿನ ಮನ್ವಂತರದಲ್ಲಿ ಹುಟ್ಟಿದ್ದರು.

೧೧. ಸ್ವಾರೋಚಿಷ ಮನ್ವಂತರದಲ್ಲಿ ಕಳೆದು ಹೋಗಿದ್ದ ಮಹಾತೇಜಸ್ವಿಗಳಾದ ತುಷಿತ ಎಂದು ವಿಖ್ಯಾತರಾದ ದೇವತೆಗಳು ಚಾಕ್ಷುಷ ಮನ್ವಂತರದಲ್ಲಿ ಅನ್ಯೋನ್ಯವಾಗಿ ಮಾತನಾಡಿಕೊಂಡರು.

೧೨. ಆ ಮನ್ವಂತರವು ಸ್ವಲ್ಪ ಮಾತ್ರ ಮಿಕ್ಕಿರಲು ತುಷಿತದೇವತೆಗಳು ಈ ರೀತಿಯಾಗಿ ಹೇಳಿದರು. ಈ ಮಹಾತ್ಮಳಾದ ಸಾಧ್ಯಾಪ್ರಕೃತಿಯನ್ನು ನಾವು ಪ್ರವೇಶ ಮಾಡೋಣ.

೧೩. ಮತ್ತೆ ಮುಂದಿನ ಮನ್ವಂತರದಲ್ಲಿ ಜನ್ಮವನ್ನೆತ್ತೋಣ. ಆಗ ನಮ್ಮೆಲ್ಲರಿಗೆ ಶ್ರೇಯಸ್ಸು ಲಭಿಸುವುದು, ಎಂಬುದಾಗಿ ಆ ದೇವತೆಗಳು ಚಾಕ್ಷುಷಮನುವಿನ ಮನ್ವಂತರದಲ್ಲಿ ಮಾತನಾಡಿಕೊಂಡರು.

೧೪. ಆ ಸಾಧ್ಯಾದೇವಿಯಲ್ಲಿ ಸ್ವಯಂಭು ಪುತ್ರನಾದ ಧರ್ಮಪ್ರಜಾಪತಿಯಿಂದ ಹನ್ನೆರಡು ಜನರು ಹುಟ್ಟಿದರು, ಅಲ್ಲಿ ಮತ್ತೆ ನರ, ನಾರಾಯಣ ಎಂಬ ಈರ್ವರು ಉತ್ಪನ್ನರಾದರು.

ವಿಪಶ್ಚಿ ದಿಂದ್ರೋ ಯಶ್ಚಾಭೂತ್ ತಥಾ ಸತ್ಯೋ ಹರಿಶ್ಚ ತೌ ।
ಸ್ವಾರೋಚಿಷೇಽಂ ತರೇ ಪೂರ್ವಮಾಸ್ತಾಂ ತೌ ತುಷಿತಾಸುತೌ ॥ ೧೫ ॥

ತುಷಿತಾನಾಂ ತು ಸಾಧ್ಯತ್ವೇ ನಾಮಾನ್ಯೇತಾನಿ ಚಕ್ಷತೇ
ಮನೋಽನುಮಂತಾ ಪ್ರಾಣಶ್ಚ ನರೋಽಪಾನಶ್ಚ ವೀರ್ಯವಾನ್ ॥೧೬॥

ವಿತಿರ್ನಯೋ ಹಯುಶ್ಚೈವ ಹಂಸೋ ನಾರಾಯಣಸ್ತಥಾ ।
ವಿಭುಶ್ಚಾಪಿ ಪ್ರಭುಶ್ಚಾಪಿ ಸಾಧ್ಯಾ ದ್ವಾದಶ ಜಜ್ಞಿರೇ ॥ ೧೭ ॥

ಸ್ವಾಯಂಭುವೇಽಂತರೇ ಪೂರ್ವಂ ತತಃ ಸ್ವಾರೋಚಿಷೇ ಪುನಃ ।
ನಾಮಾನ್ಯಾಸನ್ ಪುನಸ್ತಾನಿ ತುಷಿತಾನಾಂ ನಿಬೋಧತ ॥ ೧೮ ॥

ಪ್ರಾಣಾಪಾನಾವುದಾನಶ್ಚ ಸಮಾನೋ ವ್ಯಾನ ಏವ ಚ ।
ಚಕ್ಷುಃ ಶ್ರೋತ್ರಂ ರಸೋ ಘ್ರಾಣಂ ಸ್ಪರ್ಶೋ ಬುದ್ಧಿರ್ಮನಸ್ತಥಾ ॥ ೧೯ ॥

---

೧೫. ಜ್ಞಾನಿಯಾದ ಇಂದ್ರನೂ ಸತ್ಯಮೂರ್ತಿಯಾದ ಹರಿಯೂ ಪೂರ್ವದ ಸ್ವಾರೋಚಿಷ ಮನ್ವಂತರದಲ್ಲಿ ತುಷಿತಾದೇವಿಯಲ್ಲಿ ಹುಟ್ಟಿದ ಪುತ್ರರಾಗಿದ್ದರು.

೧೬. ಆ ತುಷಿತ ದೇವರು ಸಾಧ್ಯದೇವತಾಜನ್ಮವನ್ನು ಎತ್ತಿದಾಗ ಅವರಿಗೆ ಮುಂದೆ ಹೇಳುವಂತೆ ಹೆಸರುಗಳನ್ನು ಹೇಳುವರು-ಮನ, ಅನುಮಂತ, ಪ್ರಾಣ, ನರ, ಅಪಾನ ಎಂಬುವು ಆ ವೀರ್ಯವಂತರಾದ ಐದುಮಂದಿಯ ಹೆಸರು.

೧೭. ವಿತಿ, ನಯ, ಹಯ, ಹಂಸ, ನಾರಾಯಣ, ವಿಭು, ಪ್ರಭು ಎಂಬುವು ಸೇರಿ ಈ ಹನ್ನೆರಡು ನಾಮಗಳಿಂದ ಅಂಕಿತರಾದ ಸಾಧ್ಯ ದೇವತೆಗಳು ಜನಿಸಿದರು.

೧೮. ಆ ತುಷಿತ ದೇವರಿಗೆ ಸ್ವಯಂಭುವ ಮನ್ವಂತರದಲ್ಲಿ ಇದ್ದ ಹೆಸರುಗಳು ಹೇಳಲ್ಪಟ್ಟವು, ಮುಂದೆ ಸ್ವಾರೋಚಿಷ ಮನ್ವಂತರದಲ್ಲಿದ್ದ ಆ ತುಷಿತ ದೇವತೆಗಳ ಹೆಸರನ್ನು ಶ್ರವಣಮಾಡಿರಿ.

೧೯. ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ, ಚಕ್ಷು, ಶ್ರೋತ್ರ, ರಸ, ಘ್ರಾಣ, ಸ್ಪರ್ಶ, ಬುದ್ಧಿ ಮತ್ತು ಮನಸ್ಸು ಎಂಬುವು ಕ್ರಮವಾಗಿ ಆ ತುಷಿತ ದೇವತೆಗಳ ಸಂಜ್ಞೆಗಳು.

ನಾಮಾನ್ಯೇತಾನಿ ವೈ ಪೂರ್ವಂ ತುಷಿತಾನಾಂ ಸ್ಮೃತಾನಿ ಚ ।
ವಸೋಸ್ತು ವಸವಃ ಪುತ್ರಾಃ ಸಾಧ್ಯಾನಾಮನುಜಾಃ ಸ್ಮೃತಾಃ ॥ ೨೦ ॥

ಧರೋ ಧ್ರುವಶ್ಚ ಸೋಮಶ್ಚ ಆಯುಶ್ಚೈವಾನಲೋಽನಿಲಃ ।
ಪ್ರತ್ಯೂಷಶ್ಚ ಪ್ರಭಾತಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥ ೨೧ ॥

ಧರಸ್ಯ ಪುತ್ರೋ ದ್ರವಿಣೋ ಹುತಹವ್ಯೋ ರಜಸ್ತಥಾ ।
ಧ್ರುವಪುತ್ರೋಽಭವತ್ತಾತ ಕಾಲೋ ಲೋಕಪ್ರಕಾಲನಃ ॥ ೨೨ ॥

ಸೋಮಸ್ಯ ಭಗವಾನ್ ವರ್ಚಾ ಬುಧಶ್ಚ ಗ್ರಹಬೋಧನಃ ।
ಧರೋರ್ಮಿ ಕಲಿಲಶ್ಚೈವ ಪಂಚ ಚಂದ್ರಮಸಃ ಸುತಾಃ ॥ ೨೩ ॥

ಆಯುಸ್ಯ ಪುತ್ರೋ ವೈತಂಡ್ಯಃ ಶಮಃ ಶಾಂತಸ್ತಥೈವ ಚ ।
ಸ್ಕಂದಃ ಸನತ್ಕುಮಾರಶ್ಚ ಜಜ್ಞೇ ಪಾದೇನ ತೇಜಸಃ ॥ ೨೪ ॥

---

೨೦. ಹೀಗೆ ಪೂರ್ವದಲ್ಲಿ ತುಷಿತ ದೇವತೆಗಳಿಗೆ ಸಂಜ್ಞೆಗಳು ಸ್ಮರಿಸಲ್ಪಟ್ಟಿವೆ. ವಸು ಎಂಬುವಳಿಗೆ ವಸು ಎಂಬ ನಾಮಾಂಕಿತರಾದ ಸಾಧ್ಯ ದೇವತೆಗಳ ಅನುಜರಾದ ಪುತ್ರರು ಸ್ಮರಿಸಲ್ಪಟ್ಟಿರುವರು.

೨೧. ಧರ, ಧ್ರುವ, ಸೋಮ, ಆಯು, ಅನಲ, ಅನಿಲ, ಪ್ರತ್ಯೂಷ ಮತ್ತು ಪ್ರಭಾತ ಎಂಬುವು ಅಷ್ಟವಸುಗಳ ಹೆಸರಾಗಿ ಕೀರ್ತಿಸಲ್ಪಟ್ಟಿವೆ.

೨೨. ಇವರಲ್ಲಿ ಧರ ಎಂಬ ವಸುವಿಗೆ ದ್ರವಿಣ, ಹುತಹವ್ಯ ಮತ್ತು ರಜ ಎಂಬುವರು ಪುತ್ರರಾಗಿ ಜನಿಸಿದರು. ಲೋಕಗಳನ್ನು ಪರಿವರ್ತಿಸುತ್ತಿದ್ದ ಕಾಲ ಎಂಬುವನು ಧ್ರುವನೆಂಬ ವಸುವಿಗೆ ಪುತ್ರನಾಗಿ ಜನಿಸಿದನು.

೨೩. ಸೋಮನಿಗೆ ಪೂಜ್ಯನೂ ಗ್ರಹಮಂಡಲದಲ್ಲಿ ಪ್ರಕಾಶಿಸುವವನೂ ಆದ ವರ್ಚಾ, ಬುಧ, ಧರಾ, ಊರ್ಮಿ ಮತ್ತು ಕಲಿಲ ಎಂದು ಐದು ಮಂದಿ ಪುತ್ರರಾಗಿದ್ದರು.

೨೪. ವೈತಂಡ್ಯ, ಶಮ, ಶಾಂತ, ಸ್ಕಂದ ಮತ್ತು ಸನತ್ಕುಮಾರ ಎಂಬುವರು ಆಯನ ತೇಜಸ್ಸಿನ ಪಾದಾಂಶದಿಂದ ಪುತ್ರರಾಗಿ ಹುಟ್ಟಿದರು.

ಅಗ್ನೇಃ ಪುತ್ರಂ ಕುಮಾರಂ ತು ಸ್ವಾಹಾ ಜಜ್ಞೇ ಶ್ರಿಯಾ ವೃತಮ್ ।
ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠಜಾಃ ॥ ೨೫ ॥

ಅನಿಲಸ್ಯ ಶಿವಾ ಭಾರ್ಯಾ ತಸ್ಯಾಃ ಪುತ್ರೋ ಮನೋಜವಃ ।
ಅವಿಜ್ಞಾನಗತಿಶ್ಚೈವ ದ್ವೌ ಪುತ್ರಾವನಿಲಸ್ಯ ಚ ॥ ೨೬ ॥

ಪ್ರತ್ಯೂಷಸ್ಯ ವಿದುಃ ಪುತ್ರಮೃಷಿಂ ನಾಮ್ನಾ ಥ ದೇವಲಮ್ ।
ದ್ವೌ ಪುತ್ರೌ ದೇವಲಸ್ಯಾಪಿ ಕ್ಷಮಾವಂತೌ ಮನೀಷಿಣೌ ॥ ೨೭ ॥

ಬೃಹಸ್ಪತೇಸ್ತು ಭಗಿನೀ ಭುವನಾ ಬ್ರಹ್ಮವಾದಿನೀ ।
ಯೋಗಸಿದ್ಧಾ ಜಗತ್ ಕೃತ್ಸ್ನಮಶಕ್ತಾ ಚರತಿ ಸ್ಮ ಹ ॥ ೨೮ ॥

ಪ್ರಭಾಸಸ್ಯ ತು ಭಾರ್ಯಾ ಸಾ ವಸೂನಾಮಷ್ಟಮಸ್ಯ ಹ ।
ವಿಶ್ವಕರ್ಮಾ ಸುತಸ್ತಸ್ಯಾಃ ಪ್ರಜಾಪತಿಪತಿರ್ವಿಭುಃ ॥ ೨೯ ॥

---

೨೫. ಅಗ್ನಿಗೆ ಅವನ ಭಾರ್ಯೆಯಾದ ಸ್ವಾಹಾದೇವಿಯಲ್ಲಿ ಶೋಭೆಯಿಂದ ಆವರಿಸಲ್ಪಟ್ಟ ಕುಮಾರನೆಂಬ ಪುತ್ರನು ಜನಿಸಿದನು. ಆ ಕುಮಾರನೆಂಬ ಪುತ್ರನಿಗೆ ಶಾಖ, ವಿಶಾಖ, ಮತ್ತು ನೈಗಮೇಯ ಎಂಬುವರು ಅನುಜರಾಗಿ ಹುಟ್ಟಿದರು.

೨೬. ಅನಿಲನಿಗೆ ಶಿವಾ ಎಂಬ ಹೆಸರಿನ ಭಾರ್ಯೆಯಿದ್ದಳು. ಆಕೆಯಲ್ಲಿ ಅನಿಲನಿಗೆ ಮನೋಜವ, ಅವಿಜ್ಞಾನಗತಿ ಎಂಬ ನಾಮಾಂಕಿತರಾದ ಇಬ್ಬರು ಪುತ್ರರು ಹುಟ್ಟಿದರು.

೨೭. ಪ್ರತ್ಯೂಷ ವಸುವಿಗೆ ಹುಟ್ಟಿದ ಪುತ್ರನನ್ನು ದೇವಲ ಋಷಿಯೆಂಬ ಹೆಸರಿನಿಂದ ಪ್ರಾಜ್ಞರು ಕರೆಯುವರು. ಆ ದೇವಲನಿಗೆ ಕ್ಷಮಾಗುಣದಿಂದ ಕೂಡಿದವರೂ ಜ್ಞಾನಿಗಳೂ ಆದ ಇಬ್ಬರು ಪುತ್ರರಿದ್ದರು.

೨೮. ಬ್ರಹ್ಮವಾದಿನಿಯೂ, ಯೋಗಸಿದ್ಧಳೂ ಆದ ಬೃಹಸ್ಪತಿಯ ಭಗಿನಿಯಾದ ಭುವನಾ ಎಂಬುವಳು ಯೋಗಮಹಿಮೆಯಿಂದ ಸಮಸ್ತ ಭುವನಗಳನ್ನು ಸಂಚರಿಸುತ್ತಿರುವಳು.

೨೯. ಆಕೆಯು ವಸುಗಳಲ್ಲಿ ಎಂಟನೆಯವನಾದ ಪ್ರಭಾತ ಎಂಬುವನ ಭಾರ್ಯೆಯಾಗಿದ್ದಳು. ಆಕೆಯಲ್ಲಿ ಪ್ರಜಾಪತಿಗಳಿಗೆ ಅಧಿಪತಿಯಾದ ಮತ್ತು ವ್ಯಾಪಕನಾದ ವಿಶ್ವಕರ್ಮನು ಪುತ್ರನಾಗಿ ಹುಟ್ಟಿದನು.

ವಿಶ್ವೇ ದೇವಾಸ್ತು ವಿಶ್ವಾಯಾ ಜಜ್ಞಿರೇ ದಶ ವಿಶ್ರುತಾಃ ।
ಕ್ರತುರ್ದಕ್ಷಃ ಶ್ರವಃ ಸತ್ಯಃ ಕಾಲಃ ಕಾಮೋ ಮುನಿಸ್ತಥಾ ॥ ೩೦ ॥

ಪುರೂರವೋ ಮಾದ್ರ್ರವಸೋ ರೋಚಮಾನಶ್ಚ ತೇ ದಶ ।
ಧರ್ಮಪುತ್ರಾಃ ಸುರಾ ಹ್ಯೇತೇ ವಿಶ್ವಾಯಾಂ ಜಜ್ಞಿರೇ ಶುಭಾಃ ॥ ೩೧ ॥

ಮರುತ್ವತ್ಯಾಂ ಮರುತ್ವಂತೋ ಭಾನವೋ ಭಾನುಜಾಃ ಸ್ಮೃತಾಃ ।
ಮುಹೂರ್ತಾಶ್ಚ ಮುಹೂರ್ತಾಯಾ ಘೋಷಂ ಲಂಬಾ ಹ್ಯಜಾಯತ
॥ ೩೨ ॥

ಸಂಕಲ್ಪಾಯಾಂ ತು ಸಂಜಜ್ಞೇ ವಿದ್ವಾನ್ ಸಂಕಲ್ಪ ಏವ ತು ।
ನವ ವೀಥ್ಯಸ್ತು ಜಾಮಾಯಾಃ ಪಥತ್ರಯಮುಪಾಶ್ರಿತಾಃ ॥ ೩೩ ॥

ಪೃಥಿವೀ ವಿಷಯಂ ಸರ್ವಮರುಂಧತ್ಯಾಮಜಾಯತ ।
ಏಷ ಸರ್ಗಃ ಸಮಾಖ್ಯಾತೋ ವಿದ್ವಾನ್ ಧರ್ಮಸ್ಯ ಶಾಶ್ವತಃ ॥ ೩೪ ॥

---

೩೦. ಧರ್ಮ ಪ್ರಜಾಪತಿಯ ಪತ್ನಿಯಾದ ವಿಶ್ವಾದೇವಿಯಲ್ಲಿ ಪ್ರಸಿದ್ಧರಾದ ಹತ್ತುಮಂದಿ ವಿಶ್ವೇದೇವರು ಜನಿಸಿದರು. ಕ್ರತು, ದಕ್ಷ, ಶ್ರವ, ಸತ್ಯ, ಕಾಲ, ಕಾಮ, ಮುನಿ, ಎಂಬುವು ಆ ವಿಶ್ವೇದೇವಗಣದಲ್ಲಿ ಸೇರಿದ ಕೆಲವರ ಹೆಸರುಗಳಾಗಿವೆ.

೩೧.ಅಲ್ಲದೆ ಪುರೂರವ ಮಾದ್ರ್ರವ ಮತ್ತು ರೋಚಮಾನ ಎಂಬುವರು ಸೇರಿ ಹತ್ತುಮಂದಿ ಮಂಗಳಕರರಾದ ಧರ್ಮ ಪ್ರಜಾಪತಿಯ ಪುತ್ರರಾದ ದೇವತೆಗಳು ವಿಶ್ವಾದೇವಿಯಲ್ಲಿ ಜನಿಸಿದರು.

೩೨. ಹಾಗೆ ಮರುತ್ವತಿಯಲ್ಲಿ ಮರುತ್ವಾನ್ ಎಂಬ ದೇವತೆಗಳೂ ಭಾನುದೇವಿಯಲ್ಲಿ ಭಾನುಜ ದೇವತೆಗಳೂ ಹುಟ್ಟಿದವರೆಂದು ಸ್ಮರಿಸಲ್ಪಟ್ಟಿರುವರು. ಮತ್ತು ಮುಹೂರ್ತ ಎಂಬುವಳಲ್ಲಿ ಮುಹೂರ್ತ ದೇವತೆಗಳೂ ಲಂಬಾ ಎಂಬುವಳಲ್ಲಿ ಘೋಷ ದೇವನು ಜನಿಸಿದರು.

೩೩. ಸಂಕಲ್ಪ ಎಂಬುವಳಲ್ಲಿ ಜ್ಞಾನಿಯಾದ ಸಂಕಲ್ಪ ಎಂಬ ಪುತ್ರನು ಜನಿಸಿದನು. ಜಾಮ ಎಂಬುವಳಲ್ಲಿ ಒಂಭತ್ತು ವೀಥಿಗಳು ಜನಿಸಿ ಮೂರು ಮಾರ್ಗಗಳನ್ನು ಆಶ್ರಯಿಸಿದರು.

೩೪. ಪೃಥಿವೀ ಸಂಬಂಧವಾದ ಸಮಸ್ತ ವಸ್ತು ಜಾಲವೂ ಅರುಂಧತಿಯಲ್ಲಿ ಹುಟ್ಟಿತು. ಹೀಗೆ ಧರ್ಮ ಪ್ರಜಾಪತಿಯಲ್ಲಿ ಹುಟ್ಟಿದ ಶಾಶ್ವತವಾದ ಜ್ಞಾನಿ ಸೃಷ್ಟಿಯು ಹೇಳಲ್ಪಟ್ಟಿದೆ.

ಮುಹೂರ್ತಾಶ್ಚೈವ ತಿಥ್ಯಾಶ್ಚ ಪತಿಭಿಃ ಸಹ ಸುವ್ರತಾಃ ।
ನಾಮತಃ ಸಂಪ್ರವಕ್ಷ್ಯಾಮಿ ಬ್ರುವತೋ ಮೇ ನಿಬೋಧತ ॥ ೩೫ ॥

ಅಹೋರಾತ್ರವಿಭಾಗಶ್ಚ ನಕ್ಷತ್ರಾಣಿ ಸಮಾಶ್ರಿತಃ ।
ಮುಹೂರ್ತಾಃ ಸರ್ವನಕ್ಷತ್ರಾ ಅಹೋರಾತ್ರಭಿದ ಸ್ತಥಾ । ॥ ೩೬ ॥

ಅಹೋರಾತ್ರಕಲಾನಾಂ ತು ಷಡಶೀತ್ಯಧಿಕಾಃ ಸ್ಮೃತಾಃ ।
ರವೇರ್ಗತಿವಿಶೇಷೇಣ ಸರ್ವರ್ತುಷು ಚ ನಿತ್ಯಶಃ ॥ ೩೭ ॥

ತತೋ ವೇದವಿದಶ್ಚೈತಾಂ ಗತಿಮಿಚ್ಛಂತಿ ಪರ್ವಸು ।
ಅವಿಶೇಷೇಷು ಕಾಲೇಷು ಜ್ಞೇಯಃ ಸವಿತೃಮಾನತಃ ॥ ೩೮ ॥

ರೌದ್ರಃ ಸಾರ್ಪಸ್ತಥಾ ಮೈತ್ರಃ ಪಿತ್ರ್ಯೋ ವಾಸವ ಏವ ಚ ।
ಆಪ್ಯೋಽಥ ವೈಶ್ವದೇವಶ್ಚ ಬ್ರಾಹ್ಮೋ ಮಧ್ಯಾಹ್ನಸಂಜ್ಞಿತಃ ॥ ೩೯ ॥

---

೩೫. ತಪಸ್ವಿಗಳೇ ! ಇನ್ನುಮುಂದೆ ಮುಹೂರ್ತ, ತಿಥಿಗಳನ್ನು ಅಭಿಮಾನಿ ದೇವತೆಗಳೊಂದಿಗೆ ನಾಮಕೀರ್ತನ ಪೂರ್ವಕವಾಗಿ ನಾನು ಹೇಳುವುದನ್ನು ಶ್ರವಣ ಮಾಡಿರಿ.

೩೬. ಹಗಲು ರಾತ್ರಿ ಎಂಬ ವಿಭಾಗವು ನಕ್ಷತ್ರಗಳನ್ನು ಅವಲಂಬಿಸಿರುವುದು. ಎಲ್ಲ ನಕ್ಷತ್ರಗಳೂ ಮುಹೂರ್ತರೂಪವಾಗಿ ಅಹೋರಾತ್ರಗಳನ್ನು ವಿಂಗಡಿಸುತ್ತವೆ.

೩೭. ಅಹೋರಾತ್ರಗಳ ಕಲೆಗಳು ಎಲ್ಲ ಋತುಗಳಲ್ಲಿಯೂ ಸೂರ್ಯನ ಗತಿಯನ್ನು ಅನುಸರಿಸಿ ಯಾವಾಗಲೂ ಎಂಭತ್ತಾರು ಸಂಖ್ಯೆಯಿಂದಿರುವುದಾಗಿ ಹೇಳಲ್ಪಟ್ಟಿದೆ.

೩೮. ಆದರಿಂದ ವೇದಜ್ಞಾನಿಗಳು ಪರ್ವಕಾಲಗಳಲ್ಲಿ ಈ ಗತಿ ವಿಶೇಷವನ್ನು ನಂಬಿರುವರು. ಸಾಮಾನ್ಯ ಕಾಲಗಳಲ್ಲಿ ಸೂರ್ಯಮಾನದಿಂದ ಕಾಲಾಂಶವನ್ನು ತಿಳಿಯಬೇಕು.

೩೯. ಈ ಮುಹೂರ್ತಗಳು ರೌದ್ರ, ಸಾರ್ಪ, ಮೈತ್ರ, ಪಿತ್ರಿಯ, ವಾಸವ, ಆಪ್ಯ, ವೈಶ್ವದೇವ, ಬ್ರಾಹ್ಮ ಎಂಬುವು ಹಗಲಿನಲ್ಲಿರುವ ಕೆಲವು ಮುಹೂರ್ತಗಳ ಹೆಸರು. ಬ್ರಾಹ್ಮ ಮುಹೂರ್ತವು ಮಧ್ಯಾಹ್ನ ಎಂಬ ಸಂಜ್ಞೆಯನ್ನು ಹೊಂದಿರುವುದು.

ಪ್ರಾಜಾಪತ್ಯಸ್ತಥೈವೈಂದ್ರ ಇಂದ್ರಾಗ್ನೀ ನಿರ್ಋತಿಸ್ತಥಾ ।
ವಾರುಣಶ್ಚ ತಥಾರ್ಯಮ್ಣೋ ಭಗಶ್ಚಾಪಿ ದಿನಶ್ರಿತಾಃ ॥ ೪೦ ॥

ಏತೇ ದಿನಮುಹೂರ್ತಾಶ್ಚ ದಿವಾಕರವಿನಿರ್ಮಿತಾಃ ।
ಶಂಕುಚ್ಛಾಯಾವಿಶೇಷೇಣ ವೇದಿತವ್ಯಾಃ ಪ್ರಮಾಣತಃ ॥ ೪೧ ॥

ಅಜೈಕಪಾದಹಿರ್ಬುಧ್ನ್ಯಃ ಪೂಷಾಶ್ವಿಯಮದೇವತಾಃ ।
ಆಗ್ನೇಯಶ್ಚಾಪಿ ವಿಜ್ಞೇಯಃ ಪ್ರಾಜಾಪತ್ಯಸ್ತಥೈವ ಚ ॥ ೪೨ ॥

ಸೌಮ್ಯಶ್ಚಾಪಿ ತಥಾದಿತ್ಯೋ ಬಾರ್ಹಸ್ಪತ್ಯಶ್ಚ ವೈಷ್ಣವಃ ।
ಸಾವಿತ್ರಶ್ಚ ತಥಾ ತ್ವಾಷ್ಟ್ರೋ ವಾಯವ್ಯಶ್ಚೇತಿ ಸಂಗ್ರಹಃ ॥ ೪೩ ॥

ಏತೇ ರಾತ್ರೇರ್ಮುಹೂರ್ತಾಃ ಸ್ಯುಃ ಕ್ರಮೋಕ್ತಾ ದಶ ಪಂಚ ಚ ।
ಇಂದೋರ್ಗತ್ಯುದಯಾ ಜ್ಞೇಯಾ ನಾಡಿಕಾ ಆದಿತಸ್ತಥಾ ॥ ೪೪ ॥

ಕಾಲಾವಸ್ಥಾಸ್ತ್ವಿಮಾ ಸ್ತ್ವೇತೇ ಮುಹೂರ್ತಾ ದೇವತಾಃ ಸ್ಮೃತಾಃ ।
ಸರ್ವಗ್ರಹಾಣಾಂ ತ್ರೀಣ್ಯೇವ ಸ್ಥಾನಾನಿ ವಿಹಿತಾನಿ ಚ ॥ ೪೫ ॥

---

೪೦. ಮತ್ತು ಪ್ರಾಜಾಪತ್ಯ, ಐಂದ್ರ, ಇಂದ್ರಾಗ್ನಿ, ನಿರ್ಋತಿ, ವಾರುಣ, ಆರ್ಯಮ, ಭಗ ಎಂಬುವು ಮಿಕ್ಕ ಹಗಲಿನ ಮುಹೂರ್ತಗಳ ಹೆಸರುಗಳು.

೪೧. ಈ ಹದಿನೈದು ಸೂರ್ಯನಿಂದ ನಿರ್ಮಿಸಲ್ಪಟ್ಟ ಹಗಲಿನ ಮುಹೂರ್ತಗಳನ್ನು ಶಂಕುವಿನ ಛಾಯಾ ವಿಶೇಷದಿಂದ ಪರಿಮಾಣಪೂರ್ವಕವಾಗಿ ತಿಳಿಯಬೇಕು.

೪೨. ಅಜೈಕಪಾತ್, ಅಹಿರ್ಬುಧ್ನ್ಯ, ಪೂಷ, ಅಶ್ವಿ, ಯಮ, ಆಗ್ನೇಯ, ಪ್ರಾಜಾಪತ್ಯ ಎಂಬುವು ರಾತ್ರಿಯ ಕೆಲವು ಮುಹೂರ್ತಗಳು.

೪೩. ಮತ್ತು ಸೌಮ್ಯ, ಆದಿತ್ಯ, ಬಾರ್ಹಸ್ಪತ್ಯ, ವೈಷ್ಣವ, ಸಾವಿತ್ರ, ತ್ವಾಷ್ಟ್ರ, ಮತ್ತು ವಾಯವ್ಯ ಎಂಬುವು ಮತ್ತೆ ಕೆಲವು ರಾತ್ರಿಕಾಲದ ಮುಹೂರ್ತಗಳ ಹೆಸರು.

೪೪. ಹೀಗೆ ಕ್ರಮವಾಗಿ ಹೇಳಲ್ಪಟ್ಟ ಈ ಹದಿನೈದು ಮುಹೂರ್ತಗಳು ರಾತ್ರಿಕಾಲದಲ್ಲಿ ನಡೆಯುವುವು. ಚಂದ್ರನ ಗತಿ ಮತ್ತು ಉದಯಗಳಿಂದ ನಾಡಿಕಾ ಎಂಬ ಕಾಲಾವಸ್ಥೆಯನ್ನು ಆದಿಯಲ್ಲಿ ತಿಳಿಯಬೇಕು.

೪೫. ಇವುಗಳು ಕಾಲದ ಅವಸ್ಥಾವಿಶೇಷಗಳು, ಈ ಮುಹೂರ್ತಗಳು ಕಾಲಾಂಶಗಳಿಗೆ ಅಭಿಮಾನ ದೇವತೆಗಳು. ಸಮಸ್ತ ಗ್ರಹಗಳಿಗೆ ಮೂರು ಸ್ಥಾನಗಳು ವಿಹಿತಗಳಾಗಿವೆ.

ದಕ್ಷಿಣೋತ್ತರಮಧ್ಯಾನಿ ತಾನಿ ವಿದ್ಯಾದ್ಯಥಾಕ್ರಮಮ್ ।
ಸ್ಥಾನಂ ಜಾರದ್ಗವಂ ಮಧ್ಯೇ ತಥೈರಾವತಮುತ್ತರಮ್ ॥ ೪೬ ॥

ವೈಶ್ವಾನರಂ ದಕ್ಷಿಣತೋ ನಿರ್ದಿಷ್ಟಮಿಹ ತತ್ತ್ವತಃ ।
ಅಶ್ವಿನೀ ಕೃತ್ತಿಕಾ ಯಾಮ್ಯಂ ನಾಗವೀಥೀತಿ ವಿಶ್ರುತಾ ॥ ೪೭ ॥

ಬ್ರಾಹ್ಮಂ ಸೌಮ್ಯಂ ತಥಾದ್ರಾ ಚ ಗಜವೀಥೀತಿ ಶಬ್ದಿತಾ ।
ಪುಷ್ಯಾಶ್ಲೇಷೇ ತಥಾದಿತ್ಯಂ ವಿಥೀ ಚೈರಾವತೀ ಮತಾ ॥ ೪೮ ॥

ತಿಸ್ರಸ್ತು ವೀಥಯೋ ಹ್ಯೇತಾ ಉತ್ತರೋ ಮಾರ್ಗ ಉಚ್ಯತೇ ।
ಪೂರ್ವೋತ್ತರೇ ಚ ಫಲ್ಗುನ್ಯೌ ಮಘಾ ಚೈವಾರ್ಷಭೀ ಸ್ಮೃತಾ ॥ ೪೯ ॥

ಹಸ್ತಶ್ಚಿತ್ರಾ ತಥಾ ಸ್ವಾತೀ ಗೋವೀಥೀತಿ ತು ಶಬ್ದಿತಾ ।
ಜ್ಯೇಷ್ಠಾ ವಿಶಾಖಾನುರಾಧಾ ವಿಥೀ ಜಾರದ್ಗವೀ ಮತಾ ॥ ೫೦ ॥

---

೪೬. ದಕ್ಷಿಣ-ಉತ್ತರ-ಮಧ್ಯಗಳಲ್ಲಿರುವ ಆ ಸ್ಥಾನಗಳನ್ನು ಕ್ರಮವಾಗಿ ತಿಳಿಯ ಬೇಕು. ಜಾರದ್ಗವ ಎಂಬ ಸ್ಥಾನವು ಮಧ್ಯದಲ್ಲಿಯೂ ಐರಾವತ ಎಂಬ ಸ್ಥಾನವು ಉತ್ತರದಲ್ಲಿಯೂ ಇರುವುದು.

೪೭. ವೈಶ್ವಾನರ ಸ್ಥಾನವು ದಕ್ಷಿಣದಲ್ಲಿರುವುದೆಂದು ತಾತ್ವಿಕವಾಗಿ ತೋರಿಸ ಲ್ಪಟ್ಟಿದೆ. ಅಶ್ವಿನಿ, ಕೃತ್ತಿಕೆ ಮತ್ತು ಭರಣಿ ನಕ್ಷತ್ರಗಳು ನಾಗವೀಥಿ ಎಂದು ಪ್ರಸಿದ್ಧವಾಗಿವೆ.

೪೮. ರೋಹಿಣಿ, ಮೃಗಶಿರ ಮತ್ತು ಆದ್ರ್ರನಕ್ಷತ್ರಗಳು ಗಜವೀಥಿ ಎಂದು ಕರೆ ಯಲ್ಪಟ್ಟಿವೆ. ಪುಷ್ಯ, ಆಶ್ಲೇಷ ಮತ್ತು ಪುನರ್ವಸು ನಕ್ಷತ್ರಗಳು ಐರಾವತ ವೀಥಿಯೆಂದು ಪ್ರಸಿದ್ಧವಾಗಿರುವುದು.

೪೯. ಹೀಗೆ ಈ ಮೂರು ವೀಥಿಗಳು ಉತ್ತರಮಾರ್ಗವೆಂದು ಹೇಳಲ್ಪಡುತ್ತದೆ. ಪೂರ್ವ ಭಾದ್ರ, ಹುಬ್ಬ ಮತ್ತು ಮಘಾ ನಕ್ಷತ್ರಗಳು ಋಷಭ ವೀಥಿ ಎಂದು ಪ್ರಾಜ್ಞರ ಸ್ಮರಿಸಲ್ಪಟ್ಟಿದೆ.

೫೦. ಹಸ್ತ, ಚಿತ್ತ, ಸ್ವಾತಿ, ನಕ್ಷತ್ರಗಳಿಗೆ ಗೋವೀಥಿ ಎಂದು ವ್ಯವಹಾರವಿರು ವುದು. ವಿಶಾಖ ಅನುರಾಧ ಮತ್ತು ಜೇಷ್ಠ ನಕ್ಷತ್ರಗಳು ಜರದ್ಗವ ವೀಥಿ ಎಂದು ಪ್ರಾಜ್ಞರ ಸಮ್ಮತವು.

ಏತಾಸ್ತು ವೀಥಯಸ್ತಿಸ್ರೋ ಮಧ್ಯಮೋ ಮಾರ್ಗ ಉಚ್ಯತೇ ।
ಮೂಲಂ ಪೂರ್ವೋತ್ತರಾಷಾಢೇ ಅಜವೀಥ್ಯಭಿಶಬ್ದಿತೇ ॥ ೫೧ ॥

ಶ್ರವಣಂ ಚ ಧನಿಷ್ಠಾ ಚ ಮಾರ್ಗೀ ಶತಭಿಷಕ್ತಥಾ ।
ವೈಶ್ವಾನರೀ ಭಾದ್ರಪದೇ ರೇವತೀ ಚೈವ ಕೀರ್ತಿತಾ ॥ ೫೨ ॥

ಏತಾಸ್ತು ವೀಥಯಸ್ತಿಸ್ರೋ ದಕ್ಷಿಣೋ ಮಾರ್ಗ ಉಚ್ಯತೇ ।
ಅಷ್ಟಾವಿಶಂತಿ ಯಾಃ ಕನ್ಯಾ ದಕ್ಷಃ ಸೋಮಾಯ ತಾ ದದೌ ॥ ೫೩ ॥

ಸರ್ವಾ ನಕ್ಷತ್ರನಾಮ್ನ್ಯಸ್ತಾ ಜ್ಯೋತಿಷೇ ಪರಿಕೀರ್ತಿತಾಃ ।
ತಾಸಾಮಪತ್ಯಾನ್ಯಭವನ್ ದೀಪ್ತ್ಯಯೋಽಮಿತತೇಜಸಃ ॥ ೫೪ ॥

ಯಾಸ್ತು ಶೇಷಾಸ್ತದಾ ಕನ್ಯಾಃ ಪ್ರತಿಜಗ್ರಾಹ ಕಶ್ಯಪಃ ।
ಚತುರ್ದಶ ಮಹಾಭಾಗಾಃ ಸರ್ವಾಸ್ತಾ ಲೋಕಮಾತರಃ ॥ ೫೫ ॥

---

೫೧. ಹೀಗೆ ಈ ಮೂರು ವೀಥಿಗಳು ಮಧ್ಯಮ ಮಾರ್ಗವೆಂದು ಕರೆಯಲ್ಪಟ್ಟಿವೆ. ಮೂಲ, ಪೂರ್ವಾಷಾಢ ಮತ್ತು ಉತ್ತರಾಷಾಢ ನಕ್ಷತ್ರಗಳು ಅಜವಿಥೀ ಎಂದು ಕರೆಯಲ್ಪಡುತ್ತವೆ.

೫೨. ಶ್ರವಣ ಧನಿಷ್ಠಾ ಮತ್ತು ಶತತಾರ ಎಂಬ ಮೂರು ನಕ್ಷತ್ರಗಳು ಮೃಗ ವೀಥಿಯು. ಪೂರ್ವಾಭಾದ್ರ, ಉತ್ತರಾಭಾದ್ರ ಮತ್ತು ರೇವತೀ ನಕ್ಷತ್ರಗಳು ವೈಶ್ವಾನರ ವೀಥಿ ಎಂದು ಕೀರ್ತಿಸಲ್ಪಟ್ಟಿದೆ.

೫೩. ಈ ಮೂರು ವೀಥಿಗಳು ಸೇರಿ ದಕ್ಷಿಣಮಾರ್ಗವೆಂದು ಹೇಳಲ್ಪಡುತ್ತದೆ. ದಕ್ಷ ಬ್ರಹ್ಮನು ತನ್ನ ಇಪ್ಪತ್ತೆಂಟು ಮಂದಿ ಕನ್ನಿಕೆಯರನ್ನು ಚಂದ್ರನಿಗೆ ಕೊಟ್ಟಿರುವನು.

೫೪. ಆ ಕನ್ನಿಕೆಯರು ಬೇರೆ ಬೇರೆ ನಕ್ಷತ್ರನಾಮಗಳಿಂದ ಜ್ಯೋತಿಷ್ಯ ಶಾಸ್ತ್ರದಲ್ಲಿ ಕರೆಯಲ್ಪಡುತ್ತಾರೆ. ಅವರಿಗೆ ಅಪಾರವಾದ ತೇಜಸ್ಸಿನಿಂದ ಕೂಡಿದ ಕಿರಣ ರೂಪರಾದ ಅನೇಕ ಪ್ರಜೆಗಳು ಹುಟ್ಟಿರುವರು.

೫೫. ದಕ್ಷ ಪ್ರಜಾಪತಿಯ ಕನ್ನೆಯರಲ್ಲಿ ಮಿಕ್ಕಿರುವ, ಲೋಕಕ್ಕೆ ಜನನಿಯರೂ ಮಹಾತ್ಮರೂ ಆದ ಹದಿನಾಲ್ಕು ಮಂದಿಯನ್ನು ಕಶ್ಯಪಮುನಿಯು ಪ್ರತಿಗ್ರಹಿಸಿದನು.

ಅದಿತಿರ್ದಿತಿರ್ದನುಃ ಕಾಷ್ಠಾ ರಿಷ್ಟಾನಾಯುಃ ಖಶಾ ತಥಾ ।
ಸುರಭಿರ್ವಿನತಾ ತಾಮ್ರಾ ಮುನಿಃ ಕ್ರೋಧವಶಾ ತಥಾ ॥ ೫೬ ॥

ಕದ್ರೂರ್ಮಾತಾ ಚ ನಾಗಾನಾಂ ಪ್ರಜಾಸ್ತಾಸಾಂ ನಿಬೋಧತ ।
ಸ್ವಾಯಂಭುವೇಽಂತರೇ ತಾತ ಯೇ ದ್ವಾದಶ ಸುರೋತ್ತಮಾಃ ॥ ೫೭ ॥

ವೈಕುಂಠಾ ನಾಮ ತೇ ಸಾಧ್ಯಾ ಬಭೂವುಶ್ಚಾಕ್ಷುಷೇಽಂತರೇ ।
ಉಪಸ್ಥಿತೇಽಂತರೇ ಹ್ಯಸ್ಮಿನ್ ಪುನರ್ವೈವಸ್ವತಸ್ಯ ಹ ॥ ೫೮ ॥

ಆರಾಧಿತಾ ಅದಿತ್ಯಾ ತೇ ಸಮೇತ್ಯೋಚುಃ ಪರಸ್ಪರಮ್ ।
ಏತಾಮೇವ ಮಹಾಭಾಗಾಮದಿತಿಂ ಸಂಪ್ರವಿಶ್ಯ ವೈ ॥ ೫೯ ॥

ವೈವಸ್ವತೇಽಂತರೇ ಹ್ಯಸ್ಮಿನ್ ಯೋಗಾದರ್ಧೇನ ತೇಜಸಾ ।
ಗಚ್ಛೇಮ ಪುತ್ರತಾಮಸ್ಯಾಸ್ತನ್ನಃ ಶ್ರೇಯೋ ಭವಿಷ್ಯತಿ ॥ ೬೦ ॥

---

೫೬. ಅದಿತಿ, ದಿತಿ, ದನು. ಕಾಷ್ಠಾ, ಅರಿಷ್ಟಾ, ಅನಾಯು, ಖಶಾ, ಸುರಭಿ, ವಿನತಾ, ತಾಮ್ರಾ, ಮುನಿ, ಕ್ರೋಧವಶ ಎಂಬುವರು ಆ ಚತುರ್ದಶ ಕನ್ನಿಕೆಯರಲ್ಲಿ ಸೇರಿದವರು.

೫೭. ಮತ್ತು ಕದ್ರೂ, ನಾಗಮಾತಾ, ಎಂಬುವು ಕ್ರಮವಾಗಿ ಅವರ ಹೆಸರು. ಮುಂದೆ ಅವರಲ್ಲಿ ಹುಟ್ಟಿದ ಪ್ರಜಾವೃಂದವನ್ನು ಕೇಳಿರಿ. ಮುನಿಯೇ, ಸ್ವಾಯಂಭುವ ಮನ್ವಂತರದಲ್ಲಿ ಹನ್ನೆರಡು ಮಂದಿ ದೇವಶ್ರೇಷ್ಠರು ಇದ್ದರಲ್ಲವೇ.

೫೮. ಅವರು ಚಾಕ್ಷುಷಮನ್ವಂತರದಲ್ಲಿ ವೈಕುಂಠ ಅಥವಾ ಸಾಧ್ಯ ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರು. ಹೀಗಿರಲು ಮುಂದಿನ ವೈವಸ್ವತಮನ್ವಂತರವು ಪ್ರಾಪ್ತವಾಯಿತು.

೫೯. ಆಗ ಅದಿತಿದೇವಿಯಿಂದ ಆರಾಧಿಸಲ್ಪಟ್ಟ ಆ ದೇವತೆಗಳು ಗುಂಪುಕೂಡಿ ಈ ಮಹಾಭಾಗ್ಯಳಾದ ಅದಿತಿದೇವಿಯನ್ನು ಪ್ರವೇಶಮಾಡೋಣವೆಂದು ಪರಸ್ಪರವಾಗಿ ಮಾತನಾಡಿಕೊಂಡರು.

೬೦. ಮತ್ತು ಈ ವೈವಸ್ವತಮನ್ವಂತರದಲ್ಲಿ ಯೋಗಶಕ್ತಿಯಿಂದ ಉಂಟಾದ ಅರ್ಧತೇಜೋಭಾಗದಿಂದ ನಾವು ಇವಳ ಪುತ್ರತ್ವವನ್ನು ಹೊಂದೋಣ, ಅದು ನಮಗೆ ಶ್ರೇಯಸ್ಸಾಧನವಾಗುವುದು.

ಏವಮುಕ್ತ್ವಾ ತು ತೇ ಸರ್ವೇ ವರ್ತಮಾನೇಽಂತರೇ ತದಾ ।
ಜಜ್ಞಿರೇ ದ್ವಾದಶಾದಿತ್ಯಾ ಮಾರೀಚಾತ್ ಕಶ್ಯಪಾತ್ ಪುನಃ ॥ ೬೧ ॥

ಶತಕ್ರತುಶ್ಚ ವಿಷ್ಣುಶ್ಚ ಜಜ್ಞಾತೇ ಪುನರೇವ ಹಿ ।
ವೈವಸ್ವತೇಽಂತರೇ ಹ್ಯಸ್ಮಿನ್ ನರನಾರಾಯಣೌ ತದಾ ॥ ೬೨ ॥

ತೇಷಾಮಪಿ ಹಿ ದೇವಾನಾಂ ನಿಧನೋತ್ಪತ್ತಿರುಚ್ಯತೇ ।
ಯಥಾ ಸೂರ್ಯಸ್ಯ ಲೋಕೇಽಸ್ಮಿನ್ ಉದಯಾಸ್ತಮಯಾವುಭೌ ॥ ೬೩ ॥

ದೃಷ್ಟಾನುಶ್ರವಿಕೇ ಯಸ್ಮಾತ್ ಸಕ್ತಾಃ ಶಬ್ದಾದಿಲಕ್ಷಣೇ ।
ಅಷ್ಟಾತ್ಮಕೇಽಣಿಮಾದ್ಯೇ ಚ ತಸ್ಮಾತ್ತೇ ಜಜ್ಞಿರೇ ಸುರಾಃ ॥ ೬೪ ॥

ಇತ್ಯೇಷ ವಿಷಯೇ ರಾಗಃ ಸಂಭೂತ್ಯಾಃ ಕಾರಣಂ ಸ್ಮೃತಮ್ ।
ಬ್ರಹ್ಮಶಾಪೇನ ಸಂಭೂತಾ ಜಯಾಃ ಸ್ವಾಯಂಭುವೇ ಜಿತಾಃ ॥ ೬೫ ॥

---

೬೧. ಹೀಗೆ ಹೇಳಿ ಅವರೆಲ್ಲರೂ ವರ್ತಮಾನವಾದ ವೈವಸ್ವತಮನ್ವಂತರದಲ್ಲಿ ಮರೀಚಿಮುನಿಯ ಪುತ್ರನಾದ ಕಶ್ಯಪಪ್ರಜಾಪ್ರತಿಯಿಂದ ದ್ವಾದಶಾದಿತ್ಯರ ರೂಪದಿಂದ ಜನ್ಮತಾಳಿದರು.

೬೨. ಮತ್ತು ಈ ವೈವಸ್ವತಮನ್ವಂತರದಲ್ಲಿ ಇಂದ್ರ, ವಿಷ್ಣು ದೇವತೆಗಳು ಮತ್ತೆ ನರ ನಾರಾಯಣ ರೂಪದಿಂದ ಜನಿಸಿದರು.

೬೩. ಹೀಗೆ ಹುಟ್ಟಿದ ದೇವತೆಗಳಿಗೆ ಈ ಲೋಕದಲ್ಲಿ ಸೂರ್ಯಮಂಡಲಕ್ಕೆ ಉದಯ ಮತ್ತು ಅಸ್ತಮಯಗಳಿರುವಂತೆ ಸಂಭವಿಸುವ ಉತ್ಪತ್ತಿ ಮತ್ತು ನಾಶ ಗಳನ್ನು ವರ್ಣಿಸುತ್ತೇನೆ.

೬೪. ಪ್ರತ್ಯಕ್ಷ ಮತ್ತು ಪರೋಕ್ಷರೂಪವಾದ ಶಬ್ದ ಮುಂತಾದ ವಿಷಯಭೋಗ ದಿಂದಾಗುವ ಸುಖದಲ್ಲಿಯೂ ಅಣಿಮಾದಿ ರೂಪವಾದ ಐಶ್ವರ್ಯ ಸಿದ್ಧಿಯಲ್ಲಿಯೂ ಸಂಗ ಉಳ್ಳವರಾಗಿ ಆ ದೇವತೆಗಳು ಪುನರ್‌ಜನ್ಮವನ್ನು ಹೊಂದಿದರು.

೬೫. ಹೀಗೆ ವೈಷಯಿಕ ಸುಖದಲ್ಲಿ ಪ್ರೇಮರೂಪವಾದ ಸಂಗವು ಪುನರ್‌ಜನ್ಮಕ್ಕೆ ಕಾರಣವೆಂದು ಸ್ಮರಿಸಲ್ಪಟ್ಟಿದೆ. ಆ ಜಯ ಎಂಬ ದೇವತೆಗಳು ಸ್ವಾಯಂಭುವ ಮನ್ವಂತರದಲ್ಲಿ ಜಿತ ಎಂಬ ಪ್ರಸಿದ್ಧ ಜನ್ಮವನ್ನು ಹೊಂದಿದರು.

ಸ್ವಾರೋಚಿಷೇ ವೈ ತುಷಿತಾಃ ಸತ್ಯಾಶ್ಚೈವೋತ್ತಮೇ ಪುನಃ ।
ತಾಮಸೇ ಹರಯೋ ದೇವಾ ಜಾತಾಶ್ಚಾರಿಷ್ಟವೇ ತು ವೈ ॥ ೬೬ ॥

ವೈಕುಂಠಾಶ್ಚಾಕ್ಷುಷೇ ಸಾಧ್ಯಾ ಅದಿತ್ಯಾಃ ಸಪ್ತಮೇ ಪುನಃ ।
ಧಾತಾರ್ಯಮಾ ಚ ಮಿತ್ರಶ್ಚ ವರುಣೋಽಂಶೋ ಭಗಸ್ತಥಾ ॥ ೬೭ ॥

ಇಂದ್ರೋ ವಿವಸ್ವಾನ್ ಪೂಷಾ ಚ ಪರ್ಜನ್ಯೋ ದಶಮಃ ಸ್ಮೃತಃ ।
ತತಸ್ತ್ವಷ್ಟಾ ತತೋ ವಿಷ್ಣುರಜಘನ್ಯೋ ಜಘನ್ಯಜಃ ॥ ೬೮ ॥

ಇತ್ಯೇತೇ ದ್ವಾದಶಾದಿತ್ಯಾಃ ಕಶ್ಯಪಸ್ಯ ಸುತಾ ವಿಭೋಃ ।
ಸುರಭ್ಯಾಂ ಕಶ್ಯಪಾದ್ರುದ್ರಾ ಏಕಾದಶ ವಿಜಜ್ಞಿರೇ ॥ ೬೯ ॥

ಮಹಾದೇವಪ್ರಸಾದೇನ ತಪಸಾ ಭಾವಿತಾ ಸತೀ ।
ಅಂಗಾರಕಂ ತಥಾ ಸರ್ಪಂ ನಿರ್ಋತಿಂ ಸದಸತ್ಪತಿಮ್ ॥ ೭೦ ॥

---

೬೬. ಆ ದೇವತೆಗಳು ಸ್ವಾರೋಚಿಷ ಮನ್ವಂತರದಲ್ಲಿ ತುಷಿತ ಎಂದೂ ಉತ್ತಮ ಮನ್ವಂತರದಲ್ಲಿ ಸತ್ಯ ಎಂದೂ ತಾಮಸ ಮನ್ವಂತರದಲ್ಲಿ ಹರಿ ಎಂದೂ ಅರಿಷ್ಟ ಮನ್ವಂತರದಲ್ಲಿ ವೈಕುಂಠ ಎಂದೂ ಪ್ರಸಿದ್ಧಿ ಹೊಂದಿದ್ದರು.

೬೭. ಮತ್ತು ಚಾಕ್ಷುಷಮನ್ವಂತರದಲ್ಲಿ ಸಾಧ್ಯ ಎಂದೂ ಏಳನೆಯದಾದ ವೈವಸ್ವತ ಮನ್ವಂತರದಲ್ಲಿ ಆದಿತ್ಯ ಎಂದೂ ಪ್ರಸಿದ್ಧರಾದರು ಅವರಿಗೆ ಮುಂದೆ ಹೇಳುವಂತೆ ಕ್ರಮವಾಗಿ ಹೆಸರುಗಳಿದ್ದುವು. ಧಾತಾ, ಅರ್ಯಮ, ಮಿತ್ರ, ವರುಣ, ಅಂಶ ಮತ್ತು ಭಗ ಎಂಬುವು ಅವರಲ್ಲಿ ಕೆಲವರ ಹೆಸರು.

೬೮. ಹಾಗೂ ಇಂದ್ರ, ವಿವಸ್ವಾನ್ ಪೂಷಾ, ಪರ್ಜನ್ಯ, ತ್ವಷ್ಟ ಮತ್ತು ದೇವೋತ್ತಮನಾದ ವಿಷ್ಣು ಎಂಬುವರು ಸೇರಿ ದ್ವಾದಶಾದಿತ್ಯರು ಪ್ರಖ್ಯಾತರಾದರು.

೬೯. ಈ ದ್ವಾದಶಾದಿತ್ಯರು ಮಹಾಮಹಿಮನಾದ ಕಶ್ಯಪ ಪ್ರಜಾಪತಿಯ ಪುತ್ರರಾಗಿ ಜನಿಸಿದರು. ಸುರಭಿಯಲ್ಲಿ ಕಶ್ಯಪನಿಂದ ಹನ್ನೊಂದು ಮಂದಿ ರುದ್ರರು ಜನಿಸಿದರು.

೭೦. ಈಶ್ವರನ ಅನುಗ್ರಹದಿಂದಲೂ ತಪೋಮಹಿಮೆಯಿಂದಲೂ ಸಂಸ್ಕೃತಳಾಗಿ ಆ ಸುರಭಿಯು ಈ ಪುತ್ರರನ್ನು ಹೊಂದಿದಳು. ಅವರಲ್ಲಿ ಕೆಲವರು ಅಂಗಾರಕ, ಸರ್ಪ, ನಿರ್ಋತಿ ಮತ್ತು ಸದಸತ್ಪತಿ ಎಂಬ ನಾಮಾಂಕಿತರಾಗಿದ್ದರು.

ಅಜೈಕಪಾದಹಿರ್ಬುಧ್ನ್ಯೌ ದ್ವಾವೇಕಂ ಚ ಜ್ವರಂ ತಥಾ ।
ಭವನಂ ಚೇಶ್ವರಂ ಮೃತ್ಯುಂ ಕಪಾಲೀತಿ ಚ ವಿಶ್ರುತಮ್ ॥ ೭೦ ॥

ದೇವಾನೇಕಾದಶೈತಾಂಸ್ತು ರುದ್ರಾಂಸ್ತ್ರಿಭುವನೇಶ್ವರಾನ್ ।
ತಪಸೋಗ್ರೇಣ ಮಹತಾ ಸುರಭಿಸ್ತಾನಜೀಜನತ್ ॥ ೭೨ ॥

ತತೋ ದುಹಿತರಾವನ್ಯೇ ಸುರಭಿರ್ದೇವ್ಯಜಾಯತ ।
ರೋಹಿಣೀ ಚೈವ ಸುಭಗಾಂ ಗಾಂಧರ್ವೀಂ ಚ ಯಶಸ್ವಿನೀಮ್॥ ೭೩ ॥

ರೋಹಿಣ್ಯಾ ಜಜ್ಞಿರೇ ಕನ್ಯಾಶ್ಚತಸ್ರೋ ಲೋಕವಿಶ್ರುತಾಃ ।
ಸುರೂಪಾ ಹಂಸಕಾಲೀ ಚ ಭದ್ರಾ ಕಾಮದುಘಾ ತಥಾ ॥ ೭೪ ॥

ಸುಷುವೇ ಗಾಃ ಕಾಮದುಘಾ ಸುರೂಪಾ ತನಯದ್ವಯಮ್ ।
ಹಂಸಕಾಲೀ ತು ಮಹಿಷಾನ್ ಭದ್ರಾಯಾಸ್ತ್ವವಿಜಾತಯಃ ॥ ೭೫ ॥

---

೭೧. ಹಾಗೆಯೇ ಅಜೈಕಪಾತ್, ಅಹಿರ್ಬುಧ್ನ್ಯ, ಜ್ವರ, ಭುವನ, ಈಶ್ವರ, ಮೃತ್ಯು, ಮತ್ತು ಕಪಾಲಿ-ಎಂಬುವು ಸೇರಿ ಆ ಏಕಾದಶ ರುದ್ರರ ಪ್ರಸಿದ್ಧ ನಾಮಗಳಾಗಿದ್ದುವು.

೭೨. ಸುರಭಿ ಎಂಬ ಜನನಿಯು ಉಗ್ರವೂ ಮಹತ್ತರವೂ ಆದ ತಪೋಮಹಿಮೆಯಿಂದ ತ್ರಿಭುವನಗಳಿಗೆ ಈಶ್ವರರಾದ ಏಕಾದಶ ರುದ್ರದೇವರನ್ನು ಪ್ರಸವಿಸಿದಳು.

೭೩. ತರುವಾಯ ಆ ಸುರಭಿಯು ಸೌಭಾಗ್ಯದಿಂದ ಕೂಡಿದ ರೋಹಿಣಿ, ಕೀರ್ತಿಸಂಪನ್ನೆಯಾದ ಗಾಂಧರ್ವಿ ಎಂಬ ಇಬ್ಬರು ಪುತ್ರಿಯರನ್ನು ಹೊಂದಿದಳು.

೭೪. ಅವರಲ್ಲಿ ರೋಹಿಣಿ ಎಂಬುವಳಿಗೆ ಸುರೂಪಾ, ಹಂಸಕಾಲೀ, ಭದ್ರಾ ಮತ್ತು ಕಾಮದುಘಾ ಎಂಬುದಾಗಿ ಲೋಕವಿಖ್ಯಾತರಾದ ನಾಲ್ಕು ಮಂದಿ ಕನ್ಯೆಯರು ಜನಿಸಿದರು.

೭೫. ಈ ನಾಲ್ಕು ಕನ್ಯೆಯರಲ್ಲಿ ಕಾಮದುಘಾ ಎಂಬಾಕೆಯು ಗೋಜಾತಿಯನ್ನು ಸುರೂಪಾ ಎಂಬುವಳು ಇಬ್ಬರು ಪುತ್ರರನ್ನು ಹಂಸಕಾಲಿಯು ಮಹಿಷ ಜಾತಿಯನ್ನು ಮತ್ತು ಭದ್ರಾ ಎಂಬಾಕೆಯು ಕುರಿಜಾತಿಯನ್ನು ಸಂತತಿಯನ್ನಾಗಿ ಹೊಂದಿದರು.

ವಿಶ್ರುತಾಸ್ತು ಮಹಾಭಾಗಾ ಗಾಂಧರ್ವ್ಯಾ ವಾಜಿನಃ ಸುತಾಃ ।
ಉಚ್ಚೈಃಶ್ರವಾದಯೋ ಜಾತಾ ಖೇಚರಾಸ್ತೇ ಮನೋಜವಾಃ॥ ೭೬ ॥

ಶ್ವೇತಾಃ ಶೋಣಾಃ ಪಿಶಂಗಾಶ್ಚ ಸಾರಂಗಾ ಹರಿತಾರ್ಜುನಾಃ ।
ಉಕ್ತಾ ದೇವೋಪವಾಹ್ಯಾಸ್ತೇ ಗಾಂಧರ್ವೀಯೋನಯೋ ಹಯಾಃ
॥ ೭೭ ॥

ಭೂಯೋ ಜಜ್ಞೇ ಸುರಭ್ಯಾಸ್ತು ಶ್ರೀಮಾಂಶ್ಚಂದ್ರಪ್ರಭೋ ವೃಷಃ ।
ಸ್ರಗ್ವೀ ಕಕುದ್ಮಾನ್ ದ್ಯುತಿಮಾನ್ ಅಮೃತಾಲಯಸಂಭವಃ ॥ ೭೮ ॥

ಸುರಭ್ಯನುಮತೇ ದತ್ತೋ ಧ್ವಜೋ ಮಾಹೇಶ್ವರಸ್ತು ಸಃ ।
ಇತ್ಯೇತೇ ಕಶ್ಯಪಸುತಾ ರುದ್ರಾದಿತ್ಯಾಃ ಪ್ರಕೀರ್ತಿತಾಃ ॥ ೭೯ ॥

ಧರ್ಮಪುತ್ರಾಃ ಸ್ಮೃತಾಃ ಸಾಧ್ಯಾ ವಿಶ್ವೇ ಚ ವಸವಸ್ತಥಾ ।
ಯಥೇಂಧನವಶಾದ್ವಹ್ನಿರೇಕಸ್ತು ಬಹುಧಾ ಭವೇತ್ ॥ ೮೦ ॥

---

೭೬. ಮಹಾತ್ಮವಾದ ಲೋಕಪ್ರಸಿದ್ಧವಾದ ಮನೋವೇಗವುಳ್ಳ, ಮತ್ತು ಗಗನಸಂಚಾರವುಳ್ಳ ಉಚ್ಚೈಃ ಶ್ರವ ಮುಂತಾದ ಅಶ್ವಜಾತಿಯು ಗಾಂಧರ್ವಿಯ ಸಂತತಿಯಾಗಿ ಜನಿಸಿತು.

೭೭. ಗಾಂಧರ್ವಿಯಲ್ಲಿ ಜನಿಸಿದ ಅಶ್ವಗಳು ಬಿಳುಪು, ಕೆಂಪು, ಹೊಂಬಣ್ಣ, ಸಾರಂಗವರ್ಣ, ಹರಿತವರ್ಣ, ಮತ್ತು ಅರ್ಜುನ ವರ್ಣಗಳಿಂದ ಕೂಡಿದುವುಗಳೂ ಮತ್ತು ದೇವತೆಗಳ ವಾಹನಗಳೂ ಆದುವು.

೭೮. ಕಾಂತಿಯಿಂದ ಕೂಡಿರುವುದೂ, ಚಂದ್ರನಂತೆ ಪ್ರಭೆಯುಳ್ಳದ್ದೂ, ಪುಷ್ಪ ಮಾಲೆ, ಉನ್ನತವಾದ ಹಿಣಿ, ದೀಪ್ಯಮಾನವಾದ ತೇಜಸ್ಸುಗಳಿಂದ ಶೋಭಿಸುವುದೂ, ಮತ್ತು ಅಮೃತ ಮಂದಿರದಲ್ಲಿ ವಾಸಿಸುವುದೂ ಆದ ವೃಷಭವು ಸುರಭಿಗೆ ಮತೆ ಪುತ್ರರೂಪದಿಂದ ಜನಿಸಿತು.

೭೯. ಆ ವೃಷಭವು ಸುರಭಿಜನನಿಯು ಇಷ್ಟಾನುಸಾರವಾಗಿ ಈಶ್ವರನಿಗೆ ಧ್ವಜ್ತ ರೂಪವಾಗಿ ಪ್ರದಾನಮಾಡಲ್ಪಟ್ಟಿತು. ಹೀಗೆ ರುದ್ರ-ಆದಿತ್ಯ ಮುಂತಾದ ದೇವಗಣಗಳು ಕಶ್ಯಪಪುತ್ರರೆಂದು ಕೀರ್ತಿಸಲ್ಪಟ್ಟಿರುವರು.

೮೦. ಸಾಧ್ಯದೇವ, ವಿಶ್ವದೇವ, ವಸುದೇವ ಮುಂತಾದ ಗಣದೇವತೆಗಳು

ಭವತ್ಯೇಕಸ್ತಥಾ ತದ್ವನ್ಮೂರ್ತೀನಾಂ ಸ ಪಿತಾಮಹಃ ।
ಏಕೋ ಬ್ರಹ್ಮಾಂತಕಶ್ಚೈವ ಪುರುಷಶ್ಚೇತಿ ತತ್ರ ಯಃ ॥ ೮೧ ॥

ಏಕಸ್ಯೈತಾಃ ಸ್ಮೃತಾಸ್ತಿಸ್ರಸ್ತನವಸ್ತು ಸ್ವಯಂಭುವಃ ।
ಬ್ರಾಹ್ಮೀ ಚ ಪೌರುಷೀ ಚೈವ ಕಾಲಾಖ್ಯಾ ಚೇತಿ ತಾಃ ಸ್ಮೃತಾಃ ॥ ೮೨ ॥

ಯಾ ತತ್ರ ರಾಜಸೀ ತಸ್ಯ ತನುಃ ಸಾ ವೈ ಪ್ರಜಾಕರೀ ।
ಮತಾ ಸಾ ಯಾ ತು ಕಾಲಾಖ್ಯಾ ಪ್ರಜಾಕ್ಷಯಕರೀ ತು ಸಾ ॥ ೮೩ ॥

ಸಾತ್ತ್ವಿಕೀ ಪೌರುಷೀ ಯಾ ತು ಸಾ ತನುಃ ಪಾಲಿಕಾ ಸ್ಮೃತಾ ।
ರಾಜಸೀ ಬ್ರಹ್ಮಣೋ ಯಾ ತು ಮಾರೀಚಃ ಕಶ್ಯಪೋಽಭವತ್ ॥ ೮೪ ॥

---

ಧರ್ಮಪ್ರಜಾಪತಿಯ ಪುತ್ರರೆಂದು ಸ್ಮರಿಸಲ್ಪಟ್ಟಿರುವರು. ಒಂದು ಅಗ್ನಿಯು ಕಾಷ್ಠ ಸಂಖ್ಯೆಯು ಹೆಚ್ಚಾದಂತೆ ಹೆಚ್ಚು ರೂಪವನ್ನು ಹೊಂದುವುದು.

೮೧. ಹೀಗೆಯೇ ವಿಭಕ್ತವಾಗಿರುವ ಮೂರ್ತಿತ್ರಯಕ್ಕೆ ಬ್ರಹ್ಮದೇವನೊಬ್ಬನು ನಿಜವಾದ ತತ್ತ್ವವು. ಬ್ರಹ್ಮಾ, ಅಂತಕ, ಮತ್ತು ಪುರುಷ ಎಂದು ಬೇರೆ ನಾಮಗಳಿಂದ ವ್ಯವಹರಿಸಲ್ಪಡುವನು ಒಬ್ಬ ದೇವನಾಗಿರುವನು.

೮೨. ಒಬ್ಬನೇ ಆದ ಬ್ರಹ್ಮಪರಮಾತ್ಮನಿಗೆ ಈ ಮೂರು ಶರೀರಗಳು ಮಾತ್ರ ಭಿನ್ನವಾಗಿವೆ. ಆ ಮೂರ್ತಿಗಳು ಬ್ರಾಹ್ಮೀ, ಪೌರುಷೀ, ಮತ್ತು ಕಾಲ ಎಂಬ ಪ್ರತ್ಯೇಕ ಸಂಜ್ಞೆಯಿಂದ ಸ್ಮರಿಸಲ್ಪಟ್ಟಿರುವುವು.

೮೩. ಆ ಮೂರ್ತಿಗಳಲ್ಲಿ ರಜೋಗುಣಮಯವಾದ ಮೂರ್ತಿಯು ಪ್ರಜಾ ಸಂತತಿಯನ್ನು ಸೃಷ್ಟಿಸುವುದಾಗಿದೆ, ಮತ್ತು ತಮೋಗುಣಮಯವಾದ ಕಾಲ ಎಂಬ ಹೆಸರಿನಿಂದ ವಿಖ್ಯಾತವಾದುದು ಪ್ರಜೆಯನ್ನು ನಾಶಗೊಳಿಸುವುದು.

೮೪. ಸತ್ತ್ವಗುಣಮಯವಾದ ಪುರುಷ ಮೂರ್ತಿಯು ಪ್ರಪಂಚ ಪಾಲಕ ವಾಗಿರುವುದು. ಬ್ರಹ್ಮನ ರಜೋಗುಣಮೂರ್ತಿಯ ಅಂಶದಿಂದ ಮರೀಚಿ ಮುನಿಯ ಪುತ್ರನಾದ ಕಶ್ಯಪ ಪ್ರಜಾಪತಿಯು ಅವತರಿಸಿದನು.

ತಾಮಸೀ ಚಾಂತಕೃದ್ವಾ ತು ತದಂಶೇನಾಭವದ್ಭವಃ ।
ಸಾತ್ತ್ವಕೀ ಪೌರುಷೀ ಯಾ ತು ತದಂಶೋ ವಿಷ್ಣುರುಚ್ಯತೇ ॥ ೮೫ ॥

ತ್ರೈಲೋಕ್ಯೇ ತಾಃ ಸ್ಮೃತಾಸ್ತಿಸ್ರಸ್ತನವೋ ವೈ ಸ್ವಯಂಭುವಃ ।
ನಾನಾಪ್ರಯೋಜನಾರ್ಥಾ ಹಿ ಕಲಾವಸ್ಥಾಃ ಕರೋತಿ ಸಃ ॥ ೮೬ ॥

ಸೃಜತ್ಯಥಾನುಗೃಹ್ಣಾತಿ ತಥಾ ಸಂಹರತಿ ಪ್ರಜಾಃ ।
ಏವಮೇತಾಃ ಸ್ಮೃತಾಸ್ತಿಸ್ರಸ್ತನವೋ ಹಿ ಸ್ವಯಂಭುವಃ ॥ ೮೭ ॥

ಪ್ರಾಜಾಪತ್ಯಾ ಚ ರೌದ್ರಾ ಚ ವೈಷ್ಣವೀ ಚೇತಿ ತಾಸ್ತ್ರಿಧಾ ।
ಏತಾಸ್ತನ್ವಃ ಸ್ಮೃತಾ ದೇವಾ ಧರ್ಮಶಾಸ್ತ್ರೇ ಪುರಾತನೇ ॥ ೮೮ ॥

ಸಾಂಖ್ಯಯೋಗರತೈರ್ಧೀರೈಃ ಪೃಥಗೇಕಾರ್ಥದರ್ಶಿಭಿಃ ।
ಅಭಿಜಾತಿಪ್ರಭಾವಜ್ಞೈರ್ಮುನಿಭಿಸ್ತತ್ತ್ವದರ್ಶಿಭಿಃ ॥ ೮೯ ॥

---

೮೫. ತಮೋಗುಣ ಪ್ರಚುರವಾದ, ಜಗತ್ತಿಗೆ ಅಂತಕವಾದ ಮೂರ್ತಿಯ ಅಂಶದಿಂದ ಈಶ್ವರನು ಅವತಾರ ಹೊಂದಿರುವನು. ಸತ್ತ್ವಗುಣದಿಂದ ಪರಿಪೂರ್ಣವಾದ ಪುರುಷಮೂರ್ತಿಯ ಅಂಶವು ವಿಷ್ಣು ಪರಮಾತ್ಮನೆಂದು ಹೇಳಲ್ಪಡುವನು.

೮೬. ಹೀಗೆ ಸ್ವಯಂಭುವಿಗೆ ತ್ರಿಲೋಕಗಳಲ್ಲಿ ಈ ಮೂರು ಮೂರ್ತಿಗಳು ಇರುವುದಾಗಿ ಸ್ಮರಿಸಲ್ಪಟ್ಟಿವೆ. ಅನೇಕ ಪ್ರಯೋಜನಗಳಿಗೋಸ್ಕರ ಅಂಶ ಭೇದದಿಂದ ಈ ಪ್ರತ್ಯೇಕಾವಸ್ಥೆಗಳಿಂದ ಕೂಡಿದ ಮೂರ್ತಿಗಳನ್ನು ಪರಮಾತ್ಮನು ಕಲ್ಪಿಸಿರುವನು.

೮೭. ಪ್ರಜೆಗಳನ್ನು ಸೃಷ್ಟಿಮಾಡುವುದು, ಅನುಗ್ರಹಿಸುವುದು ಮತ್ತು ಸಂಹಾರ ಮಾಡುವುದು ಎಂಬ ಪ್ರತ್ಯೇಕ ಪ್ರಯೋಜನಗಳಿಗೋಸ್ಕರ ಸ್ವಯಂಭುವಿಗೆ ಈ ಮೂರು ಮೂರ್ತಿಗಳು ಸ್ಮರಿಸಲ್ಪಟ್ಟಿರುವುವು.

೮೮. ಈ ಪ್ರತ್ಯೇಕ ಮೂರ್ತಿಗಳನ್ನು ಉದ್ದೇಶಿಸಿ ಪ್ರಾಚೀನ ಧರ್ಮಶಾಸ್ತ್ರಗಳಲ್ಲಿ ಪ್ರಾಜಾಪತ್ಯ, ರೌದ್ರೀ, ಮತ್ತು ವೈಷ್ಣವೀ ಎಂಬ ಹೆಸರುಗಳಿಂದ ತ್ರಿಮೂರ್ತಿ ವ್ಯವಹಾರವು ಬಂದಿರುವುದು.

೮೯. ಸಾಂಖ್ಯಯೋಗ ಅಥವಾ ಜ್ಞಾನನಿಷ್ಠೆಯಲ್ಲಿ ಆಸಕ್ತರೂ ಏಕತ್ವಜ್ಞಾನ

ಏಕತ್ವೇನ ಪೃಥಕ್ತ್ವೇನ ತಾಸು ಭಿನ್ನಾಃ ಪ್ರಜಾಸ್ತ್ವಿಮಾಃ ।
ಇದಂ ಪರಮಿದಂ ನೇತಿ ಬ್ರುವತೇ ಭಿನ್ನದರ್ಶಿನಃ ॥ ೯೦ ॥

ಬ್ರಹ್ಮಾಣಂ ಕಾರಣಂ ಕೇಚಿತ್ ಕೇಚಿದಾಹುಃ ಪ್ರಜಾಪತಿಮ್ ।
ಕೇಚಿದ್ಭವಂ ಪರತ್ವೇನ ಪ್ರಾಹುರ್ವಿಷ್ಣುಂ ತಥಾಪರೇ ॥ ೯೧ ॥

ಅಭಿಜ್ಞಾನೇನ ಸಂಭೂತಾಃ ಸಕ್ತಾರಿಷ್ಟವಿಚೇತಸಃ ।
ಸತ್ತ್ವಂ ಕಾಲಂ ಚ ದೇಶಂ ಚ ಕಾರ್ಯಂ ಚಾವೇಕ್ಷ್ಯ ಕರ್ಮ ಚ॥ ೯೨ ॥

ಕಾರಣಂ ತು ಸ್ಮೃತಾ ಹ್ಯೇತೇ ನಾನಾರ್ಥೇಷ್ವಿಹ ದೇವತಾಃ ।
ಏಕಂ ಪ್ರಶಂಸಮಾನಸ್ತು ಸರ್ವಾನೇವ ಪ್ರಶಂಸತಿ ॥ ೯೩ ॥

---

ದಿಂದ ಸಂಪನ್ನರೂ, ಜನ್ಮದಲ್ಲಿ ವಿಭೂತಿಯನ್ನು ಅರಿತವರೂ, ಜ್ಞಾನಿಗಳೂ, ಮತ್ತು ತತ್ತ್ವದರ್ಶಿಗಳೂ ಆದ ಮುನಿಗಳಿಗೆ ಈ ಸಿದ್ಧಾಂತವು ಅನುಭವ ವೇದ್ಯ ವಾಗಿರುವುದು.

೯೦. ಆ ಮೂರ್ತಿಗಳಲ್ಲಿ ಈ ಪ್ರಜೆಗಳು ಏಕತ್ವ ಅಥವಾ ಬಹುತ್ವ ರೂಪದಿಂದ ಇವೆ. ಭಿನ್ನವಸ್ತು ಅಥವಾ ದ್ವೈತವಿಜ್ಞಾನವುಳ್ಳವರು ಈ ವಸ್ತುವು ಶ್ರೇಷ್ಠ, ಈ ವಸ್ತುವಲ್ಲವೆಂದು ವಾದಿಸುವರು.

೯೧. ಹೀಗಿರುವಲ್ಲಿ ಕೆಲವರು ಬ್ರಹ್ಮದೇವನನ್ನು ಮೂಲಕಾರಣನನ್ನಾಗಿಯೂ ಮತ್ತೆ ಕೆಲವರು ಪ್ರಜಾಪತಿಯನ್ನು ಶ್ರೇಷ್ಠನನ್ನಾಗಿಯೂ ಇನ್ನು ಕೆಲವರು ಈಶ್ವರನನ್ನು ಅಥವಾ ವಿಷ್ಣುವನ್ನು ಪ್ರಶಸ್ತನನ್ನಾಗಿಯೂ ವರ್ಣಿಸುತ್ತಾರೆ.

೯೨. ಈ ದೇವತೆಗಳು ಒಂದೊಂದು ಅಭಿಜ್ಞಾನದಿಂದ ಸಂಭೂತರಾಗಿರುವರು, ಮತ್ತು ಶುಭ-ಅಶುಭವೆಂಬ ಸಂಗದಿಂದ ಶೂನ್ಯರಾಗಿರುವರು, ಇವರು ಸತ್ತ್ವ, ದೇಶ, ಕಾಲ, ಕಾರ್ಯ ಮತ್ತು ಕರ್ಮಗಳನ್ನು ನೋಡಿ ಫಲಪ್ರದರಾಗುವರು.

೯೩. ಅನೇಕ ವಿಧ ಕಾಮ್ಯಪ್ರಯೋಜನಗಳಿಗೆ ಈ ದೇವತೆಯನ್ನು ಕಾರಣ ವನ್ನಾಗಿ ಹೇಳುತ್ತಾರೆ. ಈ ದೇವತೆಗಳಲ್ಲಿ ಒಂದು ದೇವತೆಯನ್ನು ಸ್ತುತಿಸಿದವನು ಎಲ್ಲ ದೇವತೆಗಳನ್ನು ಸ್ತುತಿಸಿದವನಾಗುವನು.

**ಏಕಂ ನಿಂದತಿ ಯಸ್ತ್ವೇಷಾಂ ಸರ್ವಾನೇವ ಸ ನಿಂದತಿ ।**
**ನ ಪ್ರದ್ವೇಷಸ್ತತಃ ಕಾರ್ಯೋ ದೇವತಾಸು ವಿಜಾನತಾ ॥ ೯೪ ॥**

**ನ ಶಕ್ಯಾ ಈಶ್ವರಾ ಜ್ಞಾತುಮೈಶ್ವರ್ಯೇಣ ವ್ಯವಸ್ಥಿತಾಃ ।**
**ಏಕತ್ವಾತ್ ಸ ತ್ರಿಧಾ ಭೂತ್ವಾ ಸಂಪ್ರಮೋಹಯತಿ ಪ್ರಜಾಃ ॥ ೯೫ ॥**

**ಏತೇಷಾಂ ನ್ವೈ ತ್ರಯಾಣಾಂ ತು ವಿಚಿನ್ವಂತ್ಯಂತರಂ ಜನಾಃ ।**
**ಜಿಜ್ಞಾಸವಃ ಪರೀಹಂತೇ ಸಕ್ತಾ ದುಷ್ಟಾ ವಿಚೇತಸಃ ॥ ೯೬ ॥**

**ಇದಂ ಪರಮಿದಂ ನೇತಿ ಸಂರಂಭಾದ್ಭಿನ್ನದರ್ಶಿನಃ ।**
**ಯಾತುಧಾನಾ ವಿಶೇಷಾ ಯೇ ಪಿಶಾಚಾಶ್ಚೈವ ನಾಂತರಮ್ ॥ ೯೭ ॥**

**ಏಕಃ ಸ ತು ಪೃಥಕ್ತ್ವೇನ ಸ್ವಯಂ ಭೂತ್ವಾ ಚ ತಿಷ್ಠತಿ ।**
**ಗುಣಮಾತ್ರಾತ್ಮಿಕಾಭಿಸ್ತು ತನುಭಿರ್ಮೋಹಯನ್ ಪ್ರಜಾಃ ॥ ೯೮ ॥**

---

೯೪. ಹಾಗೆಯೇ ಒಂದು ಮೂರ್ತಿಯನ್ನು ನಿಂದಿಸಿದರೆ ಸರ್ವಮೂರ್ತಿಗಳನ್ನು ನಿಂದಿಸಿದಂತಾಗುವುದು. ಆದುದರಿಂದ ವಿವೇಕ ಜ್ಞಾನವುಳ್ಳವನು ದೇವತೆಗಳ ವಿಷಯದಲ್ಲಿ ಪ್ರದ್ವೇಷವನ್ನು ಆಚರಿಸಬಾರದು.

೯೫. ಬಹುವಿಧವಾದ ಈಶ್ವರಶಕ್ತಿಗಳಿಂದ ವ್ಯವಸ್ಥಿತರಾದ ಈಶ್ವರರ ಸ್ವಸ್ವರೂಪವನ್ನು ಪರಮಾರ್ಥವಾಗಿ ತಿಳಿಯುವುದು ಸುಲಭವಲ್ಲ. ಒಬ್ಬನೇ ಈಶ್ವರನು ಗುಣೋಪಾಧಿಗಳಿಂದ ರೂಪತ್ರಯವನ್ನು ತೆಗೆದುಕೊಂಡು ಪ್ರಜೆಗಳನ್ನು ಮೋಹಪಡಿಸುವನು.

೯೬. ವಿವೇಕಶೂನ್ಯರೂ ದುಷ್ಟಾಸಂಗವುಳ್ಳವರೂ ಆದ ಜನರು ಈ ಮೂರು ಮಂದಿ ದೇವತೆಗಳ ತಾರತಮ್ಯವನ್ನು ತಿಳಿಯಬೇಕೆಂದು ಅಪೇಕ್ಷೆಯಿಂದ ಮೂರು ಮೂರ್ತಿಗಳಲ್ಲಿ ಅಂತರವನ್ನು ಹುಡುಕುತ್ತಾರೆ.

೯೭. ಈ ದೇವತೆಯು ಶ್ರೇಷ್ಠವಾದುದು. ಈ ದೇವತೆಯು ಉತ್ತಮವಲ್ಲವೆಂಬುದಾಗಿ ಮೂರ್ತಿಗಳಲ್ಲಿ ದ್ವೈತವಿಜ್ಞಾನದ ಆಗ್ರಹವುಳ್ಳ ಜನಗಳಿಗೂ ಕ್ರೂರಚಿತ್ತರಾದ ರಾಕ್ಷಸ-ಪಿಶಾಚಗಳಿಗೂ ಯಾವ ಅಂತರವೂ ಇಲ್ಲ.

೯೮. ಪರಮಾರ್ಥವಾಗಿ ಒಬ್ಬನೇ ಆದ ದೇವನು ಸತ್ತ್ವ ಮುಂತಾದ ಗುಣಮಯ

ತೇಷ್ವೇಕಂ ಯಜತೇ ಯೋ ವೈ ಸ ತದಾ ಯಜತೇ ತ್ರಯಮ್ ।
ತಸ್ಮಾದ್ದೇವಾಸ್ತ್ರಯೋ ಹ್ಯೇತೇ ನೈರಂತರ್ಯೇಣ ಧಿಷ್ಠಿತಾಃ ॥ ೯೯ ॥

ತಸ್ಮಾತ್ ಪೃಥಕ್ತ್ವಮೇಕತ್ವಂ ಸಂಖ್ಯಾಸಂಖ್ಯೇ ಗತಾಗತಮ್ ।
ಅಲ್ಪತ್ವಂ ವಾ ಬಹುತ್ವಂ ವಾ ತೇಷು ಕೋ ಜ್ಞಾತುಮರ್ಹತಿ ॥ ೧೦೦ ॥

ತಸ್ಮಾತ್ ಸೃಷ್ಟ್ವಾನುಗೃಹ್ಣಾತಿ ಗ್ರಸತೇ ಚೈವ ಸರ್ವಶಃ ।
ಗುಣಾತ್ಮಕತ್ವನ್ವೈಕಲ್ಪ್ಯೇ ತಸ್ಮಾದೇಕಃ ಸ ಉಚ್ಯತೇ ॥ ೧೦೧ ॥

ರುದ್ರಂ ಬ್ರಹ್ಮಾಣಮಿಂದ್ರಂ ಚ ಲೋಕಪಾಲಾನ್ ಋಷೀನ್ ಮನೂನ್।
ದೇವಂ ತಮೇಕಂ ಬಹುಧಾ ಪ್ರಾಹುರ್ನಾರಾಯಣಂ ದ್ವಿಜಾಃ
॥ ೧೦೨ ॥

---

ದೇಹಗಳಿಂದ ಭಿನ್ನವಾದ ಆಕಾರಗಳನ್ನು ತೆಗೆದುಕೊಂಡು ಪ್ರಾಕೃತ ಪ್ರಜೆಗಳಿಗೆ ದ್ವೈತಮೋಹವನ್ನು ಉಂಟುಮಾಡುತ್ತ ವ್ಯವಸ್ಥಿತನಾಗಿರುವನು.

೯೯. ಈ ಮೂರು ದೇವತೆಗಳಲ್ಲಿ ಒಂದು ದೇವತೆಯನ್ನು ಪೂಜಿಸಿದರೆ ತ್ರಿಮೂರ್ತಿಗಳನ್ನು ಪೂಜಿಸಿದಂತೆ ಆಗುವುದು. ಆದುದರಿಂದ ಈ ಮೂರು ಮಂದಿ ದೇವತೆಗಳು ಭೇದವೆಂಬ ವ್ಯವಧಾನವಿಲ್ಲದೆ ಐಕ್ಯದಿಂದ ಪ್ರಪಂಚಕ್ಕೆ ಅಧೀಶ್ವರರಾಗಿರುವರು.

೧೦೦. ಹೀಗಿರುವುದರಿಂದ ಈಶ್ವರನಲ್ಲಿ ಸಂಖ್ಯಾ ವ್ಯವಹಾರವನ್ನು ಅನುಸರಿಸಿ ಪೃಥಕ್ತ್ವವೂ ಸರ್ವವ್ಯವಹಾರ ಶೂನ್ಯಾವಸ್ಥೆಯಲ್ಲಿ ಅದ್ವೈತವೂ ಇರುವುದು. ಆದುದರಿಂದ ಸಂಖ್ಯಾಸಂಬಂಧವು ಯಾವುದೂ ಪರಮಾರ್ಥವಲ್ಲ. ಅವರಲ್ಲಿ ಏಕತ್ವ ಅಥವಾ ಬಹುತ್ವಗಳನ್ನು ತಿಳಿಯಲು ಯಾರಿಗೆ ತಾನೇ ಶಕ್ಯವು.

೧೦೧. ಒಬ್ಬ ಪರಮಾತ್ಮನು ಗುಣಮಯತ್ವ ಕಲ್ಪನೆಯನ್ನು ಅನುಸರಿಸಿ ಪ್ರಪಂಚವನ್ನು ಸೃಷ್ಟಿಸಿ ಅದನ್ನು ಪಾಲನಮಾಡಿ ಅಂತದಲ್ಲಿ ಲಯವನ್ನು ಮಾಡುತ್ತಾನೆ. ಆದುದರಿಂದ ಪರಮಾತ್ಮನು ಗುಣಾತೀತವಾದ ಪಾರಮಾರ್ಥಿಕರೂಪದಿಂದ ಒಬ್ಬನೇ ಆಗಿರುವನು.

೧೦೨. ಪ್ರಾಜ್ಞರಾದ ವಿಪ್ರರು ಪರಮಾತ್ಮನನ್ನು ರುದ್ರ, ಬ್ರಹ್ಮ, ಇಂದ್ರ, ಲೋಕಪಾಲ, ಋಷಿ, ಮನು, ಮತ್ತು ನಾರಾಯಣ ಎಂಬುದಾಗಿ ಗುಣೋಪಾಧಿ ರಚಿತಗಳಾದ ಅನೇಕ ವಿಧ ವ್ಯವಹಾರಗಳಿಂದ ವ್ಯವಹರಿಸುವರು.

**ಪ್ರಾಜಾಪತ್ಯಾ ಚ ರೌದ್ರೀ ಚ ತನುರ್ಯಾ ಚೈವ ವೈಷ್ಣವೀ ।**
**ಮನ್ವಂತರೇಷು ವೈ ತಿಸ್ರ ಆವರ್ತಂತೇ ಪುನಃ ಪುನಃ ॥ ೧೦೩ ॥**

**ಕ್ಷೇತ್ರಜ್ಞಾ ಅಪಿ ಚಾನ್ಯೇಽಸ್ಯ ವಿಭೋರ್ಜಾಯಂತ್ಯನುಗ್ರಹಾತ್ ।**
**ತೇಜಸಾ ಯಶಸಾ ಬುದ್ಧ್ಯಾ ಶ್ರುತೇನ ಚ ಬಲೇನ ಚ ॥ ೧೦೪ ॥**

**ಜಾಯಂತೇ ತತ್ಸಮಾಶ್ಚೈವ ತಾನಪೀಮಾನ್ನಿಬೋಧತ ।**
**ರಾಜಸ್ಯಾ ಬ್ರಹ್ಮಣೋಽಂಶೇನ ಮಾರೀಚಃ ಕಶ್ಯಪೋಽಭವತ್ ॥ ೧೦೫ ॥**

**ತಾಮಸ್ಯಾಸ್ತಸ್ಯ ಚಾಂಶೇನ ಕಾಲೋ ರುದ್ರಃ ಸ ಉಚ್ಯತೇ ।**
**ಸಾತ್ತ್ವಿಕಾಶ್ಚ ತಥಾಂಶೇನ ಯಜ್ಞೋ ವಿಷ್ಣುರಜಾಯತ ॥ ೧೦೬ ॥**

**ತ್ರಿಷು ಕಾಲೇಷು ತಸ್ಯೈತಾ ಬ್ರಹ್ಮಣಸ್ತನವೋ ದ್ವಿಜಾಃ ।**
**ಮನ್ವಂತರೇಷ್ವಿಹ ಸ್ರಷ್ಟುಮಾವರ್ತಂತೇ ಪುನಃ ಪುನಃ ॥ ೧೦೭ ॥**

---

೧೦೩. ಮೇಲೆ ವರ್ಣಿಸಿರುವ ಬ್ರಹ್ಮ, ರುದ್ರ ಮತ್ತು ವಿಷ್ಣು ದೇವತಾರೂಪವಾದ ತ್ರಿಮೂರ್ತಿಗಳು ಪ್ರತಿಯೊಂದು ಮನ್ವಂತರಗಳಲ್ಲಿಯೂ ಆಯಾಯ ಕಾರ್ಯನಿರ್ವಾಹಕ್ಕೋಸ್ಕರವಾಗಿ ಪುನಃ ಪುನರಾವೃತ್ತಿಯನ್ನು ಹೊಂದುವರು.

೧೦೪. ಮತ್ತು ತೇಜಸ್ಸು, ಯಶಸ್ಸು, ಬುದ್ಧಿ, ಶಾಸ್ತ್ರಾರ್ಥ ವಿವೇಕ ಮತ್ತು ಬಲಗಳೆಂಬ ಸಾಧಕಗುಣಗಳಿಂದ ಪರಮಾತ್ಮನಿಗೆ ತುಲ್ಯರಾಗಿ ಪರಮಾತ್ಮನ ಅನುಗ್ರಹದಿಂದ ಕೆಲವರು ಮಹಾತ್ಮರಾದ ಕ್ಷೇತ್ರಜ್ಞ (ಜೀವಾತ್ಮ)ರು ಜನಿಸುವರು.

೧೦೫. ಇವರು ಗುಣಗಳಲ್ಲಿ ಪರಮಾತ್ಮ ತುಲ್ಯರಾಗಿರುವರು. ಅಂತಹ ಮಹನೀಯರನ್ನು ನೀವು ಶ್ರವಣಮಾಡಿರಿ. ಬ್ರಹ್ಮನ ರಜೋಗುಣಮೂರ್ತಿಯ ಅಂಶದಿಂದ ಮರಿಚಿಮುನಿಯ ಪುತ್ರನಾಗಿ ಕಶ್ಯಪಮುನಿಯು ಜನ್ಮತಾಳಿದನು.

೧೦೬. ಹಾಗೆಯೇ ಪರಮಾತ್ಮನ ತಾಮಸಮೂರ್ತಿಯ ಅಂಶದಿಂದ ರುದ್ರಮೂರ್ತಿ ಅಥವಾ ಕಾಲಮೂರ್ತಿಯು ಜನಿಸಿರುವನು. ಮತ್ತು ಸತ್ತ್ವಮೂರ್ತಿಯ ಅಂಶದಿಂದ ಯಜ್ಞರೂಪಿಯಾದ ವಿಷ್ಣುವು ಆವಿರ್ಭಾವ ಹೊಂದಿದನು.

೧೦೭. ದ್ವಿಜರೇ ಭೂತ-ಭವಿಷ್ಯ-ವರ್ತಮಾನ ಕಾಲತ್ರಯದಲ್ಲಿ ಬ್ರಹ್ಮನ ತ್ರಿಮೂರ್ತಿಗಳು ಎಲ್ಲ ಮನ್ವಂತರಗಳಲ್ಲಿ ಜಗತ್ತಿನ ಸೃಷ್ಟಿ ವ್ಯಾಪಾರವನ್ನು ಮತ್ತೆ ಮತ್ತೆ ನಡೆಸುವುದಕ್ಕೋಸ್ಕರ ಆವೃತ್ತಿ ಹೊಂದುವುವು.

ಮನ್ವಂತರೇಷು ಸರ್ವೇಷು ಪ್ರಜಾಃ ಸ್ಥಾವರಜಂಗಮಾಃ ।
ಯುಗಾದೌ ಸಕೃದುತ್ಪನ್ನಾಸ್ತಿಷ್ಠಂತೀಹಾಪ್ರಸಂಯಮಾತ್ ॥ ೧೦೮ ॥

ಪ್ರಾಪ್ತೇ ಪ್ರಾಪ್ತೇ ತು ಕಲ್ಪಾಂತೇ ರುದ್ರಃ ಸಂಹರತಿ ಪ್ರಜಾಃ ।
ಕಾಲೋ ಭೂತ್ವಾ ಯುಗಾತ್ಮಾಸೌ ರುದ್ರಃ ಸಂಹರತೇ ಪುನಃ ॥ ೧೦೯ ॥

ಸಂಪ್ರಾಪ್ತೇ ಚೈವ ಕಲ್ಪಾಂತೇ ಸಪ್ತರಶ್ಮಿರ್ದಿವಾಕರಃ ।
ಭೂತ್ವಾ ಸಂವರ್ತಕಾದಿತ್ಯಸ್ತ್ರೀನ್ ಲೋಕಾಂಶ್ಚ ದಹತ್ಯುತ ॥ ೧೧೦ ॥

ವಿಷ್ಣುಃ ಪ್ರಜಾನುಗ್ರಹಕೃತ್ ಸದಾ ಪಾಲಯತಿ ಪ್ರಜಾಃ ।
ತಸ್ಯಾಂ ತಸ್ಯಾಮವಸ್ಥಾಯಾಂ ತತ ಉತ್ಪಾದ್ಯ ಕಾರಣಮ್ ॥ ೧೧೧ ॥

ಸತ್ತ್ವೋದ್ರಿಕ್ತಾ ತು ಯಾ ಪ್ರೋಕ್ತಾ ಬ್ರಹ್ಮಣಃ ಪೌರುಷೀ ತನುಃ ।
ತಸ್ಯಾಂಶೇನ ಚ ವಿಜ್ಞೇಯೋ ಮನೋಃ ಸ್ವಾಯಂಭುವೇಽಂತರೇ ॥ ೧೧೨ ॥

---

೧೦೮. ಸ್ಥಾವರ-ಜಂಗಮ ರೂಪವಾದ ಪ್ರಪಂಚ ಸಂತತಿಯು ಎಲ್ಲ ಮನ್ವಂತರಗಳಲ್ಲಿ ಯುಗದ ಆದಿಯಲ್ಲಿ ಹುಟ್ಟಿರುವುದು. ಹಾಗೆಯೇ ಪ್ರಲಯದ ವರೆಗೂ ಪ್ರವಾಹರೂಪವಾಗಿ ಅವಿಚ್ಛಿನ್ನವಾಗಿರುವುದು.

೧೦೯. ಹೀಗೆ ಪ್ರಲಯವು ಒದಗುವಾಗಲೆಲ್ಲ ರುದ್ರಮೂರ್ತಿಯು ಪ್ರಜೆಗಳನ್ನು ಸಂಹಾರಮಾಡುವನು. ಆಗ ರುದ್ರನು ಯುಗ ಅಥವಾ ಪ್ರಲಯವನ್ನುಂಟುಮಾಡುವ ಕಾಲಾತ್ಮಕನಾಗಿ ಮತ್ತೆ ಮತ್ತೆ ಸಂಹಾರಕ್ಕೆ ಆವಿರ್ಭವಿಸುವನು.

೧೧೦. ಕಲ್ಪಾವಸಾನ ಕಾಲದಲ್ಲಿ ಸಪ್ತರಶ್ಮಿಗಳಿಂದ ಕೂಡಿದ ಸೂರ್ಯನು ಉದಯಿಸುವನು. ಅವನು ಪ್ರಲಯಕಾಲದಲ್ಲಿ ಉದಯಿಸಿ ಸಂವರ್ತಕಾದಿತ್ಯ ಎಂಬ ನಾಮಪ್ರಸಿದ್ಧಿಯಿಂದ ಕೂಡಿ ಮೂರುಲೋಕಗಳನ್ನು ದಹಿಸುವನು.

೧೧೧. ಸತ್ತ್ವಗುಣಮಯನಾದ ವಿಷ್ಣುವು ಆಯಾಯ ವಿಷಮಕಾಲದಲ್ಲಿ ಒಂದೊಂದು ಕಾರಣವನ್ನು ನಿಮಿತ್ತವಿಟ್ಟುಕೊಂಡು ಆವಿರ್ಭವಿಸಿ ಪ್ರಜೆಗಳನ್ನು ಅನುಗ್ರಹಪೂರ್ವಕವಾಗಿ ಪಾಲಿಸುವನು.

೧೧೨. ಸತ್ತ್ವಗುಣೋದ್ರೇಕವುಳ್ಳ ಪರಮಾತ್ಮನ ಪುರುಷಮೂರ್ತಿಯ ಅಂಶವು ಮೊದಲನೆಯ ಸ್ವಾಯಂಭುವವೆಂಬ ಮನ್ವಂತರದಲ್ಲಿ ಜಯ ಎಂಬ ದೇವರೂಪದಿಂದ ಅವತರಿಸಿತು ಎಂದು ತಿಳಿಯಬೇಕು.

ಆಕೂತ್ಯಾಂ ಮನಸಾ ದೇವ ಉತ್ಪನ್ನಃ ಪ್ರಥಮಂ ವಿಭುಃ ।
ತತಃ ಪುನಃ ಸ ವೈ ದೇವಃ ಪ್ರಾಪ್ತೇ ಸ್ವಾರೋಚಿಷೇಽಂತರೇ ॥ ೧೧೩ ॥

ತುಷಿತಾಯಾಂ ಸಮುತ್ಪನ್ನೋ ಹ್ಯಜಿತಸ್ತುಷಿತೈಃ ಸಹ ।
ಔತ್ತಮೇ ಹ್ಯಂತರೇ ಚಾಪಿ ಹ್ಯಜಿತಸ್ತು ಪುನಃ ಪ್ರಭುಃ ॥ ೧೧೪ ॥

ಸತ್ಯಾಯಾಮಭವತ್ ಸತ್ಯಃ ಸಹ ಸತ್ಯೈಃ ಸುರೋತ್ತಮೈಃ ।
ತಾಮಸಸ್ಯಾಂತರೇ ಚಾಪಿ ಸ ದೇವಃ ಪುನರೇವ ಹಿ ॥ ೧೧೫ ॥

ಹರಿಣ್ಯಾಂ ಹರಿಭಿಃ ಸಾರ್ಧಂ ಹರಿರೇವ ಬಭೂವ ಹ ।
ವೈವಸ್ವತೇಽಂತರೇ ಚಾಪಿ ಹರಿರ್ದೇವೈಃ ಪುನಸ್ತು ಸಃ ॥ ೧೧೬ ॥

ವೈಕುಂಠೋ ನಾಮತೋ ಜಜ್ಞೇ ವಿಧೂತರಜಸೈಃ ಸಹ ।
ಮಾರೀಚಾತ್ ಕಶ್ಯಪಾದ್ವಿಷ್ಣುರದಿತ್ಯಾಂ ಸಂಬಭೂವ ಹ ॥ ೧೧೭ ॥

---

೧೧೩. ಆಗ ಆಕೂತಿ ದೇವಿಯಲ್ಲಿ ಪರಮಾತ್ಮನು ಮಾನಸಪುತ್ರನಾಗಿ ಹುಟ್ಟಿ ಮೊದಲು ದೇವತ್ವವನ್ನು ಹೊಂದಿದನು, ಅನಂತರ ಮತ್ತೊಂದು ದೇವತಾವಿರ್ಭಾವ ದಿಂದ ಕೂಡಿದ ಸ್ವಾರೋಚಿಷವೆಂಬ ಮನ್ವಂತರವು ಪ್ರಾಪ್ತವಾಯಿತು.

೧೧೪. ಆಗ ಆ ದೇವನು ತುಷಿತಾ ದೇವಿಯಲ್ಲಿ ತುಷಿತ ಎಂಬ ನಾಮಾಂಕಿತರಾದ ದೇವಗಣದ ಸಂಗಡ ಜನಿಸಿದನು. ಅದರ ಮುಂದಿನ ಉತ್ತಮನ ಮನ್ವಂತರ ದಲ್ಲಿಯೂ ಆ ಅಜಿತ ಎಂಬ ದೇವನು ರೂಪಾಂತರವನ್ನು ಹೊಂದಿದನು.

೧೧೫. ಆಗ ಸತ್ಯ ಎಂಬ ದೇವಶ್ರೇಷ್ಠರ ಸಂಗಡ ಸತ್ಯಾದೇವಿಯಲ್ಲಿ ಜನ್ಮವೆತ್ತಿ ದನು. ಮತ್ತೆ ತಾಮಸ ಮನ್ವಂತರದಲ್ಲಿ ಜನಿಸಿದನು.

೧೧೬. ಆಗ ಆ ಸತ್ಯದೇವನು ಹರಿಣೀ ಎಂಬಾಕೆಯಲ್ಲಿ ಹುಟ್ಟಿದ ಇತರ ಹರಿ ಎಂಬ ನಾಮಾಂಕಿತ ದೇವಗಣದ ಸಂಗಡ ಹರಿ ಎಂದು ಪ್ರಸಿದ್ಧನಾಗಿ ಜನಿಸಿದನು. ಇದರಂತೆ ಹರಿದೇವನು ಮುಂದಿನ ವೈವಸ್ವತ ಮನ್ವಂತರದಲ್ಲಿಯೂ ಜನ್ಮಹೊಂದಿದನು.

೧೧೭. ಮಾರೀಚನಾದ ಕಶ್ಯಪ ಮುನಿಯಿಂದ ಅದಿತಿದೇವಿಯಲ್ಲಿ ವಿಧೂತ ರಜಸ್ಸು=ರಜೋಗುಣಕಲಂಕ ಶೂನ್ಯರ ಸಂಗಡ ವೈಕುಂಠ ಎಂಬ ನಾಮದಿಂದ ಹುಟ್ಟಿದನು.

ತ್ರಿಭಿಃ ಕ್ರಮೈರಿಮಾಂಲ್ಲೋಕಾನ್ ಜಿತ್ವಾ ವಿಷ್ಣುಸ್ತ್ರಿವಿಕ್ರಮಃ ।
ಪ್ರತ್ಯಪಾದಯದಿಂದ್ರಾಯ ದೈವತೈಶ್ಚೈವ ಸ ಪ್ರಭುಃ ॥ ೧೧೮ ॥

ಇತ್ಯೇತಾಸ್ತನವೋ ಜಾತಾ ವ್ಯತೀತಾಃ ಸಪ್ತ ಸಪ್ತಸು ।
ಮನ್ವಂತರೇಷ್ವತೀತೇಷು ಯಾಭಿಃ ಸಂರಕ್ಷಿತಾಃ ಪ್ರಜಾಃ ॥ ೧೧೯ ॥

ಯಸ್ಮಾದ್ವಿಶ್ವಮಿದಂ ಸರ್ವಂ ಜಾಯತೇ ಲೀಯತೇ ಪುನಃ ।
ಯಸ್ಯಾಂಶೇನಾಸುರಾಃ ಸರ್ವೇ ಜಾಯಂತೇ ತ್ರಿದಿವೇಶ್ವರಾಃ ॥ ೧೨೦ ॥

ವರ್ಧಂತೇ ತೇಜಸಾ ಬುದ್ಧ್ಯಾ ಶ್ರುತೇನ ಚ ಬಲೇನ ಚ ।
ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ॥ ೧೨೧ ॥

ತತ್ತದೇವಾವಗಚ್ಛ ತ್ವಂ ವಿಷ್ಣೋಸ್ತೇಜೋಂಽಶಸಂಭವಮ್ ।
ಸ ಏವ ಜಾಯತೇಂಽಶೇನ ಕೇಚಿದಿಚ್ಛಂತಿ ಮಾನವಾಃ ॥ ೧೨೨ ॥

---

೧೧೮. ಕಶ್ಯಪಪುತ್ರನಾಗಿ ಜನಿಸಿದ ಪ್ರಭುವಾದ ವಿಷ್ಣುವು ಮೂರುಪಾದ ನ್ಯಾಸಗಳಿಂದ ಈ ಎಲ್ಲ ಲೋಕಗಳನ್ನು ಜಯಿಸಿ ಇತರ ದೇವತೆಗಳ ಜೊತೆಗೆ ಇಂದ್ರನಿಗೆ ದೇವರಾಜ್ಯವನ್ನು ಕೊಟ್ಟನು.

೧೧೯. ಹೀಗೆ ಹಿಂದೆ ಕಳೆದಿರುವ ಏಳೇಳು ಮನ್ವಂತರಗಳಲ್ಲಿ ಪ್ರಜೆಗಳನ್ನು ರಕ್ಷಣೆಮಾಡುವ ಉದ್ದೇಶದಿಂದ ಪರಮಾತ್ಮನಿಗೆ ಆಯಾಯ ಮೂರ್ತಿಗಳು ಆವಿರ್ಭಾವವನ್ನು ಹೊಂದಿದುವು.

೧೨೦. ಉತ್ಪತ್ತಿ ನಾಶಗಳ ಪ್ರವಾಹಕ್ಕೆ ಸಿಲುಕಿದ ಈ ಪ್ರಪಂಚವು ಯಾವ ಮೂಲಕಾರಣದಿಂದ ಹುಟ್ಟುವುದೋ, ಮತ್ತು ಎಲ್ಲಿ ಲಯವನ್ನು ಹೊಂದುವುದೋ, ದೇವೈಶ್ವರ್ಯದಿಂದ ಕೂಡಿದ ದೇವತೆಗಳು ಯಾವನಿಂದ ಹುಟ್ಟುವರೋ ಅವನನ್ನು ಪರಮಾತ್ಮನನ್ನಾಗಿ ತಿಳಿಯಬೇಕು.

೧೨೧. ಮತ್ತು ದೇವತೆಗಳು ತೇಜಸ್ಸು, ಬುದ್ಧಿ, ಶ್ರುತ, ಬಲಗಳನ್ನು ಯಾವ ಆತ್ಮಾನುಗ್ರಹದಿಂದ ಹೊಂದಿರುವರೋ, ಆ ಪರಮಾತ್ಮನನ್ನು ಅವಶ್ಯವಾಗಿ ತಿಳಿಯಬೇಕು. ಪ್ರಾಪಂಚಿಕ ವಸ್ತುಗಳಲ್ಲಿ ವಿಭೂತಿ, ಮಹಿಮೆ, ಕಾಂತಿ, ಮುಂತಾದ ಗುಣಾತಿಶಯಗಳಿಂದ ಕೂಡಿದ ಹಿರಿಯ ವಸ್ತುಗಳು ಕೆಲವು ಇವೆಯಲ್ಲವೆ?

೧೨೨. ಅವು ವಿಷ್ಣುವಿನ ಅಂಶ ತೇಜಸ್ಸಿನಿಂದ ಹುಟ್ಟಿವೆಯೆಂದು ಭಾವಿಸಬೇಕು ಕೆಲವರು ಆ ಪರಮಾತ್ಮನು ಒಂದೊಂದು ಅಂಶದಿಂದ ಹುಟ್ಟುವನೆಂದು ವರ್ಣಿಸುವರು.

ಏಕೇ ವಿವದಮಾನಾಸ್ತು ದೃಷ್ಟಾಂತಾಚ್ಚ ಬ್ರುವಂತಿ ಹಿ ।
ಏಷಾಂ ನ ವಿದ್ಯತೇ ಭೇದಸ್ತ್ರಯಾಣಾಂ ದ್ಯುಸದಾಮಿಹ ॥ ೧೨೩ ॥

ಜಾಯಂತೇ ಮೋಹಯಂತ್ಯಂಶೈರೀಶ್ವರಾ ಯೋಗಮಾಯಯಾ
॥ ೧೨೪ ॥

ತಸ್ಮಾತ್ತ್ರೇಷಾಂ ಪ್ರಚಾರೇ ತು ಯುಕ್ತಾಯುಕ್ತಂ ನ ವಿದ್ಯತೇ ।
ಭೂತಾನುವಾದಿನಾಮಾದ್ಯಾ ಮಧ್ಯಸ್ಥಾ ಭೂತವಾದಿನಾಮ್ ॥ ೧೨೫ ॥

ಭೂತಾನುವಾದಿನಃ ಸಕ್ತಾಸ್ತ್ರಯಶ್ಚೈವ ಪ್ರವಾದಿನಾಮ್ ।
ಪರೀಕ್ಷ್ಯ ಚಾನುಗೃಹ್ಣಂತಿ ನಿಗೃಹ್ಣಂತಿ ಖಲಾನ್ ಸ್ವ...ವಮ್ ॥ ೧೨೬ ॥

ಮತ್ತಃ ಪೂರ್ವೇ ಚ ತೇ ತಸ್ಮಾತ್ ಪ್ರಭವಶ್ಚ ತತೋಽಧಿಕಾಃ ।
ತಥಾಧಿಕರಣೈರೇತೈರ್ಯಥಾ ತತ್ತ್ವನಿದರ್ಶಕಾಃ ॥ ೧೨೭ ॥

---

೧೨೩. ಕೆಲವರು ಈ ಮತವನ್ನು ಅಂಗೀಕರಿಸದೆ ವಿವಾದಮಾಡುವರು. ಮತ್ತು ದೃಷ್ಟಾಂತದಿಂದ ಆತ್ಮಾನ್ವೇಷಣ ಮಾಡಲು ಯತ್ನಿಸುವರು. ಹೇಗಾದರೂ ಈ ತ್ರಿಮೂರ್ತಿ ದೇವತೆಗಳಿಗೆ ಸ್ವಲ್ಪವೂ ಭೇದವು ಪರಮಾರ್ಥವಾಗಿಲ್ಲ.

೧೨೪. ಈಶ್ವರಸ್ವರೂಪರಾದ ಈ ಮೂರ್ತಿಗಳು ವಿವೇಕಿಗಳನ್ನು ಕೂಡ ಮೋಹಪಡಿಸುವಂತೆ ಯೋಗಮಾಯಾಧೀನರಾಗಿ ಜನ್ಮವನ್ನು ಹೊಂದುತ್ತಾರೆ.

೧೨೫. ಆದುದರಿಂದ ಆ ಮೂರ್ತಿಗಳ ಸರ್ವತೋಮುಖವಾದ ವ್ಯಾಪಾರ-ಪ್ರಚಾರಗಳಲ್ಲಿ ಯುಕ್ತ-ಅಯುಕ್ತಗಳ ವಿಭಾಗ ವಿವೇಚನೆಯು ನಿಷ್ಪ್ರಯೋಜನವಾದುದು. ಭೂತಾರ್ಥವನ್ನು ವಾದಿಸುವ ಅಥವಾ ಅನುವಾದ ಮಾಡುವವರಿಗೆ ತ್ರಿಮೂರ್ತಿಗಳು ಆದಿ, ಮಧ್ಯದಲ್ಲಿರುವ ಆಧಾರ ಸ್ವರೂಪರಾಗಿರುವರು.

೧೨೬. ಮತ್ತು ಭೂತವಾದದಲ್ಲಿ ಸಂಗವನ್ನುಂಟುಮಾಡುವ ನಿಮಿತ್ತರು. ಹೀಗೆ ವಿವಿಧಪ್ರವಾದ ಶೀಲರಿಗೆ ತ್ರಿಮೂರ್ತಿಗಳು ವಿಷಯರಾಗಿರುವರು, ಮತ್ತು ವಿವೇಚನಾಪೂರ್ವಕವಾಗಿ ತತ್ತ್ವಜ್ಞರನ್ನು ಅನುಗ್ರಹಿಸುತ್ತಲೂ ದುಷ್ಟರನ್ನು ನಿಗ್ರಹಿಸುತ್ತಲೂ ಇರುವರು.

೧೨೭. ಅವರು ನನಗಿಂತಲೂ ಪೂರ್ವಕಾಲದಲ್ಲಿರುವವರೂ ಪ್ರಭುಗಳೂ

ದೇವಾನಾಂ ದೇವಭೂತಾಶ್ಚ ತೇ ವೈ ಸರ್ವಪ್ರವರ್ತಕಾಃ ।
ಕರ್ಮಣಾಂ ಮಹತಾಂ ತೇ ಹಿ ಕರ್ತಾರೋ ಜಗದೀಶ್ವರಾಃ ॥ ೧೨೮ ॥

ಶ್ರುತಿಜ್ಞೈಃ ಕಾರಣೈರೇತೈಶ್ಚತುರ್ಭಿಃ ಪರಿಕೀರ್ತಿತಾಃ ।
ಬಾಲಿಶಾಸ್ತೇ ನ ಜಾನಂತಿ ದೈವತಾನಿ ಪ್ರಭಾಗಶಃ ॥ ೧೨೯ ॥

ಇಮಂ ಚೋದಾಹರಂತ್ಯತ್ರ ಶ್ಲೋಕಂ ಯೋಗೇಶ್ವರಾನ್ ಪ್ರತಿ ।
ಕುರ್ಯಾದ್ಯೋಗಬಲಂ ಪ್ರಾಪ್ಯ ತೈಶ್ಚ ಸರ್ವೈರ್ಮಹಾಂಶ್ಚರೇತ್
॥ ೧೩೦ ॥
ಪ್ರಾಪ್ನುಯಾದ್ವಿಷಯಾಂಶ್ಚೈವ ಪುನಶ್ಚೋರ್ಧ್ವಂ ತಪಶ್ಚರೇತ್ ।
ಸಂಹರೇತ ಪುನಃ ಸರ್ವಾನ್ ಸೂರ್ಯೋ ಜ್ಯೋತಿರ್ಗಣಾನಿವ ॥೧೩೧॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ತೃತೀಯೋಽಧ್ಯಾಯಃ.

---

ಮತ್ತು ಅಧಿಕಮಹಿಮೆಯುಳ್ಳವರೂ ಆಗಿರುವರು. ಹಾಗು ಈ ಅಧಿಕಾರ ವಿಶೇಷ ಗಳಿಂದ ಕೂಡಿ ತತ್ತ್ವಾರ್ಥವನ್ನು ನಿರ್ದೇಶಿಸುವರೂ ಆಗಿರುವರು.

೧೨೮. ದೇವತೆಗಳಿಗೆ ದೇವಭೂತರೂ ಮತ್ತು ಸರ್ವಪ್ರವೃತ್ತಿನಿರ್ವಾಹಕರೂ ಆಗಿದ್ದಾರೆ. ಹಾಗು ಮಹಾಕರ್ಮಗಳನ್ನು ನೆರವೇರಿಸಿದ ಜಗದೀಶ್ವರರೂ ಆಗಿದ್ದಾರೆಂದು ತಿಳಿಯಬೇಕು.

೧೨೯. ವೇದ ತಾತ್ಪರ್ಯವನ್ನು ಅರಿಯಲು ಕಾರಣವಾದ ಬಲ ಮುಂತಾದ ಕಾರಣಗಳಿಂದ ತ್ರಿಮೂರ್ತಿರೂಪರಾದ ಜಗದೀಶ್ವರರು ಕೀರ್ತಿಸ್ಪಟ್ಟಿರುವರು. ಅಜ್ಞರಾದವರು ಈ ದೇವತೆಗಳ ಔಪಾಧಿಕವಾದ ವಿಭಾಗವನ್ನು ಅಸಂಕೀರ್ಣವಾಗಿ ತಿಳಿಯುವುದಿಲ್ಲ.

೧೩೦. ಇಂತಹ ಯೋಗೇಶ್ವರರನ್ನು ಕುರಿತು ಈ ಪದ್ಯಗಳಿಂದ ಮಹಿಮೆಯನ್ನು ಕೊಂಡಾಡುತ್ತಾರೆ. ಯೋಗಾಭ್ಯಾಸ ಬಲವನ್ನು ಹೊಂದಿ ಅಣಿಮಾದಿ ಅಷ್ಟೈಶ್ವರ್ಯ ಮಹಿಮೆಯಿಂದ ವಿಭುವಾಗಿ ಸಂಚರಿಸುವರು.

೧೩೧. ನಾನಾವಿಧವಾದ ವಿಷಯಭೋಗಗಳನ್ನು ಅನುಭವಿಸುವರು, ಮತ್ತು ಉತ್ಕೃಷ್ಟವಾದ ತಪವನ್ನು ಆಚರಿಸುವರು, ಮತ್ತು ಸಮಸ್ತ ಮೂರ್ತಿಗಳನ್ನು ಸೂರ್ಯನು ಕಿರಣಜಾಲವನ್ನು ಉಪಸಂಹಾರ ಮಾಡಿದಂತೆ ಉಪಸಂಹರಿಸುವರು.

ಬ್ರಹ್ಮಾಂಡ ಪುರಾಣದ ಉತ್ತರಾರ್ಧದಲ್ಲಿ ಮೂರನೆಯ ಅಧ್ಯಾಯವು ಮುಗಿದುದು.

## ಚತುರ್ಥೋಽಧ್ಯಾಯಃ

**ಸೂತ ಉವಾಚ :—**

**ಬ್ರಹ್ಮಣಾ ವೈ ಮುಖಾತ್ ಸೃಷ್ಟಾ ಜಯಾ ದೇವಾಃ ಪ್ರಜೇಪ್ಸಯಾ ।**
**ಸರ್ವೇ ಮಂತ್ರಶರೀರಾಸ್ತೇ ಸ್ಮೃತಾ ಮನ್ವಂತರೇಷ್ವಿಹ ॥ ೧ ॥**

**ದರ್ಶಶ್ಚ ಪೌರ್ಣಮಾಸಶ್ಚ ಬೃಹತ್ಸಾಮ ರಥಂತರಮ್ ।**
**ಚಿತಿಶ್ಚ ಸುಚಿತಿಶ್ಚೈವ ಹ್ಯಾಕೂತಿಃ ಕೂತಿರೇವ ಚ ॥ ೨ ॥**

**ವಿಜ್ಞಾತಶ್ಚೈವ ವಿಜ್ಞಾತಾ ಮನೋ ಯಜ್ಞಶ್ಚ ದ್ವಾದಶಃ ।**
**ದಾರಾಗ್ನಿಹೋತ್ರಸಂಬಂಧಂ ವಿತತ್ಯ ಯಜತೇತಿ ಚ ॥ ೩ ॥**

**ಏವಮುಕ್ತ್ವಾ ತು ತಾನ್ ಬ್ರಹ್ಮಾ ತತ್ರೈವಾಂತರಧಾತ್ ಪ್ರಭುಃ ।**
**ತತಸ್ತೇ ನಾಭ್ಯನಂದಂತ ತದ್ವಾಕ್ಯಂ ಪರಮೇಷ್ಠಿನಃ ॥ ೪ ॥**

---

೧. ಸೂತಮುನಿಯು ಹೀಗೆ ಹೇಳಿದನು :—ಬ್ರಹ್ಮದೇವನಿಂದ ಪ್ರಜಾಕಾಮನೆಯಿಂದ ಜಯ ಎಂಬ ನಾಮಾಂಕಿತರಾದ ದೇವತೆಗಳು ಮುಖದಿಂದ ಸೃಷ್ಟಿಮಾಡಲ್ಪಟ್ಟರು. ಅವರು ಸರ್ವಮನ್ವಂತರಗಳಲ್ಲಿಯೂ ಮಂತ್ರಮಯಮೂರ್ತಿಯುಳ್ಳವರಾಗಿ ಸ್ಮರಿಸಲ್ಪಟ್ಟಿರುವರು.

೨. ಆ ದೇವತೆಗಳು ದರ್ಶ, ಪೌರ್ಣಮಾಸ, ಬೃಹತ್ಸಾಮ, ರಥಂತರ, ಚಿತಿ, ಸುಚಿತಿ, ಆಕೂತಿ, ಮತ್ತು ಕೂತಿ ಎಂಬುದಾಗಿ ಆಯಾಯ ಮಂತ್ರಾದಿ ಅಭಿಮಾನಿಗಳಾಗಿರುವರು.

೩. ಮತ್ತು ವಿಜ್ಞಾತ, ವಿಜ್ಞಾತಾ, ಮನ, ಯಜ್ಞ, ಎಂಬ ನಾಮಾಂಕಿತರಾಗಿ ಒಟ್ಟು ಹನ್ನೆರಡು ಮಂದಿಯು ಜನಿಸಿರುವರು. ಇವರ ನಿಖಿಲ ಪ್ರವೃತ್ತಿಯು ದಾರ=ಪತ್ನೀ ಮತ್ತು ಅಗ್ನಿಯ ಸಂಬಂಧ ವಿಸ್ತಾರವುಳ್ಳ ಯಾಗಾದಿ ಕರ್ಮಾನುಷ್ಠಾನವು ಶ್ರೇಯಃಸಾಧನವೆಂಬ ಧ್ಯೇಯದಿಂದ ಕೂಡಿತ್ತು.

೪. ಹೀಗೆ ಸೃಷ್ಟಿಕರ್ತನಾದ ಬ್ರಹ್ಮನು ಅವರಿಗೆ ಕರ್ಮಪ್ರವೃತ್ತಿಮಾರ್ಗವನ್ನು ಉಪದೇಶಿಸಿ ಅಲ್ಲಿ ಅದೃಶ್ಯನಾದನು. ಆದರೆ ಅವರು ಬ್ರಹ್ಮನ ಆ ಪ್ರವೃತ್ತಿಮಾರ್ಗ ಚೋದನೆಯನ್ನು ಅನುಮೋದಿಸಲಿಲ್ಲ.

ಸನ್ನ್ಯಸ್ಯೇಹ ಚ ಕರ್ಮಾಣಿ ವಾಸನಾಃ ಕರ್ಮಜಾಶ್ಚ ವೈ ।
ಯಮೇಷ್ವೇವಾವತಿಷ್ಠಂತೇ ದೋಷಂ ದೃಷ್ಟ್ವಾ ತು ಕರ್ಮಸು ॥ ೫ ॥

ಕ್ಷಯಾತಿಶಯಯುಕ್ತಂ ಚ ತೇ ದೃಷ್ಟ್ವಾ ಕರ್ಮಣಾಂ ಫಲಮ್ ।
ಜುಗುಪ್ಸಂತಃ ಪ್ರಸೂತಿಂ ಚ ನಿಸ್ಸತ್ವಾ ನಿರ್ಮಮಾಭವನ್ ॥ ೬ ॥

ಆಜನ್ಮ ಕಾಂಕ್ಷಮಾಣಾಸ್ತೇ ನಿರ್ಮುಕ್ತಾ ದೋಷದರ್ಶಿನಃ ।
ಅರ್ಥಂ ಧರ್ಮಂ ಚ ಕಾಮಂ ಚ ಹಿತ್ವಾ ತೇ ವೈ ವ್ಯವಸ್ಥಿತಾಃ ॥ ೭ ॥

ಪರಮಂ ಜ್ಞಾನಮಾಸ್ಥಾಯ ತತ್ ಸಂಕ್ಷಿಪ್ಯ ಸುಸಂಸ್ಥಿತಾಃ ।
ತೇಷಾಂ ತು ತಮಭಿಪ್ರಾಯಂ ಜ್ಞಾತ್ವಾಬ್ರಹ್ಮಾ ತು ಕೋಪಿತಃ ॥ ೮ ॥

ತಾನಬ್ರವೀತ್ತತೋ ಬ್ರಹ್ಮಾ ನಿರುತ್ಸಾಹಾನ್ ಸುರಾನಥ ।
ಪ್ರಜಾರ್ಥಮಿಹ ಯೂಯಂ ವೈ ಮಯಾ ಸೃಷ್ಟಾಃ ಸ್ಥ ನಾನ್ಯಥಾ ॥ ೯ ॥

---

೫. ಅವರು ಸಕಲ ಕರ್ಮಗಳ ಸನ್ನ್ಯಾಸವನ್ನು ಮಾಡಿ ದೇಹ ಮುಂತಾದುವುಗಳಲ್ಲಿರುವ ಕರ್ಮಾಧೀನವಾದ ಸಕಲ ವಾಸನೆಗಳನ್ನು ದೂರಮಾಡಿ ಕರ್ಮಾನುಷ್ಠಾನವು ಬಂಧಕವೆಂದು ದೋಷದೃಷ್ಟಿಯಿಂದ ಯಮನಿಯಮಾದಿ ಯೋಗಾಭ್ಯಾಸಪರರಾದರು.

೬. ಅವರು ಕರ್ಮಫಲವನ್ನು ಕ್ಷಯ ಮತ್ತು ಅತಿಶಯಗಳಿಂದ ಕೂಡಿರುವುದರಿಂದ ಅದು ಪುರುಷಾರ್ಥ ರೂಪವಲ್ಲವೆಂದು ಚಿಂತಿಸಿ ಸಂತತಿಯ ಲಾಭದಿಂದ ಜುಗುಪ್ಸೆಯನ್ನು ಹೊಂದಿ ಅದರಲ್ಲಿ ಅಂತಃಕರಣಾಭಿರುಚಿ ಮತ್ತು ಮಮತ್ವಗಳಿಂದ ವರ್ಜಿತರಾದರು.

೭. ಧರ್ಮ-ಅರ್ಥ-ಕಾಮಗಳಲ್ಲಿ ದೋಷದರ್ಶನದಿಂದ ಅವುಗಳನ್ನು ಬಿಟ್ಟು ಪುನರ್ಜನ್ಮವಿಲ್ಲದ ಅಮೃತತ್ವ ಮೋಕ್ಷವನ್ನು ಅಪೇಕ್ಷಿಸಿ ಈ ಭವಬಂಧನದಿಂದ ರಹಿತರಾಗಿದ್ದರು.

೮. ಪ್ರಶಸ್ತವಾದ ಜ್ಞಾನನಿಷ್ಠೆಯನ್ನು ಅವಲಂಬಿಸಿ ಇತರ ವ್ಯವಹಾರ ಜಾಲವನ್ನು ಸಂಕೋಚಮಾಡಿ ವ್ಯವಸ್ಥೆಯಿಂದ ಇದ್ದರು. ಹೀಗಿರಲು ಬ್ರಹ್ಮನು ಅವರ ಕಾಮಬಾಹ್ಯಪ್ರವೃತ್ತಿಯನ್ನು ಕಂಡು ಕುಪಿತನಾದನು.

೯. ಆಗ ಬ್ರಹ್ಮನು ಸಂತತಿಯ ಬೆಳವಣಿಗೆಯಲ್ಲಿ ನಿರುತ್ಸಾಹರಾಗಿರುವ ಅವರನ್ನು ಕಂಡು ಇಂತೆಂದನು. ದೇವತೆಗಳೆ! ನಾನು ನಿಮ್ಮನ್ನು ಸೃಷ್ಟಿಸಿರುವುದು ಪ್ರಜಾಸಂತತಿಯನ್ನು ಅವಿಚ್ಛಿನ್ನವಾಗಿರುವಂತೆ ಅಭಿವೃದ್ಧಿಪಡಿಸಲು ಸಹಕರಿಸಬೇಕೆಂಬ ಉದ್ದೇಶದಿಂದ ಹೊರತು ಬೇರೆ ನಿಮಿತ್ತದಿಂದ ಅಲ್ಲ.

ಪ್ರಸೂಯಧ್ವಂ ಯಜಧ್ವಂ ಚೇತ್ಯುಕ್ತವಾನಸ್ಮಿ ವಃ ಪುರಾ ।
ಯಸ್ಮಾದ್ವಾಕ್ಯಮನಾದೃತ್ಯ ಮಮ ವೈರಾಗ್ಯಮಾಸ್ಥಿತಾಃ ॥ ೧೦ ॥

ಜುಗುಪ್ಸಮಾನಾಃ ಸ್ವಂ ಜನ್ಮ ಸಂತತಿಂ ನಾಭ್ಯನಂದತ ।
ಕರ್ಮಣಾಂ ನ ಕೃತೋಽಭ್ಯಾಸೋ ಹ್ಯಮೃತತ್ವಾಭಿಕಾಂಕ್ಷಯಾ ॥ ೧೧ ॥

ತಸ್ಮಾದ್ಯೂಯಮಿಹಾವೃತ್ತಿಂ ಸಪ್ತಕೃತ್ವೋ ಹ್ಯವಾಪ್ಸ್ಯಥ ।
ತೇ ಶಪ್ತಾ ಬ್ರಹ್ಮಣಾ ದೇವಾ ಜಯಾಸ್ತಂ ವೈ ಪ್ರಸಾದಯನ್ ॥ ೧೨ ॥

ಕ್ಷಮಾಸ್ಮಾಕಂ ಮಹಾದೇವ ಯದಜ್ಞಾನಾತ್ಮಕಂ ಪ್ರಭೋ ।
ಪ್ರಣತಾನ್ ವೈ ಸಾನುನಯಂ ಬ್ರಹ್ಮಾ ತಾನಬ್ರವೀತ್ ಪುನಃ ॥ ೧೩ ॥

ಲೋಕೇಽಸ್ಮಿನ್ಯಥಾನುಭುಂಜೀತ ಕಃ ಸ್ವಾತಂತ್ರ್ಯಮಿಹಾರ್ಹತಿ ।
ಮಯಾ ಗತಂ ತು ಸರ್ವಂ ಹಿ ಕಥಮಚ್ಛಂದತೋ ಮಮ ॥ ೧೪ ॥

---

೧೦. ಪೂರ್ವದಲ್ಲಿ ನಾನು ನಿಮಗೆ ಸಂತತಿಯನ್ನು ಉತ್ಪಾದನಮಾಡಿ, ಮತ್ತು ಯಾಗಾದಿಕರ್ಮಗಳನ್ನು ಮಾಡಿ ಎಂದು ಆಜ್ಞೆಯಿತ್ತಿದ್ದೆನು, ಆ ನನ್ನ ವಚನವನ್ನು ಉಲ್ಲಂಘಿಸಿ ವೈರಾಗ್ಯಮಾರ್ಗವನ್ನು ಅವಲಂಬಿಸಿರುತ್ತೀರಿ.

೧೧. ಮತ್ತು ನೀವು ಎತ್ತಿರುವ ಜನ್ಮವನ್ನು ವಿವೇಕಪೂರ್ವಕವಾದ ದೋಷ ದರ್ಶನದಿಂದ ಜುಗುಪ್ಸೆಪಡುತ್ತ ಸಂತತಿಯನ್ನು ಕಾಮಿಸುವುದಿಲ್ಲ. ಹಾಗೂ ಮೋಕ್ಷ ಸುಖದ ಆಕಾಂಕ್ಷೆಯಿಂದ ಸತ್ಕರ್ಮಾಚರಣೆಯ ಆವೃತ್ತಿಯಲ್ಲಿ ತತ್ಪರರಾಗಿಲ್ಲ.

೧೨. ಆದುದರಿಂದ ಈ ಲೋಕದಲ್ಲಿ ಏಳುಸಲ ನೀವು ಪುನರ್ಜನ್ಮವನ್ನು ಹೊಂದುತ್ತೀರಿ. ಹೀಗೆ ಬ್ರಹ್ಮನಿಂದ ಶಪಿಸಲ್ಪಟ್ಟ ಜಯ ಎಂಬ ದೇವತೆಗಳು ಮತ್ತೆ ಬ್ರಹ್ಮನನ್ನು ಸ್ತುತಿಸಿ ಪ್ರಸನ್ನನನ್ನಾಗಿ ಮಾಡಿದರು.

೧೩. ಮಹಾದೇವರೂಪನೂ ಪ್ರಭುವೂ ಆದ ಬ್ರಹ್ಮನೆ! ಅಜ್ಞಾನದಿಂದ ನಾವು ಮಾಡಿರುವ ಅಪರಾಧವನ್ನು ಮನ್ನಿಸಬೇಕು. ಹೀಗೆ ವಿನಯದಿಂದ ನಮಸ್ಕರಿಸಿದ ಆ ದೇವತೆಗಳನ್ನು ಕುರಿತು ಮತ್ತೆ ಬ್ರಹ್ಮನು ಮಾತನಾಡಿದನು.

೧೪. ಲೋಕದಲ್ಲಿ ಪ್ರತಿಯೊಬ್ಬನು ಸುಖಭೋಗಿಯಾಗುವನು. ಆದರೆ ಭೋಗ-ಅಪವರ್ಗಗಳಲ್ಲಿ ಯಾರು ತಾನೇ ಸ್ವತಂತ್ರನಾಗಿರುವನು. ಸಮಸ್ತ ಪ್ರಪಂಚವು ನನ್ನಿಂದ ಆವರಿಸಲ್ಪಟ್ಟಿರುವುದು. ನನ್ನ ಇಚ್ಛೆಯನ್ನು ಹೊರತು ಏನೊಂದೂ ನಡೆಯುವುದಿಲ್ಲ.

**ಪ್ರತಿಪತ್ಸ್ಯಂತಿ ಭೂತಾನಿ ಶುಭಂ ವಾ ಯದಿ ವೋತ್ತರಮ್ ।**
**ಲೋಕೇ ಯದಪಿ ಕಿಂಚಿದ್ವೈ ಶಂ ವಾಶಂ ವಾ ವ್ಯವಸ್ಥಿತಮ್ ॥ ೧೫ ॥**

**ಬುದ್ಧ್ಯಾತ್ಮನಾ ಮಯಾ ವ್ಯಾಪ್ತಂ ಕೋ ಮಾಂ ಲೋಕೇಽತಿವರ್ತಯೇತ್।**
**ಭೂತಾನಾಮೀಹಿತಂ ಯಚ್ಚ ಯಚ್ಚಾಪ್ಯೇಷಾಂ ವಿಚಿಂತಿತಮ್ ॥೧೬॥**

**ತಥೋಽಪಚರಿತಂ ಯಚ್ಚ ತತ್ಸರ್ವಂ ವಿದಿತಂ ಮಮ ।**
**ಮಯಾ ಬದ್ಧಮಿದಂ ಸರ್ವಂ ಜಗತ್ ಸ್ಥಾವರಜಂಗಮಮ್ ॥ ೧೭ ॥**

**ಆಶಾಮಯೇನ ಬಂಧೇನ ಕಸ್ತಂ ಛೇತ್ತುಮಿಹೋತ್ಸಹೇತ್ ।**
**ಯಸ್ಮಾದ್ವಹತಿ ದೃಪ್ತೋ ನೈ ಸರ್ವಾರ್ಥಮಿಹ ನಾನ್ಯಥಾ ॥ ೧೮ ॥**

**ಇತಿ ಕರ್ಮಾಣ್ಯನಾರಭ್ಯ ಕಾಮಂ ಛಂದಾದ್ವಿಮೋಕ್ಷ್ಯತೇ ।**
**ಏವಂ ಸಂಭಾಷ್ಯ ತಾನ್ ದೇವಾನ್ ಜಯಾನಧ್ಯಾತ್ಮಚೇತಸಃ ॥ ೧೯ ॥**

---

೧೫. ಪ್ರಾಣಿಗಳು ಕ್ಷೇಮ, ಅಥವಾ ಅಕ್ಷೇಮ ಸಾಧನಗಳನ್ನು ಆಚರಿಸುವುದು, ಮತ್ತು ಅದರ ಫಲವಾಗಿ ವ್ಯವಸ್ಥೆಯಿಂದ ಸುಖ ಅಥವಾ ದುಃಖಗಳನ್ನು ಹೊಂದುವುದು ಇದೆಲ್ಲವು ನನ್ನ ಸಂಕಲ್ಪಾಧೀನವಾಗಿರುವುದು.

೧೬. ಸಮಸ್ತ ಪ್ರಾಣಿಗಳಲ್ಲಿ ಅವುಗಳನ್ನು ಪ್ರೇರೇಪಿಸುವ ಬುದ್ಧಿರೂಪದಿಂದ ವ್ಯಾಪಿಸಿರುವ ನನ್ನನ್ನು ಯಾರಿಂದ ಉಲ್ಲಂಘಿಸಲು ಶಕ್ಯವು, ಪ್ರಾಣಿಗಳ ಕೋರಿಕೆ, ಇವುಗಳ ಚಿಂತೆ ಮುಂತಾದುವುಗಳನ್ನು ನಾನು ಅರಿತಿರುವೆನು.

೧೭. ಹಾಗೂ ಆ ಪ್ರಾಣಿಗಳ ನಡತೆ ಮುಂತಾದ ಸಮಸ್ತ ವ್ಯಾಪಾರಗಳನ್ನು ನಾನು ತಿಳಿದಿರುವೆನು. ಚರ-ಅಚರವೆಂಬ ವಿಭಾಗದಿಂದ ಕೂಡಿರುವ ನಿಖಿಲ ಜಗತ್ತು ನನ್ನಿಂದ ತಿಳಿಯಲ್ಪಟ್ಟಿರುವುದು.

೧೮. ಹೀಗೆ ಆಶಾಪಾಶದಿಂದ ಕಟ್ಟಲ್ಪಟ್ಟಿರುವ ಜಗತ್ತನ್ನು ಛೇದಿಸಲು ಯಾರಿಗೂ ಶಕ್ಯವಲ್ಲ. ದರ್ಪದಿಂದ ಮತ್ತನಾದವನು ಸರ್ವಾರ್ಥವನ್ನು ನಾನು ಹೊತ್ತಿರುವೆನೆಂದು ಭಾವಿಸುವನು. ಆದರೆ ಅದು ವಾಸ್ತವವಲ್ಲ.

೧೯. ಒಂದುವೇಳೆ ನನ್ನ ಸಂಕಲ್ಪಾನುಸಾರವಾಗಿ ಸರ್ವಕರ್ಮಗಳನ್ನು ಸನ್ಯಾಸ ಮಾಡಿ ಮುಕ್ತಿಯನ್ನು ಹೊಂದುತ್ತಾನೆ. ಹೀಗೆ ಅಧ್ಯಾತ್ಮಭಾವನೆಯಿಂದ ಕೂಡಿದ ಜಯ ಎಂಬ ದೇವವರ್ಗವನ್ನು ಕುರಿತು ಬ್ರಹ್ಮನು ಸಂಭಾಷಿಸಿದನು.

ಅಥ ವೀಕ್ಷ್ಯ ಪುನಶ್ಚಾಹ ಧ್ರುವಂ ದಂಡ್ಯಾನ್ ಪ್ರಜಾಪತಿಃ ।
ಯಸ್ಮಾನ್ಮಾಮಭಿಸಂಧಾಯ ಸನ್ಯಾಸಾದಿಃ ಕೃತಃ ಸುರಾಃ ॥ ೨೦ ॥

ತಸ್ಮಾತ್ ಸ ವಿಪುಲಾಯತ್ನೋ ವ್ಯಾಪಾರಸ್ತ್ವಥ ಮತ್ಕೃತಃ ।
ಭವಿತಾ ಚ ಸುಖೋದರ್ಕೋ ದಿವ್ಯಭಾವೇನ ಜಾಯತಾಮ್ ॥ ೨೧ ॥

ಆತ್ಮಚ್ಛಂದೇನ ವೋ ಜನ್ಮ ಭವಿಷ್ಯತಿ ಸುರೋತ್ತಮಾಃ ।
ಮನ್ವಂತರೇಷು ಸಂಸಿದ್ಧಾಃ ಸಪ್ತಸ್ವಾವಿರ್ಭವಿಷ್ಯಥ ॥ ೨೨ ॥

ವೈವಸ್ವತಾಂತೇಷು ಸುರಾಸ್ತಥಾ ಸ್ವಾಯಂಭುವಾದಿಷು ।
ಏವಂ ಚ ಬ್ರಹ್ಮಣಾ ತತ್ರ ಶ್ಲೋಕೋ ಗೀತಃ ಪುರಾತನಃ ॥ ೨೩ ॥

ತ್ರಯೀ ವಿದ್ಯಾ ಬ್ರಹ್ಮಮಯಪ್ರಸೂತಿಃ
ಶ್ರಾದ್ಧಂ ತಪೋ ಯಜ್ಞಮನುಪ್ರದಾನಮ್ ।
ಏತಾನಿ ನಿತ್ಯೈಃ ಸಹಸಾ ರಜೋಭಿ—
ರ್ಭೂತ್ವಾ ವಿಭುರ್ವಸತೇಽನ್ಯತ್ ಪ್ರಶಸ್ತಮ್ ॥ ೨೪ ॥

---

೨೦. ತರುವಾಯ ಪ್ರಜಾಪತಿಯು ತನ್ನ ಕೋಪಪಾತ್ರರಾಗಿ ಶಿಕ್ಷಿತರಾಗಿರುವ ದೇವತೆಗಳನ್ನು ಕಂಡು ಮತ್ತೆ ಹೇಳಿದನು. ದೇವತೆಗಳೇ! ನೀವು ನನ್ನನ್ನು ವಂಚಿಸಿ ಕರ್ಮಸನ್ಯಾಸಮಾರ್ಗವನ್ನು ಅವಲಂಬಿಸಿರುವಿರಿ.

೨೧. ನನ್ನಿಂದಲೇ ನಿರ್ಮಿಸಲ್ಪಟ್ಟ ಆ ಮಾರ್ಗವು ಬಹು ಶ್ರಮ-ಪ್ರಯತ್ನಗಳಿಂದ ಸಾಧ್ಯವಾಗುವಂತೆ ಗಂಭೀರವಾಗಲಿ. ಮತ್ತು ಆ ಪಂಥವು ನಿಮಗೆ ದಿವ್ಯಭಾವದಿಂದ ಜನ್ಮವನ್ನು ಕೊಟ್ಟು ಸುಖಮಯವಾದ ಪರಿಣಾಮವನ್ನು ಕೊಡಲಿ.

೨೨. ದೇವಶ್ರೇಷ್ಠರೆ! ನಿಮಗೆ ನಿಮ್ಮ ಇಷ್ಟಾನುಸಾರವಾಗಿ ಜನ್ಮವು ದೊರೆಯುವುದು. ಮತ್ತು ಏಳು ಮನ್ವಂತರಗಳಲ್ಲಿ ಮಹತ್ತಾದ ಸಿದ್ಧಿಯನ್ನು ಹೊಂದಿದವರಾಗಿ ಆವಿರ್ಭಾವವನ್ನು ಹೊಂದುತ್ತೀರಿ.

೨೩. ದೇವತೆಗಳೇ! ನೀವು ಸ್ವಾಯಂಭುವ ಮನ್ವಂತರ ಮೊದಲುಗೊಂಡು ವೈವಸ್ವತವೆಂಬ ಮನ್ವಂತರದ ವರೆಗೆ ಏಳು ಮನ್ವಂತರಗಳಲ್ಲಿ ಆವಿರ್ಭಾವ ಹೊಂದುತ್ತೀರಿ ಎಂದು ಹೇಳಿ ಅವರ ತೃಪ್ತಿ ಸಾಧನವಾದ ಸತ್ಕರ್ಮ ಪರಂಪರೆಗಳ ವಿಷಯದಲ್ಲಿ ಪುರಾತನವಾದ ಒಂದು ಪದ್ಯವನ್ನು ಪಠಿಸಿದನು.

೨೪. ವೇದಾಧ್ಯಯನ, ತತ್ತ್ವಜ್ಞಾನ, ಬ್ರಾಹ್ಮಣ ವಂಶದಲ್ಲಿ ಜನ್ಮ, ಶ್ರಾದ್ಧ

5

ಏವಂ ಶ್ಲೋಕಾರ್ಥಮುಕ್ತ್ವಾ ತು ಜಯಾನ್ ದೇವಾನಥಾಬ್ರವೀತ್ ।
ವೈವಸ್ವತೇಽಂತರೇಽತೀತೇ ಮತ್ಸಮೀಪಮಿಹೈಷ್ಯಥ ॥ ೨೫ ॥

ತತೋ ದೇವಸ್ತಿರೋಭೂತ ಈಶ್ವರೋ ಹ್ಯಕುತೋಭಯಃ ।
ಪ್ರಶಸ್ತಾಂ ಧಾರಣಾಮಾದ್ಯಾಂ ಯುಕ್ತ್ವಾ ಯೋಗಬಲಾನ್ವಿತಾಮ್ ॥೨೬॥

ತತಸ್ತೇನ ರುಷಾ ಶಪ್ತಾಸ್ತೇಽಭವನ್ ದ್ವಾದಶಾಜಿತಾಃ ।
ಜಯಾ ಇತಿ ಸಮಾಖ್ಯಾತಾಃ ಕೃತಾ ಏವಂ ವಿಸನ್ನಿಭಾಃ ॥ ೨೭ ॥

ತತಃ ಸ್ವಾಯಂಭುವೇ ತಸ್ಮಿನ್ ಸರ್ಗೇಽತೀತೇ ತು ವೈ ಸುರಾಃ ।
ಪುನಸ್ತೇ ತುಷಿತಾ ದೇವಾ ಜಾತಾಃ ಸ್ವಾರೋಚಿಷೇಽಂತರೇ ॥ ೨೮ ॥

ಉತ್ತಮಸ್ಯ ಮನೋಃ ಪುತ್ರಾಃ ಸತ್ಯಾಯಾಂ ಜಜ್ಞಿರೇ ತದಾ ।
ತತಃ ಸತ್ಯಾಃ ಸ್ಮೃತಾ ದೇವಾ ಔತ್ತಮೇ ಚಾಂತರೇ ಮನೋಃ ॥ ೨೯ ॥

---

ಕರ್ಮ, ತಪಸ್ಸು ಯಜ್ಞದಲ್ಲಿ ದಕ್ಷಿಣಾದಾನ ಎಂಬ ರಜೋಗುಣಮಯವಾದ ಪ್ರಶಸ್ತ ನಿತ್ಯಕರ್ಮಗಳಲ್ಲಿ ಯಜ್ಞಾಭಿಮಾನಿಯಾದ ವಿಭುವು ವಾಸಮಾಡಿರುವನು.

೨೫. ಹೀಗೆ ಜಯದೇವರನ್ನು ಕುರಿತು ಶ್ಲೋಕಾರ್ಥವನ್ನು ನಿರೂಪಿಸಿ ವೈವಸ್ವತ ಮನ್ವಂತರವು ಕಳೆದ ತರುವಾಯ ಮತ್ತೆ ನೀವೆಲ್ಲರೂ ನನ್ನ ಸಮೀಪಕ್ಕೆ ಬರುತ್ತೀರಿ ಎಂಬುದಾಗಿ ಹೇಳಿದನು.

೨೬. ತರುವಾಯ ಭಯಕಾರಣ ವರ್ಜಿತನೂ ಈಶ್ವರನೂ ಆದ ಬ್ರಹ್ಮದೇವನು ಯೋಗಬಲದಿಂದ ಕೂಡಿದ, ಶ್ರೇಷ್ಠವಾದ ಧಾರಣಾ ಎಂಬ ಯೋಗಾಂಗವನ್ನು ಅವಲಂಬಿಸಿ ಹಾಗೆಯೇ ಅಂತರ್ಧಾನ ಹೊಂದಿದನು.

೨೭. ಅನಂತರದಲ್ಲಿ ಈಶ್ವರನಿಂದ ಶಪಿಸಲ್ಪಟ್ಟಿರುವ ಆ ಹನ್ನೆರಡು ಮಂದಿ ಅಜಿತದೇವತೆಗಳು ಜಯ ಎಂಬ ಪ್ರಖ್ಯಾತ ನಾಮಾಂತರವನ್ನು ಹೊಂದಿದ ವಿಭಿನ್ನಾವತಾರವುಳ್ಳವರಾದರು.

೨೮. ಹಾಗೆಯೇ ಆ ಸ್ವಾಯಂಭುವವೆಂಬ ಮನ್ವಂತರ ಸೃಷ್ಟಿಕಾಲವು ಪೂರ್ತಿಯಾಗಿ ಕಳೆಯಲಾಗಿ ಆ ದೇವತೆಗಳು ಮತ್ತೆ ಸ್ವಾರೋಚಿಷ ಮನ್ವಂತರದಲ್ಲಿ ತುಷಿತ ಎಂಬ ದೇವತಾರೂಪದಿಂದ ಅವತರಿಸಿದರು.

೨೯. ಆ ಮೇಲೆ ಉತ್ತಮ ಎಂಬ ಮನುವಿನ ಮನ್ವಂತರದಲ್ಲಿ ಉತ್ತಮ ಮನುವಿಗೆ ಸತ್ಯಾ ಎಂಬ ದೇವಿಯಲ್ಲಿ ಸತ್ಯದೇವರೆಂಬ ಪ್ರಖ್ಯಾತಿಯಿಂದ ಪುತ್ರರಾಗಿ ಜನಿಸಿದರೆಂದು ಸ್ಮರಿಸಿರುವರು.

ಹರಿಣ್ಯಾಂ ನಾಮ ತುಷಿತಾ ಜಜ್ಞಿರೇ ದ್ವಾದಶೈವ ತು ।
ಹರಯೋ ನಾಮ ತೇ ದೇವಾ ಯಜ್ಞಭಾಜಸ್ತದಾಭವನ್ ॥ ೩೦ ॥

ತತಸ್ತೇ ಹರಯೋ ದೇವಾಃ ಪ್ರಾಪ್ತೇ ಚಾರಿಷ್ಟವನಾಂತರೇ ।
ವಿಕುಂಠಾಯಾಂ ಪುನಸ್ತೇ ವೈ ವರಿಷ್ಠಾ ಜಜ್ಞಿರೇ ಸುರಾಃ ॥ ೩೧ ॥

ವೈಕುಂಠಾ ನಾಮ ತೇ ದೇವಾಃ ಪಂಚಮಸ್ಯಾಂತರೇ ಮನೋಃ ।
ತತಸ್ತೇ ವೈಕ್ತಿಪುನರ್ದೇವಾ ವೈಕುಂಠಾಃ ಪ್ರಾಪ್ಯ ಚಾಕ್ಷುಷಮ್ !! ೩೨ ॥

ತತಸ್ತೇ ವೈ ಪುನಃ ಸಾಧ್ಯಾಃ ಸಂಕ್ಷೀಣೇ ಚಾಕ್ಷುಷೇಽಂತರೇ ।
ಉಪಸ್ಥಿತೇ ಪುನಃ ಸರ್ಗೇ ಮನೋರ್ವೈವಸ್ವತಸ್ಯ ಹ ॥ ೩೩ ॥

ಅಂಶೇನ ಸಾಧ್ಯಾಸ್ತೇಽದಿತ್ಯಾಂ ಮಾರೀಚಾತ್ ಕಶ್ಯಪಾತ್ ಪುನಃ ।
ಜಜ್ಞಿರೇ ದ್ವಾದಶಾದಿತ್ಯಾ ವರ್ತಮಾನೇಽಂತರೇ ಸುರಾಃ ॥ ೩೪ ॥

---

೩೦. ಆ ಮೇಲೆ ಹರಿಣೀ ಎಂಬ ದೇವಿಯಲ್ಲಿ ಹನ್ನೆರಡು ಮಂದಿ ತುಷಿತ ದೇವತೆಗಳು ಹರಿ ಎಂಬುದಾಗಿ ನಾಮಾಂಕಿತರಾಗಿ ಮತ್ತೆ ಜನ್ಮವೆತ್ತಿದರು. ಆಗ ಅವರು ಯಜ್ಞಭಾಗವುಳ್ಳವರಾದರು.

೩೧. ಅನಂತರದಲ್ಲಿ ಬಂದ ಆರಿಷ್ಟವ ಎಂಬ ಮನ್ವಂತರದಲ್ಲಿ ಆ ಹರಿದೇವ ಗಣವು ವಿಕುಂಠಾ ದೇವಿಯಲ್ಲಿ ಮತ್ತೆ ವರಿಷ್ಠರಾದ ದೇವತಾರೂಪದಿಂದ ಜನಿಸಿದರು.

೩೨. ಐದನೆಯ ಮನ್ವಂತರದಲ್ಲಿ ಆ ದೇವತೆಗಳು ವೈಕುಂಠದೇವ ಎಂಬ ನಾಮ ಪ್ರಸಿದ್ಧಿಯನ್ನು ಹೊಂದಿದರು. ಆ ವೈಕುಂಠ ದೇವತೆಗಳು ಅದರ ಮುಂದಿನ ಚಾಕ್ಷುಷ ಮನ್ವಂತರವನ್ನು ಹೊಂದಿದರು.

೩೩. ಅನಂತರದಲ್ಲಿ ಚಾಕ್ಷುಷ ಮನ್ವಂತರವು ಕಳೆದುಹೋಗಿ ಮುಂದಿನ ವೈವಸ್ವತವೆಂಬ ಏಳನೆಯ ಮನ್ವಂತರವು ಪ್ರಾಪ್ತವಾಗಲು ಮತ್ತೆ ಆ ದೇವತೆಗಳು ಸಾಧ್ಯದೇವತಾ ರೂಪವಾದ ಅವತಾರಮಾಡಿದರು.

೩೪. ಆ ಸಾಧ್ಯದೇವತೆಗಳು ತಮ್ಮ ಅಂಶದಿಂದ ಮಾರೀಚಕಶ್ಯಪ ಮುನಿಯಿಂದ ಅದಿತಿ ದೇವಿಯಲ್ಲಿ ಮತ್ತೆ ಹನ್ನೆರಡು ಮಂದಿ ಆದಿತ್ಯ ಎಂಬ ದೇವಗಣ ರೂಪದಿಂದ ಜನಿಸಿದರು.

**ಯದಾ ಚೈತೇ ಸಮುತ್ಪನ್ನಾಶ್ಚಾಕ್ಷುಷಸ್ಯಾಂತರೇ ಮನೋಃ ।**
**ಶಪ್ತಾಃ ಸ್ವಯಂಭುವಾ ಸಾಧ್ಯಾ ಜಜ್ಞಿರೇ ದ್ವಾದಶಾಮರಾಃ ॥ ೩೫ ॥**

**ಏವಂ ಶೃಣೋತಿ ಯೋ ಮರ್ತ್ಯೋ ಜಯಸ್ತಸ್ಯ ಭವೇತ್ ಸದಾ ।**
**ಜಯಾನಾಂ ಶ್ರದ್ಧಯಾ ಯುಕ್ತಃ ಪ್ರತ್ಯಧ್ಯಾಯಂ ತು ಗಚ್ಛತಿ ॥ ೩೬ ॥**

**ಇತ್ಯೇತಾ ವೃತ್ತಯಃ ಸಪ್ತ ದೇವಾನಾಂ ಜನ್ಮಲಕ್ಷಣಾಃ ।**
**ಪರಿಕ್ರಾಂತಾ ಮಯಾ ವೋಽದ್ಯ ಕಿಂ ಭೂಯಃ ಶ್ರೋತುಮಿಚ್ಛಥ ॥ ೩೭ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಭಾಗೇ ಚತುರ್ಥೋಽಧ್ಯಾಯಃ**

---

೩೫. ಚಾಕ್ಷುಷಮನುವಿನ ಮನ್ವಂತರದಲ್ಲಿ ಈ ಸಾಧ್ಯದೇವತೆಗಳು ಸ್ವಯಂಭು ರೂಪನಾದ ಈಶ್ವರನಿಂದ ಶಪಿಸಲ್ಪಟ್ಟಿರುವ ಕಾರಣದಿಂದ ದ್ವಾದಶ ಅಮರರೂಪದಿಂದ ಮತ್ತೆ ಮತ್ತೆ ಜನಿಸಿದರು.

೩೬. ಹೀಗೆ ಜಯದೇವತೆಗಳ ಪುನರ್ಜನ್ಮ ಚರಿತ್ರೆಯ ಪ್ರತಿಯೊಂದು ಅಧ್ಯಾಯವನ್ನು ಶ್ರದ್ಧೆಯಿಂದ ಕೂಡಿ ಶ್ರವಣಮಾಡಿರುವ ಮಾನವನು ಸರ್ವದೇಶ ಕಾಲಗಳಲ್ಲಿ ತನ್ನ ಕರ್ತವ್ಯದಲ್ಲಿ ಜಯವನ್ನು ಹೊಂದುತ್ತಾನೆ.

೩೭. ಈ ರೀತಿಯಾಗಿ ಜಯ ದೇವತೆಗಳಿಗೆ ಉಂಟಾದ ಪುನರ್ಜನ್ಮರೂಪವಾದ ವ್ಯಾಪಾರಗಳನ್ನು ನಾನು ನಿಮಗೆ ಉಪದೇಶಿಸಿರುವೆನು. ಈಗ ಮತ್ತಾವ ವಿಷಯಗಳನ್ನು ಶ್ರವಣಮಾಡುವ ಕುತೂಹಲವನ್ನು ಹೊಂದಿರುತ್ತೀರಿ?

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧವಲ್ಲಿ ನಾಲ್ಕನೆಯ ಅಧ್ಯಾಯ ಮುಗಿದುದು.

# ಪಂಚಮೋಽಧ್ಯಾಯಃ

**ಋಷಿರುವಾಚ :**

ದೈತ್ಯಾನಾಂ ದಾನವಾನಾಂ ಚ ಗಂಧರ್ವೋರಗರಕ್ಷಸಾಮ್ ।
ಸರ್ಪಭೂತಪಿಶಾಚಾನಾಂ ವಸೂನಾಂ ಪಕ್ಷಿವೀರುಧಾಮ್ ॥ ೧ ॥

ಉತ್ಪತ್ತಿಂ ನಿಧನಂ ಚೈವ ವಿಸ್ತರಾತ್ ಕಥಯಸ್ವ ನಃ ।
ಏವಮುಕ್ತಸ್ತದಾ ಸೂತಃ ಪ್ರತ್ಯುವಾಚರ್ಷಿಸತ್ತಮಮ್ ॥ ೨ ॥

**ಸೂತ ಉವಾಚ :—**

ದಿತೇಃ ಪುತ್ರದ್ವಯಂ ಜಜ್ಞೇ ಕನ್ಯಾ ಚೈಕಾ ಮಹಾಬಲಾ ।
ಕಶ್ಯಪಸ್ಯಾತ್ಮಜೌ ತೌ ತು ಸರ್ವೇಭ್ಯಃ ಪೂರ್ವಜೌ ಸ್ಮೃತೌ ॥ ೩ ॥

ಸೌತ್ಯೇಽಹನ್ಯತಿರಾತ್ರಸ್ಯ ಕಶ್ಯಪಸ್ಯಾಶ್ವಮೇಧಿಕಾಃ ।
ಹಿರಣ್ಯಕಶಿಪುರ್ನಾಮ ಪ್ರಥಿತಂ ಪೃಥಗಾಸನಮ್ ॥ ೪ ॥

---

೧. ಮುಂದೆ ಋಷಿಯು ಈ ರೀತಿಯಾಗಿ ಪ್ರಶ್ನಮಾಡಿದನು :—ಮುನಿಯೆ ! ಮುಂದೆ ದೈತ್ಯ, ದಾನವ, ಗಂಧರ್ವ, ಸರ್ಪ, ರಾಕ್ಷಸ, ಭೂತ, ಪಿಶಾಚ, ವಸು, ಪಕ್ಷಿ, ಲತಾ—ಮುಂತಾದ ಪ್ರಾಣಿಗಳ ವಿಷಯವನ್ನು ಕೇಳಲು ಇಚ್ಛಿಸುತ್ತೇವೆ.

೨. ಆದುದರಿಂದ ದೈತ್ಯ-ದಾನವ ಮುಂತಾದವರ ಉತ್ಪತ್ತಿ-ಮರಣ ಮುಂತಾದ ವಿಷಯಗಳನ್ನು ವಿಸ್ತಾರವಾಗಿ ಉಪದೇಶಿಸು, ಎಂಬುದಾಗಿ ಪ್ರಶ್ನಮಾಡಲ್ಪಟ್ಟ ಸೂತ ಮುನಿಯು ಋಷಿಶ್ರೇಷ್ಠನನ್ನು ಕುರಿತು ಪ್ರತ್ಯುತ್ತರ ಕೊಟ್ಟನು.

೩. ಸೂತಮುನಿಯು ಇಂತೆಂದನು :—ಕಶ್ಯಪ ಪ್ರಜಾಪತಿಗೆ ದಿತಿದೇವಿಯಲ್ಲಿ ಇಬ್ಬರು ಪುತ್ರರೂ ಮಹಾ ಬಲಶಾಲಿಯಾದ ಒಬ್ಬಳು ಕನ್ಯೆಯೂ ಜನಿಸಿದರು. ಕಶ್ಯಪ ಮುನಿಯ ಸಂತತಿಯಲ್ಲಿ ಆ ಪುತ್ರರು ಎಲ್ಲರಿಗೂ ಹಿರಿಯರಾದರು.

೪. ಹೀಗಿರಲು ಕಶ್ಯಪಮುನಿಯು ಆಚರಿಸಿದ ಅತಿರಾತ್ರವೆಂಬ ಯಾಗದ ಪ್ರಧಾನ ಕರ್ಮದಿನದಲ್ಲಿ ಅಶ್ವಮೇಧೋಪಯೋಗಿಯಾದ ಹಿರಣ್ಯಕಶಿಪುವೆಂದು ಪ್ರಸಿದ್ಧವಾದ ಒಂದು ಪ್ರತ್ಯೇಕಾಸನವು ಕಲ್ಪಿತವಾಗಿತ್ತು.

ದಿತ್ಯಾ ಗರ್ಭಾದ್ವಿನಿಃಸೃತ್ಯ ತತ್ರಾಸೀನಃ ಸಮಂತತಃ ।
ಹಿರಣ್ಯಕಶಿಪುಸ್ತಸ್ಮಾತ್ ಕರ್ಮಣಾ ತೇನ ಸ ಸ್ಮೃತಃ ॥ ೫ ॥

ಋಷಯ ಊಚುಃ :

ಹಿರಣ್ಯಕಶಿಪೋರ್ಜನ್ಮ ನಾಮ ಚೈವ ಮಹಾತ್ಮನಃ ।
ಪ್ರಭಾವಂ ಚೈವ ದೈತ್ಯಸ್ಯ ವಿಸ್ತಾರಾದ್ಬ್ರೂಹಿ ನಃ ಪ್ರಭೋ ॥ ೬ ॥

ಸೂತ ಉವಾಚ :

ಕಶ್ಯಪಸ್ಯಾಶ್ವಮೇಧೋಽಭೂತ್ ಪುಣ್ಯೇ ವೈ ಪುಷ್ಕರೇ ತದಾ ।
ಋಷಿಭಿರ್ದೇವತಾಭಿಶ್ಚ ಗಂಧರ್ವೈರುಪಶೋಭಿತಃ ॥ ೭ ॥

ಉತ್ಸೃಷ್ಟೇ ಸ್ವೇ ಚ ವಿಧಿನಾ ಆಖ್ಯಾನಾದೌ ಯಥಾವಿಧಿ ।
ಆಸನಾನ್ಯುಪಕ್ಲೃಪ್ತಾನಿ ಸೌವರ್ಣಾನಿ ತು ಪಂಚ ವೈ ॥ ೮ ॥

ಕುಲಸ್ವದಾಪಿ ತ್ರೀಣ್ಯತ್ರ ಕೂರ್ಚಃ ಫಲಕಮೇವ ಚ ।
ಮುಖ್ಯರ್ತ್ವಿಜಸ್ತು ಚತ್ವಾರಸ್ತೇಷಾಂ ತಾನ್ಯುಪಕಲ್ಪಯನ್ ॥ ೯ ॥

---

೫. ಆಗ ದಿತಿದೇವಿಯ ಗರ್ಭದಿಂದ ಒಂದು ಶಿಶುವು ಹೊರಟು ಸುತ್ತಲೂ ಇರತಕ್ಕ ಆಸನಗಳಲ್ಲಿ ಆ ಪವಿತ್ರಾಸನದಲ್ಲಿ ಕುಳಿತುಕೊಂಡಿತು. ಆ ಕರ್ಮದಿಂದ ಆತನಿಗೆ ಮುಂದೆ ಹಿರಣ್ಯಕಶಿಪು ಎಂಬ ಹೆಸರು ಪ್ರಸಿದ್ಧವಾಗಿ ಬಂದಿತು.

೬. ಇದನ್ನು ಕೇಳಿದ ಮುನಿಗಳು ಪ್ರಶ್ನಿಸಿದರು. ಪ್ರಭುವೆ! ಮಹಾತ್ಮನಾದ ಹಿರಣ್ಯಕಶಿಪು ದೈತ್ಯನ ಜನ್ಮ, ನಾಮ, ಮತ್ತು ಪ್ರಭಾವಗಳನ್ನು ನಮಗೆ ವಿಸ್ತಾರವಾಗಿ ಉಪದೇಶಮಾಡು.

೭. ಆಗ ಸೂತಮುನಿಯು ಈ ರೀತಿಯಾಗಿ ಹೇಳಿದನು :—ಪೂರ್ವದಲ್ಲಿ ಪುಷ್ಕರವೆಂಬ ಪುಣ್ಯಕ್ಷೇತ್ರದಲ್ಲಿ ಕಶ್ಯಪಮುನಿಯು ಋಷಿ, ದೇವ ಮತ್ತು ಗಂಧರ್ವರಿಂದ ಕೂಡಿ ಅಶ್ವಮೇಧವೆಂಬ ಮಹಾಯಾಗವನ್ನು ಆಚರಿಸಿದನು.

೮. ಆ ಯಾಗದಲ್ಲಿ ಯಥಾವಿಧಿಯಾಗಿ ಆಖ್ಯಾನಶ್ರವಣಾದಿ ಪ್ರಯೋಗವು ನಡೆಯುವುದಕ್ಕೋಸ್ಕರ ಸುವರ್ಣಮಯವಾದ ಐದು ಪೀಠಗಳು ಶ್ರವಣಕ್ಕೆ ಕುಳಿತುಕೊಳ್ಳಲು ರಚಿಸಲ್ಪಟ್ಟಿದ್ದುವು.

೯. ಯಥಾವಿಧಿಯಾಗಿ ಪ್ರಯೋಗವು ನಡೆಯುವುದರಿಂದ ಆಸನಗಳಲ್ಲಿ ಹಲಿಗೆ ದರ್ಭಾಸನ, ಕಂಬಲಾಸನ ಹೀಗೆ ಎಲ್ಲವೂ ಸೇರಿದ್ದುವು. ಇವುಗಳಲ್ಲಿ ಮುಖ್ಯರಾಗಿರುವ ನಾಲ್ಕು ಮಂದಿ ಋತ್ವಿಜರಿಗೆ ನಾಲ್ಕು ಆಸನಗಳು ವಿನಿಯೋಗವಾದುವು.

ಕ್ಲೃಪ್ತಂ ತತ್ರಾಸನಂ ಚೈಕಂ ಹೋತುರರ್ಥೇ ಹಿರಣ್ಮಯಮ್ ।
ನಿಷಸಾದ ಸ ಗರ್ಭೋಽತ್ರ ತತ್ರಾಸೀನಃ ಶಶಂಸ ಚ ॥ ೧೦ ॥

ಆಖ್ಯಾನಮಾನುಪೂರ್ವ್ಯೇಣ ಮಹರ್ಷಿಃ ಕಶ್ಯಪೋ ಯಥಾ ।
ತಂ ದೃಷ್ಟ್ವಾ ಋಷಯಸ್ತಸ್ಯ ನಾಮ ಕುರ್ವಂತಿ ವರ್ಧಿತಮ್ ॥ ೧೧ ॥

ಹಿರಣ್ಯಕಶಿಪುಸ್ತಸ್ಮಾತ್ ಕರ್ಮಣಾ ತೇನ ಸ ಸ್ಮೃತಃ ।
ಹಿರಣ್ಯಾಕ್ಷೋಽನುಜಸ್ತಸ್ಯ ಸಿಂಹಿಕಾ ತಸ್ಯ ಚಾನುಜಾ ॥ ೧೨ ॥

ರಾಹೋಃ ಸಾ ಜನನೀ ದೇವೀ ವಿಪ್ರಚಿತ್ತೇಃ ಪರಿಗ್ರಹಃ ।
ಹಿರಣ್ಯಕಶಿಪುರ್ದೈತ್ಯಶ್ಚಚಾರ ಪರಮಂ ತಪಃ ॥ ೧೩ ॥

ಶತಂ ವರ್ಷಸಹಸ್ರಾಣಾಂ ನಿರಾಹಾರೋ ಹ್ಯಧಃಶಿರಾಃ ।
ವರಯಾಮಾಸ ಬ್ರಹ್ಮಾಣಂ ತುಷ್ಟಂ ದೈತ್ಯೋ ವರೇಣ ತು ॥ ೧೪ ॥

---

೧೦. ಒಂದು ಸುವರ್ಣಮಯವಾದ ಪೀಠವು ಹೋತೃಋತ್ವಿಜನಿಗೋಸ್ಕರವಾಗಿ ಕಲ್ಪಿತವಾಗಿದ್ದಿತು. ಆದರೆ ದಿತಿಯು ಉದರದಿಂದ ಬಂದ ಗರ್ಭವು ಅಲ್ಲಿ ಕುಳಿತು ಆಖ್ಯಾನಾದಿಗಳನ್ನು ಕೀರ್ತನಮಾಡಿತು.

೧೧. ಅಲ್ಲಿ ಕುಳಿತುಕೊಂಡ ಗರ್ಭವು ಕಶ್ಯಪ ಮಹರ್ಷಿಯು ಪುರಾಣಾದಿ ಆಖ್ಯಾನಗಳನ್ನು ಪಠಿಸುವಂತೆ ಕೀರ್ತಿಸಿತು. ಆಗ ಋಷಿಗಳು ಈ ಶಿಶುವಿಗೆ ವೃದ್ಧಿಕರವಾದ ನಾಮಕರಣವನ್ನು ಮಾಡಿದರು.

೧೨. ಆ ಆಸನದಲ್ಲಿ ಆಖ್ಯಾನಗಳನ್ನು ಶಂಸನಮಾಡಿದ ಮಹತ್ತರವಾದ ಕರ್ಮದಿಂದ ಮುನಿಗಳು ನಾಮಕರಣಮಾಡಿ ಆ ಶಿಶುವು ಹಿರಣ್ಯಕಶಿಪು ಎಂಬುದಾಗಿ ಸ್ಮರಿಸಲ್ಪಟ್ಟನು. ಆ ಹಿರಣ್ಯಕಶಿಪುವಿಗೆ ಹಿರಣ್ಯಾಕ್ಷನೆಂಬ ಅನುಜನೂ ಸಿಂಹಿಕಾ ಎಂಬ ಭಗಿನಿಯೂ ಇದ್ದರು.

೧೩. ಆ ಸಿಂಹಿಕಾ ಎಂಬುವಳು ವಿಪ್ರಚಿತ್ತಿ ಎಂಬ ಅಸುರನಿಗೆ ಭಾರ್ಯೆಯಾಗಿ ರಾಹು ಎಂಬುವನ ಜನನಿಯಾಗಿದ್ದಳು. ಹಿರಣ್ಯಕಶಿಪು ಎಂಬ ದೈತ್ಯನು ನಿರುಪಮವಾದ ತಪಸ್ಸನ್ನು ಆಚರಿಸಿದನು.

೧೪. ಅವನು ನಿರಾಹಾರನಾಗಿ ಶಿರವನ್ನು ಭೂಮಿಯಲ್ಲಿಟ್ಟು ಪಾದಗಳನ್ನು ಮೇಲಕ್ಕೆ ಎತ್ತಿ ಕಷ್ಟವಾದ ಸ್ಥಿತಿಯನ್ನು ಅವಲಂಬಿಸಿ ಒಂದು ಲಕ್ಷ ಸಂವತ್ಸರ ಕಾಲದ

ಸರ್ವಾಮರತ್ವಮವಧಂ ಸರ್ವಭೂತೇಭ್ಯ ಏವ ಹಿ ।
ಯೋಗಾದ್ದೇವಾನ್ ವಿನಿರ್ಜಿತ್ಯ ಸರ್ವದೇವತ್ವಮಾಸ್ಥಿತಃ ॥ ೧೫ ॥

ಕಾರಯೇಽಹಮಿಹೈಶ್ವರ್ಯಂ ಬಲವೀರ್ಯಸಮನ್ವಿತಃ ।
ದಾನವಾಸ್ತ್ವಸುರಾಶ್ಚೈವ ದೇವಾಶ್ಚ ಸಹ ಚಾರಣೈಃ ॥ ೧೬ ॥

ಭವಂತು ವಶಗಾಃ ಸರ್ವೇ ಮತ್ಸಮೀಪಾನುಭೋಜನಾಃ ।
ಆರ್ದ್ರಶುಷ್ಕೈರವಧ್ಯಶ್ಚ ದಿವಾ ರಾತ್ರೌ ತಥೈವ ಚ
ಏವಮುಕ್ತಸ್ತದಾ ಬ್ರಹ್ಮಾಸುಜಜ್ಞೇ ಸಾಂತರಂ ವರಮ್ ॥ ೧೭ ॥

ಬ್ರಹ್ಮೋವಾಚ :—
ಮಹಾನಯಂ ವರಸ್ತಾತ ವೃತೋ ದಿತಿಸುತ ತ್ವಯಾ ।
ಏಹೀದಾನೀಂ ಪ್ರತಿಜ್ಞಾನಂ ಭವಿಷ್ಯತ್ಯೇವಮೇವ ತು ॥ ೧೮ ॥

---

ವರೆಗೆ ತಪಸ್ಸನ್ನು ಮಾಡಿದನು. ಆಗ ಸಂತುಷ್ಟನಾಗಿ ಬಂದ ಬ್ರಹ್ಮನನ್ನು ಕುರಿತು ದೈತ್ಯನು ವರವನ್ನು ಬೇಡಿದನು.

೧೫. ಸರ್ವದೇವತಾಧಿಕಾರ, ನಿಖಿಲಭೂತಗಳಿಂದ ತನಗೆ ಅವಧ್ಯತ್ವಗಳೆಂಬ ವರಗಳನ್ನು ಕೇಳಿದನು. ಮತ್ತು ಈ ತಪೋಮಹಿಮೆಯಿಂದ ದೇವತೆಗಳನ್ನು ಗೆದ್ದು ಸರ್ವದೇವಾಧಿಕಾರವನ್ನು ಹೊಂದುವೆನು.

೧೬. ಬಲ-ವೀರ್ಯಗಳಿಂದ ತುಂಬಿದ ನಾನು ಸರ್ವವಿಧವಾದ ಈಶ್ವರತ್ವವನ್ನು ನಿರ್ವಹಿಸುತ್ತೇನೆ. ಚಾರಣ-ದೇವ ಮುಂತಾದ ಸ್ಥಾನಗಳನ್ನು ದಾನವ-ಅಸುರರಿಂದ ಪೂರ್ತಿಮಾಡುತ್ತೇನೆ.

೧೭. ಮತ್ತು ಸಮಸ್ತಾಸುರರೂ ನನ್ನ ಅಧೀನರಾಗಿ ನನ್ನ ಸಮೀಪದಲ್ಲಿ ನನ್ನಿಂದ ಉಪಜೀವಿಕೆಯನ್ನು ಹೊಂದಿರಲಿ. ನಾನು ವರಪ್ರಭಾವದಿಂದ ಆರ್ದ್ರ-ಅಥವಾ ಶುಷ್ಕ ವಸ್ತುಗಳಿಂದಲೂ ಹಗಲು-ಅಥವಾ ರಾತ್ರಿ ಕಾಲಗಳಲ್ಲಿಯೂ ಅವಧ್ಯನಾಗಿರುವೆನು. ಹೀಗೆ ವರಗಳನ್ನು ಪ್ರಾರ್ಥಿಸಲ್ಪಟ್ಟಿರುವ ಬ್ರಹ್ಮನು ಸ್ವಲ್ಪ ರಂಧ್ರವಿರುವುದನ್ನು ಚಿಂತಿಸಿ ಎಲ್ಲ ವರಗಳನ್ನು ಪ್ರದಾನಮಾಡಿದನು.

೧೮. ಬ್ರಹ್ಮನು ಈ ರೀತಿಯಾಗಿ ಹೇಳಿದನು :—ದಿತಿಸುತನಾದ ವತ್ಸನೆ! ನೀನು ಮಹಾ ವರವನ್ನು ಆರ್ಜಿಸಿದೆ. ಈಗ ನಿನ್ನ ಕರ್ತವ್ಯಕ್ಕೆ ನೀನು ಹೋಗಿ ಸಿದ್ಧನಾಗು. ನೀನು ಕೇಳಿಕೊಂಡಿರುವುದೆಲ್ಲ ನಡೆಯುವುದು.

**ದತ್ವಾ ಚಾಭಿಮತಂ ತಸ್ಮೈ ತತ್ರೈವಾಂತರ್ಧಾದಥ ।**
**ಸೋಽಪಿ ದೈತ್ಯಸ್ತದಾ ಸರ್ವಂ ಜಗತ್ ಸ್ಥಾವರಜಂಗಮಮ್ ॥ ೧೯ ॥**

**ಮಹಿಮ್ನಾ ವ್ಯಾಪ್ಯ ಸಂತಸ್ಥೇ ಬಹುಮೂರ್ತಿರಮಿತ್ರಜಿತ್ ।**
**ಸ ಏವ ತಪತಿ ವ್ಯೋಽಮ್ನಿ ಚಂದ್ರಸೂರ್ಯತ್ವಮಾಸ್ಥಿತಃ ॥ ೨೦ ॥**

**ಸ ಏವ ವಾಯುರ್ಭೂತ್ವಾ ಚ ವವೌ ಜಗತಿ ಸರ್ವದಾ ।**
**ಸ ಗೋಪಾಲೋಽವಿಪಾಲಶ್ಚ ಕರ್ಷಕಶ್ಚ ಸ ಏವ ಹ ॥ ೨೧ ॥**

**ಸ ಜ್ಞಾತಾ ಸರ್ವಲೋಕೇಷು ಮಂತ್ರವ್ಯಾಖ್ಯಾಕರಸ್ತಥಾ ।**
**ನೇತಾ ಗೋಪ್ತಾ ಗೋಪಯಿತಾ ದೀಕ್ಷಿತೋ ಯಾಜಕಃ ಸ ತು॥ ೨೨ ॥**

**ತಸ್ಯ ದೇವಾಃ ಸುರಾಃ ಸರ್ವೇ ತದಾಸನ್ ಸೋಮಪಾಯಿನಃ ।**
**ಏವಂ ಪ್ರಭಾವೋ ದೈತ್ಯೋಽಸಾವತೋ ಭೂಯೋ ನಿಬೋಧತ ॥ ೨೩ ॥**

---

೧೯. ಹೀಗೆ ಬ್ರಹ್ಮನು ಹಿರಣ್ಯಕಶಿಪುವಿಗೆ ಇಷ್ಟವಾದ ವರಗಳನ್ನು ಕೊಟ್ಟು ಅಲ್ಲಿ ಅಂತರ್ಧಾನ ಹೊಂದಿದನು. ವರಮಹಿಮೆಯಿಂದ ಶೋಭಿಸುವ ಆ ದೈತ್ಯನು ಚರ-ಅಚರ ಪ್ರಪಂಚವನ್ನು ಸ್ವಾಧೀನಮಾಡಿಕೊಂಡನು.

೨೦. ಮತ್ತು ತಾನು ಅನೇಕ ಆಕಾರಗಳನ್ನು ಧರಿಸಿ ಶತ್ರುಗಳನ್ನು ಸಂಪೂರ್ಣವಾಗಿ ಗೆದ್ದು ಪ್ರಭಾವದಿಂದ ಪ್ರಪಂಚವನ್ನು ವ್ಯಾಪಿಸಿದನು. ಅವನು ಚಂದ್ರ-ಸೂರ್ಯರ ಅಧಿಕಾರವನ್ನು ಹೊಂದಿ ಗಗನದಲ್ಲಿ ತಪಿಸುತ್ತಿರುವನು.

೨೧. ಅವನೇ ವಾಯು ಅಧಿಕಾರಕ್ಕೆ ಬಂದು ಸಂತತವಾಗಿ ಜಗತ್ತಿನಲ್ಲಿ ಬೀಸುತ್ತಿರುವನು. ಗೋವು, ಕುರಿ, ಕರ್ಷಕ ಮುಂತಾದ ಪ್ರಾಣಿಗಳ ಅಭಿಮಾನ ದೇವತೆಯೂ ಅವನೇ ಆದನು.

೨೨. ಅವನು ಸಕಲ ಲೋಕಗಳಲ್ಲಿ ವಿಶೇಷ ಜ್ಞಾನಿಯೆನಿಸಿಕೊಂಡವನೂ ಮಂತ್ರಗಳ ವ್ಯಾಖ್ಯಾನದಲ್ಲಿ ಪಟುವಾದವನ್ನೂ, ಸಕಲನಾಯಕನೂ. ರಕ್ಷಕನೂ, ರಹಸ್ಯ ರಕ್ಷಕನೂ, ದೀಕ್ಷಿತ ಮತ್ತು ಯಾಜಕನೂ ಆಗಿದ್ದನು.

೨೩. ಆಗ ದೇವತೆಗಳು ಅವನ ವಶವರ್ತಿಗಳಾಗಿ ಸೋಮ ಪಾನಮಾಡುವವರಾಗಿದ್ದರು. ಆ ದೈತ್ಯನು ಈ ವಿಧದಿಂದ ಮಹಾ ಪ್ರಭಾವವಂತನಾಗಿರುವನು. ಆದುದರಿಂದ ಇನ್ನೂ ಮುಂದೆ ಅವನ ಚರಿತ್ರೆಯನ್ನು ಕೇಳಿರಿ.

ತಸ್ಮೈ ಸರ್ವೇ ನಮಸ್ಕಾರಂ ಕುರ್ವಂತೀಜ್ಯಃ ಸ ಏವ ಚ ।
ಹಿರಣ್ಯಕಶಿಪೋರ್ದೈತ್ಯೈಃ ಶ್ಲೋಕೋ ಗೀತಃ ಪುರಾ ತ್ವಿಹ ॥ ೨೪

ಹಿರಣ್ಯಕಶಿಪೂ ರಾಜಾ ಯಾಂ ಯಾಮಾಶಾಂ ನಿರೈಕ್ಷತ ।
ತಸ್ಯೈ ತಸ್ಯೈ ತದಾ ದೇವಾ ನಮಶ್ಚಕ್ರುರ್ಮಹರ್ಷಿಭಿಃ ॥ ೨೫ ॥

ತಸ್ಯಾಸೀನ್ನರಸಿಹ್ಮಸ್ತು ಮೃತ್ಯುರ್ವಿಷ್ಣುಃ ಪುರಾ ಕಿಲ ।
ನರಾತ್ತು ಯಸ್ಮಾಜ್ಜನ್ಮಾಸ್ಯ ನರಮೂರ್ತಿಶ್ಚ ಯತ್ಪ್ರಭುಃ ॥ ೨೬ ॥

ತಸ್ಮಾತ್ಸ ನರಸಿಹ್ಮೋ ವೈ ಗೀಯತೇ ವೇದವಾದಿಭಿಃ ।
ಸಾಗರಸ್ಯ ಚ ವೇಲಾಯಾಮುಚ್ಛ್ರಿತಸ್ತಪಸೋ ವಿಭುಃ ॥ ೨೭ ॥

ಶರೀರಂ ತಸ್ಯ ದೇವಸ್ಯ ಹ್ಯಾಸೀದ್ದೇವಮಯಂ ಪ್ರಭೋ ।
ನಾಮ್ನಾ ಸುದರ್ಶನಂ ಚೈವ ವಿಶ್ರುತಶ್ಚ ಮಹಾಬಲಃ ॥ ೨೮ ॥

---

೨೪. ಅವನಿಗೆ ಸರ್ವರೂ ನಮಸ್ಕಾರಮಾಡುತ್ತಲಿದ್ದರು. ಯಾಗಾದಿ ಕರ್ಮಗಳಿಂದ ಸತ್ಕಾರಾರ್ಹನು ಅವನಾಗಿದ್ದನು. ಹೀಗಿರಲು ದೈತ್ಯರು ಅವನ ಪ್ರತಾಪ ಪ್ರಶಂಸಾಪರವಾದ ಶ್ಲೋಕವನ್ನು ಗಾನಮಾಡುತ್ತಿದ್ದರು.

೨೫. ಹಿರಣ್ಯಕಶಿಪು ರಾಜನು ಯಾವ ಯಾವ ದಿಕ್ಕನ್ನು ಸ್ವೇಚ್ಛೆಯಿಂದ ನೋಡುವನೋ, ಆಯಾಯ ದಿಕ್ಕನ್ನು ದೇವತೆಗಳು ಮತ್ತು ಮುನಿಗಳು ನಮಸ್ಕಾರ ಮಾಡುವರು–ಎಂಬ ಅರ್ಥದಿಂದ ಆ ಶ್ಲೋಕವು ಗರ್ಭಿತವಾಗಿದೆ.

೨೬. ಪೂರ್ವದಲ್ಲಿ ಆ ಹಿರಣ್ಯಕಶಿಪು ದೈತ್ಯನಿಗೆ ನರಸಿಹ್ಮಮೂರ್ತಿಯು ಮೃತ್ಯುವಾಗಿ ಆವಿರ್ಭಾವ ಹೊಂದಿದನು. ಪ್ರಹ್ಲಾದನೆಂಬುವನ ರಕ್ಷಣ ನಿಮಿತ್ತದಿಂದ ನರನ ಆಕಾರವನ್ನು ಪ್ರಭುವಾದ ವಿಷ್ಣುವು ಪರಿಗ್ರಹಿಸಿದನು.

೨೭. ಆದ್ದರಿಂದ ವೇದವಾದಿಗಳು ಆ ಮೂರ್ತಿಯನ್ನು ನರಸಿಹ್ಮಮೂರ್ತಿಯೆಂದು ಕರೆಯುವರು. ಆ ಸರ್ವೇಶಮೂರ್ತಿಯು ಸಮುದ್ರದ ತೀರದಲ್ಲಿ ತಪಃಶಕ್ತಿಯಿಂದ ಊರ್ಜಿತನಾಗಿ ಸಂಚರಿಸಿದನು.

೨೮. ಆ ಪ್ರಭುವಾದ ನರಸಿಹ್ಮದೇವನ ಶರೀರವು ಸರ್ವದೇವತಾಮಯವಾಗಿ ಇತ್ತು. ಸುದರ್ಶನವೆಂಬ ಹೆಸರಿನಿಂದ ಕೂಡಿದ ಸಾಧನ ಶಕ್ತಿಯಿಂದ ಮಹಾಬಲಿಷ್ಠನೆಂದು ಪ್ರಸಿದ್ಧನಾಗಿದ್ದನು.

ತತಃ ಸ ಬಾಹುಯುದ್ಧೇನ ದೈತ್ಯೇಂದ್ರಂ ತಂ ಮಹಾಬಲಮ್ ।
ನಖೈರ್ಬಿಭೇದ ಸಂಕ್ರುದ್ಧೋ ನಾದ್ರಾಃ ಶುಷ್ಕಾ ನಖಾ ಇತಿ ॥ ೨೯ ॥

ಹಿರಣ್ಯಾಕ್ಷಸುತಾಃ ಪಂಚ ವಿಕ್ರಾಂತಾಃ ಸುಮಹಾಬಲಾಃ ।
ಶಂಬರಃ ಶಕುನಿಶ್ಚೈವ ಕಾಲನಾಭಸ್ತಥೈವ ಚ ॥ ೩೦ ॥

ಮಹಾನಾಭಃ ಸುವಿಕ್ರಾಂತೋ ಭೂತಸಂತಾಪನಸ್ತಥಾ ।
ಹಿರಣ್ಯಾಕ್ಷಸುತಾ ಹ್ಯೇತೇ ದೇವೈರಪಿ ದುರಾಸದಾಃ ॥ ೩೧ ॥

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ದೈತೇಯಾಃ ಸಗಣಾಃ ಸ್ಮೃತಾಃ ।
ಸ ಶತಾನಿ ಸಹಸ್ರಾಣಿ ನಿಹತಾಸ್ತಾರಕಾಮಯೇ ॥ ೩೨ ॥

ಹಿರಣ್ಯಕಶಿಪೋಃ ಪುತ್ರಾಶ್ಚತ್ವಾರಃ ಸುಮಹಾಬಲಾಃ ।
ಪ್ರಹ್ಲಾದಃ ಪೂರ್ವಜಸ್ತೇಷಾಮನುಹ್ರಾದಸ್ತಥಾಪರಃ ॥ ೩೩ ॥

---

೨೯. ಅನಂತರ ಆ ನರಸಿಹ್ಮನು ಕುಪಿತನಾಗಿ ಮಹಾಬಲಿಷ್ಠನಾದ ಆ ದೈತ್ಯ ರಾಜನನ್ನು ಉಗುರುಗಳೆಂಬ ಆಯುಧದಿಂದ ಸೀಳಿದನು. ಆ ನಖಗಳು ಶುಷ್ಕ ಮತ್ತು ಆರ್ದ್ರವೆಂಬ ಎರಡು ಪಂಗಡಕ್ಕೆ ಸೇರಿದವುಗಳಲ್ಲ. ಆದುದರಿಂದ ವರಪ್ರದಾನಕ್ಕೆ ಏನೂ ವಿರೋಧವಿಲ್ಲ.

೩೦. ಹಿರಣ್ಯಾಕ್ಷನೆಂಬ ಅವನ ಅನುಜನಿಗೆ ಮಹಾಬಲ ಮತ್ತು ವಿಕ್ರಮಗಳಿಂದ ಕೂಡಿದ ಐದು ಮಂದಿ ಪುತ್ರರಿದ್ದರು. ಅವರಲ್ಲಿ ಮೂರು ಮಂದಿಯು ಶಂಬರ, ಶಕುನಿ ಮತ್ತು ಕಾಲನಾಭ ಎಂದು ನಾಮಾಂಕಿತರಾಗಿದ್ದರು.

೩೧. ಮತ್ತೆ ಇಬ್ಬರು ಮಹಾನಾಭ, ಭೂತಸಂತಾಪನ ಎಂಬ ನಾಮಾಂಕಿತ ರಾಗಿದ್ದರು. ಈ ಐದು ಮಂದಿ ಹಿರಣ್ಯಾಕ್ಷನ ಪುತ್ರರು ಅಲೌಕಿಕವಾದ ವಿಕ್ರಮದಿಂದ ಕೂಡಿರುವರಾಗಿ ದೇವತೆಗಳಿಗೂ ಅಜೇಯರಾಗಿದ್ದರು.

೩೨. ಇವರ ಪುತ್ರ, ಪೌತ್ರ ಮೊದಲಾಗಿ ಗಣರೂಪವಾಗಿ ಬೆಳೆದ ದಿತಿವಂಶಾ ವಳಿಯಲ್ಲಿ ಅಸಂಖ್ಯಾತರಾಗಿ ಪ್ರಜೆಗಳು ಹುಟ್ಟಿದರೆಂದು ಸ್ಮರಿಸಲ್ಪಟ್ಟಿದೆ. ಇವರಲ್ಲಿ ತಾರಕಾಸುರನ ಪೀಡಾ ಪರಿಹಾರಕಾಲದಲ್ಲಿ ಶತ ಸಹಸ್ರ ಸಂಖ್ಯೆಯ ದೈತ್ಯರು ಹತ ರಾದರು.

೩೩. ಹಿರಣ್ಯಕಶಿಪುವಿಗೆ ಬಲಸಂಪನ್ನರಾದ ನಾಲ್ಕು ಮಂದಿ ಪುತ್ರರಿದ್ದರು.

ಸಂಹ್ರಾದಶ್ಚೈವ ಹ್ರಾದಶ್ಚ ಹ್ರಾದಪುತ್ರೌ ನಿಬೋಧತ ।
ಸುಂದೋ ನಿಸುಂದಶ್ಚ ತಥಾ ಹ್ರಾದಪುತ್ರೌ ಬಭೂವತುಃ ॥ ೩೪ ॥

ಬ್ರಹ್ಮಘ್ನೌ ತೌ ಮಹಾವೀರೌ ಮೂಕಸ್ತು ಹ್ರಾದದಾಯಕಃ ।
ಮಾರೀಚಃ ಸುಂದಪುತ್ರಸ್ತು ತಾಟಕಾಯಾಮಜಾಯತ ॥ ೩೫ ॥

ದಂಡಕೇ ನಿಹತಃ ಸೋಽಥ ರಾಘವೇಣ ಬಲೀಯಸಾ ।
ಮೂಕೋ ವಿನಿಹತಶ್ಚಾಪಿ ಕೈರಾತೇ ಸವ್ಯಸಾಚಿನಾ ॥ ೩೬ ॥

ಸಂಹ್ರಾದಸ್ಯ ತು ದೈತ್ಯಸ್ಯ ನಿವಾತಕವಚಾಃ ಕುಲೇ ।
ಉತ್ಪನ್ನಾ ಮಹತಾ ಚೈವ ತಪಸಾ ಭಾವಿತಾಃ ಸ್ವಯಮ್ ॥ ೩೭ ॥

ಅರಯೋ ದೇವತಾನಾಂ ತೇ ಜಂಭಸ್ಯ ಶತದುಂದುಭಿಃ ।
ತಥಾ ದಕ್ಷೋಽಸುರಶ್ಚಂಡಶ್ಚತ್ವಾರೋ ದೈತ್ಯನಾಯಕಾಃ ॥ ೩೮ ॥

---

ಅವರಲ್ಲಿ ಪ್ರಹ್ಲಾದನು ಜ್ಯೇಷ್ಠನಾಗಿದ್ದನು. ಅನುಹ್ರಾದ ಎಂಬುವನು ಎರಡನೆಯ ಪುತ್ರನಾಗಿದ್ದನು.

೩೪. ಮತ್ತಿಬ್ಬರು ಸಂಹ್ರಾದ, ಹ್ರಾದ ಎಂಬ ಸಂಜ್ಞೆಯನ್ನು ಹೊಂದಿದ್ದರು. ಇವರಲ್ಲಿ ಹ್ರಾದ ಎಂಬುವನ ಇಬ್ಬರು ಪುತ್ರರನ್ನು ಕೇಳಿರಿ, ಸುಂದ, ನಿಸುಂದ, ಎಂದು ಹ್ರಾದ ದೈತ್ಯನಿಗೆ ಈರ್ವರು ಪುತ್ರರಿದ್ದರು.

೩೫, ಅವರು ಬಲದಿಂದ ಕೊಬ್ಬಿ ಮಹಾ ವೀರರಾಗಿ ಬ್ರಹ್ಮ ಹತ್ಯಾತತ್ಪರರಾದರು. ಸುಂದನಿಗೆ ಮೂಕ ಮತ್ತು ಪ್ರಪಂಚವನ್ನು ಗೋಳಾಡಿಸುವ ಮಾರೀಚ ಎಂಬ ಪುತ್ರರು ತಾಟಕೆಯಲ್ಲಿ ಜನಿಸಿದರು.

೩೬. ಅವರಲ್ಲಿ ಬಲದಿಂದ ಶೋಭಿತನಾದ ಶ್ರೀರಾಮನಿಂದ ಮಾರೀಚನು ದಂಡಕಾರಣ್ಯರಲ್ಲಿ ಸಂಹರಿಸಲ್ಪಟ್ಟನು. ಮೂಕನೆಂಬುವನು ಕಿರಾತ ಯುದ್ಧದಲ್ಲಿ ಅರ್ಜುನನಿಂದ ಸಂಹರಿಸಲ್ಪಟ್ಟನು.

೩೭. ಸಂಹ್ರಾದನೆಂಬ ದೈತ್ಯನ ವಂಶದಲ್ಲಿ ಅತಿಶಯವಾದ ತಪೋಮಹಿಮೆಯ ಭಾವನೆಯಿಂದ ಸಂಸ್ಕೃತರಾದ ನಿವಾತಕವಚರೆಂಬ ಮಹಾ ಅಸುರರು ಜನಿಸಿದರು.

೩೮. ಆ ಅಸುರ ಗಣದಲ್ಲಿ ದೈತ್ಯನಾಯಕರೆಂದು ಪ್ರಸಿದ್ಧಿಹೊಂದಿದ ಜಂಭ, ಶತದುಂದುಭಿ, ದಕ್ಷಾಸುರ ಮತ್ತು ಚಂಡಾಸುರರೆಂಬ ನಾಲ್ಕು ಮಂದಿಯು ದೇವತೆಗಳಿಗೆ ಶತ್ರುಗಳಾದರು.

ಬಾಷ್ಕಲಸ್ಯ ಸುತಾ ಹ್ಯೇತೇ ಕಾಲನೇಮೇಃ ಸುತಾನ್ ಶೃಣು ।
ಬ್ರಹ್ಮಜಿತ್ ಕ್ರತುಜಿಚ್ಚೈವ ದೇವಾಂತಕನರಾಂತಕೌ ॥ ೩೯ ॥

ಕಾಲನೇಮಿಸುತಾ ಹ್ಯೇತೇ ಶಂಭೋಸ್ತು ಶೃಣುತ ಪ್ರಜಾಃ ।
ರಾಜಾಜಶ್ಚೈವ ಗೋಮಶ್ಚ ಶಂಭೋಃ ಪುತ್ರೌ ಪ್ರಕೀರ್ತಿತೌ ॥ ೪೦ ॥

ವಿರೋಚನಸ್ಯ ಪುತ್ರಶ್ಚ ಬಲಿರೇಕಃ ಪ್ರತಾಪವಾನ್ ।
ಬಲೇಃ ಪುತ್ರಶತಂ ಜಜ್ಞೇ ರಾಜಾನಃ ಸರ್ವ ಏವ ತೇ ॥ ೪೧ ॥

ತೇಷಾಂ ಪ್ರಧಾನಾಶ್ಚತ್ವಾರೋ ವಿಕ್ರಾಂತಾಃ ಸುಮಹಾಬಲಾಃ ।
ಸಹಸ್ರಬಾಹುಃ ಶ್ರೇಷ್ಠೋಽಭೂದ್ಬಾಣೋ ರಾಜಾ ಪ್ರತಾಪವಾನ್ ॥ ೪೨ ॥

ಕುಂಭಗರ್ತೋ ದಯೋ ಭೋಜಃ ಕುಂಚಿರಿತ್ಯೇವಮಾದಯಃ ।
ಶಕುನೀ ಪೂತನಾ ಚೈವ ಕನ್ಯೇ ದ್ವೇ ತು ಬಲೇಃ ಸ್ಮೃತೇ ॥ ೪೩ ॥

---

೩೯. ಇವರೆಲ್ಲರೂ ಬಾಷ್ಕಲನೆಂಬ ದೈತ್ಯನ ಪುತ್ರರಾಗಿದ್ದರು. ಮುಂದೆ ಕಾಲನೇಮಿ ಅಸುರನ ಪುತ್ರ ಸಂತಾನವನ್ನು ಕೇಳಿರಿ, ಬ್ರಹ್ಮಜಿತ್, ಕ್ರತುಜಿತ್, ದೇವಾಂತಕ ಮತ್ತು ನರಾಂತಕರು ಕಾಲನೇಮಿ ಪುತ್ರಗಣದಲ್ಲಿ ಸೇರಿದವರು.

೪೦. ಹೀಗೆ ಈ ಬ್ರಹ್ಮಜಿತ್ ಮುಂತಾದವರು ಕಾಲನೇಮಿ ಪುತ್ರರಾಗಿದ್ದರು. ಮುಂದೆ ಶಂಭು ಎಂಬ ಅಸುರನ ಪ್ರಜೆಗಳನ್ನು ಕೇಳಿರಿ. ರಾಜಾಜ, ಗೋಮ ಎಂಬುವರಿಬ್ಬರು ಶಂಭು ಪುತ್ರರೆಂದು ಕೀರ್ತಿಸಲ್ಪಟ್ಟಿರುವರು.

೪೧. ವಿರೋಚನಾಸುರನಿಗೆ ಪ್ರತಾಪವಂತನಾದ ಬಲಿರಾಜನೊಬ್ಬನು ಪುತ್ರನಾಗಿದ್ದನು. ಬಲಿರಾಜನಿಗೆ ನೂರಾರು ಮಂದಿ ಪುತ್ರರು ಜನಿಸಿದರು. ಅವರೆಲ್ಲರೂ ರಾಜರಾಗಿ ರಾಜ್ಯಭಾರಮಾಡಿದವರಾಗಿದ್ದರು.

೪೨. ಅವರಲ್ಲಿ ಮಹಾಬಲ-ವಿಕ್ರಮಗುಣಗಳಿಂದ ಕೂಡಿ ಪ್ರಧಾನರಾಗಿ ನಾಲ್ಕು ಮಂದಿಯಿದ್ದರು. ಒಂದುಸಹಸ್ರ ಬಾಹುಗಳಿಂದ ಶೋಭಿತನೂ ಮಹಾ ಪರಾಕ್ರಮಿಯೂ ಆದ ಬಾಣಾಸುರ ರಾಜನು ಶ್ರೇಷ್ಠನಾಗಿದ್ದನು.

೪೩. ಮತ್ತು ಕುಂಭಗರ್ತ, ದಯ, ಭೋಜ, ಕುಂಚಿ ಮುಂತಾದ ಅನೇಕ ಮಂದಿಯು ಬಲಿರಾಜನ ಪುತ್ರಗಣದಲ್ಲಿ ಸೇರಿದ್ದರು. ಶಕುನೀ, ಪೂತನಾ ಎಂಬುದಾಗಿ ಬಲಿರಾಜನಿಗೆ ಇಬ್ಬರು ಕನ್ಯೆಯರು ಇದ್ದರು.

ಬಲೇಃ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ।
ಬಾಲೇಯಾ ನಾಮ ವಿಖ್ಯಾತಾ ಗಣಾ ವಿಕ್ರಾಂತಪೌರುಷಾಃ ॥ ೪೪ ॥

ಬಾಣಸ್ಯ ಚೇಂದ್ರಧನ್ವಾ ತು ಲೋಹಿನ್ಯಾಮುದಪದ್ಯತ ।
ದಿತಿರ್ವಿಹಿತಪುತ್ರಾ ವೈ ತೋಷಯಾಮಾಸ ಕಶ್ಯಪಮ್ ॥ ೪೫ ॥

ತಾಂ ಕಶ್ಯಪಃ ಪ್ರಸನ್ನಾತ್ಮಾ ಸಮ್ಯಗಾರಾಧಿತಸ್ತ್ವಥ ।
ವರೇಣ ಛಂದಯಾಮಾಸ ಸಾ ಚ ವವ್ರೇ ವರಂ ತತಃ ॥ ೪೬ ॥

ಅಥ ತಸ್ಯೈ ವರಂ ಪ್ರಾದಾತ್ ಪ್ರಾರ್ಥಿತೋ ಭಗವಾನ್ ಪುನಃ ।
ಉಕ್ತೇ ವರೇ ತು ಸಾ ತುಷ್ಟಾ ದಿತಿಸ್ತಂ ಸಮಭಾಷತ ॥ ೪೭ ॥

ಮಾರೀಚಂ ಕಶ್ಯಪಂ ದೇವೀ ಭರ್ತಾರಂ ಪ್ರಾಂಜಲಿಸ್ತದಾ ।
ಹತಪುತ್ರಾಸ್ಮಿ ಭಗವನ್ನಾದಿತ್ಯೈಸ್ತವ ಸೂನುಭಿಃ ॥ ೪೮ ॥

---

೪೪. ಹೀಗೆ ವರ್ಧಿಷ್ಣುವಾದ ಬಲಿರಾಜನ ಕುಲದಲ್ಲಿ ವಿಕ್ರಮ-ಪೌರುಷ ಗುಣಗಳಿಂದ ಅಲಂಕೃತರಾದ, ಪುತ್ರ-ಪೌತ್ರ ಪ್ರಜೆಗಳು ಶತ-ಸಹಸ್ರ ಸಂಖ್ಯೆಯಿಂದ ಬಾಲೇಯ ಗಣವೆಂಬ ಪ್ರಸಿದ್ಧಿಯುಳ್ಳವರಾಗಿ ಜನಿಸಿದರು.

೪೫. ಬಾಣಾಸುರನ ಲೋಹಿನಿಯೆಂಬ ಪತ್ನಿಯಲ್ಲಿ ಇಂದ್ರಧನ್ವ ಎಂಬ ಅಸುರನು ಪುತ್ರನಾಗಿ ಜನ್ಮವೆತ್ತಿದನು. ದಿತಿಯು ಅನೇಕ ದೈತ್ಯ ಪುತ್ರರನ್ನು ಕಳೆದುಕೊಂಡು ಪತಿದೇವನಾದ ಕಶ್ಯಪ ಮುನಿಯನ್ನು ಒಂದು ವೇಳೆಯಲ್ಲಿ ಸಂತೋಷಪಡಿಸಿದಳು.

೪೬. ಪ್ರಸನ್ನವಾದ ಮಾನಸವುಳ್ಳ ಕಶ್ಯಪ ಮುನಿಯು ದಿತಿದೇವಿಯಿಂದ ಭಕ್ತಿಯಿಂದ ಆರಾಧಿಸಲ್ಪಟ್ಟು ಸಂತುಷ್ಟನಾಗಿ ವರವನ್ನು ಕೇಳೆಂದು ಸಮ್ಮತಿ ಕೊಡಲಾಗಿ ಆಕೆಯು ಮುಂದೆ ಹೇಳುವ ವರವನ್ನು ಬೇಡಿದಳು.

೪೭. ಆಗ ದಿತಿ ದೇವಿಯು ಭಗವಂತನಾದ ಕಶ್ಯಪ ಮುನಿಯನ್ನು ಕುರಿತು ವರವನ್ನು ಕೊಡಬೇಕೆಂದು ಮತ್ತೆ ಮತ್ತೆ ಪ್ರಾರ್ಥಿಸಿಕೊಳ್ಳಲಾಗಿ ವರವನ್ನು ಕೊಟ್ಟಿರುವೆನೆಂದು ಮುನಿಯು ಹೇಳಿದನು. ಹೀಗೆ ಮುನಿಯಿಂದ ವಚನವನ್ನು ತೆಗೆದುಕೊಂಡು ಸಂತೋಷದಿಂದ ದಿತಿಯು ಮಾತನಾಡಿದಳು.

೪೮. ಆಗ ದಿತಿದೇವಿಯು ಅಂಜಲಿಬದ್ಧಳಾಗಿ ಪತಿಯಾದ ಮಾರೀಚಕಶ್ಯಪ ಮುನಿಯನ್ನು ಕುರಿತು ಭಗವಂತನೇ, ಅದಿತಿದೇವಿಯಲ್ಲಿ ಹುಟ್ಟಿದ ನಿನ್ನ ಪುತ್ರರಾದ ದೇವತೆಗಳಿಂದ ನನ್ನ ಪುತ್ರರು ಸಂಹರಿಸಲ್ಪಟ್ಟಿರುವರು.

ಶಕ್ರಹಂತಾರಮಿಚ್ಛಾಮಿ ಪುತ್ರಂ ದೀರ್ಘತಪೋಽರ್ಜಿತಮ್ ।
ಸಾಹಂ ತಪಶ್ಚರಿಷ್ಯಾಮಿ ಗರ್ಭಮಾಧಾತುಮರ್ಹಸಿ ॥ ೪೯ ॥

ಪುತ್ರಮಿಂದ್ರವಧೇ ಯುಕ್ತಂ ತ್ವಂ ಮೇ ವೈ ದಾತುಮರ್ಹಸಿ ।
ತಸ್ಯಾಸ್ತದ್ವಚನಂ ಶ್ರುತ್ವಾ ಮಾರೀಚಃ ಕಶ್ಯಪಸ್ತದಾ ॥ ೫೦ ॥

ಪ್ರತ್ಯುವಾಚ ಮಹಾತೇಜಾ ದಿತಿಂ ಪರಮದುಃಖಿತಃ ।
ಏವಂ ಭವತು ಗರ್ಭೇ ತು ಶುಚಿರ್ಭವ ತಪೋಧನೇ ॥ ೫೧ ॥

ಜನಯಿಷ್ಯಸಿ ಪುತ್ರಂ ತ್ವಂ ಶಕ್ರಹಂತಾರಮಾಹವೇ ।
ಪೂರ್ಣಂ ವರ್ಷಸಹಸ್ರಂ ತು ಶುಚಿರ್ಯದಿ ಭವಿಷ್ಯಸಿ ॥ ೫೨ ॥

ಪುತ್ರಂ ತ್ರಿಲೋಕಪ್ರವರಂ ಮನ್ಮಥಂ ಜನಯಿಷ್ಯಸಿ ।
ಏವಮುಕ್ತ್ವಾ ಮಹಾತೇಜಾಸ್ತಥಾ ಸಮಭವತ್ತದಾ ॥ ೫೩ ॥

---

೪೯. ಆದುದರಿಂದ ದೀರ್ಘವಾದ ತಪಃಶಕ್ತಿಯಿಂದ ಊರ್ಜಿತನಾಗಿ ಯುದ್ಧದಲ್ಲಿ ಇಂದ್ರನನ್ನು ವಧಿಸಬಲ್ಲ ಪುತ್ರನನ್ನು ಅಪೇಕ್ಷಿಸುತ್ತೇನೆ. ನಾನು ಪವಿತ್ರಳಾಗಿ ತಪವನ್ನು ಆಚರಿಸುತ್ತೇನೆ. ಅಂತಹ ಪುತ್ರನು ಹುಟ್ಟಲು ನೀನು ನನ್ನಲ್ಲಿ ಗರ್ಭವನ್ನು ಆಧಾನಮಾಡು.

೫೦. ಇಂದ್ರನನ್ನು ಸಂಹಾರಮಾಡುವುದರಲ್ಲಿ ಉದ್ಯುಕ್ತನಾದ ಪುತ್ರನನ್ನು ನೀನು ಅನುಗ್ರಹಿಸಲು ಅರ್ಹವಾಗಿದ್ದೀ, ಮಾರೀಚಕಶ್ಯಪ ಮುನಿಯು ಆಗ ಆ ವಚನವನ್ನು ಕೇಳಿದನು.

೫೧. ಮತ್ತು ಮಹಾ ತೇಜಸ್ವಿಯಾದ ಕಶ್ಯಪಮುನಿಯು ಬಹು ದುಃಖ ಪೀಡಿತನಾಗಿ ದಿತಿಯನ್ನು ಕುರಿತು ಪ್ರತಿವಚನವನ್ನು ಆಡಿದನು. ತಪೋಧನಳಾದ ಸತಿಯೆ! ಹಾಗೆಯೇ ಆಗಲಿ, ಗರ್ಭಕಾಲದಲ್ಲಿ ನೀನು ಸಂತತವೂ ಶುಚಿಯಾಗಿರು.

೫೨. ಒಂದು ಸಹಸ್ರ ವರ್ಷಕಾಲ ಪೂರ್ಣವಾಗಿ ನೀನು ಶುಚಿಯಾಗಿ ಇರುವವಳಾದರೆ ಯುದ್ಧದಲ್ಲಿ ಇಂದ್ರನನ್ನು ಜಯಿಸುವ ಪುತ್ರನನ್ನು ಪ್ರಸವಿಸುತ್ತೀ.

೫೩. ಮತ್ತು ಆ ಪುತ್ರನು ಮೂರು ಲೋಕಗಳಲ್ಲಿ ವೀರನೂ ಮತ್ತು ಮನ್ಮಥನಂತೆ ಸುಂದರನೂ ಆಗುವನು. ಅಂತಹ ಪುತ್ರನನ್ನು ಹೊಂದುತ್ತೀ. ಮಹಾ ತೇಜಸ್ವಿಯಾದ ಕಶ್ಯಪ ಮುನಿಯು ಈ ರೀತಿಯಾಗಿ ಹೇಳಿ ಹಾಗೆ ಆಕೆಯ ಸಂಗಮಾಡಿದನು.

ತಾಮಾಲಭ್ಯ ಸ್ವಭವನಂ ಜಗಾಮ ಭಗವಾನೃಷಿಃ ।
ಗತೇ ಭರ್ತರಿ ಸಾ ದೇವೀ ದಿತಿಃ ಪರಮಹರ್ಷಿತಾ ॥ ೫೪ ॥

ಕುಶಪ್ಲವನಮಾಸಾದ್ಯ ತಪಸ್ತೇಪೇ ಸುದಾರುಣಮ್ ।
ಶಕ್ರಸ್ತು ಸಮುಪಶ್ರುತ್ಯ ಸಂವಾದಂ ತಂ ತಯೋಃ ಪ್ರಭುಃ ॥ ೫೫ ॥

ಕುಶಪ್ಲವನಮಾಗಮ್ಯ ದಿತಿಂ ವಾಕ್ಯಮಭಾಷತ ।
ಶುಶ್ರೂಷಾಂ ತೇ ಕರಿಷ್ಯಾಮಿ ಮಾಮನುಜ್ಞಾಂ ದಾತುಮರ್ಹಸಿ ॥ ೫೬ ॥

ಸಮಿಧಶ್ಚಾಹರಿಷ್ಯಾಮಿ ಪುಷ್ಪಾಣಿ ಚ ಫಲಾನಿ ಚ ।
ಯಥಾ ತ್ವಂ ಮನ್ಯಸೇ ವತ್ಸ ಶುಶ್ರೂಷಾಭಿರತೋ ಭವ ॥ ೫೭ ॥

ಸರ್ವಕರ್ಮಸು ನಿಷ್ಣಾತ ಆತ್ಮನೋ ಹಿತಮಾಚರ ।
ವರಂ ಶ್ರುತ್ವಾ ತು ತದ್ವಾಕ್ಯಂ ಮಾತುಃ ಶಕ್ರಃ ಪ್ರಹರ್ಷಿತಃ ॥ ೫೮ ॥

---

೫೪, ಭಗವಂತನಾದ ಋಷಿಯು ಅವಳನ್ನು ಸಂಗಮಾಡಿ ತರುವಾಯ ತನ್ನ ಗೃಹಕ್ಕೆ ತೆರಳಿದನು. ಪತಿಯು ತನಗೆ ಇಷ್ಟವನ್ನು ಕೊಟ್ಟು ಹೋದುದರಿಂದ ದಿತಿಯು ಅತಿಶಯ ಸಂತೋಷವುಳ್ಳವಳಾದಳು.

೫೫. ಮುಂದೆ ಕುಶಪ್ಲವನವೆಂಬ ಕ್ಷೇತ್ರವನ್ನು ಹೊಂದಿ ಕ್ಲೇಶಸಾಧ್ಯವಾದ ಕಷ್ಟ ತಪಸ್ಸನ್ನು ತಪಿಸಿದಳು. ಪ್ರಭುವಾದ ದೇವೇಂದ್ರನು ದಿತಿ ಕಶ್ಯಪರಿಗೆ ನಡೆದಿರುವ ಸಂವಾದವನ್ನು ಕೇಳಿದನು.

೫೬. ಮತ್ತು ಕುಶಪ್ಲವನ ಕ್ಷೇತ್ರಕ್ಕೆ ಬಂದು ದಿತಿದೇವಿಯನ್ನು ಕುರಿತು ಈ ರೀತಿಯಾಗಿ ಹೇಳಿದನು. ಮಾತೆಯೆ! ನೀನು ತಪಸ್ವಿನಿಯಾಗಿ ಇಲ್ಲಿರುವಾಗ ನಾನು ನಿನ್ನ ಶುಶ್ರೂಷೆಯನ್ನು ಮಾಡುವೆನು. ನನಗೆ ಅನುಮತಿಯನ್ನು ಕೊಡು.

೫೭. ನಿನ್ನ ತಪೋ ವಿಧಾನಕ್ಕೆ ಆವಶ್ಯಕವಾದ ಸಮಿತ್ತುಗಳನ್ನು ಮತ್ತು ಫಲ ಪುಷ್ಪಗಳನ್ನು ತಂದು ಸಿದ್ಧಪಡಿಸುತ್ತೇನೆ. ಹೀಗೆಂದು ಕೇಳಿಕೊಂಡನು. ಆಗ ಆವಳು ಮಗುವೆ! ನಿನ್ನ ಇಷ್ಟದಂತೆ ನೀನು ನನ್ನ ಶುಶ್ರೂಷೆಯಲ್ಲಿ ಆಸಕ್ತನಾಗಿರು.

೫೮. ಸಕಲ ವ್ಯಾಪಾರಗಳಲ್ಲಿ ದಕ್ಷನಾದ ಪುತ್ರನೆ! ನನ್ನ ಶುಶ್ರೂಷೆ ಮಾಡುತ್ತಲಿದ್ದು ನೀನು ನಿನ್ನ ಹಿತವನ್ನು ಸಂಪಾದಿಸು, ಹೀಗೆಂದಳು. ಆಗ ತಾಯಿಯ ಆ ಮಾತನ್ನು ವರರೂಪವಾಗಿ ಭಾವಿಸಿ ಇಂದ್ರನು ಸಂತುಷ್ಟನಾದನು.

ಶುಶ್ರೂಷಾಭಿರತೋ ಭೂತ್ವಾ ಕಲುಷೇಣಾಂತರಾತ್ಮನಾ ।
ಶುಶ್ರೂಷತೇ ತು ತಾಂ ಶಕ್ರಃ ಸರ್ವಕಾಲಮನುವ್ರತಃ ॥ ೫೯ ॥

ಫಲಪುಷ್ಪಾಣ್ಯುಪಾದಾಯ ಸಮಿಧಶ್ಚ ದೃಢವ್ರತಃ ।
ಗಾತ್ರಸಂವಾಹನಂ ಕಾಲೇ ಶ್ರಮಾಪನಯನೇ ತಥಾ ॥ ೬೦ ॥

ಶಕ್ರಃ ಸರ್ವೇಷು ಕಾಲೇಷು ದಿತಿಂ ಪರಿಚಚಾರ ಹ ।
ಕಿಂಚಿಚ್ಛಿಷ್ಟೇ ವ್ರತೇ ದೇವೀ ತುಷ್ಟಾ ಶಕ್ರಮುವಾಚ ಹ ॥ ೬೧ ॥

ಪ್ರೀತಾಹಂ ತೇ ಸುರಶ್ರೇಷ್ಠ ದಶವರ್ಷಾಣಿ ಪುತ್ರಕ ।
ಅವಶಿಷ್ಟಾನಿ ಭದ್ರಂ ತೇ ಭ್ರಾತರಂ ದ್ರಕ್ಷ್ಯಸೇ ತತಃ ॥ ೬೨ ॥

ತಮಹಂ ತ್ವತ್ಕೃತೇ ಪುತ್ರ ಸಹ ಧಾಸ್ಯೇ ಜಯೈಷಿಣಮ್ ।
ತ್ರೈಲೋಕ್ಯವಿಜಯಂ ಪುತ್ರ ಭೋಕ್ಷ್ಯಸೇ ಸಹ ತೇನ ವೈ ॥ ೬೩ ॥

---

೫೯. ಆಗ ಇಂದ್ರನು ಸರ್ವಕಾಲದಲ್ಲಿಯೂ ಆಕೆಯ ವ್ರತಾನುಷ್ಠಾನಕ್ಕೆ ಸರಿಯಾಗಿ ನಡೆದುಕೊಂಡು ಗೂಢ ದ್ರೋಹರೂಪವಾದ ಕಳಂಕವುಳ್ಳ ಮಾನಸದಿಂದ ಶುಶ್ರೂಷೆಯಲ್ಲಿ ಆಸಕ್ತನಾದನು.

೬೦. ದೃಢವಾದ ಕ್ರಮದಿಂದ ಸೇವೆಮಾಡುತ್ತ ಸಮಿತ್ತು ಫಲಪುಷ್ಪಗಳನ್ನು ತಂದಿರಿಸುತ್ತಲಿದ್ದನು ಮತ್ತು ಶ್ರಮವಾಗಿದ್ದ ಕಾಲವನ್ನು ಅರಿತು ಶ್ರಮಪರಿಹಾರಕ್ಕೆ ಅಂಗಮರ್ದನವನ್ನು ಮಾಡುತ್ತಲಿದ್ದನು.

೬೧. ಇಂದ್ರನು ಸರ್ವಕಾಲಗಳಲ್ಲಿಯೂ ದಿತಿದೇವಿಯನ್ನು ಉಪಚರಿಸಿದನು. ಹೀಗೆ ವ್ರತವು ದೀರ್ಘಕಾಲಕಳೆದು ಸ್ವಲ್ಪ ಮಾತ್ರ ಅವಶಿಷ್ಟವಾಗಿರಲು ದಿತಿಯು ಸಂತೋಷದಿಂದ ಇಂದ್ರನನ್ನು ಕುರಿತು ಹೇಳಿದಳು.

೬೨. ದೇವಶ್ರೇಷ್ಠನಾದ ಪುತ್ರನೆ! ಶುಶ್ರೂಷೆಯಿಂದ ನಿನ್ನಲ್ಲಿ ನಾನು ಸಂತುಷ್ಟಳಾಗಿರುವೆನು. ಇನ್ನು ತಪೋನಿಯಮದಿಂದ ಇರಬೇಕಾದ ಕಾಲವು ಹತ್ತು ವರ್ಷಗಳು ಮಾತ್ರ ಉಳಿದಿವೆ. ಅನಂತರದಲ್ಲಿ ನೀನು ಸಹೋದರನನ್ನು ನೋಡುತ್ತೀ.

೬೩. ನಾನು ನಿನಗೋಸ್ಕರ ಸರ್ವಜಯವನ್ನು ಅಪೇಕ್ಷಿಸುವ ಆ ಪುತ್ರನನ್ನು ನಿನ್ನ ಸಂಗಡ ಮಾಡಿರಿಸುತ್ತೇನೆ. ಪುತ್ರನೇ, ನೀನು ಅವನೊಡನೆ ತ್ರಿಲೋಕ ವಿಜಯವನ್ನು ಅನುಭವಿಸುತ್ತೀ.

ನಾಹಂ ಪುತ್ರಾಭಿಜಾನಾಮಿ ಮದ್ಭಕ್ತಿಗತಮಾನಸಮ್ ।
ಏವಮುಕ್ತ್ವಾ ದಿತಿಃ ಶಕ್ರಂ ಮಧ್ಯಂ ಪ್ರಾಪ್ತೇ ದಿವಾಕರೇ ॥ ೬೪ ॥

ನಿದ್ರಯಾಪಹೃತಾ ದೇವೀ ಶಿರಃ ಕೃತ್ವಾ ತು ಜಾನುನಿ ।
ಕೇಶಾನ್ ಕೃತ್ವಾ ತು ಪಾದಸ್ಥಾನ್ ಸಾ ಸುಷ್ವಾಪ ದೇವತಾ ॥ ೬೫ ॥

ಅಧಸ್ತಾತ್ತ್ವತ್ತು ನಾಭೇರ್ವೈ ಸರ್ವಂ ತದಶುಚಿ ಸ್ಮೃತಮ್ ।
ತತಸ್ತಾಮಶುಚಿಂ ಜ್ಞಾತ್ವಾ ಸೋಽಂತರಂ ತದಪದ್ಯತ ॥ ೬೬ ॥

ದೃಷ್ಟ್ವಾ ತು ಕಾರಣಂ ಸರ್ವಂ ತಸ್ಯ ಬುದ್ಧಿರಜಾಯತ ।
ಗರ್ಭಂ ನಿಹಂತುಂ ವೈ ದೇವ್ಯಾ ನ ಹಿ ದೋಷೋಽತ್ರ ದೃಶ್ಯತೇ॥ ೬೭ ॥

ತತೋ ವಿವೇಶ ದಿತ್ಯಾ ವೈ ಹ್ಯುಪಸ್ಥೇನೋದರಂ ವೃಷಾ ।
ಪ್ರವಿಶ್ಯ ಚಾಪಿ ತಂ ದೃಷ್ಟ್ವಾ ಗರ್ಭಮಿಂದ್ರೋ ಮಹೌಜಸಮ್॥ ೬೮ ॥

---

೬೪. ಪುತ್ರನೆ! ನನ್ನಲ್ಲಿ ಭಕ್ತಿಯಿಂದ ಕೂಡಿದ ಮಾನಸವುಳ್ಳ ನಿನ್ನನ್ನು ನಾನು ತಿಳಿದಿರಲಿಲ್ಲ. ಈಗ ನಿನ್ನಲ್ಲಿ ಮೆಚ್ಚಿರುವೆನು, ಎಂಬುದಾಗಿ ಮಧ್ಯಾಹ್ನದ ಸಮಯದಲ್ಲಿ ದಿತಿಯು ಇಂದ್ರನಿಗೆ ಹೇಳಿದಳು.

೬೫. ತರುವಾಯ ಹಾಗೆಯೇ ನಿದ್ರೆಯಿಂದ ವಶೀಕರಿಸಲ್ಪಟ್ಟವಳಾಗಿ ತನ್ನ ಜಾನುಭಾಗದಲ್ಲಿ ತಲೆಯನ್ನು ಇಟ್ಟುಕೊಂಡು ಪಾದಗಳ ಮೇಲೆ ಕೇಶಗಳು ಹರಡಿರುವಂತೆ ಸ್ಥಿತಿಯಿಂದ ಆ ದಿತಿ ದೇವಿಯು ನಿದ್ರಿಸಿದಳು.

೬೬. ಮಾನವನ ಶರೀರದಲ್ಲಿ ನಾಭಿಯ ಕೆಳಭಾಗದಲ್ಲಿರುವುದು ಎಲ್ಲ ಅಶುಚಿಯಾದುದೆಂದು ಸ್ಮರಿಸಲ್ಪಟ್ಟಿದೆ. ಆದ್ದರಿಂದ ಆಕೆಯನ್ನು ಅಶುಚಿಸ್ಥಿತಿಯಲ್ಲಿರುವಳೆಂದು ಇಂದ್ರನು ತಿಳಿದು ಇದೊಂದು ರಂಧ್ರವು ಸಿಕ್ಕಿರುವುದೆಂದು ಭಾವಿಸಿದನು.

೬೭. ಸಂಪೂರ್ಣವಾಗಿ ಪೂರ್ವೋತ್ತರ ಪ್ರಸಂಗವನ್ನು ತಿಳಿದು ಅವನಿಗೆ ಆ ಗರ್ಭವನ್ನು ಕೊಲ್ಲಲು ಬದ್ಧಿಯು ಹುಟ್ಟಿತು. ಮಾರೀಚಿಕಶ್ಯಪ ಮುನಿಯ ಆಜ್ಞೆಯನ್ನು ಮೀರಿ ಅಶುಚಿಯಾದುದರಿಂದ ಈಗ ಗರ್ಭಛೇದನದಲ್ಲಿ ಯಾವ ದೋಷವು ಇಲ್ಲ.

೬೮. ತರುವಾಯ ವೃಷ್ಟಿಪ್ರದನಾದ ಇಂದ್ರನು ದಿತಿದೇವಿಯ ಉಪಸ್ಥೇಂದ್ರಿಯದ ಮೂಲಕ ಉದರವನ್ನು ಪ್ರವೇಶಮಾಡಿದನು. ಪ್ರವೇಶಮಾಡಿ ಮಹಾ ವೀರ್ಯದಿಂದ ಕೂಡಿದ ಆ ಗರ್ಭವನ್ನು ಕಂಡನು.

ಭೀತಸ್ತಂ ಸಪ್ತಧಾ ಗರ್ಭಂ ಬಿಭೇದ ರಿಪುಮಾತ್ಮನಃ ।
ಸ ಗರ್ಭೋ ಭಿದ್ಯಮಾನಸ್ತು ವಜ್ರೇಣ ಶತಪರ್ವಣಾ ॥ ೧೯ ॥

ರುರೋದ ಸುಸ್ವರಂ ಭೀಮಂ ವೇಪಮಾನಃ ಪುನಃ ಪುನಃ ।
ಮಾ ರೋದ ಮಾ ರೋದ ಇತಿ ಗರ್ಭಂ ಶಕ್ರೋಽಭ್ಯಭಾಷತ ॥ ೨೦ ॥

ತಂ ಗರ್ಭಂ ಸಪ್ತಧಾ ಕೃತ್ವಾ ಹ್ಯೇಕೈಕಂ ಸಪ್ತಧಾ ಪುನಃ ।
ಕುಲಿಶೇನ ಬಿಭೇದೇಂದ್ರಸ್ತತೋ ದಿತಿರಬುಧ್ಯತ । ॥ ೨೧ ॥

ನ ಹಂತವ್ಯೋ ನ ಹಂತವ್ಯ ಇತ್ಯೇವಂ ದಿತಿರಬ್ರವೀತ್ ।
ನಿಷ್ಪಪಾತ ತತೋ ವಜ್ರೀ ಮಾತುರ್ವಚನಗೌರವಾತ್ ॥ ೨೨ ॥

ಪ್ರಾಂಜಲಿರ್ವಜ್ರಸಹಿತೋ ದಿತಿಂ ಶಕ್ರೋಽಭ್ಯಭಾಷತ ।
ಅಶುಚಿರ್ದೇವಿ ಸುಪ್ತಾಸಿ ಪಾದಯೋರ್ಕೃತಮೂರ್ಧಜಾ ॥ ೨೩ ॥

---

೧೯. ಮತ್ತು ಬಹಳ ಭಯಗೊಂಡವನಾಗಿ ತನಗೆ ಶತ್ರುವಾದ ಆ ಗರ್ಭವನ್ನು ಏಳು ಭಾಗಗಳನ್ನಾಗಿ ಭೇದಿಸಿದನು. ಹೀಗೆ ಇಂದ್ರನಿಂದ ಒಂದುನೂರು ಪರ್ವಗಳಿಂದ ಕೂಡಿದ ವಜ್ರಾಯುಧದಿಂದ ಭೇದಿಸಲ್ಪಡುತ್ತಲಿತ್ತು.

೨೦. ಆಗ ಆ ಗರ್ಭವು ಸ್ಪಷ್ಟಸ್ವರದಿಂದ ಕೂಡಿ ಭಯಂಕರವಾಗಿ ರೋದಿಸಿತು. ಅದರಿಂದ ಮತ್ತೆ ಮತ್ತೆ ಭಯಾಕ್ರಾಂತನಾಗಿ ನಡುಗುತ್ತಲಿದ್ದ ಇಂದ್ರನು ಅಳಬೇಡ ಅಳಬೇಡವೆಂದು ಗರ್ಭಕ್ಕೆ ಹೇಳಿದನು.

೨೧. ಹೀಗೆ ಇಂದ್ರನು ಆ ಗರ್ಭವನ್ನು ಏಳು ಭಾಗವಾಗಿ ಭೇದಿಸಿ ಆ ಒಂದೊಂದು ಭಾಗವನ್ನು ಮತ್ತೆ ವಜ್ರದಿಂದ ಏಳು ಭಾಗಗಳನ್ನಾಗಿ ಭೇದನಮಾಡಿದನು. ಅನಂತರದಲ್ಲಿ ದಿತಿಯು ನಿದ್ರೆಯಿಂದ ಎಚ್ಚರಗೊಂಡಳು.

೨೨. ತತ್ಕ್ಷಣದಲ್ಲಿ ದಿತಿಯು ಕೊಲ್ಲಬಾರದು ಕೊಲ್ಲಬಾರದು ಎಂಬುದಾಗಿ ಕೂಗಿ ಹೇಳಿದಳು. ಹೀಗೆ ತಾಯಿಯ ಅಜ್ಞಾವಚನ ಗೌರವದಿಂದ ವಜ್ರಧಾರಿಯಾದ ಇಂದ್ರನು ಅಲ್ಲಿಂದ ಹೊರಗೆ ಹೊರಟುಬಂದನು.

೨೩. ವಜ್ರಾಯುಧವನ್ನು ಧರಿಸಿದ ಇಂದ್ರನು ಅಂಜಲಿ ಕಟ್ಟಿಕೊಂಡವನಾಗಿ ದಿತಿಯನ್ನು ಕುರಿತು ಈ ರೀತಿಯಾಗಿ ಹೇಳಿದನು. ದೇವಿಯೆ! ನೀನು ಕಾಲುಗಳ ಮೇಲೆ ಕೇಶಗಳನ್ನು ಚೆದುರಿಕೊಂಡು ಅಶುಚಿಯಾಗಿ ನಿದ್ರೆಯನ್ನು ಮಾಡುತ್ತಲಿದ್ದೆ.

ತದಂತರಮನುಪ್ರಾಪ್ಯ ಗರ್ಭಂ ಹಂತಾರಮಾಹವೇ ।
ಛಿನ್ನವಾನಹಮೇತಂ ತೇ ಬಹುಧಾ ಕ್ಷಂತುಮರ್ಹಸಿ ॥ ೭೪ ॥

ತಸ್ಮಿಂಸ್ತು ವಿಫಲೇ ಗರ್ಭೇ ದಿತಿಃ ಪರಮದುಃಖಿತಾ ।
ಸಹಸ್ರಾಕ್ಷಂ ದುರಾ .ರ್ಷಂ ವಾಕ್ಯಂ. ಸಾನುನಯಾಬ್ರವೀತ್ ॥ ೭೫ ॥

ಮಮಾಪರಾಧಾದ್ಗರ್ಭೋಽಯಂ ಯದಿ ತೇ ವಿಫಲೀಕೃತಃ ।
ನಾಪರಾಧೋಽಸ್ತಿ ದೇವೇಶ ತವ ಪುತ್ರ ಮಹಾಬಲ ॥ ೭೬ ॥

ಶತ್ರೋರ್ವಧೇ ನ ದೋಷೋಽಸ್ತಿ ಭೇತವ್ಯಂ ನ ಚ ತೇ ವಿಭೋ ।
ಪ್ರಿಯಂ ತು ಕೃತಮಿಚ್ಛಾಮಿ ಶ್ರೇಯೋ ಗರ್ಭಸ್ಯ ಮೇ ಕುತಃ॥ ೭೭ ॥

ಭವಂತು ಮಮ ಪುತ್ರಾಣಾಂ ಸಪ್ತ ಸ್ಥಾನಾನಿ ವೈ ದಿವಿ ।
ವಾತಸ್ಕಂಧಾನಿಮಾನ್ ಸಪ್ತ ಚರಂತು ಮಮ ಪುತ್ರಕಾಃ ॥ ೭೮ ॥

---

೭೪. ನಾನು ಆ ರಂಧ್ರವನ್ನು ನಿರೀಕ್ಷಿಸಿಕೊಂಡು ಇದ್ದು ಯುದ್ಧದಲ್ಲಿ ನನಗೆ ಶತ್ರುವಾಗಿದ್ದ ಈ ಗರ್ಭವನ್ನು ಭೇದನಮಾಡಿದೆನು. ಮಾತೆಯೆ! ನನ್ನನ್ನು ಅನೇಕ ವಿಧದಿಂದ ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ.

೭೫. ಆ ಗರ್ಭವು ತನ್ನ ಧ್ಯೇಯವನ್ನು ಸಾಧಿಸಲಾರದೇ ವ್ಯರ್ಥವಾಗುತ್ತಿರಲು ದಿತಿಯು ಅತಿಶಯವಾಗಿ ದುಃಖಗೊಂಡವಳಾಗಿ ತಿರಸ್ಕರಿಸಲಶಕ್ಯನಾಗಿರುವ ಇಂದ್ರನನ್ನು ಕುರಿತು ಸಮಾಧಾನಪೂರ್ವಕವಾಗಿ ಮಾತನಾಡಿದಳು.

೭೬. ದೇವೇಶನೂ ಮಹಾಬಲಶಾಲಿಯೂ ಆದ ಪುತ್ರನೆ! ನನ್ನ ಅಪರಾಧದಿಂದ ಗರ್ಭವು ವ್ಯರ್ಥವಾಗಿರುವುದು. ಆದುದರಿಂದ ಈ ವಿಷಯದಲ್ಲಿ ನಿನ್ನ ಅಪರಾಧ ಲೇಶವೂ ಇಲ್ಲ.

೭೭. ವಿಭುವಾದ ಪುತ್ರನೆ! ಶತ್ರುವಾದ ಗರ್ಭವನ್ನು ನೀನು ಭೇದಿಸಿದುದರಲ್ಲಿ ದೋಷವೇನೂ ಇಲ್ಲ. ಅದಕ್ಕಾಗಿ ನೀನು ಭಯಪಡಬೇಡ. ಆದರೆ ನನ್ನ ಗರ್ಭಕ್ಕೆ ಶ್ರೇಯಸ್ಸು ಲಭಿಸುವಂತೆ ಅದಕ್ಕೆ ಮುಂದೆ ಪ್ರಿಯವನ್ನು ಮಾಡಬೇಕೆಂದು ನಾನು ಅಪೇಕ್ಷಿಸುತ್ತೇನೆ.

೭೮. ನನ್ನ ಈ ಗರ್ಭೋತ್ಪನ್ನರಾದ ಪುತ್ರರಿಗೆ ಸ್ವರ್ಗದಲ್ಲಿ ಶಾಶ್ವತವಾದ ಏಳು ಸ್ಥಾನಗಳು ಲಭಿಸಲಿ. ನನ್ನ ಪುತ್ರರು ಈ ಪ್ರಸಿದ್ಧವಾದ ಏಳು ವಾತ್ಕಸಂಧ ಸ್ಥಾನಗಳನ್ನು ಆಳುತ್ತ ಗಣ್ಯತೆಯನ್ನು ಹೊಂದಲಿ.

**ಮರುತಸ್ತೇ ತು ವಿಖ್ಯಾತಾ ಗತಾಸ್ತೇ ಸಪ್ತಸಪ್ತಕಾಃ ।**
**ಪೃಥಿವ್ಯಾಂ ಪ್ರಥಮಸ್ಕಂಧೋ ದ್ವಿತೀಯಶ್ಚಾಪಿ ಭಾಸ್ಕರೇ ॥ ೭೯ ॥**

**ಸೋಮೇ ತೃತೀಯೋ ವಿಜ್ಞೇಯಶ್ಚತುರ್ಥೋ ಜ್ಯೋತಿಷಾಂ ಗಣೇ ।**
**ಗ್ರಹೇಷು ಪಂಚಮಶ್ಚೈವ ಷಷ್ಠಃ ಸಪ್ತರ್ಷಿಮಂಡಲೇ ॥ ೮೦ ॥**

**ಧ್ರುವೇ ತು ಸಪ್ತಮಶ್ಚೈವ ವಾತಸ್ಕಂಧಾಶ್ಚ ಸಪ್ತ ಯೇ ।**
**ತಾನೇತೇ ವಿಚರಂತ್ವದ್ಯ ಕಾಲೇ ಕಾಲೇ ಮಮಾತ್ಮಜಾಃ ॥ ೮೧ ॥**

**ವಾತಸ್ಕಂಧಾಧಿಪಾ ಭೂತ್ವಾ ಚರಂತು ಮಮ ಪುತ್ರಕಾಃ ।**
**ಪೃಥಿವ್ಯಾಂ ಪ್ರಥಮಸ್ಕಂಧ ಆ ಮೇಘೇಭ್ಯೋ ಯ ಆವಹಃ ॥ ೮೨ ॥**

**ಚರಂತು ಮಮ ಪುತ್ರಾಸ್ತೇ ಸಪ್ತ ಯೇ ಪ್ರಥಮೇ ಗಣೇ ।**
**ದ್ವಿತೀಯಶ್ಚಾಪಿ ಮೇಘೇಭ್ಯ ಆ ಸೂರ್ಯಾತ್ ಪ್ರವಹಸ್ತತಃ ॥ ೮೩ ॥**

---

೭೯. ಏಳು ಭಾಗಗಳಿಂದ ಕೂಡಿದ ಏಳು ಮಂದಿ ಪುತ್ರರು ಮರುದ್ದೇವರೆಂಬ ಖ್ಯಾತಿಯನ್ನು ಹೊಂದಲಿ. ಆ ಏಳು ವಾತಸ್ಕಂಧಗಳಲ್ಲಿ ಮೊದಲನೆಯ ವಾತಸ್ಕಂಧವು ಪೃಥಿವೀಸ್ಥಾನದಲ್ಲಿಯೂ ದ್ವಿತೀಯ ವಾತಸ್ಕಂಧವು ಸೂರ್ಯಮಂಡಲದಲ್ಲಿಯೂ ಇರುವುದು.

೮೦. ಮತ್ತು ಚಂದ್ರಮಂಡಲದಲ್ಲಿ ಮೂರನೆಯ ವಾತಸ್ಕಂಧವೂ ಜ್ಯೋತಿರ್ಗಣದಲ್ಲಿ ನಾಲ್ಕನೆಯ ವಾತಸ್ಕಂಧವೂ ಇರುವುದೆಂದು ತಿಳಿಯಬೇಕು. ಹಾಗೆಯೇ ಗ್ರಹಮಂಡಲವು ಐದನೆಯ ವಾತಸ್ಕಂಧವನ್ನೂ ಸಪ್ತರ್ಷಿಮಂಡಲವು ಆರನೆಯ ವಾತಸ್ಕಂಧವನ್ನೂ ಹೊಂದಿರುವುದು.

೮೧. ಧ್ರುವಮಂಡಲದಲ್ಲಿ ಏಳನೆಯ ವಾತಸ್ಕಂಧವು ಇರುವುದು. ಹೀಗೆ ಪ್ರಸಿದ್ಧವಾಗಿರುವ ಸಪ್ತವಾತಸ್ಕಂಧಗಳಲ್ಲಿ ನನ್ನ ಗರ್ಭೋತ್ಪನ್ನರಾದ ಪುತ್ರರು ಕಾಲಕಾಲಗಳಲ್ಲಿ ಸರಿಯಾಗಿ ಶಾಸಕರಾಗಿ ಸಂಚರಿಸಲಿ.

೮೨. ಹೀಗೆ ನನ್ನ ಪುತ್ರರು ವಾತಸ್ಕಂಧಗಳ ಪ್ರಭುಗಳಾಗಿ ಸಂಚಾರಮಾಡಲಿ. ಪೃಥಿವಿಯಲ್ಲಿ ಮೇಘಮಂಡಲದ ವರೆಗೂ ಆವಹವೆಂಬ ಹೆಸರಿನಿಂದ ಮೊದಲನೆಯ ವಾತಸ್ಕಂಧವು ಇರುವುದು

೮೩. ನನ್ನ ಪುತ್ರರಲ್ಲಿ ಪ್ರಥಮಗಣದಲ್ಲಿ ಸೇರಿದ ಏಳು ಮಂದಿಯು ಆವಹವೆಂಬ

ವಾತಸ್ಕಂಧೋ ಹಿ ವಿಜ್ಞೇಯೋ ದ್ವಿತೀಯಶ್ಚರತಾಂ ಗಣಃ ।
ಸೂರ್ಯಾದೂರ್ಧ್ವಮಧಃ ಸೋಮಾದುದ್ವಹೋಽಥ ಸ ವೈ ಸ್ಮೃತಃ
|| ೮೪ ||

ವಾತಸ್ಕಂಧಸ್ತೃತೀಯಶ್ಚ ಪುತ್ರಾಣಾಂ ಚರತಾಂ ಗಣಃ ।
ಸೋಮಾದೂರ್ಧ್ವಮ[ಧೋ]ಕ್ಷೇಭ್ಯಶ್ಚತುರ್ಥಃ ಸಂವಹಸ್ತು ಸಃ || ೮೫ ||

ಚತುರ್ಥೋ ಮಮ ಪುತ್ರಾಣಾಂ ಗಣಸ್ತು ಚರತಾಂ ವಿಭೋ ।
ಋಕ್ಷೇಭ್ಯಶ್ಚ ತಥೈವೋರ್ಧ್ವಮಾ ಗ್ರಹಾದ್ವಿವಹಸ್ತು ಯಃ || ೮೬ ||

ವಾತಸ್ಕಂಧಃ ಪಂಚಮಸ್ತು ಪುತ್ರಾಣಾಂ ಚರತಾಂ ಗಣಃ ।
ಗ್ರಹೇಭ್ಯ ಊರ್ಧ್ವಮಾರ್ಷಿಭ್ಯಃ ಷಷ್ಠೋ ಹ್ಯನುವಹಶ್ಚ ಯಃ || ೮೭ ||

---

ವಾತಸ್ಕಂಧದಲ್ಲಿ ಚರಿಸಲಿ. ಅಲ್ಲಿಂದ ಮುಂದೆ ಮೇಘಮಂಡಲದಿಂದ ಮೊದಲುಗೊಂಡು ಸೂರ್ಯಮಂಡಲದ ವರೆಗೆ ಪ್ರವಹವೆಂಬ ಸಂಜ್ಞೆಯನ್ನು ಹೊಂದಿದ ಎರಡನೆಯ ವಾತಸ್ಕಂಧವು ಇರುವುದು.

೮೪. ಆ ಎರಡನೆಯ ಪ್ರವಹ ವಾತಸ್ಕಂಧದಲ್ಲಿ ನನ್ನ ಪುತ್ರರ ಎರಡನೆಯ ಗಣವು ಸಂಚರಿಸಲಿ, ಸೂರ್ಯಮಂಡಲದಿಂದ ಊರ್ಧ್ವಭಾಗದಲ್ಲಿ ಚಂದ್ರಮಂಡಲ ಪರ್ಯಂತವಾಗಿ ಇರುವ ವಾತಸ್ಕಂಧವು ಉದ್ವಹವೆಂಬ ಸಂಜ್ಞೆಯಿಂದ ಸ್ಮರಿಸಲ್ಪಟ್ಟಿದೆ.

೮೫. ಈ ವಾತಸ್ಕಂಧದಲ್ಲಿ ನನ್ನ ಪುತ್ರರ ತೃತೀಯಗಣವು ಸಂಚಾರವನ್ನು ಮಾಡಲಿ, ಸೋಮಮಂಡಲದಿಂದ ಊರ್ಧ್ವಭಾಗದಲ್ಲಿ ನಕ್ಷತ್ರಮಂಡಲದಿಂದ ಅಧೋಭಾಗದಲ್ಲಿರುವ ವಾತಸ್ಕಂಧವು ಸಂವಹವೆಂದು ಕೀರ್ತಿತವಾಗಿದೆ.

೮೬. ವ್ಯಾಪಕಶಕ್ತಿಯುಳ್ಳ ಇಂದ್ರನೆ! ಆ ವಾತಸ್ಕಂಧವನ್ನು ನನ್ನ ಪುತ್ರರ ನಾಲ್ಕನೆಯ ಗಣವು ಶಾಸನಮಾಡಲಿ. ನಕ್ಷತ್ರಮಂಡಲದಿಂದ ಗ್ರಹಮಂಡಲದ ವರೆಗೆ ಇರುವ ಐದನೆಯ ವಾತಸ್ಕಂಧವನ್ನು ವಿವಹವೆಂದು ಕರೆಯುವರು.

೮೭. ಈ ಐದನೆಯ ವಾತಸ್ಕಂಧವನ್ನು ನನ್ನ ಪುತ್ರರ ಮತ್ತೊಂದು ಗಣವು ಆಶ್ರಯಿಸಿ ಸಂಚರಿಸಲಿ. ಗ್ರಹಮಂಡಲದಿಂದ ಮೇಲೆ ಸಪ್ತರ್ಷಿಮಂಡಲದ ವರೆಗೆ ಅನುವಹವೆಂಬ ವಾತಸ್ಕಂಧವಿರುವುದಾಗಿ ಸ್ಮರಿಸಲ್ಪಟ್ಟಿದೆ.

ವಾತಸ್ಕಂಧಸ್ತತ್ರ ಮಮ ಪುತ್ರಾಣಾಂ ಚರತಾಂ ಗಣಃ ।
ಋಷಿಭ್ಯ ಊರ್ಧ್ವರ್ಮಾಧ್ರುವಂ ಸಪ್ತಮೋ ಯಃ ಪ್ರಕೀರ್ತಿತಃ॥ ೮೮ ॥

ವಾತಸ್ಕಂಧಃ ಪರಿವಹಸ್ತತ್ರ ತಿಷ್ಠಂತು ಮೇ ಸುತಾಃ ।
ಏತಾನ್ ಸರ್ವಾಂಶ್ಚರಂತ್ವೇತೇ ಕಾಲೇ ಕಾಲೇ ಮಮಾತ್ಮಜಾಃ ॥ ೮೯ ॥

ತ್ವತ್ಕೃತೇನ ಚ ನಾಮ್ನಾ ವೈ ಭವಂತು ಮರುತಸ್ತ್ವಿಮೇ ।
ತತಸ್ತೇಷಾಂ ತು ನಾಮಾನಿ ಮತ್ಪುತ್ರಾಣಾಂ ಶತಕ್ರತೋ ॥ ೯೦ ॥

ತದ್ವಿಧೈಃ ಕರ್ಮಭಿಶ್ಚೈವ ಸಮವೇಹಿ ಪೃಥಕ್ ಪೃಥಕ್ ।
ಶಕ್ರಜ್ಯೋತಿಸ್ತಥಾ ಸತ್ಯಃ ಸತ್ಯಜ್ಯೋತಿಸ್ತಥಾಪರಃ. ॥ ೯೧ ॥

ಚಿತ್ರಜ್ಯೋತಿಶ್ಚ ಜ್ಯೋತಿಷ್ಮಾನ್ ಸುತಪಾಶ್ಚೈತ್ಯ ಏವ ಚ ।
ಪ್ರಥಮೋಽಯಂ ಗಣಃ ಪ್ರೋಕ್ತೋ ದ್ವಿತೀಯಂ ತು ನಿಬೋಧತ ॥ ೯೨ ॥

---

೮೮. ಅಲ್ಲಿ ನನ್ನ ಪುತ್ರರ ಮತ್ತೊಂದು ಗಣವು ಶಾಸನಮಾಡುತ್ತ ಇರಲಿ. ಋಷಿ ಮಂಡಲ ಮೊದಲುಗೊಂಡು ಧ್ರುವ ಮಂಡಲ ಪರ್ಯಂತವಾಗಿ ಇರುವ ವಾತ ಸ್ಕಂಧವನ್ನು ಪರಿವಹವೆಂಬ ಸಂಕೇತದಿಂದ ಕರೆಯುವರು.

೮೯. ಆ ಏಳನೆಯ ಪರಿವಹ ವಾತಸ್ಕಂಧದಲ್ಲಿ ಮತ್ತೊಂದು ನನ್ನ ಪುತ್ರರ ಗುಂಪು ಸಂಚಾರಮಾಡಲಿ. ಹೀಗೆ ನನ್ನ ಗರ್ಭೋತ್ಪನ್ನರಾದ ಈ ಎಲ್ಲ ಪುತ್ರರು ಆಯಾಯ ಕಾಲಗಳಲ್ಲಿ ಎಲ್ಲ ವಾತಸ್ಕಂಧಗಳನ್ನು ಆಳಿಕೊಂಡು ಇರಲಿ.

೯೦. ಮತ್ತು ನನ್ನ ಪುತ್ರರು "ಮಾರುದ"=ರೋದನ ಮಾಡಬೇಡವೆಂದು ಹೇಳಿದುದರಿಂದ ಮರುತ್ ಎಂಬ ನಿನ್ನಿಂದ ಸ್ಥಾಪಿಸಲ್ಪಟ್ಟ ನಾಮದಿಂದ ಪ್ರಸಿದ್ಧ ರಾಗಿರಲಿ. ಹಾಗೂ ಇಂದ್ರನೆ! ನನ್ನ ಪುತ್ರರಿಗೆ ಪ್ರತ್ಯೇಕವಾಗಿಯೂ ಪ್ರಸಿದ್ಧ ನಾಮಗಳಿರಬೇಕು.

೯೧. ನನ್ನ ಪುತ್ರರ ಅಸಾಧಾರಣವಾದ ಕರ್ಮಗಳನ್ನು ಅನುಸರಿಸಿ ಅನುರೂಪ ವಾದ ಪ್ರತ್ಯೇಕನಾಮಗಳನ್ನು ತಿಳಿ. ಪ್ರಥಮಗಣದ ಪುತ್ರರಲ್ಲಿ ಕ್ರಮವಾಗಿ ಶಕ್ರಜ್ಯೋತಿ, ಸತ್ಯ, ಸತ್ಯಜ್ಯೋತಿ ಎಂಬುವು ಮೂರು ಮಂದಿಯ ಹೆಸರುಗಳು.

೯೨. ಹಾಗೆಯೇ ಚಿತ್ರಜ್ಯೋತಿ, ಜ್ಯೋತಿಷ್ಮಾನ್, ಸುತಪಾ ಮತ್ತು ಚೈತ್ಯ ಎಂಬುವು ಸೇರಿ ಪ್ರಥಮಗಣದ ಸಪ್ತಪುತ್ರರ ನಾಮಗಳಾಗಿವೆ. ಹೀಗೆ ಪ್ರಥಮಗಣ ವನ್ನು ಹೇಳಿರುವೆನು. ಮುಂದೆ ದ್ವಿತೀಯಗಣವನ್ನು ಶ್ರವಣಮಾಡಿರಿ.

ಋತಜಿತ್ ಸತ್ಯಜಿಚ್ಚೈವ ಸುಷೇಣಃ ಸೇನಜಿತ್ತಥಾ ।
ಸುತಮಿತ್ರೋ ಹ್ಯಮಿತ್ರಶ್ಚ ಸುರಮಿತ್ರಸ್ತಥಾಪರಃ ॥ ೯೩ ॥

ಗಣ ಏಷ ದ್ವಿತೀಯಸ್ತು ತೃತೀಯಂ ಚ ನಿಬೋಧತ ।
ಧಾತುಶ್ಚ ಧನದಶ್ಚೈವ ಹ್ಯುಗ್ರೋ ಭೀಮಸ್ತಥೈವ ಚ ॥ ೯೪ ॥

ವರುಣಶ್ಚ ತೃತೀಯಂ ಚ ಮಯಾ ಪ್ರೋಕ್ತಂ ನಿಬೋಧತ ।
ಅಭಿಯುಕ್ತಾಕ್ಷಿಕಶ್ಚೈವ ಸಾಹ್ವಯಶ್ಚ ಗಣಃ ಸ್ಮೃತಃ ॥ ೯೫ ॥

ಈದೃಕ್ಚೈವ ತಥಾನ್ಯಾದೃಕ್ ಸಸರಿದ್ದ್ರುಮವೃಕ್ಷಕಾಃ ।
ಮಿತಶ್ಚ ಸಮಿತಶ್ಚೈವ ಪಂಚಮಶ್ಚ ತಥಾ ಗಣಃ ॥ ೯೬ ॥

ಈದೃಕ್ ಚ ಪುರುಷಶ್ಚೈವ ನಾನ್ಯಾದೃಕ್ ಸಮಚೇತನಃ ।
ಸಂಮಿತಃ ಸಮವೃತ್ತಿಶ್ಚ ಪ್ರತಿಹರ್ತಾ ಚ ಷಡ್ಗಣಾಃ ॥ ೯೭ ॥

---

೯೩. ಎರಡನೆಯ ವಾತಸ್ಕಂಧದಲ್ಲಿರುವ ನನ್ನ ಪುತ್ರರಿಗೆ ಕ್ರಮವಾಗಿ ಋತಜಿತ್, ಸತ್ರಜಿತ್, ಸುಷೇಣ, ಸೇನಜಿತ್, ಸುತಮಿತ್ರ, ಅಮಿತ್ರ ಮತ್ತು ಸುರಮಿತ್ರ ಎಂಬುದಾಗಿ ಅಸಾಧಾರಣವಾದ ನಾಮಗಳಾಗಿ ಪ್ರಸಿದ್ಧವಾಗಲಿ.

೯೪. ಹೀಗೆ ದ್ವಿತೀಯಗಣವು ಸಂಪೂರ್ಣವಾಗಿ ಹೇಳಲ್ಪಟ್ಟಿತು. ಮುಂದೆ ತೃತೀಯ ಗಣವನ್ನು ಕೇಳಿರಿ. ಧಾತು, ಧನದ, ಉಗ್ರ ಮತ್ತು ಭೀಮ ಎಂಬುವು ತೃತೀಯ ಗಣದಲ್ಲಿರುವ ನನ್ನ ನಾಲ್ಕು ಮಂದಿ ಪುತ್ರರ ಹೆಸರುಗಳು.

೯೫. ಮತ್ತು ವರುಣ ಎಂಬಿವೇ ಮೊದಲಾದ ನಾಮಪ್ರಸಿದ್ಧಿಯುಳ್ಳ ನಾನು ಹೇಳಿರುವ ತೃತೀಯ ಗಣವನ್ನು ತಿಳಿಯಿರಿ. ಮತ್ತು ನಾಲ್ಕನೆಯ ಗಣದಲ್ಲಿರುವ ನನ್ನ ಪುತ್ರರಿಗೆ ಅಭಿಯುಕ್ತ, ಆಕ್ಷಿಕ, ಸಾಹ್ವಯ ಮುಂತಾದ ಹೆಸರುಗಳಿವೆ. ಅವರಿಂದ ನಾಲ್ಕನೆಯ ಗಣವು ಪೂರ್ಣವಾಗಿದೆ.

೯೬. ಮತ್ತು ಈದೃಕ್, ಅನ್ಯಾದೃಕ್, ಸರಿತ್, ದ್ರುಮ, ವೃಕ್ಷ, ಮಿತ ಮತ್ತು ಸಮಿತ ಎಂಬುದಾಗಿ ಪಂಚಮಗಣದ ನನ್ನ ಪುತ್ರರಿಗೆ ಇರುವ ಕ್ರಮವಾದ ಹೆಸರುಗಳನ್ನು ತಿಳಿಯಬೇಕು.

೯೭. ಈದೃಕ್, ಪುರುಷ, ನಾನ್ಯಾದೃಕ್, ಸಮಚೇತನ, ಸಂಮಿತ, ಸಮವೃತ್ತಿ ಮತ್ತು ಪ್ರತಿಹರ್ತಾ ಎಂಬುವು ಕ್ರಮವಾಗಿ ಆರನೆಯ ವಾತಸ್ಕಂಧದಲ್ಲಿರುವ ನನ್ನ ಪುತ್ರರ ಹೆಸರುಗಳಾಗಿವೆ-

**ಯಜ್ಞೈಶ್ಚಿತ್ವಾಸ್ತುವನ್ ಸರ್ವೇ ತಥಾನ್ಯೇ ಮಾನುಷಾ ವಿಶಃ ।**
**ದೈತ್ಯದೇವಾಃ ಸಮಾಖ್ಯಾತಾಃ ಸಪ್ತೈತೇ ಸಪ್ತಸಪ್ತಕಾಃ ॥ ೯೮ ॥**

**ಏತೇ ಹ್ಯೇಕೋನಪಂಚಾಶನ್ಮರುತೋ ನಾಮತಃ ಸ್ಮೃತಾಃ ।**
**ಪ್ರಸಂಖ್ಯಾತಾಸ್ತದಾ ತಾಭ್ಯಾಂ ದಿತ್ಯಾ ಶಕ್ರೇಣ ಚೈವ ವೈ ॥ ೯೯ ॥**

**ಕೃತ್ವಾ ಚೈತಾನಿ ನಾಮಾನಿ ದಿತಿರಿಂದ್ರಮುವಾಚ ಹ ।**
**ವಾತಸ್ಕಂಧಾಂಶ್ಚರಂತ್ವೇತೇ ಭ್ರಾತರೋ ಮಮ ಪುತ್ರಕಾಃ ॥ ೧೦೦ ॥**

**ವಿಚರಂತು ಚ ಭದ್ರಂ ತೇ ದೇವೈಃ ಸಹ ಮಮಾತ್ಮಜಾಃ ।**
**ತಸ್ಯಾಸ್ತದ್ವಚನಂ ಶ್ರುತ್ವಾ ಸಹಸ್ರಾಕ್ಷಃ ಪುರಂದರಃ ॥ ೧೦೧ ॥**

**ಉವಾಚ ಪ್ರಾಂಜಲಿರ್ಭೂತ್ವಾ ಮಾತರ್ಭವತು ತತ್ತಥಾ ।**
**ಸರ್ವಮೇತದ್ಯಥೋಕ್ತಂ ತೇ ಭವಿಷ್ಯತಿ ನ ಸಂಶಯಃ ॥ ೧೦೨ ॥**

---

೯೮. ಇವರು ಎಲ್ಲರೂ ಯಜ್ಞಗಳನ್ನು ಆಚರಿಸಿ ಮನುಷ್ಯ ಪ್ರಜೆಗಳಂತೆ ಪರಮಾತ್ಮನನ್ನು ಸ್ತುತ್ಯಾದಿಗಳಿಂದ ಸತ್ಕರಿಸಿದರು. ಮತ್ತು ದೈತ್ಯದೇವರೆಂದು ಸಂಕೇತವುಳ್ಳವರಾದರು. ಇವರು ಏಳು ಏಳು ವ್ಯಕ್ತಿಗಳಿಂದ ಕೂಡಿದ ಸಪ್ತರ್ಷಿ ಗಣಗಳಾದರು.

೯೯. ಈ ರೀತಿಯಾಗಿ ನಲವತ್ತೊಂಭತ್ತುಮಂದಿ ಮರುದ್ದೇವತೆಗಳ ಪ್ರತ್ಯೇಕ ನಾಮಧೇಯಗಳು ಸ್ಮರಿಸಲ್ಪಟ್ಟಿವೆ. ಹಿಂದೆ ದಿತಿ ಮತ್ತು ಇಂದ್ರರ ಸಂವಾದದಲ್ಲಿ ಈ ಹೆಸರುಗಳು ಅವರಿಬ್ಬರಿಂದ ಎಣಿಸಲ್ಪಟ್ಟವುಗಳಾಗಿವೆ.

೧೦೦. ದಿತಿಯು ಈ ರೀತಿಯಾದ ನಾಮಗಳನ್ನು ಪುತ್ರರಿಗೆ ಕೊಟ್ಟು ಇಂದ್ರನನ್ನು ಕುರಿತು ಹೇಳಿದಳು. ನನ್ನ ಪುತ್ರರೂ ನಿನಗೆ ಭ್ರಾತೃಗಳೂ ಆದ ಈ ಮರುದ್ದೇವತೆಗಳು ವಾತಸ್ಕಂಧಾಭಿಮಾನಿಗಳಾಗಿ ನಡೆದುಕೊಳ್ಳಲಿ.

೧೦೧. ಮತ್ತು ಸರ್ವ ವ್ಯವಹಾರಗಳಲ್ಲಿ ನನ್ನ ಪುತ್ರರು ದೇವತೆಗಳೊಂದಿಗೆ ವಿಹರಿಸಿಕೊಂಡು ಇರಲಿ. ಹೀಗೆ ಪ್ರಿಯವನ್ನು ನೀನು ಮಾಡು, ನಿನಗೆ ಮಂಗಳವಾಗಲಿ. ಎಂದು ಹೇಳಲಾಗಿ ಸಹಸ್ರ ನೇತ್ರಗಳಿಂದ ಕೂಡಿದ ಶತ್ರುಜೇತನಾದ ಇಂದ್ರನು ಆ ವಚನವನ್ನು ಕೇಳಿದನು.

೧೦೨. ಮತ್ತು ಅಂಜಲಿಯನ್ನು ಕಟ್ಟಿಕೊಂಡು ಈ ರೀತಿಯಾಗಿ ಹೇಳಿದನು. ತಾಯಿಯೆ! ನೀನು ಕೇಳಿಕೊಂಡಂತೆ ಎಲ್ಲವೂ ಆಗಲಿ, ನೀನು ಪುತ್ರರ ವಿಷಯ

**ಏವಂಭೂತಾ ಮಹಾತ್ಮಾನಃ ಕುಮಾರಾ ಲೋಕಸಮ್ಮತಾಃ ।**
**ದೇವೈಃ ಸಹ ಭವಿಷ್ಯಂತಿ ಯಜ್ಞಭಾಜಸ್ತವಾತ್ಮಜಾಃ ॥ ೧೦೩ ॥**

**ತಸ್ಮಾತ್ತೇ ಮರುತೋ ದೇವಾಃ ಸರ್ವೇ ಚೇಂದ್ರಾನುಜಾ ವರಾಃ ।**
**ವಿಜ್ಞೇಯಾಶ್ಚಾಮರಾಃ ಸರ್ವೇ ದಿತಿಪುತ್ರಾಸ್ತಪಸ್ವಿನಃ ॥ ೧೦೪ ॥**

**ಏವಂ ತೌ ನಿಶ್ಚಯಂ ಕೃತ್ವಾ ಮಾತಾಪುತ್ರೌ ತಪೋವನೇ ।**
**ಜಗ್ಮತುಸ್ತ್ರಿದಿವಂ ಹೃಷ್ಟೌ ಶಕ್ರಶ್ಚಾಭೂದ್ಗತಜ್ವರಃ ॥ ೧೦೫ ॥**

**ಮರುತಾಂ ಚ ಶುಭಂ ಜನ್ಮ ಶೃಣುಯಾದ್ಯಃ ಪಠೇಚ್ಚ ವಾ ।**
**ವಾದೀ ವಿಜಯಮಾಪ್ನೋತಿ ಲಬ್ಧಾತ್ಮಾ ಚ ಭವತ್ಯುತ ॥ ೧೦೬ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಪಂಚಮೋಽಧ್ಯಾಯಃ**

---

ದಲ್ಲಿ ಏನೇನನ್ನು ಕೇಳಿರುವೆಯೋ ಅದೆಲ್ಲವೂ ನಿಸ್ಸಂಶಯವಾಗಿ ಹಾಗೆಯೇ ಆಗು ವುದು.

೧೦೩. ನೀನು ಕೇಳಿದ ಸಕಲ ಪ್ರಚಾರಗಳಿಂದ ಕೂಡಿ ಮಹಾತ್ಮರಾದ ನಿನ್ನ ಪುತ್ರರು ಜನರ ಆದರ ಭಾಗಿಗಳೂ ದೇವತೆಗಳೊಡನೆ ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಅರ್ಹರೂ ಆಗುತ್ತಾರೆ.

೧೦೪. ಆದುದರಿಂದ ಇಂದ್ರನ ಅನುಜರೂ, ಶ್ರೇಷ್ಠರೂ, ವೇಗಶಾಲಿಗಳೂ, ಮತ್ತು ದೇವಗಣದಲ್ಲಿ ಸೇರಿದವರೂ ಆದ ದಿತಿ ಪುತ್ರರನ್ನು ಮಹಾತ್ಮರಾದ ಮರು ದ್ದೇವತೆಗಳೆಂದು ಅರಿಯಬೇಕು.

೧೦೫. ಈ ರೀತಿಯಾಗಿ ಜನನಿ, ಪುತ್ರರು ತಪೋವನದಲ್ಲಿ ನಿರ್ಣಯವನ್ನು ಕಲ್ಪಿಸಿಕೊಂಡು ಸಂತೋಷಭರಿತರಾಗಿ ಸ್ವರ್ಗಲೋಕವನ್ನು ಕುರಿತು ಪ್ರಯಾಣ ಮಾಡಿದರು, ಇಂದ್ರನು ತನ್ನನ್ನು ಕೊಲ್ಲುವ ಪುತ್ರನ ಉತ್ಪತ್ತಿಯಿಂದ ಉಂಟಾದ ಮನಸ್ತಾಪವನ್ನು ಕಳೆದುಕೊಂಡನು.

೧೦೬. ಹೀಗೆ ಮರುದ್ದೇವತೆಗಳ ಈ ಶುಭಕರವಾದ ಜನ್ಮಚರಿತ್ರೆಯನ್ನು ಶ್ರವಣ ಅಥವಾ ಪಠನಮಾಡಿದ ಮಾನವನು ವಾದದಲ್ಲಿ ಜಯವನ್ನು ಹೊಂದಿ ಉತ್ತಮವಾದ ಆತ್ಮಾಧಿಕಾರವನ್ನು ಹೊಂದುವನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಐದನೆಯ ಅಧ್ಯಾಯ ಮುಗಿದುದು.

## ಷಷ್ಠೋಽಧ್ಯಾಯಃ

**ಸೂತ ಉವಾಚ :**

**ಅಭವನ್ ದನುಪುತ್ರಾಸ್ತು ವಂಶೇ ಖ್ಯಾತಾ ಮಹಾಸುರಾಃ ।**
**ವಿಪ್ರಚಿತ್ತಿಪ್ರಧಾನಾಸ್ತೇಽಚಿಂತನೀಯಪರಾಕ್ರಮಾಃ ॥ ೧ ॥**

**ಸರ್ವೇ ಲಬ್ಧವರಾಶ್ಚೈವ ತೇ ತಪ್ತತಪಸಸ್ತಥಾ ।**
**ಸತ್ಯಸಂಧಾಃ ಪರಾಕ್ರಾಂತಾಃ ಕ್ರೂರಾ ಮಾಯಾವಿನಶ್ಚ ತೇ ॥ ೨ ॥**

**ಮಹಾಬಲಾಸ್ತೇ ಜವನಾ ಬ್ರಹ್ಮಿಷ್ಠಾ ಯೇ ಚ ಸಾಗ್ನಯಃ ।**
**ಕೀರ್ತ್ಯಮಾನಾನ್ ಮಯಾ ಸರ್ವಾನ್ ಪ್ರಾಧಾನ್ಯೇನ ನಿಬೋಧತ ॥ ೩ ॥**

**ದ್ವಿಮೂರ್ಧಾ ಶಂಬರಶ್ಚೈವ ತಥಾ ಶಂಕುರಥೋ ವಿಭುಃ ।**
**ಶಂಕುಕರ್ಣೋ ವಿಷಾದಶ್ಚ ಗವಿಷ್ಠೋ ದುಂದುಭಿಸ್ತಥಾ ॥ ೪ ॥**

---

ಸೂತಮುನಿಯು ಪುರಾಣಾಖ್ಯಾನವನ್ನು ಮುಂದುವರಿಸಿ ಹೇಳಿದನು.

೧. ದನು ಎಂಬುವನ ವಂಶದಲ್ಲಿ ಅವನ ಪುತ್ರರಾದ ವಿಪ್ರಚಿತ್ತಿ ಮುಂತಾದ ಚಿಂತಿಸಲು ಕೂಡ ಅಶಕ್ಯವಾದ ಪರಾಕ್ರಮದಿಂದ ಕೂಡಿದ ಅನೇಕ ಮಹಾಸುರರು ಹುಟ್ಟಿ ಪ್ರಸಿದ್ಧರಾಗಿದ್ದರು.

೨. ಆ ಅಸುರರು ಮಹಾತಪಸ್ಸನ್ನು ಆಚರಿಸಿದವರೂ. ವರವನ್ನು ಹೊಂದಿದವರೂ, ಸತ್ಯಸಂಧರೂ, ಮಹಾ ಪರಾಕ್ರಮ ಸಂಪನ್ನರೂ, ಕ್ರೂರರೂ ಮತ್ತು ಮಾಯಾವಿಗಳೂ ಆಗಿದ್ದರು.

೩. ಮತ್ತು ಮಹಾಬಲದಿಂದ ಕೂಡಿದವರೂ, ವೇಗಶಾಲಿಗಳೂ, ಬ್ರಹ್ಮವಾದಿಗಳೂ ಮತ್ತು ಆಹಿತಾಗ್ನಿಗಳೂ ಆಗಿದ್ದರು. ಅವರಲ್ಲಿ ನಾನು ಕೀರ್ತಿಸುವ ಪ್ರಧಾನ ವ್ಯಕ್ತಿಗಳನ್ನು ಮಾತ್ರ ಶ್ರವಣಮಾಡಿರಿ.

೪. ದ್ವಿಮೂರ್ಧ, ಶಂಬರ, ಶಂಕುರಥ, ಶಂಕುಕರ್ಣ, ವಿಭು, ವಿಷಾದ, ಗವಿಷ್ಠ ಮತ್ತು ದುಂದುಭಿ ಎಂಬುವ ಕೆಲವು ಅಸುರರ ವರ್ಗವು ಪ್ರಧಾನವಾಗಿತ್ತು.

ಅಯೋಮುಖಸ್ತು ಮಘವಾನ್ ಕಪಿಲೋ ವಾಮನೋ ಮಯಃ ।
ಮಾರೀಚಿರಸಿಪಾಶ್ಚೈವ ಮಹಾಮಾಯೋಽಶಿರಾ ಭೃಶೀ ॥ ೫ ॥

ವಿಕ್ಷೋಭಶ್ಚ ಸುಕೇತುಶ್ಚ ಕೇತುವೀರ್ಯಶ್ಶತಾಹ್ವಯೌ ।
ಇಂದ್ರಜಿದ್ದ್ವಿವಿದಶ್ಚೈವ ತಥಾ ಭದ್ರಶ್ಚ ದೇವಜಿತ್ ॥ ೬ ॥

ಏಕಚಕ್ರೋ ಮಹಾಬಾಹುಸ್ತಾ ಕಶ್ಚ ಮಹಾಬಲಃ ।
ವೈಶ್ವಾನರಃ ಪುಲೋಮಾ ಚ ಪ್ರಾಪಣೋಽಥ ಮಹಾಶಿರಾಃ ॥ ೭ ॥

ಸ್ವರ್ಭಾನುರ್ವೃಷಪರ್ವಾ ಚ ಪುರುಂಡಶ್ಚ ಮಹಾಸುರಃ ।
ಧೃತರಾಷ್ಟ್ರಶ್ಚ ಸೂರ್ಯಶ್ಚ ಚಂದ್ರಮಾ ಇಂದ್ರತಾಪನಃ ॥ ೮ ॥

ಸೂಕ್ಷ್ಮಶ್ಚೈವ ನಿಚಂದ್ರಶ್ಚ ಚೂರ್ಣನಾಭೋ ಮಹಾಗಿರಿಃ ।
ಅಸಿಲೋಮಾ ಸುಕೇಶಶ್ಚ ಶಠಶ್ಚ ಮೂಲಕೋದರಃ ॥ ೯ ॥

---

೫. ಅಯೋ ಮುಖ, ಮಘವಾನ್, ಕಪಿಲ, ವಾಮನ, ಮಯ, ಮಾರೀಚಿ, ಅಸಿಪ, ಮಹಾಮಾಯ, ಅಶಿರಾ ಮತ್ತು ಭೃಶೀ ಎಂಬುದಾಗಿ ಕೆಲವರು ಅವರಲ್ಲಿ ಸೇರಿದ್ದರು.

೬. ವಿಕ್ಷೋಭ, ಸುಕೇತು, ಕೇತುವೀರ್ಯ, ಶತಾಹ್ವಯ, ಇಂದ್ರಜಿತ್, ದ್ವಿವಿದ ಭದ್ರ, ಮತ್ತು ದೇವಜಿತ್ ಎಂಬುವರು ಹಾಗೆಯೆ ಅಸುರವರ್ಗದ ನಾಯಕರೆಂದು ಪ್ರಖ್ಯಾತರಾಗಿದ್ದರು.

೭. ಏಕಚಕ್ರ, ಮಹಾಬಾಹು, ತಾರಕ ಮಹಾಬಲ, ವೈಶ್ವಾನರ, ಪುಲೋಮ, ಪ್ರಾಪಣ ಮತ್ತು ಮಹಾಶಿರ ಎಂಬ ನಾಮಾಂಕಿತರಾಗಿ ಕೆಲವು ಪ್ರಧಾನಾಸುರವ್ಯಕ್ತಿಗಳಿದ್ದರು.

೮. ಸ್ವರ್ಭಾನು, ವೃಷಪರ್ವಾ, ಪುರುಂಡ, ಧೃತರಾಷ್ಟ್ರ, ಸೂರ್ಯ, ಚಂದ್ರ, ಇಂದ್ರ ತಾಪನರೆಂದು ಕೆಲವು ಮಹಾಸುರರು ದೇವತನ್ನೆ ತಪಿಸುವವರಾಗಿದ್ದರು.

೯, ಸೂಕ್ಷ್ಮ, ನಿಚಂದ್ರ, ಚೂರ್ಣನಾಭ, ಮಹಾಗಿರಿ, ಅಸಿಲೋಮ, ಸುಕೇಶ ಶಠ ಮತ್ತು ಮೂಲಕೋದರ ಎಂಬುವುದೊಂದು ಕರಾಳ ಅಸುರರ ಗುಂಪು ಇತ್ತು.

ಜಂಭೋ ಗಗನಮೂರ್ಧಾ ಚ ಕುಂಭಮಾನೋ ಮಹೋದಕಃ ।
ಪ್ರಮದೋಽದ್ಮಶ್ಚ ಕುಪಥೋ ಹ್ಯಶ್ವಗ್ರೀವಶ್ಚ ವೀರ್ಯವಾನ್ ॥ ೧೦ ॥

ವೈಮೃಗಃ ಸವಿರೂಪಾಕ್ಷಃ ಸುಪಥಶ್ಚ ಹಲಾಹಲೌ ।
ಅಕ್ಷೋ ಹಿರಣ್ಮಯಶ್ಚೈವ ಶತಗ್ರೀವಶ್ಚ ಶಂಬರಃ ॥ ೧೧ ॥

ಶರಭಃ ಶ್ವಲಭಶ್ಚೈವ ಸೂರ್ಯಾಚಂದ್ರಮಸಾವುಭೌ ।
ಅಸುರಾಣಾಂ ಸ್ಮೃತಾವೇತೌ ಸುರಾಣಾಂ ಚ ಪ್ರಭಾವಿಣೌ ॥ ೧೨ ॥

ಇತಿ ಪುತ್ರಾ ದನೋರ್ವಂಶಪ್ರಧಾನಾಃ ಪರಿಕೀರ್ತಿತಾಃ ।
ತೇಷಾಮಪರಿಸಂಖ್ಯೇಯಂ ಪುತ್ರಪೌತ್ರಮನಂತಕಮ್ ॥ ೧೩ ॥

ಇತ್ಯೇತ ಅಸುರಾಃ ಕ್ರಾಂತಾ ದೈತೇಯಾ ದಾನವಾಸ್ತಥಾ ।
ಸುತ್ವಾನಸ್ತು ಸ್ಮೃತಾ ದೈತ್ಯಾ ಅಸುತ್ವಾನೋ ದನೋಃ ಸುತಾಃ ॥ ೧೪ ॥

---

೧೦. ಜಂಭ, ಗಗನಮೂರ್ಧ, ಕುಂಭಮಾನ, ಮಹೋದಕ, ಪ್ರಮದ, ಅದ್ಮ, ಕುಪಥ, ಅಶ್ವಗ್ರೀವ ಮತ್ತು ವೀರ್ಯವಾನ್ ಎಂಬುವರು ಮತ್ತೆ ಕೆಲವು ಮಂದಿ ಮಹಾಸುರರಾಗಿದ್ದರು.

೧೧. ಮತ್ತು ವೈಮೃಗ, ವಿರೂಪಾಕ್ಷ, ಸುಪಥ, ಹಲ, ಆಹಲ, ಅಕ್ಷ, ಹಿರಣ್ಮಯ, ಶತಗ್ರೀವ ಮತ್ತು ಶಂಬರ ಎಂಬುವರು ಪ್ರಧಾನಾಸುರ ಪದವನ್ನು ಅಲಂಕಾರಮಾಡಿದ್ದರು.

೧೨. ಶರಭ, ಶ್ವಲಭ, ಎಂಬೀರ್ವರು ಆಸುರರಲ್ಲಿ ಮತ್ತು ಸುರರಲ್ಲಿ ಮಹಾಪ್ರಭಾವವನ್ನು ಹೊಂದಿರುವುದರಿಂದ ಸೂರ್ಯ ಮತ್ತು ಚಂದ್ರರಂತೆ ದೀಪ್ಯಮಾನರಾಗಿದ್ದರು.

೧೩. ಈ ರೀತಿಯಾಗಿ ದನು ಎಂಬುವನ ವಂಶದಲ್ಲಿ ಹುಟ್ಟಿದ ಪ್ರಧಾನರಾದ ಅಸುರರನ್ನು ಮಾತ್ರ ಕೀರ್ತನ ಮಾಡಿರುತ್ತೇನೆ. ಇವರ ಪುತ್ರ ಪೌತ್ರ ಮುಂತಾದ ಅಪಾರವಾದ ವಂಶಾವಳಿಯು ಪೂರ್ತಿಯಾಗಿ ಎಣಿಸಲಾಗುವುದಿಲ್ಲ.

೧೪. ಈ ರೀತಿಯಾಗಿ ಹಿಂದೆ ಹೇಳಲ್ಪಟ್ಟಿರುವ ದೈತೇಯ ಮತ್ತು ದಾನವರಲ್ಲಿ ದಿತಿಪುತ್ರರು ಸುತ್ವಾ ಎಂಬ ಹೆಸರಿನಿಂದ ಪ್ರಖ್ಯಾತರಾಗಿರುವರು. ಹಾಗೆ ದನುಪುತ್ರರು ಅಸುತ್ವಾ ಎಂದು ಸ್ಮರಿಸಲ್ಪಟ್ಟಿರುವರು.

ಇಮೇ ಚ ವಂಶಾನುಗತಾ ದನೋಃ ಪುತ್ರಾನ್ವಯಾಃ ಸ್ಮೃತಾಃ ।
ಏಕಾಕ್ಷೋಽಶ್ವಪ್ರಭೋಽರಿಷ್ಟಃ ಪ್ರಲಂಬನರಕಾವಪಿ ॥ ೧೫ ॥

ಇಂದ್ರಬಾಧನಕೇಶೀ ಚ ಪುರುಷಃ ಶೇಷವಾನುರುಃ ।
ಗರಿಷ್ಠಶ್ಚ ಗವಾಕ್ಷಶ್ಚ ಕಾಲಕೇತುಶ್ಚ ವೀರ್ಯವಾನ್ ॥ ೧೬ ॥

ಏತೇ ಮನುಷ್ಯಾವಧ್ಯಾಸ್ತು ದನುಪುತ್ರಾನ್ವಯಾಃ ಸ್ಮೃತಾಃ ।
ದೈತ್ಯದಾನವಸಂಯೋಗೇ ಜಾತಾ ಭೀಮಪರಾಕ್ರಮಾಃ ॥ ೧೭ ॥

ಸಿಂಹಿಕಾಯಾಮಥೋತ್ಪನ್ನಾ ವಿಪ್ರಚಿತ್ತೇಃ ಸುತಾ ಇಮೇ ।
ಸೈಂಹಿಕೇಯಾಃ ಸಮಾಖ್ಯಾತಾಶ್ಚತುರ್ದಶ ಮಹಾಸುರಾಃ ॥ ೧೮ ॥

ಶಲಶ್ಚ ಶಲಭಶ್ಚೈವ ಸವ್ಯಾಸವ್ಯಸ್ತಥೈವ ಚ ।
ಇಲ್ವಲೋ ನಮುಚಿಶ್ಚೈವ ವಾತಾಪಿಸ್ತು ಸುಪುಂಜಿಕಃ ॥ ೧೯ ॥

---

೧೫- ಮುಂದೆ ಹೇಳುವವರು ದನುವಿನ ವಂಶಕ್ಕೆ ಸಂಬಂಧಿಸಿ ಪುತ್ರಪರಂಪರೆಯಲ್ಲಿ ಹುಟ್ಟಿದವರೆಂದು ಸ್ಮರಿಸಲ್ಪಟ್ಟಿರುವರು. ಏಕಾಕ್ಷ, ಅಶ್ವಪ್ರಭ, ಅರಿಷ್ಟ, ಪ್ರಲಂಬ ಮತ್ತು ನರಕ ಎಂಬುವರು ಆ ಗುಂಪಿಗೆ ಸೇರಿದ್ದಾರೆ.

೧೬. ಇಂದ್ರಬಾಧನ, ಕೇಶೀ, ಪುರುಷ, ಶೇಷವಾನ್, ಉರು, ಗರಿಷ್ಠ, ಗವಾಕ್ಷ, ಕಾಲಕೇತು, ಮತ್ತು ವೀರ್ಯವಾನ್ ಎಂಬುವರು ದನುಪುತ್ರ ವಂಶದಲ್ಲಿ ಪ್ರಖ್ಯಾತರಾಗಿರುವರು.

೧೭. ಈ ದನುಪುತ್ರಾನ್ವಯದಿಂದ ಹುಟ್ಟಿದ ಅಸುರರು ಮನುಷ್ಯರಿಂದ ಅವಧ್ಯರೆಂದು ಸ್ಮರಿಸಲ್ಪಟ್ಟಿರುವರು. ಭಯಂಕರವಾದ ಪ್ರತಾಪದಿಂದ ಕೂಡಿದ ಈ ವೀರರು ದೈತ್ಯ-ದಾನವರ ಪರಸ್ಪರ ಸಂಬಂಧದಿಂದ ಹುಟ್ಟಿರುವರು.

೧೮. ಮತ್ತು ವಿಪ್ರಚಿತ್ತಿ ಎಂಬ ಅಸುರನಿಗೆ ಸಿಂಹಿಕಾ ಎಂಬ ತನ್ನ ಭಾರ್ಯೆಯಲ್ಲಿ ಸೈಂಹಿಕೇಯರೆಂದು ಪ್ರಸಿದ್ಧರಾದ ಹದಿನಾಲ್ಕು ಮಂದಿ ಮಹಾಸುರರು ಪುತ್ರರಾಗಿ ಹುಟ್ಟಿರುವರು.

೧೯. ಶಲ, ಶಲಭ, ಸವ್ಯ, ಅಸವ್ಯ, ಇಲ್ವಲ, ನಮುಚಿ, ವಾತಾಪಿ ಮತ್ತು ಸುಪುಂಜಿಕ ಎಂಬುವರು ಎಂಟುಮಂದಿಯು ಸೈಂಹಿಕೇಯರಲ್ಲ ಸೇರಿದವರು.

ಹರಕಲ್ಪಃ ಕಾಲನಾಭೋ ಚಾಮಶ್ಚ ಕನಕಸ್ತಥಾ ।
ರಾಹುರ್ಜ್ಯೇಷ್ಠಸ್ತು ತೇಷಾಂ ವೈ ಸೂರ್ಯಚಂದ್ರಪ್ರಮರ್ದನಃ॥ ೨೦ ॥

ಇತ್ಯೇತೇ ಸಿಂಹಿಕಾಪುತ್ರಾ ದೇವೈರಪಿ ದುರಾಸದಾಃ ।
ದಾರುಣಾಭಿಜನಾಃ ಕ್ರೂರಾಃ ಸರ್ವೇ ಬ್ರಹ್ಮಹಣಶ್ಚ ತೇ ॥ ೨೧ ॥

ದಶ ತಾನಿ ಸಹಸ್ರಾಣಿ ಸೈಂಹಿಕೇಯೋ ಗಣಾಃ ಸ್ಮೃತಾಃ ।
ನಿಹತಾ ಜಾಮದಗ್ನ್ಯೇನ ಭಾರ್ಗವೇಣ ಬಲೀಯಸಾ ॥ ೨೨ ॥

ಸ್ವರ್ಭಾನೋಸ್ತು ಪ್ರಭಾ ಕನ್ಯಾ ಪುಲೋಮ್ನಸ್ತು ಶಚೀ ಸುತಾ ।
ಉಪದಾನವೀ ಸದಸ್ಯಾಥ ಶರ್ಮಿಷ್ಠಾ ವೃಷಪರ್ವಣಃ ॥ ೨೩ ॥

ಪುಲೋಮಾ ಕಾಲಿಕಾ ಚೈವ ವೈಶ್ವಾನರಸುತೇ ಉಭೇ ।
ಪ್ರಭಾಯಾಂ ನಹುಷಃ ಪುತ್ರೋ ಜಯಂತಸ್ತು ಶಚೀಸುತಃ ॥ ೨೪ ॥

---

೨೦. ಹರಕಲ್ಪ, ಕಾಲ, ನಾಭ, ಭೌಮ, ಕನಕ, ಮತ್ತು ರಾಹುವು ಸೇರಿ ಹದಿನಾಲ್ಕು ಮಂದಿ ಸಿಂಹಿಕೆಯಲ್ಲಿ ಜನಿಸಿ ಸೈಂಹಿಕೇಯರೆಂದು ಪ್ರಸಿದ್ಧರಾದವರು. ಇವರಲ್ಲಿ ಸೂರ್ಯ, ಚಂದ್ರರನ್ನು ಮರ್ದಿಸುವ ರಾಹು ಎಂಬುವನು ಎಲ್ಲರಿಗಿಂತಲೂ ಜ್ಯೇಷ್ಠಪುತ್ರನಾಗಿರುವನು.

೨೧. ಈ ಇಷ್ಟುಮಂದಿ ಸಿಂಹಿಕಾ ಪುತ್ರರು ಎಲ್ಲರೂ ದೇವತೆಗಳಿಂದಲೂ ಉಲ್ಲಂಘಿಸಲಾಗದವರೂ ಭಯಂಕರವಾವ ಜನ್ಮವುಳ್ಳವರೂ, ಕ್ರೂರರೂ, ಮತ್ತು ಬ್ರಹ್ಮಹತ್ಯಾಪರಾಯಣರೂ ಆಗಿರುವರು.

೨೨. ಆ ಸೈಂಹಿಕೇಯ ಅಸುರರ ಗಣದಲ್ಲಿ ಹತ್ತು ಸಹಸ್ರಮಂದಿ ಸಿಂಹಿಕಾ ಪುತ್ರರು ಇರುವರೆಂದು ಸ್ಮರಿಸಲ್ಪಟ್ಟಿದೆ. ಅವರು ಜಮದಗ್ನಿ ವಂಶದಲ್ಲಿ ಹುಟ್ಟಿದ ಬಲಿಷ್ಠನಾದ ಭಾರ್ಗವರಾಮನಿಂದ ಸಂಹರಿಸಲ್ಪಟ್ಟರು.

೨೩. ಈ ರಾಹು ಎಂಬುವನಿಗೆ ಪ್ರಭಾ ಎಂಬುವಳು, ಪುಲೋಮಾಸುರನಿಗೆ ಶಚಿ ಎಂಬುವಳು, ಸದಾಸುರನಿಗೆ ಉಪದಾನವೀ ಎಂಬುವಳು ಮತ್ತು ವೃಷಪರ್ವನಿಗೆ ಶರ್ಮಿಷ್ಠಾ ಎಂಬುವಳು ಪುತ್ರಿಯರಿದ್ದರು.

೨೪. ವೈಶ್ವಾನರ ಅಸುರನಿಗೆ ಪುಲೋಮಾ, ಕಾಲಿಕಾ ಎಂಬಿಬ್ಬರು ಕನ್ಯೆಯರಿದ್ದರು. ಪ್ರಭೆಯಲ್ಲಿ ನಹುಷ ಎಂಬ ಪುತ್ರನೂ ಶಚಿಯಲ್ಲಿ ಜಯಂತ ಎಂಬ ಪುತ್ರನೂ ಜನಿಸಿರುವರು.

**ಪುರುಂ ಜಜ್ಞೇಽಥ ಶರ್ಮಿಷ್ಠಾ ದುಷ್ಯಂತಮುಪದಾನವೀ ।**
**ವೈಶ್ವಾನರಸುತೇ ಏತೇ ಪುಲೋಮಾ ಕಾಲಿಕಾ ತಥಾ ॥ ೧೫ ॥**

**ಬಹ್ವಪತ್ಯೇ ಉಭೇ ಕನ್ಯೇ ಮಾರೀಚಸ್ಯ ಪರಿಗ್ರಹಃ ।**
**ತಯೋಃ ಪುತ್ರಸಹಸ್ರಾಣಿ ಷಷ್ಟಿರ್ದಾನವಪುಂಗವಾಃ ॥ ೧೬ ॥**

**ಚತುರ್ದಶ ತಥಾನ್ಯಾನಿ ಹಿರಣ್ಯಪುರವಾಸಿನಾಮ್ ।**
**ಪೌಲೋಮಾಃ ಕಾಲಕೇಯಾಶ್ಚ ದಾನವಾಃ ಸುಮಹಾಬಲಾಃ ॥ ೧೭ ॥**

**ಅವಧ್ಯಾ ದೇವತಾನಾಂ ತೇ ನಿಹತಾಃ ಸವ್ಯಸಾಚಿನಾ ।**
**ಮಯಸ್ಯ ಜಾತಾ ರಂಭಾಯಾಂ ಪುತಾಃ ಷಟ್ ಚ ಮಹಾಬಲಾಃ ॥೧೮॥**

**ಮಾಯಾವೀ ದುಂದುಭಿಶ್ಚೈವ ಪುತ್ರಶ್ಚ ಮಹಿಷಸ್ತಥಾ ।**
**ಕಾಲಿಕಶ್ಚಾಜಕರ್ಣಶ್ಚ ಕನ್ಯಾ ಮಂದೋದರೀ ತಥಾ ॥ ೧೯ ॥**

---

೧೫. ಶರ್ಮಿಷ್ಠಾ ಎಂಬುವಳು ಪುರುರಾಜನನ್ನೂ ಉಪದಾನವೀ ಎಂಬುವಳು ದುಷ್ಯಂತನನ್ನೂ ಪ್ರಸವಿಸಿದರು. ಹಿಂದೆ ಪುಲೋಮಾ, ಕಾಲಿಕಾ ಎಂಬುವರು ವೈಶ್ವಾನರ ಪುತ್ರಿಯರಾಗಿ ಹೇಳಲ್ಪಟ್ಟಿರುವರು.

೧೬. ಆ ಇಬ್ಬರು ಕನ್ಯೆಯರು ಬಹು ಸಂತಾನವತಿಯರೂ ಮಾರೀಚನ ಭಾರ್ಯೆಯರೂ ಆಗಿರುವರು. ಅವರಲ್ಲಿ ದಾನವರಲ್ಲಿ ಶ್ರೇಷ್ಠರೆಂದೆನಿಸಿರುವ ಅರವತ್ತು ಸಹಸ್ರ ಪುತ್ರರು ಹುಟ್ಟಿರುವರು.

೧೭. ಮತ್ತು ಹಿರಣ್ಯಮಯವಾದ ಪುರದಲ್ಲಿ ವಾಸಮಾಡುವ ಬೇರೆ ಹದಿನಾಲ್ಕು ಸಹಸ್ರ ಸಂಖ್ಯೆಯ ಪುತ್ರರಿದ್ದರು. ಹೀಗೆ ಪೌಲೋಮ, ಕಾಲಿಕೇಯರೆಂಬ ಈ ಎರಡು ಪಂಗಡದ ರಾಕ್ಷಸರು ಮಹಾ ಬಲಿಷ್ಠರೆಂದು ಗಣ್ಯರಾದರು.

೧೮. ಅವರು ದೇವತೆಗಳಿಗೆ ಕೂಡ ಅವಧ್ಯರಾಗಿದ್ದರೂ ಪರಾಕ್ರಮಿಯಾದ ಅರ್ಜುನನಿಂದ ಸಂಹರಿಸಲ್ಪಟ್ಟರು. ಮಯಾಸುರನಿಗೆ ರಂಭಾ ಎಂಬ ಸ್ವಭಾರ್ಯೆಯಲ್ಲಿ ಮಹಾಬಲಾನ್ವಿತರಾಗಿರುವ ಆರುಮಂದಿ ಪುತ್ರರು ಹುಟ್ಟಿದರು.

೧೯. ಮಾಯಾವೀ, ದುಂದುಭಿ, ಮಹಿಷ, ಕಾಲಿಕ, ಅಜಕರ್ಣ ಮತು ಮಂದೋದರೀ ಎಂಬ ಪ್ರತ್ಯೇಕ ನಾಮಧೇಯಗಳಿಂದ ಆ ಆರುಮಂದಿಯೂ ವಿಖ್ಯಾತರಾದರು.

ದೈತ್ಯಾನಾಂ ದಾನವಾನಾಂ ಚ ಸರ್ಗ ಏಷ ಪ್ರಕೀರ್ತಿತಃ ।
ಅನಾಯುಷಾಯಾಃ ಪುತ್ರಾಸ್ತೇ ಸ್ಮೃತಾಃ ಪಂಚ ಮಹಾಬಲಾಃ ॥೩೦॥

ಅರರುರ್ಬಲವೃತ್ರೌ ಚ ವಿಜ್ವರಶ್ಚ ವೃಷಸ್ತಥಾ ।
ಅರರೋಸ್ತನಯಃ ಕ್ರೂರೋ ಧುಂಧುರ್ನಾಮ ಮಹಾಸುರಃ ॥ ೩೧ ॥

ನಿಹತಃ ಕುವಲಾಶ್ವೇನ ಉತ್ತಂಕವಚನಾದ್ಬಿಲೇ ।
ಬಲಪುತ್ರೌ ಮಹಾವೀರ್ಯೌ ತೇಜಸಾಪ್ರತಿಮಾವುಭೌ ॥ ೩೨ ॥

ನಿಕುಂಭಶ್ಚಕ್ರವರ್ಮಾ ಚ ಸ ಕರ್ಣಃ ಪೂರ್ವಜನ್ಮನಿ ।
ವಿಜರಸ್ಯಾಪಿ ಪುತ್ರೌ ದ್ವೌ ಕಾಲಕಶ್ಚ ಖರಶ್ಚ ತೌ ॥ ೩೩ ॥

ವೃಷಸ್ಯ ತು ಪುನಃ ಪುತ್ರಾಶ್ಚತ್ವಾರಃ ಕ್ರೂರಕರ್ಮಣಃ ।
ಶ್ರಾದ್ಧಾದೋ ಯಜ್ಞಹಾ ಚೈವ ಬ್ರಹ್ಮಹಾ ಪಶುಹಾ ತಥಾ ॥ ೩೪ ॥

---

೩೦. ದೈತ್ಯ ಮತ್ತು ದಾನವರ ವಂಶಸೃಷ್ಟಿಯು ಈ ರೀತಿಯಾಗಿ ನನ್ನಿಂದ ವರ್ಣಿಸಲ್ಪಟ್ಟಿತು. ಅನಾಯುಷಾ ಎಂಬುವಳಿಗೆ ಮಹಾ ಬಲಿಷ್ಠರಾಗಿ ಐದು ಮಂದಿ ಪುತ್ರರಿದ್ದರು.

೩೧. ಅರರು, ಬಲ, ವೃತ್ರ, ವಿಜ್ವರ, ಮತ್ತು ವೃಷ ಎಂದು ಆ ಐದುಮಂದಿಗೆ ಹೆಸರುಗಳಿದ್ದುವು. ಅರರು ಎಂಬುವನಿಗೆ ಮಹಾ ಕ್ರೂರನಾದ ಧುಂಧು ಎಂಬ ಹೆಸರಿನ ಮಹಾ ಅಸುರನು ಪುತ್ರನಾಗಿದ್ದನು.

೩೨. ಆ ಧುಂಧುಮಹಾಸುರನನ್ನು ಉತ್ತಂಕ ಮುನಿಯ ಆಜ್ಞೆಯಿಂದ ಕುವಲಾಶ್ವನೆಂಬ ರಾಜನು ಬಿಲದಲ್ಲಿ ಕೊಂದಿರುವನು. ಬಲ ಎಂಬ ಅಸುರನಿಗೆ ಮಹಾವೀರ್ಯ ಸಂಪನ್ನರೂ ತೇಜಸ್ಸಿನಿಂದ ನಿರುಪಮರೂ, ಆದ ಇಬ್ಬರು ಪುತ್ರರಿದ್ದರು.

೩೩. ಅವರಿಬ್ಬರು ನಿಕುಂಭ, ಚಕ್ರವರ್ಮ ಎಂಬ ನಾಮವುಳ್ಳವರಾಗಿದ್ದರು, ಚಕ್ರವರ್ಮನು ಕರ್ಣ ರೂಪದಿಂದ ಪೂರ್ವಜನ್ಮವನ್ನು ಹೊಂದಿದ್ದನು, ವಿಜರಾಸುರನಿಗೆ ಕಾಲಿಕ-ಖರ ಎಂಬುದಾಗಿ ಇಬ್ಬರು ಪುತ್ರರಿದ್ದರು.

೩೪. ವೃಷಾಸುರನಿಗೆ ಶ್ರಾದ್ಧಾದ. ಯಜ್ಞಹಾ, ಬ್ರಹ್ಮಹಾ, ಮತ್ತು ಪಶುಹಾ

ಕ್ರಾಂತಾ ಹ್ಯನಾಯುಷಃ ಪುತ್ರಾ ವೃತ್ರಸ್ಯಾಪಿ ನಿಬೋಧತ ।
ಜಜ್ಞಿರೇ ಸುಮಹಾಘೋರಾ ವೃತ್ರಸ್ಯೇಂದ್ರೇಣ ಯುಧ್ಯತಾ ॥ ೩೫ ॥

ಬಕಾ ನಾಮ ಸಮಾಖ್ಯಾತಾ ರಾಕ್ಷಸಾಃ ಸುಮಹಾಬಲಾಃ ।
ಶತಂ ತಾನಿ ಸಹಸ್ರಾಣಿ ಮಹೇಂದ್ರಾನುಚರಾಃ ಸ್ಮೃತಾಃ ॥ ೩೬ ॥

ಸರ್ವೇ ಬ್ರಹ್ಮವಿದಃ ಸೌಮ್ಯಾ ಧಾರ್ಮಿಕಾಃ ಸೂಕ್ಷ್ಮಮೂರ್ತಯಃ ।
ಪ್ರಜಾಸ್ವಂತರ್ಗತಾಃ ಸರ್ವೇ ನಿವಸಂತಿ ಕ್ರುಧಾವೃತಾಃ ॥ ೩೭ ॥

ಕ್ರೋಧಾ ತ್ವಪ್ರತಿಮಾನ್ ಪುತ್ರಾನ್ ಜಜ್ಞೇ ವೈ ಗಾಯನೋತ್ತಮಾನ್,
ಸಿದ್ಧಃ ಪೂರ್ಣಶ್ಚ ವರ್ಹ್ಮೀ ಚ ಪೂರ್ಣಾಂಶಶ್ಚೈವ ವೀರ್ಯವಾನ್॥ ೩೮ ॥

---

ಎಂಬ ಹೆಸರುಗಳಿಂದ ಕೂಡಿದ ಮತ್ತು ನಾಮಗಳ ಅನ್ವರ್ಥತೆಯಂತೆ ಮಹಾ ಕ್ರೂರ ಕರ್ಮವನ್ನು ಆಚರಿಸುವ ನಾಲ್ಕು ಮಂದಿ ಪುತ್ರರಿದ್ದರು.

೩೫. ಹೀಗೆ ಅನಾಯುಷೆಯ ಪುತ್ರಸಮೃದ್ಧಿಯನ್ನು ವರ್ಣಿಸಿದ್ದೇನೆ. ಮುಂದೆ ವೃತ್ರಾಸುರನ ಪುತ್ರಪರಂಪರೆಯನ್ನು ಶ್ರವಣಮಾಡಿರಿ. ಇಂದ್ರನ ಸಂಗಡ ಯುದ್ಧ ಮಾಡುತ್ತಲಿದ್ದ ವೃತ್ರಾಸುರನಿಗೆ ಮಹಾಘೋರರಾದ ಪುತ್ರರು ಜನಿಸಿರುವರು.

೩೬. ಮಹಾಬಲವಂತರೂ ಬಕ ಎಂಬ ನಾಮಪ್ರಸಿದ್ಧಿಯುಳ್ಳವರೂ ಆದ ಆ ರಾಕ್ಷಸರು ಮಹೇಂದ್ರನಿಗೆ ಅನುಚರರಾಗಿ ಶತಸಹಸ್ರ ಸಂಖ್ಯೆಯಿಂದ ಇರುವರೆಂದು ಪ್ರಾಜ್ಞರಿಂದ ಸ್ಮರಿಸಲ್ಪಟ್ಟಿರುವರು.

೩೭. ಅವರೆಲ್ಲರೂ ಬ್ರಹ್ಮವಾದಿಗಳೂ, ಸೌಮ್ಯಮೂರ್ತಿಯುಳ್ಳವರೂ, ಧಾರ್ಮಿಕರೂ, ಉಚಿತವಾದ ಅಲ್ಪ ಪರಿಮಾಣದಿಂದ ಕೂಡಿದ ಮೂರ್ತಿಯನ್ನು ಧರಿಸಿದವರೂ ಮತ್ತು ಕೋಪಪೂರಿತರೂ ಆಗಿ ಪ್ರಜಾಮಧ್ಯದಲ್ಲಿ ಸೇರಿ ವಾಸಮಾಡುವರು.

೩೮. ಕ್ರೋಧಾ ಎಂಬುವಳು ನಿರುಪಮರಾಗಿರುವ ಮತ್ತು ಉತ್ತಮ ಗಾಯಕರಾದ ಹತ್ತುಮಂದಿ ಪುತ್ರರನ್ನು ಪ್ರಸವಿಸಿದಳು. ಅವರಲ್ಲಿ ಸಿದ್ಧ, ಪೂರ್ಣ, ಬರ್ಹ್ಮೀ ಮತ್ತು ವೀರ್ಯವಂತನಾದ ಪೂರ್ಣಾಂಶ ಎಂಬುವರು ನಾಲ್ಕು ಮಂದಿಯು ಸೇರಿರುವರು.

ಬ್ರಹ್ಮಚಾರೀ ಶತಗುಣಃ ಸುಪರ್ಣಶ್ಚೈವ ಸಪ್ತಮಃ ।
ವಿಶ್ವಾವಸುಶ್ಚ ಭಾನುಶ್ಚ ಸುಚಂದ್ರೋ ದಶಮಸ್ತಥಾ ॥ ೩೯ ॥

ಇತ್ಯೇತೇ ದೇವಗಂಧರ್ವಾಃ ಕ್ರೋಧಾಯಾಃ ಪರಿಕೀರ್ತಿತಾಃ ॥ ೪೦ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಷಷ್ಠೋಽಧ್ಯಾಯಃ

---

೩೯. ಮತ್ತು ಬ್ರಹ್ಮಚಾರೀ, ಶತಗುಣ, ಸುಪರ್ಣ, ವಿಶ್ವಾವಸು, ಭಾನು ಮತ್ತು ಸುಚಂದ್ರರೆಂಬ ಆರು ಮಂದಿಯಿಂದ ಸೇರಿ ಹತ್ತು ಮಂದಿಯು ಕ್ರೋಧಾ ಎಂಬುವಳ ಪುತ್ರರಾಗಿರುವರು.

೪೦. ಹೀಗೆ ಗಾಯಕೋತ್ತಮರೂ, ದೇವಗಂಧರ್ವರೂ ಮತ್ತು ಮಹೇಂದ್ರಾನುಚರರೂ ಆದ ಕ್ರೋಧಾ ಎಂಬುವಳ ಪುತ್ರರು ಕೀರ್ತಿಸಲ್ಪಟ್ಟಿರುವರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಆರನೆಯ ಅಧ್ಯಾಯವು ಮುಗಿದುದು.

---

## ಸಪ್ತಮೋಽಧ್ಯಾಯಃ

**ಸೂತ ಉವಾಚ :—**

**ಗಂಧರ್ವಾಪ್ಸರಸಃ ಪುತ್ರಾ ಮೌನೇಯಾಸ್ತಾನ್ನಿಬೋಧತ ।**
**ಭೀಮಸೇನೋಗ್ರಸೇನೌ ಚ ಸುಪರ್ಣೋ ವರುಣಸ್ತಥಾ ॥ ೧ ॥**

**ಧೃತರಾಷ್ಟ್ರಶ್ಚ ಗೋಮಾಂಶ್ಚ ಸೂರ್ಯವರ್ಚಾಸ್ತಥೈವ ಚ ।**
**ಪತ್ರವಾನರ್ಕಪರ್ಣಶ್ಚ ಪ್ರಯುತಶ್ಚ ತಥೈವ ಹಿ ॥ ೨ ॥**

**ಭೀಮಶ್ಚಿತ್ರರಥಶ್ಚೈವ ವಿಖ್ಯಾತಃ ಸರ್ವಜಿದ್ವಶೀ ।**
**ತ್ರಯೋದಶಃ ಶಾಲಿಶಿರಾಃ ಪರ್ಜನ್ಯಶ್ಚ ಚತುರ್ದಶಃ ॥ ೩ ॥**

**ಕಲಿಃ ಪಂಚದಶಶ್ಚೈಷಾಂ ನಾರದಶ್ಚೈವ ಷೋಡಶಃ ।**
**ಇತ್ಯೇತೇ ದೇವಗಂಧರ್ವಾ ಮೌನೇಯಾಃ ಪರಿಕೀರ್ತಿತಾಃ ॥ ೪ ॥**

---

೧. ಸೂತಮುನಿಯು ಹೇಳಿದನು :— ಮುನಿ ಎಂಬುವಳಲ್ಲಿ ಹುಟ್ಟಿದ ಗಂಧರ್ವ ಮತ್ತು ಅಪ್ಸರಃ ಸ್ತ್ರೀಯರನ್ನು ಶ್ರವಣಮಾಡಿರಿ. ಅವರಲ್ಲಿ ಭೀಮಸೇನ, ಉಗ್ರಸೇನ, ಸುಪರ್ಣ ಮತ್ತು ವರುಣ ಎಂಬುವರು ನಾಲ್ಕು ಮಂದಿ ಗಂಧರ್ವ ಗಣಕ್ಕೆ ಸೇರಿರುವರು.

೨. ಮತ್ತು ಧೃತರಾಷ್ಟ್ರ, ಗೋಮಾನ್, ಸೂರ್ಯವರ್ಚ, ಪತ್ರವಾನ್, ಅರ್ಕಪರ್ಣ ಮತ್ತು ಪ್ರಯುತ ಎಂಬ ಮತ್ತೊಂದು ವರ್ಗವು ಗಂಧರ್ವ ಜಾತಿಯಲ್ಲಿ ಸೇರಿದ್ದಾಗಿದೆ.

೩. ಹಾಗು ಭೀಮ, ಸರ್ವರನ್ನು ಗೆದ್ದವನೂ ಜಿತೇಂದ್ರಿಯನೂ, ಆಗಿ ಪ್ರಸಿದ್ಧ ನಾದ ಚಿತ್ರರಥ, ಶಾಲಿಶಿರ, ಪರ್ಜನ್ಯ ಎಂಬುವರು ಗಂಧರ್ವಗಣದಲ್ಲಿ ಅಂತರ್ಗತ ರಾಗಿರುವರು.

೪. ಮತ್ತು ಕಲಿ, ನಾರದ ಎಂಬುವರು ಸೇರಿ ಒಟ್ಟು ಹದಿನಾರು ಮಂದಿ ದೇವ ಗಂಧರ್ವರು ಮುನಿ ಪುತ್ರರೆಂದು ಕೀರ್ತನಮಾಡಲ್ಪಟ್ಟಿರುವರು.

ಚತುರ್ವಿಂಶಾಶ್ಚಾವರಜಾಸ್ತೇಷಾಮಪ್ಸರಸಃ ಶುಭಾಃ ।
ಅರುಣಾ ಚಾನಪಾಯಾ ಚ ವಿಮನುಷ್ಯಾ ವರಾಂಬರಾ ॥ ೫ ॥

ಮಿಶ್ರಕೇಶೀ ತಥಾ ಚಾಸಿಪರ್ಣಿನೀ ಚಾಪ್ಯಲುಂಬುಷಾ ।
ಮರೀಚಿಃ ಶುಚಿಕಾ ಚೈವ ವಿದ್ಯುತ್ಪರ್ಣಾ ತಿಲೋತ್ತಮಾ ॥ ೬ ॥

ಅದ್ರಿಕಾ ಲಕ್ಷ್ಮಣಾ ಕ್ಷೇಮಾ ದಿವ್ಯಾ ರಂಭಾ ಮನೋಭವಾ ।
ಅಸಿತಾ ಚ ಸುಬಾಹೂಶ್ಚ ಸುಪ್ರಿಯಾ ಸುಭುಜಾ ತಥಾ ॥ ೭ ॥

ಪುಂಡರೀಕಾಜಗಂಧಾ ಚ ಸುದತೀ ಸುರಸಾ ತಥಾ ।
ತಥೈವಾಸ್ಯಾಃ ಸುಬಾಹೂಶ್ಚ ವಿಖ್ಯಾತೌ ಚ ಹಹಾಹುಹೂ ॥ ೮ ॥

ತುಂಬುರುಶ್ಚೇತಿ ಚತ್ವಾರಃ ಸ್ಮೃತಾ ಗಂಧರ್ವಸತ್ತಮಾಃ ।
ಗಂಧರ್ವಾಪ್ಸರಸೋ ಹ್ಯೇತೇ ಮೌನೇಯಾಃ ಪರಿಕೀರ್ತಿತಾಃ ॥ ೯ ॥

---

೫. ಈ ಗಂಧರ್ವರಿಗೆ ಕಿರಿಯರಾಗಿ ಹುಟ್ಟಿದ ಮಂಗಳಕರರಾದ ಅಪ್ಸರಃ ಸ್ತ್ರೀಯರು ಇಪ್ಪತ್ತನಾಲ್ಕು ಮಂದಿಯಾಗಿರುವರು. ಅರುಣಾ, ಅನಪಾಯಾ, ವಿಮನುಷ್ಯಾ ಮತ್ತು ವರಾಂಬರಾ ಎಂಬುವರು ಕೆಲವು ಮಂದಿ ಅಪ್ಸರಃ ಸ್ತ್ರೀಯರಾಗಿರುವರು.

೬. ಮತ್ತು ಮಿಶ್ರಕೇಶೀ, ಅಸಿಪರ್ಣಿನೀ, ಅಲುಂಬುಷಾ, ಮರೀಚಿ, ಶುಚಿಕಾ, ವಿದ್ಯುತ್ಪರ್ಣಾ ಮತ್ತು ತಿಲೋತ್ತಮಾ, ಎಂಬುವರು ಕೆಲವು ಮಂದಿ ಅಪ್ಸರಃ ಸ್ತ್ರೀಗಣದಲ್ಲಿ ಅಂತರ್ಗತರಾಗಿರುವರು.

೭. ಹಾಗು ಅದ್ರಿಕಾ, ಲಕ್ಷ್ಮಣಾ, ಕ್ಷೇಮಾ, ದಿವ್ಯಾ, ರಂಭಾ, ಮನೋಭವಾ, ಅಸಿತಾ, ಸುಬಾಹು, ಸುಪ್ರಿಯಾ, ಸುಭುಜಾ ಎಂಬುವರು ಆ ಇಪ್ಪತ್ತನಾಲ್ಕು ಮಂದಿಯಲ್ಲಿ ಕೆಲವರು ಅಪ್ಸರಃ ಸ್ತ್ರೀಯರಾಗಿರುವರು.

೮. ಪುಂಡರೀಕಾ, ಅಜಗಂಧಾ, ಸುಂದರವಾದ ದಂತಪಂಕ್ತಿಯುಳ್ಳ ಸುರಸಾ ಎಂಬುವಳು ಕೂಡಿ ಒಟ್ಟು ಇಪ್ಪತ್ತನಾಲ್ಕು ಮಂದಿ ಪ್ರಧಾನರಾದ ಅಪ್ಸರಃಸ್ತ್ರೀ ವೃಂದವು. ಮತ್ತು ಮುನಿ ಎಂಬುವಳಿಗೆ ಸುಬಾಹು ಮತ್ತು ಪ್ರಸಿದ್ಧರಾದ ಹಹಾ, ಹುಹೂ ಎಂಬುವರು ಗಂಧರ್ವ ಶ್ರೇಷ್ಠರೆನಿಸಿದ ಪುತ್ರರಿದ್ದರು.

೯. ಮತ್ತು ತುಂಬುರು ಎಂಬುವನು ಸೇರಿ ಶ್ರೇಷ್ಠರಾದ ಗಂಧರ್ವರು ನಾಲ್ಕು

ಹಂಸಾ ಸರಸ್ವತೀ ಚೈವ ಸೂತಾ ಚ ಕಮಲಾಭಯಾ ।
ಸುಮುಖೀ ಹಂಸಪಾದೀ ಚ ಲೌಕಿಕ್ಯೋಽಪ್ಸರಸಃ ಸ್ಮೃತಾಃ ॥ ೧೦ ॥

ಹಂಸೋ ಜ್ಯೋತಿಷ್ಟವೋ ಮಧ್ಯ ಆಚಾರಸ್ತ್ವಹ ದಾರುಣಃ ।
ವರೂಥೋಽಥ ವರೇಣ್ಯಶ್ಚ ತತೋ ವಸುರುಚಿಃ ಸ್ಮೃತಃ ॥ ೧೧ ॥

ಅಷ್ಟಮಃ ಸುರುಚಿಸ್ತೇಷಾಂ ತತೋ ವಿಶ್ವಾವಸುಃ ಸ್ಮೃತಃ ।
ಸುಷುವೇ ಸಾ ಮಹಾಭಾಗಾ ರಿಷ್ಟಾ ದೇವರ್ಷಿಪೂಜಿತಾ ॥ ೧೨ ॥

ಅರೂಪಾಂ ಸುಭಗಾಂ ಭಾಸೀಮಿತಿ ತ್ರೇಧಾ ವ್ಯಜಾಯತ ।
ಮನುವಂತೀ ಸುಕೇಶೀ ಚ ತುಂಬುರೋಸ್ತು ಸುತೇ ಶುಭೇ ॥ ೧೩ ॥

ಪಂಚಚೂಡಾಸ್ತ್ವಮೂ ವಿದ್ಯಾದೇವಮಪ್ಸರಸೋ ದಶ ।
ಮೇನಕಾ ಸಹಜನ್ಯಾ ಚ ಪರ್ಣಿನೀ ಪುಂಜಿಕಸ್ಥಲಾ ॥ ೧೪ ॥

---

ಮಂದಿಯೆಂದು ಪ್ರಾಜ್ಞರಿಂದ ಸ್ಮರಿಸಲ್ಪಟ್ಟಿರುವರು. ಇವರು ಮುನಿ ಪುತ್ರರಾದ ಗಂಧರ್ವ, ಅಪ್ಸರಃಸ್ತ್ರೀಯರೆಂದು ಪರಿಗಣಿಸಲ್ಪಟ್ಟಿರುವರು.

೧೦. ಹಂಸಾ, ಸರಸ್ವತೀ, ಸೂತಾ, ಕಮಲಾ, ಅಭಯಾ, ಸುಮುಖೀ ಮತ್ತು ಹಂಸಪಾದೀ ಎಂಬುವರು ಲೌಕಿಕಾಪ್ಸರಃ ಸ್ತ್ರೀಯರೆಂದು ಸ್ಮರಿಸಲ್ಪಟ್ಟಿರುವರು.

೧೧. ಹಂಸ, ಜ್ಯೋತಿಷ್ಟವ, ಮಧ್ಯ, ದಾರುಣಾಚಾರ, ವರೂಥ, ವರೇಣ್ಯ ಮತ್ತು ವಸುರುಚಿ ಎಂಬುವರು ರಿಷ್ಟಾ ಎಂಬುವನ ಪುತ್ರಗಣದಲ್ಲಿ ಸೇರಿದವರಾಗಿರುವರು.

೧೨. ಮತ್ತು ಸುರುಚಿ, ವಿಶ್ವಾವಸು ಎಂಬುವರು ಸೇರಿರುವ ಹಿಂದೆ ಹೇಳಿದ ಪುತ್ರಗಣವನ್ನು ಮಹಾಭಾಗ್ಯಳಾದ ಮತ್ತು ದೇವ ಋಷಿಗಳಿಂದ ಸತ್ಕರಿಸಲ್ಪಟ್ಟ ರಿಷ್ಟಾ ದೇವಿಯು ಹೊಂದಿರುವಳು.

೧೩. ಹಾಗು ಅರೂಪಾ, ಸುಭಗಾ, ಭಾಸೀ ಎಂಬ ಮೂವರು ಕನ್ಯೆಯರನ್ನು ರಿಷ್ಟಾ ದೇವಿಯು ಪ್ರಸವಿಸಿದಳು. ಮನುವಂತೀ, ಸುಕೇಶೀ ಎಂಬೀರ್ವರು ತುಂಬುರು ಎಂಬ ಗಂಧರ್ವನ ಮಂಗಳಕರರಾದ ಪುತ್ರಿಯರಾಗಿ ಜನಿಸಿರುವರು.

೧೪. ಅರೂಪಾ ಮೊದಲುಗೊಂಡು ಐದು ಮಂದಿ ಅಪ್ಸರಃ ಸ್ತ್ರೀಯರು ಪಂಚ ಚೂಡಾ ಎಂಬ ನಾಮದಿಂದ ಪ್ರಖ್ಯಾತರಾಗಿರುವರು. ಹಾಗೂ ಮುಂದೆ ಹತ್ತು ಮಂದಿ ಅಪ್ಸರಃ ಸ್ತ್ರೀಯರ ಒಂದು ಗಣವನ್ನು ತಿಳಿಯಬೇಕು. ಮೇನಕಾ, ಸಹಜನ್ಯಾ, ಪುಂಜಿಕಸ್ಥಲಾ ಎಂಬುವರು ಆ ಹತ್ತು ಮಂದಿಯಲ್ಲಿ ಸೇರಿರುವರು.

**ಕೃತಸ್ಥಲಾ ಘೃತಾಚೀ ಚ ವಿಶ್ವಾಚೀ ಪೂರ್ವಚಿತ್ತ್ಯಪಿ ।**
**ಪ್ರಮ್ಲೋಚೇತ್ಯಭಿವಿಖ್ಯಾತಾನುಮ್ಲೋಚ್ಚೈವ ತು ತಾ ದಶ ॥ ೧೫ ॥**

**ಅನಾದಿನಿಧನಸ್ಯಾಥ ಜಜ್ಞೇ ನಾರಾಯಣಸ್ಯ ಯಾ ।**
**ಕುಲೋಚಿತಾನವದ್ಯಾಂಗೀ ಉರ್ವಶ್ಯೇಕಾದಶೀ ಸ್ಮೃತಾ ॥ ೧೬ ॥**

**ಮೇನಸ್ಯ ಮೇನಕಾ ಕನ್ಯಾ ಜಜ್ಞೇ ಸರ್ವಾಂಗಸುಂದರೀ ।**
**ಸರ್ವಾಶ್ಚ ಬ್ರಹ್ಮವಾದಿನ್ಯೋ ಮಹಾಭಾಗಾಶ್ಚ ತಾಃ ಸ್ಮೃತಾಃ ॥ ೧೭ ॥**

**ಗಣಾಸ್ತ್ವಪ್ಸರಸಾಂ ಖ್ಯಾತಾಃ ಪುಣ್ಯಾಸ್ತೇ ವೈ ಚತುರ್ದಶ ।**
**ಆಹೃತ್ಯಃ ಶೋಭವತ್ಯಶ್ಚ ವೇಗವತ್ಯಸ್ತಥೈವ ಚ ॥ ೧೮ ॥**

**ಊರ್ಜಾಶ್ಚೈವ ಯುವತ್ಯಶ್ಚ ಸ್ರುಚಸ್ತು ಕುರವಸ್ತಥಾ ।**
**ಬರ್ಹಯಶ್ಚಾಮೃತಾಶ್ಚೈವ ಮುದಾಶ್ಚ ಮೃಗವೋ ರುಚಃ ॥ ೧೯ ॥**

---

೧೫. ಕೃತಸ್ಥಲಾ, ಘೃತಾಚೀ, ವಿಶ್ವಾಚೀ, ಪೂರ್ವಚಿತ್ತಿ, ಪ್ರಮ್ಲೋಚಾ, ಮತ್ತು ಅನುಮ್ಲೋಚಾ ಎಂಬುವರು ಹಿಂದೆ ಹೇಳಿದ ನಾಲ್ಕು ಮಂದಿಯ ಸಂಗಡ ಸೇರಿದ ಹತ್ತು ಮಂದಿ ಅಪ್ಸರಃ ಸ್ತ್ರೀಯರಾಗಿರುವರು.

೧೬. ಉತ್ಪತ್ತಿ, ನಾಶಗಳಿಂದ ರಹಿತನಾದ ನಾರಾಯಣನಿಗೆ ವಂಶಾನುರೂಪಳೂ ಸುಂದರವಾದ ಅವಯವಗಳುಳ್ಳವಳೂ ಆಗಿ ಜನಿಸಿರುವ ಊರ್ವಶಿಯೆಂಬುವಳು ಹನ್ನೊಂದನೆಯವಳೆಂದು ಸ್ಮರಿಸಲ್ಪಟ್ಟಿರುವಳು.

೧೭. ಮೇನ ಎಂಬುವನಿಗೆ ಸರ್ವಾಂಗ ಸುಂದರಿಯಾದ ಮೇನಾ ಎಂಬುವಳು ಕನ್ಯೆಯಾಗಿ ಜನಿಸಿರುವಳು. ಈ ಎಲ್ಲ ಅಪ್ಸರಃ ಸ್ತ್ರೀಯರು ಬ್ರಹ್ಮವಾದಿನಿಯರೂ ಮತ್ತು ಮಹಾಭಾಗ್ಯದಿಂದ ಕೂಡಿದವರೂ ಆಗಿದ್ದಾರೆ.

೧೮. ಮುಖ್ಯವಾಗಿ ಪವಿತ್ರರಾದ ಅಪ್ಸರಃ ಸ್ತ್ರೀಯರ ಗಣಗಳು ಹದಿನಾಲ್ಕು ಸಂಖ್ಯೆಯಿಂದ ಇರುವುವು. ಆ ಗಣಗಳು ಮುಂದೆ ಹೇಳುವಂತೆ ಹೆಸರಿನಿಂದ ವಿಖ್ಯಾತ ಗಳಾಗಿವೆ. ಆಹೃತಿ, ಶೋಭವತಿ, ವೇಗವತಿ ಎಂಬುವು ಮೂರು ಗಣಗಳ ಹೆಸರುಗಳು.

೧೯. ಊರ್ಜಾ, ಯುವತಿ, ಸ್ರುಕ್, ಕುರು, ಬರ್ಹಿ, ಅಮೃತ, ಮುದ, ಮೃಗು, ರುಚ್ ಎಂಬುವು ಮತ್ತೆ ಒಂಭತ್ತು ಅಪ್ಸರಃ ಸ್ತ್ರೀಗಣದ ಪ್ರಸಿದ್ಧವಾದ ನಾಮಧೇಯಗಳಾಗಿವೆ.

ಭೀರವಃ ಶೋಭಯಂತ್ಯಶ್ಚ ಗಣಾ ಹ್ಯೇತೇ ಚತುರ್ದಶ ।
ಬ್ರಹ್ಮಣೋ ಮಾನಸಾಹ್ಯತ್ಯಃ ಶೋಭವತ್ಯೋ ಮರುತ್ಸುತಾಃ ॥ ೨೦ ॥

ವೇಗವತ್ಯಶ್ಚ ರಿಷ್ಟಾಯಾಃ ಊರ್ಜಾಶ್ಚೈವಾಗ್ನಿಸಂಭವಾಃ ।
ಯುವತ್ಯಶ್ಚ ತಥಾ ಸೂರ್ಯರಶ್ಮಿಜಾತಾಃ ಸುಶೋಭನಾಃ ॥ ೨೧ ॥

ಗಭಸ್ತಿಭಿಶ್ಚ ಸೋಮಸ್ಯ ಜಜ್ಞಿರೇ ಕುರವಃ ಶುಭಾಃ ।
ಯಜ್ಞೋತ್ಪನ್ನಾಃ ಸ್ರುಚೋ ನಾಮ ಕುಶವತ್ಯಾಂ ಚ ಬರ್ಹಯಃ ॥ ೨೨ ॥

ನಾರಿಜಾ ಹ್ಯಮೃತೋತ್ಪನ್ನಾ ಅಮೃತಾ ನಾಮತಃ ಸ್ಮೃತಾಃ ।
ವಾಯೂತ್ಪನ್ನಾ ಮುದಾ ನಾಮ ಭೂಮಿಜಾ ಮೃಗವಸ್ತಥಾ ॥ ೨೩ ॥

ವಿದ್ಯುತೋಽತ್ರ ರುಚೋ ನಾಮ ಮೃತ್ಯೋಃ ಕನ್ಯಾಶ್ಚ ಭೀರವಃ ।
ಶೋಭಯಂತ್ಯಶ್ಚ ಕಾಮಸ್ಯ ಗಣಾಃ ಪ್ರೋಕ್ತಾಶ್ಚತುರ್ದಶ ॥ ೨೪ ॥

---

೨೦. ಮತ್ತು ಭೀರು, ಶೋಭಯಂತೀ ಎಂಬುವು ಎರಡು ಸೇರಿ ಹದಿನಾಲ್ಕು ಅಪ್ಸರಃ ಸ್ತ್ರೀಯರ ಗಣಗಳು ಇವೆ. ಇವುಗಳಲ್ಲಿ ಬ್ರಹ್ಮನ ಮಾನಸ ಪುತ್ರಿಯರಾದ ಅಪ್ಸರೆಯರು ಆಹ್ಯತಿಗಣಕ್ಕೂ ವಾಯುಪುತ್ರಿಯರು ಶೋಭವತಿಯೆಂಬ ಗಣಕ್ಕೂ ಸೇರಿರುವರು.

೨೧. ರಿಷ್ಟಾದೇವಿಯ ಪುತ್ರಿಯರು ವೇಗವತಿಯೆಂದೂ, ಅಗ್ನಿಯ ಪುತ್ರಿಯರು ಊರ್ಜಾ ಎಂದೂ, ಸೂರ್ಯ ರಶ್ಮಿಗಳಿಂದ ಹುಟ್ಟಿದ ಮಂಗಳಾಕಾರರಾದ ಅಪ್ಸರೆಯರು ಯುವತಿಯೆಂದೂ ಪ್ರಸಿದ್ಧರಾಗಿರುವರು.

೨೨. ಮಂಗಳಾಕೃತಿಯಿಂದ ಕೂಡಿದ ಕುರು ಎಂಬ ಅಪ್ಸರೆಯರು ಚಂದ್ರನ ಕಿರಣಗಳಿಂದ ಹುಟ್ಟಿರುವರು. ಸ್ರುಚ್ ಎಂಬ ಅಪ್ಸರೆಯರು ಯಜ್ಞಪುರುಷನಿಂದ ಹುಟ್ಟಿರುವರು. ಹಾಗೆ ಬರ್ಹಿ ಎಂಬ ಗಣವು ಕುಶವತಿಯಿಂದ ಜನಿಸಿರುವುದು.

೨೩. ಜಲವೆಂಬ ಅಮೃತದಿಂದ ಹುಟ್ಟಿದ ಅಪ್ಸರೆಯರ ಗಣವು ಅಮೃತ ಎಂಬ ಹೆಸರಿನಿಂದ ಸ್ಮರಿಸಲ್ಪಟ್ಟಿರುವುದು. ವಾಯುವಿನಿಂದ ಹುಟ್ಟಿರುವ ಗಣವು ಮುದಾ ಎಂಬುದಾಗಿಯೂ ಭೂಮಿಯಿಂದ ಹುಟ್ಟಿರುವುದು ಮೃಗು ಎಂಬುದಾಗಿಯೂ ಪ್ರಸಿದ್ಧವಾಗಿರುವುವು.

೨೪. ಮಿಂಚಿನಿಂದ ಹುಟ್ಟಿದ ಗಣವು ರುಚ್ ಎಂದೂ ಮೃತ್ಯುವಿನ ಕನ್ಯೆಯರು ಭೀರು ಎಂದೂ ಕರೆಯಲ್ಪಡುವರು. ಶೋಭಯಂತೀ ಎಂಬ ಗಣವು ಕಾಮ

ಇತ್ಯೇತೇ ಬಹುಸಾಹಸ್ರಾ ಭಾಸ್ವರಾ ಅಪ್ಸರೋಗಣಾಃ ।
ದೇವತಾನಾಮೃಷೀಣಾಂ ಚ ಪತ್ನ್ಯಶ್ಚ ಮಾತರಶ್ಚ ಹ ॥ ೨೫ ॥

ಸುಗಂಧಾಶ್ಚಾಥ ನಿಷ್ಪಂದಾಃ ಸರ್ವಾಶ್ಚಾಪ್ಸರಸಃ ಸಮಾಃ ।
ಸಂಪ್ರಯೋಗಸ್ತು ಕಾಮೇನ ಮಾದ್ಯಂ ದಿವಿ ಹರಂ ವಿನಾ ॥ ೨೬ ॥

ತಾಸಾಂ ದೇವರ್ಷಿಸಂಸ್ಪರ್ಶಾ ಜಾತಾಃ ಸಾಧಾರಣಾ ಯತಃ ।
ಪರ್ವತಸ್ತತ್ರ ಸಂಭೂತೋ ನಾರದಶ್ಚೈವ ತಾವುಭೌ ॥ ೨೭ ॥

ತತೋ ಯವೀಯಸೀ ಚೈವ ತೃತೀಯಾರುಂಧತೀ ಸ್ಮೃತಾ ।
ದೇವರ್ಷಿಭ್ಯಸ್ತಯೋರ್ಜನ್ಮ ಯಸ್ಮಾನ್ನಾರದಪರ್ವತೌ ॥ ೨೮ ॥

ತಸ್ಮಾತ್ತೌ ತತ್ಸನಾಮಾನೌ ಸ್ಮೃತೌ ನಾರದಪರ್ವತೌ ।
ವಿನತಾಯಾಶ್ಚ ಪುತ್ರೌ ದ್ವಾ ಅರುಣೋ ಗರುಡಶ್ಚ ಹ ॥ ೨೯ ॥

---

ದೇವನಿಂದ ಹುಟ್ಟಿರುವುದು. ಈ ರೀತಿಯಾಗಿ ಅಪ್ಸರೆಯರ ಹದಿನಾಲ್ಕು ಗಣಗಳ ಹೇಳಲ್ಪಟ್ಟಿವೆ.

೨೫. ಈ ರೀತಿಯಾಗಿ ಶೋಭಿಸುತ್ತಿರುವ ಅಪ್ಸರಃ ಸ್ತ್ರೀಯರ ಗಣಗಳು ಅನೇಕ ಸಹಸ್ರ ಸಂಖ್ಯೆಯಿಂದ ಕೂಡಿರುವುವು. ಈ ಸ್ತ್ರೀಯರು ಕೆಲವು ದೇವತೆ ಮತ್ತು ಮುನಿಗಳಿಗೆ ಪತ್ನಿಯರಾಗಿಯೂ ಮತ್ತೆ ಕೆಲವರಿಗೆ ಜನನಿಯರಾಗಿಯೂ ಇರುವರು.

೨೬. ಇವರು ನೈಸರ್ಗಿಕವಾಗಿ ಸುಗಂಧದಿಂದ ಕೂಡಿರುವರೂ ನಿಮೇಷ ವ್ಯಾಪಾರಶೂನ್ಯರೂ ಆಗಿರುವರು. ಇವರ ಸಂಗವು ಪ್ರಾಯಕವಾಗಿ ಕಾಮದೇವನಿಂದ ಜಿತರಾದ ದೇವ-ಮುನಿಗಳಿಗೆ ದೊರೆಯುವುದು. ಈಶ್ವರನು ಮಾತ್ರ ಕಾಮದೇವನಿಗೆ ಪರಾಧೀನನಾಗಲಿಲ್ಲ.

೨೭. ಅವರು ಸರ್ವರಿಗೂ ಸಾಧಾರಣ ಸ್ತ್ರೀಯರಾದ್ದರಿಂದ ದೇವ-ಮುನಿಗಳ ಸ್ಪರ್ಶದಿಂದ ಸಂಗ ಸೌಖ್ಯವನ್ನು ಅನುಭವಿಸುವರು. ಪರ್ವತ, ನಾರದ ಎಂಬ ಮುನಿಗಳು ದೇವರ್ಷಿಗಳಿಂದ ಅಪ್ಸರಃ ಸ್ತ್ರೀಯಲ್ಲಿ ಹುಟ್ಟಿರುವರು.

೨೮. ಅವರಿಬ್ಬರಿಗೆ ಕಿರಿಯವಳಾಗಿ ಅರುಂಧತಿಯು ಮೂರನೆಯವಳಾಗಿ ಜನ್ಮವೆತ್ತಿರುವಳು, ನಾರದ-ಪರ್ವತ ಎಂಬ ಇಬ್ಬರಿಗೆ ದೇವರ್ಷಿಗಳಿಂದ ಜನ್ಮವು ಲಭಿಸಿರುವುದು

೨೯. ಆದುದರಿಂದ ದೇವರ್ಷಿಗಳ ನಾಮಗಳಿಗೆ ತುಲ್ಯವಾದ ನಾಮದಿಂದ ಕೂಡಿದವರಾದರು. ಅರುಣ, ಗರುಡ ಎಂಬೀರ್ವರು ವಿನತೆಯ ಪುತ್ರರಾಗಿ ಹುಟ್ಟಿದರು.

ಗಾಯತ್ರ್ಯಾದೀನಿ ಛಂದಾಂಸಿ ಸೌಪರ್ಣೇಯಾನಿ ಪಕ್ಷಿಣಃ ।
ವ್ಯವಹಾರ್ಯಾಣಿ ಸರ್ವಾಣಿ ಋಜುಸನ್ನಿಹಿತಾನಿ ಚ ॥ ೩೦ ॥

ಕದ್ರೂರ್ನಾಗಸಹಸ್ರಂ ವೈ ವಿಜಜ್ಞೇ ಧರಣೀಧರಮ್ ।
ಅನೇಕಶಿರಸಾಂ ತೇಷಾಂ ಖೇಚರಾಣಾಂ ಮಹಾತ್ಮನಾಮ್ ॥ ೩೧ ॥

ಬಹುತ್ವಾನ್ನಾಮಧೇಯಾನಾಂ ಪ್ರಧಾನಾಂಶ್ಚ ನಿಬೋಧತ ।
ತೇಷಾಂ ಪ್ರಧಾನಾ ನಾಗಾನಾಂ ಶೇಷವಾಸುಕಿತಕ್ಷಕಾಃ ॥ ೩೨ ॥

ಅರ್ಕರ್ಣೋ ಹಸ್ತಿಕರ್ಣಶ್ಚ ಪಿಂಜರಶ್ಚಾರ್ಯಕಸ್ತಥಾ ।
ಐರಾವತೋ ಮಹಾಪದ್ಮಃ ಕಂಬಲಾಶ್ವತರಾವುಭೌ ॥ ೩೩ ॥

ಏಲಾಪತ್ರಶ್ಚ ಶಂಖಶ್ಚ ಕರ್ಕೋಟಕಧನಂಜಯೌ ।
ಮಹಾಕರ್ಣಮಹಾನೀಲೌ ಧೃತರಾಷ್ಟ್ರಬಲಾಹಕೌ ॥ ೩೪ ॥

---

೩೦. ಮತ್ತು ಗಾಯತ್ರೀ ಮುಂತಾದ ಛಂದೋರೂಪಗಳಾದ ಪಕ್ಷಿಗಳು ಸುಪರ್ಣೆಯಿಂದ ಜನಿಸಿರುವುವು. ಈ ಛಂದಸ್ಸುಗಳು ವಿಧಿಯನ್ನು ಅನುಸರಿಸಿ ಯಜ್ಞ ಕರ್ಮದಲ್ಲಿ ಪಠಿಸುವ ವಿನಿಯೋಗವನ್ನು ಹೊಂದಿವೆ.

೩೧. ಕದ್ರೂ ಎಂಬುವಳು ಭೂಮಿಯನ್ನು ಧರಿಸಿರುವ ಆದಿಶೇಷ ಮುಂತಾದ ಸಹಸ್ರ ನಾಗಗಳನ್ನು ಪ್ರಸವಿಸಿದಳು. ಆ ನಾಗಗಳು ಅನೇಕ ಶಿರಸ್ಸುಗಳಿಂದ ಕೂಡಿ ಗಗನ ಸಂಚಾರಮಾಡುವ ಮಾಹಾತ್ಮ್ಯವನ್ನು ಹೊಂದಿರುವುವು.

೩೨. ಅವುಗಳಲ್ಲಿ ಪ್ರತ್ಯೇಕ ವ್ಯಕ್ತಿಗಳ ಹೆಸರು ಅನಂತವಾಗಿರುವುದರಿಂದ ಪ್ರಧಾನನಾಗಗಳ ಹೆಸರುಗಳನ್ನು ಮಾತ್ರ ಶ್ರವಣಮಾಡಿರಿ. ಆ ಸರ್ಪವ್ಯಕ್ತಿಗಳಲ್ಲಿ ಶೇಷ-ವಾಸುಕಿ-ತಕ್ಷಕರೆಂಬುವರು ಪ್ರಧಾನರಾಗಿರುವರು.

೩೩. ಅರ್ಕರ್ಣ, ಹಸ್ತಿಕರ್ಣ, ಪಿಂಜರ, ಆರ್ಯಕ, ಐರಾವತ, ಮಹಾಪದ್ಮ, ಕಂಬಲ ಮತ್ತು ಅಶ್ವತರ ಎಂಬುವರು ಪ್ರಧಾನನಾಗಗಳಲ್ಲಿ ಸೇರಿದವರಾಗಿರುವರು.

೩೪. ಏಲಾಪತ್ರ, ಶಂಖ, ಕರ್ಕೋಟಕ, ಧನಂಜಯ, ಮಹಾಕರ್ಣ, ಮಹಾನೀಲ, ಧೃತರಾಷ್ಟ್ರ ಮತ್ತು ವಲಾಹಕ ಎಂಬುದು ಪ್ರಧಾನನಾಗ ವ್ಯಕ್ತಿಗಳ ಗಣವೆಂದು ಭಾವಿಸಬೇಕು.

ಕರವೀರಃ ಪುಷ್ಪದಂಷ್ಟ್ರಃ ಸುಮುಖೋ ದುರ್ಮುಖಸ್ತಥಾ ।
ಸೂನಾಮುಖೋ ದಧಿಮುಖಃ ಕಾಲಿಯಶ್ಚಾಲಿಪಿಂಡಕಃ ॥ ೩೫ ॥

ಕಪಿಲಶ್ಚಾಂಬರೀಷಶ್ಚ ಅಕ್ರೂರಶ್ಚ ಕಪಿತ್ಥಕಃ ।
ಪ್ರಹ್ರಾದಸ್ತು ಬ್ರಹ್ಮಣಶ್ಚ ಗಂಧರ್ವೋಽಥ ಮಣಿಸ್ಥಕಃ ॥ ೩೬ ॥

ನಹುಷಃ ಕರರೋಮಾ ಚ ಮಣಿರಿತ್ಯೇವಮಾದಯಃ ।
ಕಾದ್ರವೇಯಾಃ ಸಮಾಖ್ಯಾತಾ ಖಶಾಯಾಸ್ತು ನಿಬೋಧತ ॥ ೩೭ ॥

ಖಶಾ ವಿಜಜ್ಞೇ ದ್ವೌ ಪುತ್ರೌ ವಿಕೃತೌ ಪರುಷವ್ರತೌ ।
ಶ್ರೇಷ್ಠಂ ಪಶ್ಚಿಮಸಂಧ್ಯಾಯಾಂ ಪೂರ್ವಸ್ಯಾಂ ಚ ಕನೀಯಸಮ್ ॥ ೩೮ ॥

ವಿಲೋಹಿತೈಕಕರ್ಣಂ ಚ ಪೂರ್ವಂ ಸಾಜನಯತ್ ಸುತಮ್ ।
ಚತುರ್ಭುಜಂ ಚತುಷ್ಪಾದಂ ಕಿಂಚಿತ್ಸ್ಪಂದಂ ದ್ವಿಧಾಗತಿಮ್ ॥ ೩೯ ॥

---

೩೫. ಕರವೀರ, ಪುಷ್ಪದಂಷ್ಟ್ರ, ಸುಮುಖ, ದುರ್ಮುಖ, ಸೂನಾಮುಖ, ದಧಿಮುಖ, ಕಾಲಿಯ ಮತ್ತು ಅಲಿಪಿಂಡಕ ಎಂಬುವ ಮತ್ತೊಂದು ನಾಗವರ್ಗವು ಗಣ್ಯವಾಗಿರುವುದು.

೩೬. ಕಪಿಲ, ಅಂಬರೀಷ, ಅಕ್ರೂರ, ಕಪಿತ್ಥಕ, ಪ್ರಹ್ರಾದ, ಬ್ರಹ್ಮಣ, ಗಂಧರ್ವ ಮತ್ತು ಮಣಿಸ್ಥಕ ಎಂಬ ನಾಗವರ್ಗವನ್ನು ಪ್ರಧಾನವಾದುದೆಂದು ಅರಿಯಬೇಕು.

೩೭. ನಹುಷ, ಕರರೋಮಾ ಮತ್ತು ಮಣಿ ಮುಂತಾದ ನಾಮಾಂಕಿತರಾದ ಅನೇಕ ನಾಗವ್ಯಕ್ತಿಗಳು ಕದ್ರೂ ಎಂಬಾಕೆಯ ಪುತ್ರರೆಂದು ಪ್ರಸಿದ್ಧರಾಗಿರುವರು. ಮುಂದೆ ಖಶಾ ಎಂಬುವಳ ವಂಶವಿಸ್ತಾರವನ್ನು ಕೇಳಿರಿ.

೩೮. ಖಶಾ ಎಂಬುವಳು ಭಯಂಕರವಾದ ಕರ್ಮಾಚರಣವುಳ್ಳ, ವಿಕಾರ ರೂಪದಿಂದ ಕೂಡಿದ ಇಬ್ಬರು ಪುತ್ರರನ್ನು ಹೊಂದಿದಳು. ಸಾಯಂ ಸಂಧ್ಯಾಕಾಲದಲ್ಲಿ ಒಬ್ಬ ಪುತ್ರನನ್ನೂ ಪ್ರಾತಃ ಸಂಧ್ಯಾಕಾಲದಲ್ಲಿ ಮತ್ತೊಬ್ಬ ಕಿರಿಯ ಪುತ್ರನನ್ನೂ ಪ್ರಸವಿಸಿರುವಳು.

೩೯. ಅವರಿಬ್ಬರಲ್ಲಿ ಕೆಂಪಾದ ಒಂದು ಕಿವಿ, ಚತುರ್ಭುಜ, ನಾಲ್ಕು ಪಾದ, ಸ್ವಲ್ಪ ಚಲನ ಮತ್ತು ಸೌಮ್ಯ-ಅಸೌಮ್ಯವೆಂಬ ಎರಡು ಬಗೆಯ ಗತಿಗಳಿಂದ ಕೂಡಿದ ಜ್ಯೇಷ್ಠ ಪುತ್ರನನ್ನು ಮೊದಲು ಪ್ರಸವಿಸಿದಳು.

ಸರ್ವಾಂಗಕೇಶಂ ಸ್ಥೂಲಾಂಗಂ ಶುಭನಾಸಂ ಮಹೋದರಮ್ ।
ಸ್ವಚ್ಛಶೀರ್ಷಂ ಮಹಾಕರ್ಣಂ ಮುಂಜಕೇಶಂ ಮಹಾಬಲಮ್ ॥ ೪೦ ॥

ಹ್ರಸ್ವಾಸ್ಯಂ ದೀರ್ಘಜಿಹ್ವಂ ಚ ಬಹುದಂಷ್ಟ್ರಂ ಮಹಾಹನುಮ್ ।
ರಕ್ತಪಿಂಗಾಕ್ಷಪಾದಂ ಚ ಸ್ಥೂಲಭ್ರೂದೀರ್ಘನಾಸಿಕಮ್ ॥ ೪೧ ॥

ಗುಹ್ಯಕಂ ಶಿತಿಕಂಠಂ ಚ ಮಹಾಪಾದಂ ಮಹಾಮುಖಮ್ ।
ಏವಂವಿಧಂ ಖಶಾ ಪುತ್ರಂ ಜಜ್ಞೇಽಸಾವತಿಭೀಷಣಮ್ ॥ ೪೨ ॥

ತಸ್ಯಾನುಜಂ ದ್ವಿತೀಯಂ ಸಾ ಹ್ಯುಷಸ್ಯಂತೇ ವ್ಯಜಾಯತ ।
ತ್ರಿಶೀರ್ಷಂ ಚ ತ್ರಿಪಾದಂ ಚ ತ್ರಿಹಸ್ತಂ ಕೃಷ್ಣಲೋಚನಮ್ ॥ ೪೩ ॥

ಊರ್ಧ್ವಕೇಶಂ ಹರಿಚ್ಛ್ಮಶ್ರುಂ ಶಿಲಾಸಂಹನನಂ ದೃಢಮ್ ।
ಹ್ರಸ್ವಕಾಯಂ ಪ್ರಬಾಹುಂ ಚ ಮಹಾಕಾಯಂ ಮಹಾರವಮ್ ॥ ೪೪ ॥

---

೪೦. ಮತ್ತು ಆ ಪುತ್ರನು ಸರ್ವಾವಯವಗಳಲ್ಲಿ ಕೇಶ, ಸ್ಥೂಲವಾದ ಅವಯವ, ಶುಭವಾದ ನಾಸಿಕಾ, ಮಹತ್ತಾದ ಉದರ, ಸ್ವಚ್ಛವಾದ ಶಿರ, ಮಹಾಕರ್ಣ, ಮುಂಜ ಹುಲ್ಲಿನಂತೆ ಕೇಶ ಮತ್ತು ಮಹಾಬಲಗಳೆಂಬ ವಿಲಕ್ಷಣರೂಪಗಳನ್ನು ಹೊಂದಿದ್ದನು.

೪೧. ಹ್ರಸ್ವವಾದ ಮುಖ, ಉದ್ದವಾದ ನಾಲಿಗೆ, ಅನೇಕ ಕೋರೆಹಲ್ಲು, ದೊಡ್ಡದಾದ ಹನುಭಾಗ, ಕೆಂಪು ಕಣ್ಣು, ಹೊಂಬಣ್ಣದ ಕಾಲು, ದಪ್ಪವಾದ ಹುಬ್ಬು ಮತ್ತು ಉದ್ದವಾದ ಮೂಗು ಎಂಬ ಅವಯವ ವಿಕಾರವು ಆ ಜ್ಯೇಷ್ಠ ಪುತ್ರನಲ್ಲಿ ಸ್ವಾಭಾವಿಕವಾಗಿದ್ದಿತು.

೪೨. ಯಕ್ಷನಂತೆ ಬೃಹದಾಕಾರನೂ, ಕಪ್ಪು ಕಂಠವುಳ್ಳವನೂ, ಮಹತ್ತಾದ ಪಾದಗಳಿಂದ ಕೂಡಿದವನೂ ಮತ್ತೂ ಮಹತ್ತಾದ ಮುಖದಿಂದ ಸಹಿತನೂ ಆಗಿದ್ದನು. ಖಶಾ ಎಂಬುವಳು ಈ ವಿಕಾರರೂಪದಿಂದ ಕೂಡಿದ ಮಹಾಭಯಂಕರನಾದ ಪುತ್ರನನ್ನು ಪ್ರಸವಿಸಿದಳು.

೪೩. ಹಾಗೆಯೇ ಉಷಃಕಾಲದ ಕಡೆಯ ಭಾಗವಾದ ಪ್ರಾತಃ ಸಂಧ್ಯೆಯ ಹೊತ್ತಿನಲ್ಲಿ ಅವನ ಸಹೋದರನನ್ನು ಪ್ರಸವಿಸಿದಳು. ಅವನು ಮೂರು ತಲೆ, ಮೂರು ಕಾಲು, ಮೂರು ಕೈ ಮತ್ತು ಕಪ್ಪಾದ ಕಣ್ಣುಗಳಿಂದ ಕೂಡಿದ್ದನು.

೪೪. ಮತ್ತು ಎರಡನೆಯ ಪುತ್ರನು ಊರ್ಧ್ವಾಗ್ರವಾದ ಕೇಶ, ಹಸುರು ಬಣ್ಣದ

ಆಕರ್ಣದಾರಿತಾಸ್ಯಂ ಚ ಬಲವತ್ಸ್ಥೂಲನಾಸಿಕಮ್ ।
ಸ್ಥೂಲೌಷ್ಠಮಷ್ಟದಂಷ್ಟ್ರಂ ಚ ಜಿಹ್ಮಾಸ್ಯಂ ಶಂಕುಕರ್ಣಕಮ್॥ ೪೫ ॥

ಪಿಂಗಲೋದ್ವೃತ್ತನಯನಂ ಜಟಿಲಂ ದ್ವಂದ್ವಪಿಂಡಕಮ್ ।
ಮಹಾಸ್ಕಂಧಂ ಮಹೋರಸ್ಕಂ ಪೃಥುಘೋಣಂ ಕೃಶೋದರಮ್॥ ೪೬ ॥

ಅಸ್ಥೂಲಂ ಲೋಹಿತಗ್ರೀವಂ ಲಂಬವೋಢ್ರಾಂಡಪಿಂಡಕಮ್ ।
ಏವಂವಿಧಂ ಕುಮಾರಂ ಸಾ ಕನಿಷ್ಠಂ ಸಮಸೂಯತ ॥ ೪೭ ॥

ಸದ್ಯಃ ಪ್ರಸೂತಮಾತ್ರೌ ತೌ ವಿವೃದ್ಧೌ ಚ ಪ್ರಮಾದತಃ ।
ಉಪಯೋಗಸಮರ್ಥಾಭ್ಯಾಂ ಶರೀರಾಭ್ಯಾಂ ವ್ಯವಸ್ಥಿತೌ ॥ ೪೮ ॥

ಸದ್ಯೋಜಾತೌ ವಿವೃದ್ಧಾಂಗೌ ಮಾತರಂ ಪರ್ಯಕರ್ಷತಾಮ್ ।
ತಯೋಃ ಪೂರ್ವಸ್ತು ಯಃ ಕ್ರೂರೋ ಮಾತರಂ ಸೋಽಭ್ಯಕರ್ಷತ ॥ ೪೯ ॥

---

ಮಾಸೆ, ಕಲ್ಲಿನ ಕವಚದಂತೆ ಅಭೇದ್ಯವಾದ ಆಕಾರ, ಹ್ರಸ್ವವಾದ ಶರೀರ, ಬಲವಾದ ಬಾಹು, ಮಹಾಪರಿಮಾಣದ ದೇಹ ಮತ್ತು ಮಹಾನಾದ—ಎಂಬ ವಿಕೃತರೂಪಗಳಿಂದ ಶೋಭಿಸುತ್ತಿದ್ದನು.

೪೫. ಮತ್ತು ಕಿವಿಯವರೆಗೆ ಸೀಳಿದಂತಿರುವ ಮುಖ, ಬಲವಾದ ಮತ್ತು ದಪ್ಪವಾದ ಮೂಗು, ದಪ್ಪವಾದ ತುಟಿ, ಎಂಟು ಕೋರೆಹಲ್ಲು, ವಕ್ರವಾದ ಮುಖ ಮತ್ತು ಮೊಳೆಯಂತಿರುವ ಕಿವಿ ಎಂಬ ಅವಯವ ವಿಕಾರಗಳು ಅವನಿಗೆ ಸಹಜವಾಗಿದ್ದುವು.

೪೬. ಹೊಂಬಣ್ಣವೂ ವಕ್ರವೂ ಆದ ನೇತ್ರ, ಜಡೆ, ಎರಡು ಮಾಂಸಪಿಂಡ, ಮಹಾಸ್ಕಂಧ, ವಿಶಾಲವಾದ ಹೃದಯ, ದೊಡ್ಡದಾದ ಮೂಗು ಮತ್ತು ಕೃಶವಾದ ಉದರ ಎಂಬುವ ವಿಕಾರ ಲಕ್ಷಣಗಳು ಆ ದ್ವಿತೀಯ ಪುತ್ರನ ಚಿಹ್ನೆಗಳಾಗಿದ್ದುವು.

೪೭. ಮತ್ತು ಸ್ಥೂಲನಲ್ಲದವನೂ, ಕೆಂಪಾದ ಕಂಠವುಳ್ಳವನೂ, ಲಂಬಾಯಮಾನವಾದ ಎರಡು ವೃಷಣ ಪಿಂಡಗಳುಳ್ಳವನೂ ಆಗಿದ್ದನು. ಇಷ್ಟು ವಿಕಾರ ಲಕ್ಷಣ ಪರಿಪೂರ್ಣನಾದ ಕನಿಷ್ಠ ಪುತ್ರನನ್ನು ಖಶಾ ಎಂಬಾಕೆಯು ಹಡೆದಳು.

೪೮. ಸಹೋದರರಾದ ಆ ಇಬ್ಬರು ಪುತ್ರರು ಜನಿಸಿದ ಕೂಡಲೆ ಮಹಾ ಪ್ರಮಾಣದಿಂದ ಬೆಳೆದು ವ್ಯವಹಾರಕ್ಕೆ ಶಕ್ತವಾದ ದೇಹಗಳನ್ನು ಧರಿಸಿದವರಾದರು.

೪೯. ಹುಟ್ಟಿದ ಕೂಡಲೆ ವೃದ್ಧಿಹೊಂದಿದ ಮಹಾ ಶರೀರವುಳ್ಳ ಆ ಪುತ್ರರು

ಬ್ರುವಂಶ್ಚ ಮಾತರ್ಭಕ್ಷ್ಯಾವ ರಕ್ಷಾರ್ಥಂ ಕ್ಷುಧಯಾರ್ದಿತಃ ।
ನ್ಯಷೇಧಯತ್ ಪುನಸ್ತ್ವೇನಂ ಸ್ವಯಂ ಸ ತು ಕನಿಷ್ಠಕಃ ॥ ೫೦ ॥

ಪೂರ್ವೇಷಾಂ ಕ್ಷೇಮಕೃತ್ತ್ವಂ ವೈ ರಕ್ಷೈತಾಂ ಮಾತರಂ ಸ್ವಕಾಮ್ ।
ಬಾಹುಭ್ಯಾಂ ಪರಿಗೃಹ್ಯೈನಾಂ ಮಾತರಂ ಸೋಽಭ್ಯಭಾಷಯತ್ ॥ ೫೧ ॥

ಏತಸ್ಮಿನ್ನೇವ ಕಾಲೇ ತು ಪ್ರಾದುರ್ಭೂತಸ್ತಯೋಃ ಪಿತಾ ।
ತೌ ದೃಷ್ಟ್ವಾ ವಿಕೃತಾಕಾರೌ ಖಶಾಂ ತಾಮಭ್ಯಭಾಷತ ॥ ೫೨ ॥

ತೌ ಸುತೌ ಪಿತರಂ ದೃಷ್ಟ್ವಾ ಹ್ಯೇಕಭೂತೌ ಭಯಾನ್ವಿತೌ ।
ಮಾತುರೇವ ಪುನಶ್ಚಾಂಗೇ ಪ್ರಲೀಯೇತಾಂ ಸ್ವಮಾಯಯಾ ॥ ೫೩ ॥

ಅಥಾಬ್ರವೀದೃಷಿರ್ಭಾರ್ಯಾಂ ಕಿಮಾಭ್ಯಾಮುಕ್ತವತ್ಯಸಿ ।
ಸರ್ವಮಾಚಕ್ಷ್ವ ತತ್ತ್ವೇನ ತವೈವಾಯಂ ವ್ಯತಿಕ್ರಮಃ ॥ ೫೪ ॥

---

ತಾಯಿಯನ್ನು ಸೆಳೆದರು. ಆ ಇಬ್ಬರು ಪುತ್ರರಲ್ಲಿ ಜ್ಯೇಷ್ಠನಾದ ಪುತ್ರನು ಅತಿಕ್ರೂರನಾಗಿ ಜನನಿಯನ್ನು ಹಿಡಿದೆಳೆದನು.

೫೦. ಆಗ ಆ ಪುತ್ರನು ತಾಯಿಯೆ! ನಾನು ಹಸಿವಿನಿಂದ ಪೀಡಿತನಾಗಿ ನನ್ನ ರಕ್ಷಣವನ್ನು ಮಾಡಿಕೊಳ್ಳಲು ನಿನ್ನನ್ನು ಭಕ್ಷಿಸುತ್ತೇನೆ ಎಂದು ಹೇಳಿದನು. ಕನಿಷ್ಠ ಪುತ್ರನು ಜನನಿಯನ್ನು ಆಕರ್ಷಿಸುತ್ತಿರುವ ಜ್ಯೇಷ್ಠಭ್ರಾತೃವನ್ನು ನಿವಾರಣಮಾಡಿದನು.

೫೧. ಮತ್ತು ತಾಯಿಯನ್ನು ತನ್ನ ಭುಜಪಂಜರದಲ್ಲಿ ಅಪ್ಪಿಕೊಂಡು ಸಹೋದರನನ್ನು ನೋಡಿ "ನೀನು ಹಿರಿಯರಿಗೆ ಕ್ಷೇಮವನ್ನುಂಟುಮಾಡಲು ಹುಟ್ಟಿದ್ದರಿಂದ ನಿನ್ನ ಈ ತಾಯಿಯನ್ನು ರಕ್ಷಿಸು" ಎಂಬುದಾಗಿ ಹೇಳಿದನು.

೫೨. ಈ ಕಾಲದಲ್ಲಿ ಆ ಪುತ್ರರಿಬ್ಬರ ಜನಕನಾದ ಕಶ್ಯಪಮುನಿಯು ಅಲ್ಲಿ ಪ್ರಾದುರ್ಭವಿಸಿದನು. ಮತ್ತು ವಿಕಾರವಾದ ಆಕಾರದಿಂದ ಕೂಡಿದ ಆ ಪುತ್ರರನ್ನು ನೋಡಿ ಖಶಾ ಎಂಬ ತನ್ನ ಪತ್ನಿಯನ್ನು ಕುರಿತು ಮಾತನಾಡಿದನು.

೫೩. ಆ ಪುತ್ರರು ಜನಕನನ್ನು ನೋಡಿ ಭಯಗ್ರಸ್ತರಾಗಿ ಆಗ ಐಕಮತ್ಯವನ್ನು ಹೊಂದಿ ತಮ್ಮ ಮಾಯಾಬಲದಿಂದ ತಾಯಿಯ ಶರೀರದಲ್ಲಿ ಅಡಗಿಕೊಂಡರು.

೫೪. ತರುವಾಯ ಮುನಿಯು ಭಾರ್ಯೆಯನ್ನು ನೋಡಿ ಇಂತೆಂದನು :—

ಮಾತೃತುಲ್ಯಾಶ್ಚ ಜನನೇ ಪುತ್ರೋ ಭವತಿ ಕನ್ಯಕಾ ।
ಯಥಾಶೀಲಾ ಭವೇನ್ಮಾತಾ ತಥಾಶೀಲೋ ಭವೇತ್ಸುತಃ ॥ ೫೫ ॥

ಯದ್ವರ್ಣಾ ತು ಭವೇದ್ಭೂಮಿಸ್ತದ್ವರ್ಣಂ ಸಲಿಲಂ ಭ್ರವೇತ್ ।
ಮಾತ್ಯಾಣಾಂ ಶೀಲದೋಷೇಣ ತಥಾ ರೂಪಗುಣೈಃ ಪುನಃ ॥ ೫೬ ॥

ವಿಭಿನ್ನಾಸ್ತು ಪ್ರಜಾಃ ಸರ್ವಾಸ್ತಥಾ ಖ್ಯಾತಿವಶೇನ ಚ ।
ಇತ್ಯೇವಮುಕ್ತ್ವಾ ಭಗವಾನ್ ಖಶಾಮಪ್ರತಿಮಸ್ತದಾ ॥ ೫೭ ॥

ಪುತ್ರಾನಾಹೂಯ ಸಾಮ್ನಾ ವೈ ಚಕ್ರೇ ತಾಭ್ಯಾಂ ತು ನಾಮನೀ ।
ಪುತ್ರಾಭ್ಯಾಂ ಯತ್ಕೃತಂ ತಸ್ಯಾಸ್ತದಾಚಷ್ಟ ಖಶಾ ತದಾ ॥ ೫೮ ॥

ಮಾತಾ ಯಥಾ ಸಮಾಖ್ಯಾತಾ ತರ್ಕಾಭ್ಯಾಂ ಚ ಪೃಥಕ್ ಪೃಥಕ್ ।
ತೇನ ಧಾತ್ವರ್ಥಯೋಗೇನ ತತ್ತದರ್ಥೇ ಚಕಾರ ಹ ॥ ೫೯ ॥

---

ಪುತ್ರರು ನಿನಗೆ ಏನು ಹೇಳಿದರು? ಅದೆಲ್ಲವನ್ನು ತಾತ್ತ್ವಿಕವಾಗಿ ನನಗೆ ಹೇಳು. ಆದರಲ್ಲಿರುವ ಲೋಪದೋಷಗಳ ವ್ಯತಿಕ್ರಮವು ನಿನಗೆ ಸೇರಿದುದು.

೫೫. ಜನನ ಕಾಲದಲ್ಲಿ ಪುತ್ರ ಅಥವಾ ಕನ್ಯೆಯು ಮಾತೃವಿಗೆ ಸಮಾನ ಶೀಲರಾಗಿರುವರು. ಜನನಿಯು ಎಂತಹ ಶೀಲವುಳ್ಳವಳಾಗುವಳೋ, ಪುತ್ರನು ಅಂತಹ ಶೀಲವನ್ನು ಹೊಂದುವನು.

೫೬. ಪಾತ್ರವು-(ಭೂಮಿಯು) ಯಾವ ಬಣ್ಣದಿಂದ ಕಾಣಿಸುವುದೋ ಅಲ್ಲಿರುವ ಜಲವು ಆ ವರ್ಣದಿಂದ ತಪ್ಪದೆ ಕಾಣಿಸಿಕೊಳ್ಳುವುದು. ಪುತ್ರರಲ್ಲಿ ತಾಯಂದಿರ ಶೀಲದೋಷಗಳು ಮತ್ತು ರೂಪ-ಗುಣಗಳು ಸಂಕ್ರಮಿಸುವುವು.

೫೭. ಮತ್ತು ತಾಯಂದಿರ ಖ್ಯಾತಿಯಿಂದಲೂ ಹುಟ್ಟಿದ ಎಲ್ಲ ಪ್ರಜೆಗಳು ನಾನಾ ವಿಧರಾಗಿರುವರು. ಹೀಗೆಂದು ನಿರುಪಮ ತಪಸ್ವಿಯಾಗಿದ್ದ ಪೂಜ್ಯ ಕಶ್ಯಪ ಮುನಿಯು ಭಾರ್ಯೆಯನ್ನು ಕುರಿತು ಹೇಳಿದನು.

೫೮. ಆಗ ಪುತ್ರರನ್ನು ಸಾಮೋಪಾಯದಿಂದ ಕರೆದು ಅವರಿಗೆ ನಾಮಕರಣವನ್ನು ಮಾಡಿದನು, ಆಗ ಖಶೆಯು ತನ್ನಲ್ಲಿ ಪುತ್ರರು ಆಚರಿಸಿರುವ ಕರ್ಮವನ್ನು ಕಶ್ಯಪಮುನಿಗೆ ವಿಜ್ಞಾಪಿಸಿದಳು.

೫೯. ಪುತ್ರರ ಯಾವ ಕರ್ಮವನ್ನು ತಾಯಿಯು ವಿವರಿಸಿದಳೋ ಮತ್ತು ಪ್ರತ್ಯೇಕವ್ಯಕ್ತಿಯಲ್ಲಿರುವ ಯಾವ ಕರ್ಮ ವಿಶೇಷವನ್ನು ತರ್ಕಗಳಿಂದ ಊಹಿಸ

ಮಾತರ್ಭಕ್ಷೇತ್ಯಥೋಕ್ತೋ ವೈ ಖಾದನೇ ಭಕ್ಷಣೇ ಚ ಸಃ ।
ಭಕ್ಷಾವೇತ್ಯುಕ್ತವಾನೇಷ ತಸ್ಮಾದ್ಯಕ್ಷೋ ಭವತ್ವಯಮ್ ॥ ೬೦ ॥

ರಕ್ಷ ಇತ್ಯೇಷ ಧಾತುರ್ಯಃ ಪಾಲನೇ ಸ ವಿಭಾವ್ಯತೇ ।
ಉಕ್ತವಾಂಶ್ಚೈಷ ಯಸ್ಮಾತ್ತು ರಕ್ಷೇಮಾಂ ಮಾತರಂ ಸ್ವಕಾಮ್ ॥ ೬೧ ॥

ನಾಮ್ನಾ ರಕ್ಷೋಽಪರಸ್ತಸ್ಮಾದ್ಭವಿಷ್ಯತಿ ತವಾತ್ಮಜಃ ।
ಸ ತದಾ ತದ್ವಿಧಾಂ ದೃಷ್ಟ್ವಾ ವಿಕ್ರಿಯಾಂ ಚ ತಯೋಃ ಪಿತಾ ॥ ೬೨ ॥

ತದಾ ಭಾವಿನಮರ್ಥಂ ಚ ಬುದ್ಧ್ವಾ ಮಾತ್ರಾ ಕೃತಂ ತಯೋಃ ।
ತಾವುಭೌ ಕ್ಷುಧಿತೌ ದೃಷ್ಟ್ವಾ ವಿಸ್ಮಿತಃ ಪರಿಮೃಷ್ಟಧೀಃ ॥ ೬೩ ॥

---

ಬಹುದಾಗಿದ್ದಿತೋ ಅಂತಹ ಕರ್ಮವನ್ನು ಬೋಧಿಸುವ ಧಾತುವಿನ ಅರ್ಥಾನುಸಾರವಾಗಿ ನಾಮಕರಣಮಾಡಿದನು.

೬೦. ಜ್ಯೇಷ್ಠಪುತ್ರನು ಜನಿಸಿದ ಕೂಡಲೆ ತಾಯಿಯೇ ಭಕ್ಷಿಸುತ್ತೇವೆ ಎಂದು ಹೇಳಿದನು. ಆ ಭಕ್ಷಧಾತುವು ಭಕ್ಷಿಸುವುದು ಎಂಬ ಅರ್ಥದಲ್ಲಿ ಪಠಿತವಾಗಿರುವುದು. ಆದುದರಿಂದ ಅವನಿಗೆ ಸ್ವಲ್ಪ ಮಾತ್ರ ವರ್ಣವಿಕಾರದಿಂದ ಕೂಡಿದ ಯಕ್ಷ ಎಂಬ ಸಂಜ್ಞೆಯು ಅನ್ವರ್ಥವಾಗಿ ಬರಲಿ.

೬೧. "ರಕ್ಷ" ಎಂಬ ಧಾತುವು "ಪಾಲನ" ಎಂಬ ಅರ್ಥದಲ್ಲಿ ಧಾತು ಪಾಠದಲ್ಲಿ ಪಠಿತವಾಗಿ ಪ್ರಸಿದ್ಧವಾಗಿದೆ. ಕನಿಷ್ಠಪುತ್ರನು "ನೀನು ನಿನ್ನ ತಾಯಿಯನ್ನು ರಕ್ಷಿಸು" ಎಂದು ಜ್ಯೇಷ್ಠಭ್ರಾತೃವಿಗೆ ಹೇಳಿರುವನು.

೬೨. ಆದುದರಿಂದ ನಿನ್ನ ದ್ವಿತೀಯಪುತ್ರನು ರಕ್ಷಧಾತುವಿನಿಂದ ರೂಪಗೊಂಡಿರುವ ರಕ್ಷಸ್ ಎಂಬ ಅನ್ವರ್ಥನಾಮಾಂಕಿತನಾಗುವನು, ಹೀಗೆಂದು ಹೇಳಿ ತಂದೆಯು ಆ ಪುತ್ರರ ಅಸಾಧಾರಣವಾದ ಶರೀರವಿಕಾರವನ್ನು ಆಗ ಮತ್ತೆ ನೋಡಿದನು.

೬೩. ಮತ್ತು ಆಗ ತಂದೆಯು ತಾಯಿಯ ಭಾಗ್ಯದಿಂದ ರಚಿತವಾಗಿರುವ ಆ ಪುತ್ರರಿಬ್ಬರ ಭಾವಿ ವಿಷಯವನ್ನು ತಿಳಿದು ಅದಕ್ಕೆ ಅನುರೂಪವಾಗಿ ಅವರು ವಿಶೇಷವಾಗಿ ಕ್ಷುಧೆಯಿಂದ ಪೀಡಿತರಾಗಿರುವುದನ್ನು ಕಂಡು ವಿಸ್ಮಯವನ್ನು ಹೊಂದಿ ಬುದ್ಧಿಯಲ್ಲಿ ವಿಮರ್ಶಮಾಡಿದನು.

ತಯೋಃ ಪ್ರಾದಿಶದಾಹಾರಂ ಖಶಾಪತಿರಸೃಗ್ವಸೇ ।
ಪಿತಾ ತೌ ಕ್ಷುಧಿತೌ ದೃಷ್ಟ್ವಾ ವರಮೇತಂ ತಯೋರ್ದದೌ ॥ ೬೪ ॥

ಯುವಯೋರ್ಹಸ್ತಸಂಸ್ಪರ್ಶಾದ್ರಕ್ತಧಾರಾಶ್ಚ ಸರ್ವಶಃ ।
ಅಸೃಙ್ಮಾಂಸವಸಾಭೂತಾ ಭವಿಷ್ಯಂತೀಹ ಕಾಮತಃ ॥ ೬೫ ॥

ನಕ್ತಾಹಾರವಿಹಾರೌ ಚ ದ್ವಿಜದೇವಾದಿಭೋಜನೌ ।
ನಕ್ತಂ ಚೈವ ಬಲೀಯಾಂಸೌ ದಿವಾ ವೈ ನಿರ್ಬಲೌ ಯುವಾಮ್॥ ೬೬ ॥

ಮಾತರಂ ರಕ್ಷತ ಇಮಾಂ ಧರ್ಮಶ್ಚೈವಾನುಶಿಷ್ಯತೇ ।
ಇತ್ಯುಕ್ತ್ವಾ ಕಶ್ಯಪಃ ಪುತ್ರೌ ತತ್ರೈವಾಂತರಧೀಯತ ॥ ೬೭ ॥

ಗತೇ ಪಿತರಿ ತೌ ಕ್ರೂರೌ ನಿಸರ್ಗಾದೇವ ದಾರುಣೌ ।
ವಿಪರ್ಯಯೇಷು ವರ್ತೇತೇಽಕೃತಜ್ಞೌ ಪ್ರಾಣಿಹಿಂಸಕೌ ॥ ೬೮ ॥

---

೬೪. ಖಶಾಪತಿಯಾದ ಕಶ್ಯಪಮುನಿಯು ಆ ಪುತ್ರರಿಗೆ ರಕ್ತ, ವಸೆಗಳನ್ನು ಆಹಾರವಾಗಿ ಕಲ್ಪಿಸಿದನು. ಜನಕನು ಹಸಿವಿನಿಂದ ಕೂಡಿದ ಆ ಪುತ್ರರನ್ನು ಕಂಡು ಈ ರೀತಿಯಾಗಿ ವರವನ್ನು ಪ್ರದಾನಮಾಡಿದನು.

೬೫. ನಿಮ್ಮ ಹಸ್ತಸ್ಪರ್ಶವಾದ ಎಲ್ಲ ಕಡೆಗಳಲ್ಲಿ ನಿಮ್ಮ ಇಷ್ಟಾನುಸಾರವಾಗಿ ರಕ್ತಧಾರೆ, ಮಾಂಸ, ವಸಾ ಎಂಬ ನಿಮ್ಮ ಆಹಾರಸಾಮಗ್ರಿಯಿಂದ ತುಂಬಿ ಹೋಗುವುದು.

೬೬. ನೀವು ರಾತ್ರಿಯಲ್ಲಿ ಮಾತ್ರ ಆಹಾರಗಳನ್ನು ತಿನ್ನುವವರೂ, ದ್ವಿಜ-ದೇವ ಮುಂತಾದವರನ್ನು ಭಕ್ಷಿಸುವವರೂ, ರಾತ್ರಿ ವೇಳೆಯಲ್ಲಿ ಮಾತ್ರ ಬಲಿಷ್ಠರೂ ಮತ್ತು ಹಗಲು ನಿರ್ಬಲರೂ ಆಗಿರುತ್ತೀರಿ.

೬೭. ಆದರೆ ಈ ತಾಯಿಯನ್ನು ಮಾತ್ರ ರಕ್ಷಣಮಾಡಿರಿ. ಜನನೀ ರಕ್ಷಣ ಧರ್ಮವು ಮಹತ್ತಾಗಿ ಶಾಸ್ತ್ರಗಳಿಂದ ವಿಧಿಸಲ್ಪಟ್ಟಿದೆ. ಹೀಗೆಂದು ಕಶ್ಯಪಮುನಿಯು ಪುತ್ರರಿಗೆ ಹೇಳಿ ಅಲ್ಲಿಯೇ ಅಂತರ್ಧಾನ ಹೊಂದಿದನು.

೬೮. ಇದನ್ನು ಉಪದೇಶಮಾಡಿ ತಂದೆಯು ಹೊರಟು ಹೋಗಲಾಗಿ ಸ್ವಭಾವವಾಗಿಯೇ ಕ್ರೂರರೂ ಭಯಂಕರರೂ ಆದ ಆ ಪುತ್ರರು ಪ್ರಾಣಿಹಿಂಸಾ ಕರ್ಮದಲ್ಲಿ ಮಿತಿಯಿಲ್ಲದಂತೆ ಆಸಕ್ತಿಯುಳ್ಳವರೂ ಕೃತಜ್ಞತಾಲೇಶಮಾತ್ರದಿಂದ ಶೂನ್ಯರೂ ಆದರು.

8

ಮಹಾಬಲೌ ಮಹಾಸತ್ತ್ವೌ ಮಹಾಕಾಯೌ ದುರಾಸದೌ ।
ಮಾಯಾವಿದಾವದೃಶ್ಯೌ ತಾವಂತರ್ಧಾನಗತಾವುಭೌ ॥ ೬೯ ॥

ತೌ ಕಾಮರೂಪಿಣೌ ಘೋರೌ ನೀರುಜೌ ಚ ಸ್ವಭಾವತಃ ।
ರೂಪಾನುರೂಪೈರಾಚಾರೈಃ ಪ್ರಚರಂತೌ ಪ್ರಬಾಧಕೌ ॥ ೭೦ ॥

ದೇವಾನೃಷೀನ್ ಪಿತೄಂಶ್ಚೈವ ಗಂಧರ್ವಾನ್ ಕಿನ್ನರಾನಪಿ ।
ಪಿಶಾಚಾಂಶ್ಚ ಮನುಷ್ಯಾಂಶ್ಚ ಪನ್ನಗಾನ್ ಪಕ್ಷಿಣಃ ಪಶೂನ್ ॥ ೭೧ ॥

ಭಕ್ಷಾರ್ಥಮಿಹ ಲಿಪ್ಸಂತೌ ಚೇರತುಸ್ತೌ ನಿಶಾಚರೌ ।
ಇಂದ್ರಸ್ಯಾನುಚರೌ ಚೈವ ಕ್ಷುಬ್ಧೌ ದೃಷ್ಟ್ವಾ ಹ್ಯತಿಷ್ಠತಾಮ್ ॥ ೭೨ ॥

ರಾಕ್ಷಸಂ ತಂ ಕದಾಚಿದ್ವೈ ನಿಶೀಥೇ ಹ್ಯೇಕಮೀಶ್ವರಮ್ ।
ಆಹಾರಂ ಸ ಪರೀಪ್ಸನ್ ವೈ ಶಬ್ದೇನಾನುಸಸಾರ ಹ ॥ ೭೩ ॥

---

೬೯. ಮತ್ತು ಅವರಿಬ್ಬರು ಮಹಾಬಲಿಷ್ಠರೂ ಮಹಾಸತ್ತ್ವವುಳ್ಳವರೂ ದೊಡ್ಡ ಆಕಾರವುಳ್ಳವರೂ ಇತರರಿಂದ ಲಂಘಿಸಲು ಅಶಕ್ಯರೂ, ಮಾಯಾಜಾಲವನ್ನು ತಿಳಿದವರೂ, ಮತ್ತು ಅದೃಶ್ಯರೂ ಆಗಿ ಅಂತರ್ಧಾನಶಕ್ತಿಯನ್ನು ಹೊಂದಿದವರಾದರು.

೭೦. ಮತ್ತು ಸ್ವಭಾವವಾಗಿ ಕಾಮರೂಪಿಗಳೂ, ಘೋರರೂಪವುಳ್ಳವರೂ ವ್ಯಾಧಿವರ್ಜಿತರೂ ಆಗಿ ತಮ್ಮ ಆಕಾರಕ್ಕೆ ತಕ್ಕ ನಡತೆಗಳಿಂದ ಲೋಕಕ್ಕೆ ಕಂಟಕರಾಗಿ ಸಂಚರಿಸಿದರು.

೭೧. ಮತ್ತು ದೇವ, ಋಷಿ, ಪಿತೃ, ಗಂಧರ್ವ, ಕಿನ್ನರ, ಪಿಶಾಚ, ಮನುಷ್ಯ, ಸರ್ಪ, ಪಕ್ಷಿ ಮತ್ತು ಪಶು ಮೊದಲಾದ ಸಮಸ್ತ ಪ್ರಾಣಿಗಳನ್ನು ಭಕ್ಷಿಸಲು ಬಯಸಿದರು.

೭೨. ಹಿಂದೆ ಹೇಳಿದ ದೇವ ಮುಂತಾದ ಆಹಾರವನ್ನು ತಿನ್ನಲು ಬಯಸಿ ಆ ರಾಕ್ಷಸರು ಅಲ್ಲಲ್ಲಿ ಸಂಚರಿಸಿದರು. ಮತ್ತು ಇಂದ್ರಲೋಕದವರೆಗೆ ಸಂಚರಿಸುವವರೂ ಮತ್ತು ಸಮಸ್ತ ದಿಗ್ವಿಜಯ ಮಾಡಬೇಕೆಂಬ ಕ್ಷೋಭವುಳ್ಳವರೂ ಆಗಿದ್ದರು.

೭೩. ಹೀಗಿರಲು ಒಂದು ದಿನ ಅರ್ಧರಾತ್ರ ಸಮಯದಲ್ಲಿ ಆ ಇಬ್ಬರಲ್ಲಿ ಒಬ್ಬ ರಾಕ್ಷಸನು ಸಮರ್ಥನಾಗಿ ಆಹಾರವನ್ನು ಹುಡುಕುತ್ತ ಸಂಚರಿಸುತ್ತಿರುವಾಗ ಎರಡು ಪಿಶಾಚಗಳನ್ನು ಶಬ್ದದಿಂದ ಸಂಧಿಸಿದನು.

ಆಸಸಾದ ಪಿಶಾಚೌ ವೈ ತ್ವಜಃ ಶಂಡಶ್ಚ ತಾವುಭೌ ।
ಕಪಿಪುತ್ರೌ ಮಹಾವೀರ್ಯೌ ಕೂಷ್ಮಾಂಡೌ ಪೂರ್ವಜಾವುಭೌ ॥ ೭೪ ॥

ಪಿಂಗಾಕ್ಷಾವೂರ್ಧ್ವರೋಮಾಣೌ ವೃತ್ತಾಕ್ಷೌ ಚ ಸುದಾರುಣೌ ।
ಕನ್ಯಾಭ್ಯಾಂ ಸಹಿತೌ ತೌ ತು ತಾಭ್ಯಾಂ ಭರ್ತುಃಶ್ಚಿಕೀರ್ಷಯಾ ॥ ೭೫ ॥

ತೇ ಕನ್ಯೇ ಕಾಮರೂಪಿಣ್ಯೌ ತದಾಚಾರಮುಭೇ ಚ ತಮ್ ।
ಆಹಾರಾರ್ಥೇ ಸಮಿಹಂತೌ ಸಕನ್ಯೌ ತೌ ಬುಭುಕ್ಷಿತೌ ॥ ೭೬ ॥

ಅಪಶ್ಯತಾಂ ರಾಕ್ಷಸಂ ತೌ ಕಾಮರೂಪಿಣಮಗ್ರತಃ ।
ಸಹಸಾ ಸನ್ನಿಪಾತೇನ ದೃಷ್ಟ್ವಾ ಚೈವ ಪರಸ್ಪರಮ್ ॥ ೭೭ ॥

ಈಕ್ಷಮಾಣಾಃ ಸ್ಥಿತಾನ್ಯೋನ್ಯಂ ಪರಸ್ಪರಜಿಘೃಕ್ಷವಃ ।
ಪಿತರಾವೂಚತುಃ ಕನ್ಯೇ ಯುವಾಮಾನಯತಂ ದ್ರುತಮ್ ॥ ೭೮ ॥

---

೭೪. ಈ ರಾಕ್ಷಸನು ಸಂಧಿಸಿರುವ ಪಿಶಾಚಗಳು ಎರಡು ಅಜ, ಶಂಡ ಎಂಬ ಹೆಸರುಗಳನ್ನು ಹೊಂದಿದ್ದರು. ಮತ್ತು ಪೂರ್ವ ಜನ್ಮದಲ್ಲಿ ಕಪಿಮುನಿಯ ಕೂಷ್ಮಾಂಡ ಸಂಜ್ಞೆಯುಳ್ಳ ಪುತ್ರರಾಗಿದ್ದರು.

೭೫. ಆ ಪಿಶಾಚಗಳು ಹೊಂಬಣ್ಣದ ಕಣ್ಣು, ಊರ್ಧ್ವಾಗ್ರವಾದ ರೋಮ, ಗುಂಡಗಿರುವ ನೇತ್ರ, ಭಯಂಕರವಾದ ಆಕಾರ ಇವುಗಳಿಂದ ಕೂಡಿದವುಗಳೂ, ಮತ್ತು ಸ್ವಾಮಿ ಹಿತವನ್ನು ಮಾಡುವ ಅಸಕ್ತಿಯುಳ್ಳ ಇಬ್ಬರು ಕನ್ಯೆಯರಿಂದ ಕೂಡಿದವುಗಳೂ ಆಗಿದ್ದುವು.

೭೬. ಆ ಇಬ್ಬರು ಪಿಶಾಚ ಕನ್ನಿಕೆಯರು ಕಾಮರೂಪವುಳ್ಳವರಾಗಿದ್ದರು. ಅಂತಹ ಕನ್ಯೆಯರಿಂದ ಕೂಡಿದ ಎರಡು ಪಿಶಾಚಗಳು ಹಸಿದುಕೊಂಡು ಆಹಾರವನ್ನು ಹುಡುಕುತ್ತ ಆ ರಾಕ್ಷಸನಿಗೆ ತುಲ್ಯವಾದ ಉದ್ದೇಶದಿಂದ ಸಂಚರಿಸುತ್ತಲಿದ್ದುವು.

೭೭. ಅಂತಹ ಪಿಶಾಚಗಳು ಕಾಮರೂಪಿಯಾಗಿ ಮುಂದೆ ನಿಂತಿರುವ ರಾಕ್ಷಸನನ್ನು ಕಂಡವು. ಮತ್ತು ಅಕಸ್ಮಾತ್ತಾಗಿ ಉಂಟಾದ ರಾಕ್ಷಸ ಪಿಶಾಚ ಸಂಧಿಯಲ್ಲಿ ಅವರು ವಿಸ್ಮಯ ಪೂರ್ವಕವಾಗಿ ಅನ್ಯೋನ್ಯವಾಗಿ ನೋಡಿದರು.

೭೮. ಮತ್ತು ಒಬ್ಬರನ್ನೊಬ್ಬರು ಹಿಡಿಯಬೇಕೆಂಬ ಅಭಿಲಾಷೆಯಿಂದ ನೋಡುತ್ತ ಸ್ವಲ್ಪ ಹೊತ್ತು ನಿಂತರು. ತರುವಾಯ ಪಿಶಾಚಗಳು ಕನ್ಯೆಯರನ್ನು

ಜೀವಗ್ರಾಹಂ ನಿಗೃಹ್ಯೈನಂ ವಿಸ್ಫುರಂತಂ ಪದೇ ಪದೇ ।
ತತಸ್ತಮಭಿಸೃತ್ಯೈನಂ ಕನ್ಯೇ ಜಗೃಹತುಸ್ತದಾ ॥ ೭೯ ॥

ಸಂಗೃಹೀತ್ವಾ ತು ಹಸ್ತಾಭ್ಯಾಮಾನೀತಃ ಪಿತೃಸಂಸದಿ ।
ತಾಭ್ಯಾಂ ಕನ್ಯಾಗೃಹೀತಂ ತಂ ಪಿಶಾಚೌ ವೀಕ್ಷ್ಯ ರಾಕ್ಷಸಮ್ ॥ ೮೦ ॥

ಅಪೃಚ್ಛತಾಂ ಚ ಕಸ್ಯ ತ್ವಂ ಸ ಚ ಸರ್ವಮಭಾಷತ ।
ತಸ್ಯ ಕರ್ಮಾಭಿಜಾತೀ ಚ ಶ್ರುತ್ವಾ ತೌ ರಕ್ಷಸಸ್ತದಾ ॥ ೮೧ ॥

ಅಜಃ ಶಂಡಶ್ಚ ತಸ್ಮೈ ತೇ ಕನ್ಯಕೇ ಪ್ರತ್ಯಪಾದಯತ್ ।
ತೌ ತುಷ್ಟೌ ಕರ್ಮಣಾ ತಸ್ಯ ಕನ್ಯೇ ತೇ ದದತುಸ್ತು ವೈ ॥ ೮೨ ॥

ಪೈಶಾಚೇನ ವಿವಾಹೇನ ರುದಂತ್ಯಾವುದ್ವವಾಹ ಸಃ ।
ಅಜಃ ಶಂಡಃ ಸುತಾಭ್ಯಾಂ ತು ತದಾ ಶ್ರಾವಯತಾಂ ಧನಮ್ ॥ ೮೩ ॥

---

ಕುರಿತು "ನೀವು ಈ ರಾಕ್ಷಸನನ್ನು ಬೇಗ ಹಿಡಿದುಕೊಂಡು ಬನ್ನಿರಿ" ಎಂದು ಹೇಳಿದುವು.

೭೯. ಹೆಜ್ಜೆ ಹೆಜ್ಜೆಗೂ ವಿಜೃಂಭಿಸುತ್ತಲಿದ್ದ ಆ ರಾಕ್ಷಸನ ಸಮೀಪಕ್ಕೆ ಆ ಕನ್ಯೆಯರು ಹೋಗಿ ಆ ಕ್ಷಣದಲ್ಲಿ ಅವನನ್ನು ಸಜೀವವಾಗಿ ಹಿಡಿದು ತಂದರು.

೮೦. ಆ ಕನ್ಯೆಯರು ರಾಕ್ಷಸನನ್ನು ಕೈಗಳಿಂದ ಪಿಡಿದೆಳೆದು ಜನಕರ ಸನ್ನಿಧಿಯಲ್ಲಿ ತಂದಿರಿಸಿದರು, ಆಗ ಪಿಶಾಚಗಳು ಕನ್ಯೆಯರಿಂದ ಗ್ರಹಿಸಲ್ಪಟ್ಟ ರಾಕ್ಷಸನನ್ನು ನೋಡಿದುವು.

೮೧. ಮತ್ತು ನೀನು ಯಾರು? ಯಾರ ಪುತ್ರನು? ಮುಂತಾದ ಪ್ರಶ್ನೆಗಳನ್ನು ಕೇಳಲಾಗಿ ಆ ರಾಕ್ಷಸನು ಎಲ್ಲ ಉತ್ತರವನ್ನೂ ಹೇಳಿದನು. ಆಗ ಆ ಪಿಶಾಚಗಳು ಆ ರಾಕ್ಷಸನ ಕರ್ಮ, ವಂಶಪ್ರತಿಷ್ಠೆಗಳನ್ನು ಶ್ರವಣಮಾಡಿದುವು.

೮೨. ಮತ್ತು ಅಜ, ಶಂಡ ಎಂಬ ಆ ಎರಡು ಪಿಶಾಚಗಳು ಆ ರಾಕ್ಷಸನ ಕ್ರೂರ ಕರ್ಮಕ್ಕೆ ಮೆಚ್ಚಿ ತಮ್ಮ ಇಬ್ಬರು ಕನ್ನಿಕೆಯರನ್ನು ಆ ರಾಕ್ಷಸನಿಗೆ ಕೊಟ್ಟರು.

೮೩. ಆಗ ಆ ರಾಕ್ಷಸನು ಪಿಶಾಚೋಚಿತ ವಿಧಾನದಿಂದ ರೋದಿಸುತ್ತಲಿದ್ದ ಆ ಕನ್ಯೆಯರನ್ನು ಮದುವೆಯಾದನು. ಆಗ ಅಜ, ಶಂಡ ಎಂಬ ಪಿಶಾಚಗಳು ಕನ್ಯೆಯರಿಗೆ ಧನವನ್ನು ಪ್ರತಿಜ್ಞಾಪೂರ್ವಕವಾಗಿ ಒಪ್ಪಿಸಿದರು.

ಇಯಂ ಬ್ರಹ್ಮಧನಾ ನಾಮ ಕನ್ಯಾ ಯಾ ಸಹಿತಾ ಶುಭಾ ।
ಬ್ರಹ್ಮ ತಸ್ಯಾಪರಾಹಾರ ಇತಿ ಶಂಡೋಽಭ್ಯಭಾಷತ ॥ ೮೪ ॥

ಇಯಂ ಜಂತುಧನಾ ನಾಮ ಕನ್ಯಾ ಸರ್ವಾಂಗಜಂತಿಲಾ ।
ಜಂತುಭಾವಧನಾದಾನಾ ಇತ್ಯಜೋಽಶ್ರಾವಯದ್ಧನಮ್ ॥ ೮೫ ॥

ಸರ್ವಾಂಗಕೇಶಪಾಶಾ ಚ ಕನ್ಯಾ ಜಂತುಧನಾ ತು ಯಾ ।
ಯಾತುಧಾನಪ್ರಸೂತಾ ಸಾ ಕನ್ಯಾ ಚೈವ ಮಹಾರವಾ ॥ ೮೬ ॥

ಅರುಣಾ ಚಾಪ್ಯಲೋಮಾ ಚ ಕನ್ಯಾ ಬ್ರಹ್ಮಧನಾ ತು ಯಾ ।
ಬ್ರಹ್ಮಧಾನಪ್ರಸೂತಾ ಸಾ ಕನ್ಯಾ ಚೈವ ಮಹಾರವಾ ॥ ೮೭ ॥

ಏವಂ ಪಿಶಾಚಕನ್ಯೇ ತೇ ಮಿಥುನೇ ದ್ವೇ ಪ್ರಸೂಯತಾಮ್ ।
ತಯೋಃ ಪ್ರಜಾನಿಸರ್ಗಂ ಚ ಕಥಯಿಷ್ಯೇ ನಿಬೋಧತ ॥ ೮೮ ॥

---

೮೪. ರಾಕ್ಷಸನೆ! ನಿನ್ನ ಸಂಗಡವಿರುವ ಶುಭಕರಳಾದ ಬ್ರಹ್ಮಧನಾ ಎಂಬ ಈ ಕನ್ಯೆಗೆ ಬ್ರಹ್ಮಜಾತಿಯು ಶ್ರೇಷ್ಠವಾದ ಆಹಾರವು ಎಂದು ಶಂಡನು ನುಡಿದನು.

೮೫. ಜಂತುಧನಾ ಎಂಬ ಈ ಮತ್ತೊಬ್ಬಳು ಕನ್ಯೆಯು ಜಂತುಗಳ ಪರಿಣಾಮವಾದ ಸರ್ವಾಂಗವುಳ್ಳವಳೂ ಸರ್ವ ಜಂತುಗಳ ಧನವನ್ನು ಅಪಹರಿಸುವವಳೂ ಆಗಿರುವಳು. ಎಂದು ಅಜನು ಮತ್ತೊಬ್ಬ ಕನ್ಯೆಯ ಧನವನ್ನು ನಿರ್ದೇಶಿಸಿದನು.

೮೬. ಸರ್ವ ಅವಯವಗಳಲ್ಲಿ ಪಾಶರೂಪವಾದ ದೀರ್ಘ ಕೇಶಗಳಿಂದ ಕೂಡಿರುವಳೂ ಉಗ್ರವಾದ ಧ್ವನಿಯುಳ್ಳವಳೂ ಆದ ಜಂತುಧನಾ ಎಂಬ ಕನ್ಯೆಯು ಯಾತುಧಾನ ಎಂಬ ಸಂತತಿಯುಳ್ಳವಳಾದಳು.

೮೭. ಕೆಂಪಾಗಿಯೂ, ರೋಮರಹಿತಳಾಗಿಯೂ ಮತ್ತು ಕರ್ಣಕಠೋರವಾದ ಶಬ್ದವುಳ್ಳವಳೂ ಆದ ಬ್ರಹ್ಮಧನಾ ಎಂಬ ಕನ್ಯೆಯು ಬ್ರಹ್ಮಧಾನ ಎಂಬ ಸಂತತಿಯನ್ನು ಪ್ರಸವಿಸಿದಳು.

೮೮. ಈ ರೀತಿಯಾಗಿ ಇಬ್ಬರು ಪಿಶಾಚ ಕನ್ಯೆಯರು ಎರಡು ಪ್ರಜೆಗಳನ್ನು ಪ್ರಸವಿಸಿರುವರು. ಆ ಮಿಥುನದಿಂದ ಮುಂದೆ ಹುಟ್ಟಿರುವ ಪ್ರಜಾಸೃಷ್ಟಿಯನ್ನು ಹೇಳುತ್ತೇನೆ. ಶ್ರವಣಮಾಡಿರಿ.

ಹೇತಿಃ ಪ್ರಹೇತಿರುಗ್ರಶ್ಚ ಪೌರುಷೇಯೋ ವಧಸ್ತಥಾ ।
ವಿದ್ಯುತ್ಸ್ಫೂರ್ಜಶ್ಚ ವಾತಶ್ಚ ಆಯೋ ವ್ಯಾಘ್ರಸ್ತಥೈವ ಚ ॥ ೮೯ ॥

ಸರ್ಪಶ್ಚ ರಾಕ್ಷಸಾ ಹ್ಯೇತೇ ಯಾತುಧಾನಾತ್ಮಜಾ ದಶ ।
ಮಾಲ್ಯವಾಂಶ್ಚ ಸುಮಾಲೀ ಚ ಪ್ರಹೇತಿತನಯೌ ಶೃಣು ॥ ೯೦ ॥

ಪ್ರಹೇತಿತನಯಃ ಶ್ರೀಮಾನ್ ಪುಲೋಮಾ ನಾಮ ವಿಶ್ರುತಃ ।
ಮಧುಃ ಪರೋ ಮಹೋಗ್ರಸ್ತು ಲವಣಸ್ತಸ್ಯ ಚಾತ್ಮಜಃ ॥ ೯೧ ॥

ಮಹಾಯೋಗಬಲೋಪೇತೋ ಮಹಾದೇವಮುಪಸ್ಥಿತಃ ।
ಉಗ್ರಸ್ಯ ಪುತ್ರೋ ವಿಕ್ರಾಂತೋ ವಜ್ರಹಾ ನಾಮ ವಿಶ್ರುತಃ ॥ ೯೨ ॥

ಪೌರುಷೇಯಸುತಾಃ ಪಂಚ ಪುರುಷಾದಾ ಮಹಾಬಲಾಃ ।
ಕ್ರೂರಶ್ಚ ವಿಕೃತಶ್ಚೈವ ರುಧಿರಾದಸ್ತಥೈವ ಚ ॥ ೯೩ ॥

---

೮೯. ಹೇತಿ, ಪ್ರಹೇತಿ, ಉಗ್ರ, ಪೌರುಷೇಯ, ವಧ, ವಿದ್ಯುತ್ಸ್ಫೂರ್ಜ, ವಾತ, ಆಯ ಮತ್ತು ವ್ಯಾಘ್ರ ಎಂಬುವರು ಯಾತುಧಾನ ಪುತ್ರರಲ್ಲಿ ಸೇರಿದವರಾಗಿರುವರು

೯೦. ಹಿಂದೆ ಹೇಳಿದ ಒಂಭತ್ತು ಮಂದಿ ಮತ್ತು ಸರ್ಪ ಎಂಬುವನು ಸೇರಿ ಹತ್ತು ಮಂದಿಯು ಯಾತು ಧಾನನ ಪುತ್ರರಾಗಿರುವರು. ಮತ್ತು ಮಾಲ್ಯವಾನ್, ಸುಮಾಲೀ ಎಂಬ ಇಬ್ಬರು ಪುತ್ರರು ಇದ್ದರು. ಮುಂದೆ ಪ್ರಹೇತಿಯ ಇಬ್ಬರು ಪುತ್ರರನ್ನು ಕೇಳು.

೯೧. ಕಾಂತಿಯುಕ್ತನಾದ ಪುಲೋಮ ಎಂಬುವನು ಪ್ರಹೇತಿಯ ಪುತ್ರನೆಂದು ಪ್ರಸಿದ್ಧನಾಗಿರುವನು. ಹಾಗೆಯೇ ಮಧು ಎಂಬುವನು ಮತ್ತೊಬ್ಬ ಪುತ್ರನು. ಅವನಿಗೆ ಮಹೋಗ್ರ, ಮತ್ತು ಲವಣ ಎಂಬ ಪುತ್ರರಿದ್ದರು.

೯೨. ಲವಣ ಎಂಬ ಅಸುರನು ಮಹಾಯೋಗ ಬಲದಿಂದ ಕೂಡಿದವನಾಗಿ ಮಹಾದೇವನಿಗೆ ಅರಿಯಾಗಿ ಹೋದನು. ಉಗ್ರನಿಗೆ ವಿಕ್ರಮಶಾಲಿಯಾದ ವಜ್ರಹಾ ಎಂಬ ಪುತ್ರನು ಪ್ರಸಿದ್ಧನಾಗಿದ್ದನು.

೯೩. ಪೌರುಷೇಯ ಅಸುರನಿಗೆ ಪುರುಷ ಭಕ್ಷಕರಾದ ಮತ್ತು ಬಲಿಷ್ಠರಾದ ಐದು ಮಂದಿ ಪುತ್ರರಿದ್ದರು ಅವರಲ್ಲಿ ಮೂರು ಮಂದಿಯು ಕ್ರೂರ, ವಿಕೃತ, ಮತ್ತು ರುಧಿರಾದ ಎಂಬ ನಾಮಾಂಕಿತರಾಗಿದ್ದರು.

ಮೇದಾಶಶ್ಚ ವಪಾಶಶ್ಚ ನಾಮಭಿಃ ಪರಿಕೀರ್ತಿತಾಃ ।
ವಧಪುತ್ರೌ ದುರಾಚಾರೌ ವಿಘ್ನಃ ಶ್ಚ ಶಮನಶ್ಚ ಹ || ೯೪ ||

ವಿದ್ಯುತ್ಪುತ್ರೋ ದುರಾಚಾರೋ ರಸನೋ ನಾಮ ರಾಕ್ಷಸಃ ।
ಸ್ಫೂರ್ಜಕ್ಷೇತ್ರೇ ನಿಕುಂಭಸ್ತು ಜಾತೋ ವೈ ಬ್ರಹ್ಮರಾಕ್ಷಸಃ || ೯೫ ||

ವಾತಪುತ್ರೋ ವಿರೋಧಸ್ತು ತಥಾಯಸ್ಯ ಜನಾಂತಕಃ ।
ವ್ಯಾಘ್ರಪುತ್ರೋ ನಿರಾನಂದಃ ಕ್ರತೂನಾಂ ವಿಘ್ನಕಾರಕಃ || ೯೬ ||

ಸರ್ಪಸ್ಯ ಚಾನ್ವಯೇ ಜಾತಾಃ ಕ್ರೂರಾಃ ಸರ್ಪಾಶ್ಚ ರಾಕ್ಷಸಾಃ ।
ಯಾತುಧಾನಾಃ ಪರಿಕ್ರಾಂತಾ ಬ್ರಹ್ಮಧಾನಾನ್ನಿಬೋಧತ || ೯೭ ||

ಯಜ್ಞಾಪೇತೋ ಧೃತಿಃ ಕ್ಷೇಮೋ ಬ್ರಹ್ಮಾಪೇತಶ್ಚ ಯಜ್ಞಹಾ ।
ಶ್ವಾತೋಽಂಬುಕಃ ಕೇಲಿಸರ್ಪೌ ಬ್ರಹ್ಮಧಾನಾತ್ಮಜಾ ನವ || ೯೮ ||

---

೯೪. ಮತ್ತು ಮೇದಾಶ, ವಪಾಶ ಎಂದು ಮತ್ತಿಬ್ಬರ ನಾಮಗಳು, ಹೀಗೆ ಐದುಮಂದಿಯ ಹೆಸರುಗಳು ಕೀರ್ತಿಸಲ್ಪಟ್ಟಿವೆ. ವಧ ಎಂಬ ಅಸುರನಿಗೆ ದುರಾಚಾರ ದಿಂದ ಕೂಡಿದ ವಿಘ್ನ, ಶಮನ ಎಂಬ ಈರ್ವರು ಪುತ್ರರಿದ್ದರು.

೯೫. ದುರಾಚಾರಶಾಲಿಯಾದ ರಸನ ಎಂಬ ರಾಕ್ಷಸನು ವಿದ್ಯುತ್ ಎಂಬ ಅಸುರನಿಗೆ ಪುತ್ರನಾಗಿದ್ದನು. ಸ್ಫೂರ್ಜಾಸುರನ ಪತ್ನಿಯಲ್ಲಿ ನಿಕುಂಭ ಬ್ರಹ್ಮರಾಕ್ಷ ಸನು ಜನಿಸಿರುವನು.

೯೬. ವಾತನೆಂಬುವನಿಗೆ ವಿರೋಧ ಎಂಬುವನೂ ಆಯಾಸುರನಿಗೆ ಜನಾಂತಕ ಎಂಬುವನೂ ವ್ಯಾಘ್ರಾಸುರನಿಗೆ ಯಜ್ಞವಿಘ್ನಕಾರಿಯಾದ ನಿರಾನಂದ ಎಂಬುವನೂ ಪುತ್ರರಾಗಿದ್ದರು.

೯೭. ಸರ್ಪ ಅಸುರನ ವಂಶದಲ್ಲಿ ಕ್ರೂರರಾದ ಸರ್ಪ ಎಂಬ ಅನೇಕ ರಾಕ್ಷಸರು ಹುಟ್ಟಿರುವರು. ಈ ರೀತಿಯಾಗಿ ಯಾತುಧಾನರನ್ನು ಪೂರ್ತಿಯಾಗಿ ವರ್ಣಿಸಿರುತ್ತೇನೆ, ಮುಂದೆ ಬ್ರಹ್ಮಧಾನರನ್ನು ಶ್ರವಣಮಾಡಿರಿ.

೯೮. ಯಜ್ಞಾಪೇತ, ಧೃತಿ, ಕ್ಷೇಮ. ಬ್ರಹ್ಮಾಪೇತ, ಯಜ್ಞಹಾ, ಶ್ವಾತ, ಅಂಬುಕ, ಕೇಲಿ ಮತ್ತು ಸರ್ಪ-ಎಂಬುದಾಗಿ ಒಂಭತ್ತುಮಂದಿ ಬ್ರಹ್ಮಧಾನಾ ಪುತ್ರ ರಾಗಿ ಜನಿಸಿರುವರು.

ಸ್ವಸಾರೋ ಬ್ರಹ್ಮರಾಕ್ಷಸ್ಯಸ್ತೇಷಾಂ ಚೇವಾಃ ಸುದಾರುಣಾಃ ।
ರಕ್ತಕರ್ಣೀ ಮಹಾಜಿಹ್ವಾ ಕ್ಷಮಾ ಚೇಷ್ಟಾಪಹಾರಿಣೀ ॥ ೯೯ ॥

ಏತಾಸಾಮನ್ವಯೇ ಜಾತಾಃ ಪೃಥಿವ್ಯಾಂ ಬ್ರಹ್ಮರಾಕ್ಷಸಾಃ ।
ಇತ್ಯೇತೇ ರಾಕ್ಷಸಾಃ ಕ್ರಾಂತಾ ಯಕ್ಷಸ್ಯ ವಿನಿಬೋಧತ ॥ ೧೦೦ ॥

ಚಕಮೇ ಸರಸಂ ಯಕ್ಷಃ ಪಂಚಚೂಡಾಂ ಕ್ರತುಸ್ಥಲಾಮ್ ।
ತಲ್ಲಿಪ್ಸುಶ್ಚಿಂತಯಾನಃ ಸ ದೇವೋದ್ಯಾನಾನಿ ಮಾರ್ಗತೇ ॥ ೧೦೧ ॥

ವೈಭ್ರಾಜಂ ಸುರಭಿಂ ಚೈವ ತಥಾ ಚೈತ್ರರಥಂ ಚ ಯತ್ ।
ವಿಶೋಕಂ ಸುಮನಂ ಚೈವ ನಂದನಂ ಚ ವನೋತ್ತಮಮ್ ॥ ೧೦೨ ॥

ಬಹೂನಿ ರಮಣೀಯಾನಿ ಮಾರ್ಗತೇ ಜಾತಲಾಲಸಃ ।
ದೃಷ್ಟ್ವಾ ತಾಂ ನಂದನೇ ಸೋಽಥ ಅಪ್ಸರೋಭಿಃ ಸಹಾಸಿನೀಮ್
॥ ೧೦೩ ॥

---

೯೯. ಅವರಿಗೆ ಮುಂದೆ ಹೇಳುವ ಮಹಾಭಯಂಕರರಾದ ಬ್ರಹ್ಮರಾಕ್ಷಸಿಯರು ಭಗಿನಿಯರಾಗಿ ಹುಟ್ಟಿರುವರು. ರಕ್ತಕರ್ಣೀ, ಮಹಾಜಿಹ್ವಾ, ಕ್ಷಮಾ, ಚೇಷ್ಟಾ ಮತ್ತು ಅಪಹಾರಿಣಿ ಎಂದು ಅವರ ಹೆಸರು.

೧೦೦. ಇವರ ವಂಶದಲ್ಲಿ ಪೃಥಿವಿಯಲ್ಲಿ ಸಂಚರಿಸುವ ಅನೇಕ ಬ್ರಹ್ಮರಾಕ್ಷಸರು ಉತ್ಪನ್ನರಾಗಿರುವರು. ಎಂಬುದಾಗಿ ರಾಕ್ಷಸರ ಪ್ರಜೆಗಳು ನನ್ನಿಂದ ವರ್ಣಿಸಲ್ಪಟ್ಟರು. ಯಕ್ಷ ಪ್ರಜಾವರ್ಗವನ್ನು ಕೇಳಿರಿ.

೧೦೧. ಯಕ್ಷನು ಪಂಚಚೂಡಾ ಎಂದು ನಾಮಾಂಕಿತರಾದ ಅಪ್ಸರಸ್ತ್ರೀಯರಲ್ಲಿ ಕ್ರತುಸ್ಥಲಾ ಎಂಬುವಳನ್ನು ಶೃಂಗಾರಾಸಕ್ತಿಯಿಂದ ಕಾಮಿಸಿದನು. ಮತ್ತು ಅವಳನ್ನು ಹೊಂದಬೇಕೆಂಬ ಆಶೆಯುಳ್ಳವನಾಗಿ ಅವಳನ್ನು ದೇವೋದ್ಯಾವನಗಳಲ್ಲಿ ಅನ್ವೇಷಣ ಮಾಡಿದನು.

೧೦೨. ವೈಭ್ರಾಜ, ಸುರಭಿ, ಚೈತ್ರರಥ, ವಿಶೋಕ, ಸುಮನ ಮತ್ತು ನಂದನ ವನಗಳೆಂಬ ರಮಣೀಯವಾದ ಉತ್ತಮೋದ್ಯಾನಗಳಲ್ಲಿ ಆಕೆಯನ್ನು ಅನ್ವೇಷಣ ಮಾಡಿದನು.

೧೦೩. ಆ ಅಪ್ಸರೆಯಲ್ಲಿ ಕಾಮನೆಯುಳ್ಳವನಾಗಿ ರಮಣೀಯವಾದ ಇತರ

ನೋಪಾಯಂ ವಿಂದತೇ ತತ್ರ ತಸ್ಯಾ ಲಾಭಾಯ ಚಿಂತಯನ್ ।
ದೂಷಿತಃ ಸ್ವೇನ ರೂಪೇಣ ಕರ್ಮಣಾ ಚೈವ ದೂಷಿತಃ ॥ ೧೦೪ ॥

ಮನೋದ್ವಿಜಂತಿ ಹಿಂಸ್ರಸ್ಯ ತಥಾ ಭೂತಾನಿ ಸರ್ವಶಃ ।
ತತ್ಕಥಂ ನಾಮ ಚಾರ್ವಂಗೀಂ ಪ್ರಾಪ್ನುಯಾಮಹಮಂಗನಾಮ್ ॥ ೧೦೫ ॥

ದೃಷ್ಟ್ವೋಪಾಯಂ ತತಃ ಸೋಽಥ ಶೀಘ್ರಕಾರೀ ವ್ಯವರ್ತಯತ್ ।
ಕೃತ್ವಾ ರೂಪಂ ವಸುರುಚೇರ್ಗಂಧರ್ವಸ್ಯ ಚ ಗುಹ್ಯಕಃ ॥ ೧೦೬ ॥

ತತಃ ಸೋಽಪ್ಸರಸಾಂ ಮಧ್ಯೇ ತಾಂ ಜಗ್ರಾಹ ಕ್ರತುಸ್ಥಲಾಮ್ ।
ಬುದ್ಧ್ವಾ ವಸುರುಚಿಂ ತಂ ಸಾ ಭಾವೇನೈವಾಭ್ಯವರ್ತತ ॥ ೧೦೭ ॥

ಸಂಭೂತಃ ಸ ತಯಾ ಸಾರ್ಧಂ ದೃಶ್ಯಮಾನೋಽಪ್ಸರೋಗಣೈಃ ।
ಜಗಾಮ ಮೈಥುನಂ ಯಕ್ಷಃ ಪುತ್ರಾರ್ಥಂ ಸ ತಯಾ ಸಹ ॥ ೧೦೮ ॥

---

ಅನೇಕ ಸ್ಥಳಗಳಲ್ಲಿ ಅವಳನ್ನು ಹುಡುಕಿದನು. ಆಗ ನಂದನವನದಲ್ಲಿ ಇತರ ಅಪ್ಸರೆಯರೊಡನೆ ಕುಳಿತಿರುವ ಕ್ರತುಸ್ಥಲಾ ಎಂಬುವಳನ್ನು ಕಂಡನು.

೧೦೪. ಆದರೆ ಆಗ ಕುರೂಪ ಮತ್ತು ಕುತ್ಸಿತವಾದ ಕೃತ್ಯಗಳಿಂದ ದೂಷಿತನಾದ ತಾನು ಆಕೆಯನ್ನು ಹೊಂದಲು ಎಷ್ಟೊಂದು ಚಿಂತಿಸಿದರೂ ಒಂದು ಉಪಾಯವೂ ಅವನಿಗೆ ತೋರಲಿಲ್ಲ.

೧೦೫. ಮತ್ತು ಅವನು ಈ ರೀತಿಯಾಗಿ ಚಿಂತಿಸಿದನು:—ಹಿಂಸಕನಾದ ನನ್ನನ್ನು ಕಂಡು ಸಮಸ್ತ ಪ್ರಾಣಿಗಳೂ ಭಯದಿಂದ ಕಳವಳಪಡುತ್ತಾರೆ. ಅಂತಹ ನಾನು ಸುಂದರಾಂಗಿಯಾದ ಈ ಅಂಗನೆಯನ್ನು ಹೇಗೆ ಹೊಂದಲಿ.

೧೦೬. ಹೀಗೆ ಚಿಂತಿಸುತ್ತ ಒಂದು ಉಪಾಯವನ್ನು ನಿಶ್ಚಯಿಸಿ ಯಕ್ಷನು ಬಹು ಶೀಘ್ರವಾಗಿ ಕರ್ಮಕರಣಶೀಲವುಳ್ಳವನಾಗಿ ವಸುರುಚಿ ಎಂಬ ಗಂಧರ್ವನ ರೂಪವನ್ನು ಸ್ವೀಕರಿಸಿದನು.

೧೦೭. ಅನಂತರದಲ್ಲಿ ಆ ಅಪ್ಸರಃಸ್ತ್ರೀಯರ ಗುಂಪಿನಲ್ಲಿದ್ದ ಕ್ರತುಸ್ಥಲೆಯನ್ನು ಪರಿಗ್ರಹಿಸಿದನು. ಆಕೆಯು ಆ ಯಕ್ಷನನ್ನು ವಸುರುಚಿ ಎಂದು ಭಾವಿಸಿ ಅನುರಾಗದಿಂದ ಅವನನ್ನು ಅನುಸರಿಸಿ ಬಂದಳು.

೧೦೮. ಹೀಗೆ ಅಪ್ಸರಃ ಸ್ತ್ರೀಯರ ಪ್ರತ್ಯಕ್ಷದಲ್ಲಿ ಆ ಯಕ್ಷನು ಕ್ರತುಸ್ಥಲೆಯನ್ನು

ದೃಶ್ಯಮಾನೋಽಪ್ಸರೋಲಿಪ್ಸುಃ ಶಂಕಾಂ ನೈವ ಚಕಾರ ಸಃ ।
ತತಃ ಸಂಸಿದ್ಧಕರಣಃ ಸದ್ಯೋಜಾತಃ ಸುತಸ್ತು ವೈ ॥ ೧೦೯ ॥

ಉಚ್ಛ್ರಾಯೋತ್ಸರಿಣಾಹೇನ ಸದ್ಯೋವೃದ್ಧಃ ಶ್ರಿಯಾ ಜ್ವಲನ್ ।
ರಾಜಾಹಮಿತಿ ನಾಭಿರ್ಹಿ ಪಿತರಂ ಸೋಽಭ್ಯವಾದಯತ್ ॥ ೧೧೦ ॥

ಭವಾನ್ ರಜತನಾಭೇತಿ ಪಿತಾ ತಂ ಪ್ರತ್ಯುವಾಚ ಹ ।
ಮಾತ್ರಾನುರೂಪೋ ರೂಪೇಣ ಪಿತುರ್ವೀರ್ಯೇಣ ರಾಜತೇ॥ ೧೧೧ ॥

ಜಾತೇ ತಸ್ಮಿನ್ ಕುಮಾರೇ ತು ಸ್ವರೂಪಂ ಪ್ರತ್ಯಪದ್ಯತ ।
ಸ್ವರೂಪಂ ಪ್ರತಿಪದ್ಯಂತೇ ಗೂಹಂತೋ ಯಕ್ಷರಾಕ್ಷಸಾಃ ॥ ೧೧೨ ॥

ಸುಪ್ತಾ ಮ್ರಿಯಂತಃ ಕ್ರುದ್ಧಾಶ್ಚ ಭೀತಾಸ್ತೇ ಹರ್ಷಿತಾಸ್ತಥಾ ।
ತತೋ ಬ್ರವೀತ್ ಸೋಽಪ್ಸರಸಂ ಸ್ಮಯಮಾನಸ್ತು ಗುಹ್ಯಕಃ ॥ ೧೧೩ ॥

---

ಪರಿಗ್ರಹಿಸಿ ಅವಳೊಡನೆ ಸಮಾಗಮ ಮಾಡಿ ಪುತ್ರೋತ್ಪತ್ತಿಗೋಸ್ಕರ ಮೈಥುನಧರ್ಮವನ್ನು ಆಚರಿಸಿದನು.

೧೦೯. ಆ ಅಪ್ಸರೆಯ ಸಂಭೋಗದ ಲಾಲಸೆಯಿಂದ ಮುಂದಿನ ಪರಿಣಾಮಕ್ಕಾಗಿ ಸ್ವಲ್ಪವೂ ಶಂಕೆಪಡಲಿಲ್ಲ. ಆಗ ಅಮೋಘವಾದ ವೀರ್ಯದಿಂದ ಒಡನೆಯೇ ಒಬ್ಬ ಸರ್ವಾವಯಗಳಿಂದ ಕೂಡಿದ ಪುತ್ರನು ಜನಿಸಿದನು.

೧೧೦. ಆ ಪುತ್ರನು ಉನ್ನತಿ, ವಿಸ್ತಾರ ಮತ್ತು ವೀರ್ಯಗಳಿಂದ, ಹುಟ್ಟಿದ ಕೂಡಲೆ ಅತಿಶಯವಾಗಿ ಬೆಳೆಯುತ್ತ ಕಾಂತಿಯಿಂದ ದೀಪ್ಯಮಾನನಾಗಿ ನಾನು ರಾಜನಾದ ನಾಭಿ ಎಂದು ಹೇಳಿ ತಂದೆಯನ್ನು ವಂದಿಸಿದನು.

೧೧೧. ಆಗ ತಂದೆಯು ಆ ಪುತ್ರನನ್ನು ಕುರಿತು ನೀನು ರಜತನಾಭನೆಂದು ಪ್ರಸಿದ್ಧನಾಗುತ್ತೀ. ಎಂದು ಹೇಳಿದನು. ಅವನು ರೂಪದಲ್ಲಿ ತಾಯಿಗೆ ಸಮಾನನೂ ವೀರ್ಯದಲ್ಲಿ ತಂದೆಗೆ ಸಮಾನನೂ ಆಗಿ ಹುಟ್ಟಿದನು.

೧೧೨. ಯಕ್ಷನು ಆ ಕುಮಾರನು ಜನಿಸಿದ ಕೂಡಲೆ ಮಾಯೆಯ ರೂಪವನ್ನು ಬಿಟ್ಟು ನಿಜರೂಪವನ್ನು ಸ್ವೀಕರಿಸಿದನು. ಹೀಗೆ ಸಮಸ್ತ ಯಕ್ಷ-ರಾಕ್ಷಸರು ಎಷ್ಟು ಮುಚ್ಚಿಕೊಂಡರೂ ಕೆಲವು ಸಂದರ್ಭಗಳಲ್ಲಿ ನಿಜರೂಪವನ್ನು ಹೊಂದಲೆಬೇಕಾಗವುದು

೧೧೩. ಆ ಸಂದರ್ಭಗಳು ಯಾವುವೆಂದರೆ :—ನಿದ್ರೆ, ಮರಣ, ಕ್ರೋಧ, ಭೀತಿ

ಗೃಹಂ ಮೇ ಗಚ್ಛ ಭದ್ರಂ ತೇ ಸಪುತ್ರಾ ತ್ವಂ ವರಾನನೇ ।
ಇತ್ಯುಕ್ತ್ವಾ ಸಹಸಾ ತತ್ರ ದೃಷ್ಟ್ವಾ ಸ್ವಂ ರೂಪಮಾಸ್ಥಿತಮ್ ॥ ೧೧೪ ॥

ವಿಭ್ರಾಂತಾಃ ಪ್ರದ್ರುತಾಃ ಸರ್ವಾಃ ಸಮೇತ್ಯಾಪ್ಸರಸಸ್ತದಾ ।
ಗಚ್ಛಂತೀಮನ್ವಗಚ್ಛತ್ತಾಂ ಪುತ್ರಸ್ತಸ್ಯಾಂ ತ್ವಯೋನ್ ಶಿಲಾ ॥ ೧೧೫ ॥

ಗಂಧರ್ವಾಪ್ಸರಸಾಂ ಮಧ್ಯೇ ನಯಿತ್ವಾ ಸ ನ್ಯವರ್ತತ ।
ತಾಂ ಚ ದೃಷ್ಟ್ವಾ ಸಮುತ್ಪತ್ತಿಂ ಯಕ್ಷಸ್ಯಾಪ್ಸರಸಾಂ ಗಣಾಃ ॥ ೧೧೬ ॥

ಯಕ್ಷಾಣಾಂ ತು ಜನಿತ್ರೀ ತ್ವಂ ಇತ್ಯೂಚುಸ್ತಾಂ ಕ್ರತುಸ್ಥಲಾಮ್ ।
ಜಗಾಮ ಸಹ ಪುತ್ರೇಣ ತತೋ ಯಕ್ಷಃ ಸ್ವಮಾಲಯಮ್ ॥ ೧೧೭ ॥

---

ಮತ್ತು ಅಧಿಕವಾದ ಹರ್ಷ ಮುಂತಾದ ವೃತ್ತಿಗಳು ಹುಟ್ಟುವ ಸಂದರ್ಭಗಳು ನಿಜ ರೂಪವನ್ನು ಹೊಂದಲು ಕಾರಣಗಳಾಗಿವೆ. ಆಗ ಯಕ್ಷನು ನಗುತ್ತ ಆ ಅಪ್ಸರಸ್ತ್ರೀಯನ್ನು ನೋಡಿ ಹೀಗೆ ಹೇಳಿದನು.

೧೧೪. ಸುಂದರವದನೆಯೆ! ಪುತ್ರವತಿಯಾದ ನೀನು ನನ್ನ ಗೃಹಕ್ಕೆ ಬಾ, ನಿನಗೆ ಮಂಗಳವಾಗಲಿ, ಎಂದು ಹೇಳಿದನು. ಇಷ್ಟರಲ್ಲಿ ಇವನಿಗೆ ಅಕಸ್ಮಾತ್ತಾಗಿ ಉಂಟಾದ ನಿಜರೂಪವನ್ನು ಅಪ್ಸರೆಯು ನೋಡಿದಳು.

೧೧೫. ಮತ್ತು ಎಲ್ಲರೂ ಭಯದಿಂದ ದಿಗ್ಭ್ರಾಂತಿಗೊಂಡು ಒಟ್ಟುಗೂಡಿ ಓಡಿ ಹೋದರು. ಅವರ ಜೊತೆಯನ್ನು ಸೇರಲು ಓಡಿಹೋಗುತ್ತಿದ್ದ ಜನನಿಯನ್ನು ಪುತ್ರನು ಹಿಂಬಾಲಿಸಿಕೊಂಡು ಹೋದನು.

೧೧೬. ಆಗ ಆ ಪುತ್ರನು ಅವಳನ್ನು ಗಂಧರ್ವಾಪ್ಸರೆಯರ ಮಧ್ಯದಲ್ಲಿ ಬಿಟ್ಟು ತಾನು ಹಿಂದಿರುಗಿ ಬಂದನು. ಆಗ ಅಪ್ಸರಃ ಸ್ತ್ರೀಯರ ಗುಂಪು ಕ್ರತುಸ್ಥಲೆಯ ಈ ಪುತ್ರೋತ್ಪತ್ತಿಯನ್ನು ಕಂಡರು.

೧೧೭. ಮತ್ತು ಅಪ್ಸರಃಸ್ತ್ರೀಯರೆಲ್ಲರೂ ಕ್ರತುಸ್ಥಲೆಯನ್ನು ಕುರಿತು ನೀನು ಯಕ್ಷ ಸಂತತಿಯ ಜನನಿಯಾದೆ, ಎಂದು ಹೇಳಿದರು. ತರುವಾಯ ಹಿಂತಿರುಗಿಬಂದ ಪುತ್ರನೊಡನೆ ಯಕ್ಷನು ತನ್ನ ಗೃಹಕ್ಕೆ ತೆರಳಿದನು.

ನ್ಯಗ್ರೋಧೋ ರೋಹಿಣೋ ನಾಮ್ನಾ ಶೇರತೇ ತತ್ರ ಗುಹ್ಯಕಾಃ ।
ತಸ್ಮಿನ್ನಿವಾಸೋ ಯಕ್ಷಾಣಾಂ ನ್ಯಗ್ರೋಧೇ ರೋಹಿಣೇ ಸ್ಮೃತಃ ॥ ೧೧೮ ॥

ಯಕ್ಷೋ ರಜತನಾಭಶ್ಚ ಗುಹ್ಯಕಾನಾಂ ಪಿತಾಮಹಃ ।
ಅನುಹ್ರಾದಸ್ಯ ದೈತ್ಯಸ್ಯ ಭದ್ರಾಂ ಮಣಿವರಾಂ ಸುತಾಮ್ ॥ ೧೧೯ ॥

ಉಪಯೇಮೇಽಸನವದ್ಯಾಂಗೀಂ ತಸ್ಯಾಂ ಮಣಿವರೋ ವಶೀ ।
ಜಜ್ಞೇ ಸಾ ಮಣಿಭದ್ರಂ ಚ ಶಕ್ರತುಲ್ಯಪರಾಕ್ರಮಮ್ ॥ ೧೨೦ ॥

ತಯೋಃ ಪತ್ನ್ಯೌ ಭಗಿನ್ಯೌ ಚ ಕ್ರತುಸ್ಥಸ್ಯಾತ್ಮಜೇ ಶುಭೇ ।
ನಾಮ್ನಾ ಪುಣ್ಯಜನೀ ಚೈವ ತಥಾ ದೇವಜನೀ ಚ ಯಾ ॥ ೧೨೧ ॥

ವಿಜಜ್ಞೇ ಮಣಿಭದ್ರಾತ್ತು ಪುತ್ರಾನ್ ಪುಣ್ಯಜನೀ ಶುಭಮ್ ।
ಸಿದ್ಧಾರ್ಥಂ ಸೂರ್ಯತೇಜಶ್ಚ ಸುಮನಂ ನಂದನಂ ತಥಾ ॥ ೧೨೨ ॥

---

೧೧೮. ರೋಹಿಣವೆಂಬ ಹೆಸರಿನ ನ್ಯಗ್ರೋಧ = ಆಲದ ವೃಕ್ಷದಲ್ಲಿ ಯಕ್ಷರು ಶಯನ ಮಾಡಿರುತ್ತಾರೆ. ಆದ್ದರಿಂದ ರೋಹಿಣವೆಂಬ ನ್ಯಗ್ರೋಧ ವೃಕ್ಷವು ಯಕ್ಷರ ವಾಸಭೂಮಿಯೆಂದು ಸ್ಮರಿಸಲ್ಪಟ್ಟಿರುವುದು.

೧೧೯. ಹೀಗೆ ಯಕ್ಷ ಸಂತತಿಗೆ ಪಿತಾಮಹನಾದ ರಜತನಾಭನೆಂಬ ಯಕ್ಷನು ಅನುಹ್ರಾದನೆಂಬ ದೈತ್ಯನ ಮಂಗಳಕರಳಾದ ಮಣಿವರಾ ಎಂಬ ನಾಮಾಂಕಿತಳಾದ ಪುತ್ರಿಯನ್ನು ಮದುವೆಯಾದನು.

೧೨೦. ಸುಂದರಾಂಗಿಯಾದ ಆ ಮಣಿವರೆಯನ್ನು ಯಕ್ಷನು ವಿವಾಹಮಾಡಿಕೊಂಡ ತರುವಾಯ ಆಕೆಯಲ್ಲಿ ಜಿತೇಂದ್ರಿಯನಾದ ಮಣಿವರ, ಮತ್ತು ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಮಣಿಭದ್ರ ಎಂಬ ಇಬ್ಬರು ಪುತ್ರರು ಜನಿಸಿದರು.

೧೨೧. ಆ ಮಣಿವರ, ಮಣಿಭದ್ರರಿಗೆ ಮಂಗಳಕರರೂ ಅನ್ಯೋನ್ಯ ಭಗಿನಿಯರೂ ಮತ್ತು ಪುಣ್ಯಜನೀ, ದೇವಜನೀ ಎಂಬ ಪ್ರಸಿದ್ಧ ನಾಮಧೇಯವುಳ್ಳವರೂ ಆದ ಕ್ರತುಸ್ಥನ ಪುತ್ರಿಯರು ಭಾರ್ಯೆಯರಾಗಿದ್ದರು.

೧೨೨. ಅವರಲ್ಲಿ ಮಂಗಳಶೀಲಳಾದ ಪುಣ್ಯಜನಿಯು ಮಣಿಭದ್ರನೆಂಬ ಪತಿಯ ಸಂಗದಿಂದ ಮುಂದೆ ಹೇಳುವ ಅನೇಕ ಪುತ್ರರನ್ನು ಹೊಂದಿದಳು. ಅವರಲ್ಲಿ ಕೆಲವರು ಸಿದ್ಧಾರ್ಥ, ಸೂರ್ಯ ತೇಜ, ಸುಮನ, ಮತ್ತು ನಂದನರೆಂದು ಪ್ರಸಿದ್ಧರಾಗಿದ್ದರು.

ಮಂಡೂಕಂ ರುಚಕಂ ಚೈವ ಮಣಿಮಂತಂ ವಸುಂ ತಥಾ ।
ಸರ್ವಾನುಭೂತಂ ಶಂಖಂ ಚ ಪಿಂಗಾಕ್ಷಂ ಭೀರುಮೇವ ಚ ॥ ೧೨೩ ॥

ಅಸೋಮಂ ದೂರಸೋಮಂ ಚ ಪದ್ಮಂ ಚಂದ್ರಪ್ರಭಂ ತಥಾ ।
ಮೇಘವರ್ಣಂ ಸುಭದ್ರಂ ಚ ಪ್ರದ್ಯೋತಂ ಚ ಮಹಾದ್ಯುತಿಮ್ ॥ ೧೨೪ ॥

ದ್ಯುತಿಮಂತಂ ಕೇತುಮಂತಂ ದರ್ಶನೀಯಂ ಸುದರ್ಶನಮ್ ।
ಚತ್ವಾರೋ ವಿಂಶತಿಶ್ಚೈವ ಪುತ್ರಾಃ ಪುಣ್ಯಜನೀಭವಾಃ ॥ ೧೨೫ ॥

ಜಜ್ಞಿರೇ ಮಣಿಭದ್ರಸ್ಯ ಸರ್ವೇ ತೇ ಪುಣ್ಯಲಕ್ಷಣಾಃ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಯಕ್ಷಾಃ ಪುಣ್ಯಜನಾಃ ಶುಭಾಃ ॥ ೧೨೬ ॥

ವಿಜಜ್ಞೇ ವೈ ದೇವಜನೀ ಪುತ್ರಾನ್ ಮಣಿವರಾಚ್ಛುಭಾ ।
ಪೂರ್ಣಭದ್ರಂ ಹೈಮವಂತಂ ಮಣಿಮಂತ್ರವಿವರ್ಧನೌ ॥ ೧೨೭ ॥

---

೧೨೩. ಮತ್ತೆ ಕೆಲವರು ಮಂಡೂಕ, ರುಚಕ ಮಣಿಮಂತ, ವಸು, ಸರ್ವಾನುಭೂತ, ಶಂಖ, ಪಿಂಗಾಕ್ಷ ಮತ್ತು ಭೀರು ಎಂಬ ವಿಲಕ್ಷಣ ನಾಮಗಳಿಂದ ಭೂಷಿತರಾಗಿದ್ದರು.

೧೨೪. ಮತ್ತು ಅಸೋಮ, ದೂರಸೋಮ, ಪದ್ಮ, ಚಂದ್ರಪ್ರಭ, ಮೇಘವರ್ಣ, ಸುಭದ್ರ, ಪ್ರದ್ಯೋತ ಮತ್ತು ಮಹಾದ್ಯುತಿ ಎಂಬ ಹೆಸರು ಕೆಲವರಿಗೆ ಅಲಂಕಾರವಾಗಿದ್ದುವು.

೧೨೫. ದ್ಯುತಿಮಂತ, ಕೇತುಮಂತ, ದರ್ಶನೀಯ, ಸುದರ್ಶನ ಎಂಬುವರು ಆ ಪಂಗಡದಲ್ಲಿ ಸೇರಿದ ಪುತ್ರರಾಗಿದ್ದರು. ಹೀಗೆ ಇಪ್ಪತ್ತನಾಲ್ಕು ಮಂದಿಯು ಪುಣ್ಯಜನಿಯಲ್ಲಿ ಹುಟ್ಟಿದ ಪುತ್ರರಾಗಿರುವರು.

೧೨೬. ಹೀಗೆ ಮಣಿಭದ್ರನಿಗೆ ಪವಿತ್ರ ಲಕ್ಷಣಗಳಿಂದ ಕೂಡಿದ ಇವರೆಲ್ಲರೂ ಪುತ್ರರಾಗಿ ಹುಟ್ಟಿದರು. ಅವರಿಗೆ ಪುತ್ರ, ಪೌತ್ರ ಮುಂತಾದ ಪರಂಪರೆಯಲ್ಲಿ ಗಣನೆಯಿಲ್ಲದಷ್ಟು ಮಂಗಳಕರರೂ ಪುಣ್ಯ ಜನ ಎಂಬ ಸಂಕೇತವುಳ್ಳವರೂ ಆದ ಯಕ್ಷರು ಹುಟ್ಟಿದರು.

೧೨೭. ಮಣಿವರನ ಪತ್ನಿಯಾದ, ಶುಭ ಶೀಲವತಿಯಾದ ದೇವಜನಿಯು ಮುಂದೆ ಹೇಳುವಂತೆ ಅನೇಕ ಪುತ್ರಿಯರನ್ನು ಪ್ರಸವಿಸಿದಳು. ಪೂರ್ಣಭದ್ರ, ಹೈಮವಂತ, ಮಣಿಮಂತ್ರ ಮತ್ತು ವಿವರ್ಧನರು ದೇವಜನೀ ಪುತ್ರರಲ್ಲಿ ಸೇರಿದವರು.

ಕುಸುಂ ಚರಂ ಪಿಶಂಗಂಚ ಸ್ಥೂಲಕರ್ಣಂ ಮಹಾಮುದಮ್ ।
ಶ್ವೇತಂ ಚ ವಿಮಲಂ ಚೈವ ಪುಷ್ಪದಂತಂ ಜಯಾವಹಮ್ ॥ ೧೨೮ ॥

ಪದ್ಮವರ್ಣಂ ಸುಚಂದ್ರಂ ಚ ಪಕ್ಷಂ ಚ ಬಲಕಂ ತಥಾ ।
ಕುಮುದಾಕ್ಷಂ ಸುಕಮಲಂ ವರ್ಧಮಾನಂ ತಥಾಹಿತಮ್ ॥ ೧೨೯ ॥

ಪದ್ಮನಾಭಂ ಸುಗಂಧಂ ಚ ಸುವೀರಂ ವಿಜಯಂ ಕೃತಮ್ ।
ಪೂರ್ಣಮಾಸಂ ಹಿರಣ್ಯಾಕ್ಷಂ ಸಾರಣಂ ಚೈವ ಮಾನಸಮ್ ॥ ೧೩೦ ॥

ಪುತ್ರಾ ಮಣಿವರಸ್ಯೈತೇ ಯಕ್ಷಾ ವೈ ಗುಹ್ಯಕಾಃ ಸ್ಮೃತಾಃ ।
ಸುರೂಪಾಶ್ಚ ಸುವೇಷಾಶ್ಚ ಸ್ರಗ್ವಿಣಃ ಪ್ರಿಯದರ್ಶನಾಃ ॥ ೧೩೧ ॥

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ।
ಖಶಾಯಾಸ್ತ್ವಪರೇ ಪುತ್ರಾ ರಾಕ್ಷಸಾಃ ಕಾಮರೂಪಿಣಃ ॥ ೧೩೨ ॥

---

೧೨೮. ಕುಸು, ಚರ, ಪಿಶಂಗ, ಸ್ಥೂಲಕರ್ಣ, ಮಹಾಮುದ, ಶ್ವೇತ, ವಿಮಲ, ಪುಷ್ಪದಂತ ಮತ್ತು ಜಯಾವಹ ಎಂಬ ನಾಮಾಂಕಿತರು ದೇವಜನೀ ಪುತ್ರಗಣದಲ್ಲಿ ಅಂತರ್ಗತರಾಗಿರುವರು.

೧೨೯. ಪದ್ಮವರ್ಣ, ಸುಚಂದ್ರ, ಪಕ್ಷ, ಬಲಕ, ಕುಮುದಾಕ್ಷ, ಸುಕಮಲ, ವರ್ಧಮಾನ, ಮತ್ತು ಅಹಿತ—ಎಂಬುವರು ಮತ್ತೆ ಕೆಲವು ದೇವಜನೀ ಪುತ್ರರಾಗಿರುವರು.

೧೩೦. ಪದ್ಮನಾಭ, ಸುಗಂಧ, ಸುವೀರ, ವಿಜಯ, ಕೃತ, ಪೂರ್ಣಮಾಸ, ಹಿರಣ್ಯಾಕ್ಷ, ಸಾರಣ ಮತ್ತು ಮಾನಸರೆಂಬುವರು ದೇವಜನೀ ಪುತ್ರರೆಂದು ಪ್ರಸಿದ್ಧರಾಗಿರುವರು.

೧೩೧. ಮಣಿವರದ ಪುತ್ರರಾದ ಈ ಯಕ್ಷರು ಗುಹ್ಯಕ ಎಂಬ ಅಪರನಾಮವುಳ್ಳವರಾಗಿ ಸ್ಮರಿಸಲ್ಪಟ್ಟಿರುವರು. ಇವರೆಲ್ಲರೂ ಸುಂದರರೂಪ, ಸುವೇಷ, ಮಾಲ್ಯ, ಮತ್ತು ಪ್ರಿಯವಾದ ನೋಟಗಳಿಂದ ಕೂಡಿರುವರು.

೧೩೨. ಅವರ ಪುತ್ರ ಮತ್ತು ಪೌತ್ರರ ವಂಶಾವಳಿಯು ಶತ ಅಥವಾ ಸಹಸ್ರ ಶಾಖೋಪಶಾಖಗಳಿಂದ ಬೆಳೆದಿರುವುದು. ಖಶಾ ಎಂಬುವಳಿಗೆ ಕಾಮರೂಪದಿಂದ ಕೂಡಿದ ಮತ್ತು ಕೆಲವರು ರಾಕ್ಷಸ ಪುತ್ರರಿರುವರು.

**ತೇಷಾಂ ಯಥಾಪ್ರಧಾನಾನ್ ವೈ ವರ್ಣ್ಯಮಾನಾನ್ನಿಬೋಧತ ।**
**ಲಾಲಾವಿಃ ಕ್ರಥನೋ ಭೀಮಃ ಸುಮಾಲೀ ಮಧುರೇವ ಚ || ೧೩೩ ||**

**ವಿಸ್ಫೂರ್ಜನೋ ಬೃಹಜ್ಜಿಹ್ವೋ ಮಾತಂಗೋ ಧೂಮ್ರಿತಸ್ತಥಾ ।**
**ಚಂದ್ರಾರ್ಕಭೀಕರೋ ಬುಧ್ನಃ ಕಪಿಲೋಮಾ ಪ್ರಹಾಸಕಃ || ೧೩೪ ||**

**ಪೀಡಾಪರಸ್ತ್ರಿನಾಭಶ್ಚ ವಕ್ರಾಕ್ಷಶ್ಚ ನಿಶಾಚರಃ ।**
**ತ್ರಿಶಿರಾಃ ಶತದಂಷ್ಟ್ರಶ್ಚ ತುಂಡಕೋಶಶ್ಚ ರಾಕ್ಷಸಃ || ೧೩೫ ||**

**ಅಶ್ವಶ್ಚಾಕಂಪನಶ್ಚೈವ ದುರ್ಮುಖಶ್ಚ ನಿಶಾಚರಃ ।**
**ಇತ್ಯೇತೇ ರಾಕ್ಷಸವರಾ ವಿಕ್ರಾಂತಾ ಗಣರೂಪಿಣಃ || ೧೩೬ ||**

**ಸರ್ವಲೋಕಚರಾಸ್ತೇ ತು ತ್ರಿದಶಾನಾಂ ಸಮಕ್ರಮಾಃ ।**
**ಸಪ್ತ ಚಾನ್ಯಾ ದುಹಿತರಸ್ತಾಃ ಶೃಣುಧ್ವಂ ಯಥಾಕ್ರಮಮ್ || ೧೩೭ ||**

---

೧೩೩. ಅವರಲ್ಲಿ ನಾನು ವರ್ಣಿಸುವ ಪ್ರಧಾನ ವ್ಯಕ್ತಿಗಳನ್ನು ಶ್ರವಣಮಾಡಿರಿ. ಲಾಲಾವಿ. ಕ್ರಥನ, ಭೀಮ, ಸುಮಾಲೀ ಮತ್ತು ಮಧು ಎಂಬುವರು ಖಶಾಪುತ್ರರಲ್ಲಿ ಕೆಲವರು ಪ್ರಧಾನರೆಂದೆನಿಸಿಕೊಂಡಿರುವರು.

೧೩೪. ವಿಸ್ಫೂರ್ಜನ, ಬೃಹಜ್ಜಿಹ್ವ, ಮಾತಂಗ, ಧೂಮ್ರಿತ, ಚಂದ್ರಾರ್ಕ ಭೀಕರ, ಬುಧ್ನ, ಕಪಿಲೋಮಾ, ಮತ್ತು ಪ್ರಹಾಸಕ ಎಂಬುವರು ಗಣ್ಯರಾದ ಖಶಾ ಪುತ್ರ ಸಂತತಿಯಲ್ಲಿ ಸೇರಿರುವರು.

೧೩೫. ಮತ್ತು ಪೀಡಾಪರ, ತ್ರಿನಾಭ, ವಕ್ರಾಕ್ಷ, ನಿಶಾಚರ, ತ್ರಿಶಿರ, ಶತ ದಂಷ್ಟ್ರ, ತುಂಡಕೋಶ ಎಂಬ ರಾಕ್ಷಸರು ಖಶಾಪುತ್ರಾವಳಿಯಲ್ಲಿ ಪ್ರಧಾನಪದವನ್ನು ಅಲಂಕರಿಸಿರುವರು.

೧೩೬. ಅಶ್ವ, ಅಕಂಪನ, ಮತ್ತು ದುರ್ಮುಖನೆಂಬ ನಿಶಾಚರ ಎಂಬ ಇಷ್ಟು ಮಂದಿ ಶ್ರೇಷ್ಠರಾದ ರಾಕ್ಷಸರು ಅತಿಶಯ ವಿಕ್ರಮಶಾಲಿಗಳೂ ಮತ್ತು ಗಣ - ಸಮಾಜ ರೂಪವನ್ನು ಹೊಂದಿದವರೂ ಆಗಿದ್ದರು.

೧೩೭. ಈ ರಾಕ್ಷಸರು ಸರ್ವಲೋಕಗಳಲ್ಲಿ ನಿರಂಕುಶರಾಗಿ ಸಂಚರಿಸುವವರೂ ದೇವೋತ್ತಮರಿಗೆ ಸಮಾನವಾದ ರೀತಿಯುಳ್ಳವರೂ ಆಗಿದ್ದರು. ಇವರಿಗೆ ಏಳು ಮಂದಿ ಪುತ್ರಿಯರಿದ್ದರು. ಅವರ ಹೆಸರನ್ನು ಕ್ರಮವಾಗಿ ಕೇಳಿರಿ.

ಯಾಸಾಂ ಚ ಯಃ ಪ್ರಜಾಸರ್ಗೋ ಯೇನ ಚೋತ್ಪಾದಿತಾ ಗಣಾಃ ।
ಆಲಂಬಾ ಉತ್ಕಚೋತ್ಕೃಷ್ಟಾ ನಿರ್ಋತಾ ಕಪಿಲಾ ಶಿವಾ ॥ ೧೩೮ ॥

ಕೇಶಿನೀ ಚ ಮಹಾಭಾಗಾ ಭಗಿನ್ಯಃ ಸಪ್ತ ಯಾಃ ಸ್ಮೃತಾಃ ।
ತಾಭ್ಯೋ ಲೋಕನಿಕಾಯಸ್ಯ ಹಂತಾರೋ ಯುದ್ಧದುರ್ಮದಾಃ
॥ ೧೩೯ ॥

ಉದೀರ್ಣಾ ರಾಕ್ಷಸಗಣಾ ಇಮೇ ಚೋತ್ಪಾದಿತಾಃ ಶುಭಾಃ ।
ಆಲಂಬೇಯೋ ಗಣಃ ಕ್ರೂರಃ ಔತ್ಕಚೇಯೋ ಗಣಸ್ತಥಾ ॥ ೧೪೦ ॥

ತಥೌತ್ಕಾಕೃಷ್ಟೇಯ ಶ್ಚೈವೇಯೌ ರಕ್ಷಸಾಂ ಹ್ಯುತ್ತಮಾ ಗಣಾಃ ।
ತಥೈವ ಸ್ವೈರ್ಋತೋ ನಾಮ ತ್ರ್ಯಂಬಕಾನುಚರೇಣ ಹ ॥ ೧೪೧ ॥

---

೧೩೮. ಮತ್ತು ಅನೇಕ ರಾಕ್ಷಸ ಗಣಗಳಲ್ಲಿ ಯಾವ ರಾಕ್ಷಸಾಂಗನೆಯಲ್ಲಿ ಯಾವ ಪುರುಷ ಸಂಗದಿಂದ ಯಾವ ಪ್ರಜಾಸರ್ಗವುಂಟಾಯಿತೆಂಬುದನ್ನು ಕ್ರಮವಾಗಿ ಕೇಳಿರಿ, ಆಲಂಬಾ, ಉತ್ಕಚಾ ಉತ್ಕೃಷ್ಟಾ, ನಿರ್ಋತಾ, ಕಪಿಲಾ, ಶಿವಾ ಎಂಬಿವರು ಆ ಏಳು ಮಂದಿಯಲ್ಲಿ ಕೆಲವರಾಗಿರುವರು.

೧೩೯. ಮತ್ತು ಕೇಶಿನೀ ಎಂಬುವಳು ಸೇರಿ ಏಳು ಮಂದಿ ಮಹಾಭಾಗ್ಯವತಿಯರೂ ಮತ್ತು ಅನ್ಯೋನ್ಯ ಭಗಿನಿಯರೂ ಆಗಿರುವರು, ಅವರಿಂದ ಲೋಕ ಸಮೂಹಕ್ಕೆ ಕೊಲೆಪಾತಕರೂ ಯುದ್ಧದಲ್ಲಿ ಉದ್ಧತರೂ ಆದ ಅನೇಕ ರಾಕ್ಷಸಗಣಗಳು ಜನಿಸಿದುವು.

೧೪೦. ಆ ಏಳು ಮಂದಿಯಿಂದ ಅಹಂಕಾರದಿಂದ ಕೂಡಿದ ಅನೇಕ ಮಂಗಳ ಕರ್ಮವನ್ನು ಬಲ್ಲ ರಾಕ್ಷಸಗಣಗಳು ಹುಟ್ಟಿರುವುವು. ಆ ಗಣಗಳಲ್ಲಿ ಆಲಂಬೇಯ ರಾಕ್ಷಸಗಣ ಮತ್ತು ಔತ್ಕಟೇಯ ರಾಕ್ಷಸ ಗುಂಪು ಇವೆರಡು ಅತಿಕ್ರೂರವಾದ ಶೀಲವುಳ್ಳವುಗಳಾಗಿವೆ.

೧೪೧. ಔತ್ಕೃಷ್ಟೇಯ ಮತ್ತು ಶೈವೇಯವೆಂಬ ಗಣವು ಉತ್ತಮರಾದ ರಾಕ್ಷಸರಿಂದ ಕೂಡಿರುವುದು, ಹಾಗೆಯೇ ನೈರ್ಋತನೆಂಬುವನೊಬ್ಬನು ಈಶ್ವರನ ಅನುಚರನಿಂದ ಜನಿಸಿರುವನು.

ಉತ್ಪಾದಿತಃ ಪ್ರಜಾಸರ್ಗೇ ಗಣೇಶ್ವರವರೇಣ ತು ।
ವಿಕ್ರಾಂತಾಃ ಶೌರ್ಯಸಂಪನ್ನಾಃ ನೈರ್ಋತಾ ದೇವರಾಕ್ಷಸಾಃ ॥ ೧೪೨ ॥

ಯೇಷಾಮಧಿಪತಿರ್ಯುಕ್ತೋ ನಾಮ್ನಾ ಖ್ಯಾತೋ ವಿರೂಪಕಃ ।
ತೇಷಾಂ ಗಣಶತಾನೀಕಾ ಉದ್ಧತಾನಾಂ ಮಹಾತ್ಮನಾಮ್ ॥ ೧೪೩ ॥

ಪ್ರಾಯೇಣಾನುಚರಂತ್ಯೇತೇ ಶಂಕರಂ ಜಗತಃ ಪ್ರಭುಮ್।
ದೈತ್ಯರಾಜೇನ ಕುಂಭೇನ ಮಹಾಕಾಯೂ ಮಹಾತ್ಮನಾ ॥ ೧೪೪ ॥

ಉತ್ಪಾದಿತಾ ಮಹಾವೀರ್ಯಾ ಮಹಾಬಲಪರಾಕ್ರಮಾಃ ।
ಕಾಪಿಲೇಯಾ ಮಹಾವೀರ್ಯಾ ಉದೀರ್ಣಾ ದೈತ್ಯರಾಕ್ಷಸಾಃ ॥ ೧೪೫ ॥

ಕಪಿಲೇನ ಚ ಯಕ್ಷೇಣ ಕೇಶಿನ್ಯಾಂ ಹ್ಯಪರೇ ಜನಾಃ ।
ಉತ್ಪಾದಿತಾ ಬಲವತಾ ಉದೀರ್ಣಾ ಯಕ್ಷರಾಕ್ಷಸಾಃ ॥ ೧೪೬ ॥

---

೧೪೨. ಅವನು ಶಿವನ ಸೇವಕನಾದ ಗಣೇಶ್ವರನಿಂದ ಪ್ರಜಾಸಂತತಿಯಲ್ಲಿ ಸೃಷ್ಟಿಸಲ್ಪಟ್ಟಿರುವನು. ಅವನ ವಂಶದಲ್ಲಿ ಹುಟ್ಟಿದ ನೈರ್ಋತರೆಂಬ ಸಂಕೇತವುಳ್ಳ ದೇವ ರಾಕ್ಷಸರು ವಿಕ್ರಮ-ಶೌರ್ಯಗಳಿಂದ ಉಜ್ಜ್ವಲರಾಗಿರುವರು.

೧೪೩. ಅವರಿಗೆ ಯೋಗ್ಯನಾದ ವಿರೂಪಕನೆಂದು ಹೆಸರುಳ್ಳ ಒಬ್ಬ ಅಧಿಪತಿಯು ಇರುವನು. ಅವರ ಸಂಘದಲ್ಲಿ ಉದ್ಧತರೂ ಮತ್ತು ಮಹಾತ್ಮರೂ ಆದ ನೂರಾರು ಗಣಸೇನಾನಿಗಳು ಸೇರಿಕೊಂಡಿರುವರು.

೧೪೪. ಪ್ರಾಯಕವಾಗಿ ಅವರೆಲ್ಲರೂ ಜಗತ್ತಿನ ಪ್ರಭುವಾದ ಶಂಕರನನ್ನು ಸೇವಿಸುತ್ತಿರುವರು. ಮತ್ತೆ ಕೆಲವರು ದೈತ್ಯ ರಾಜನೂ ಮಹಾತ್ಮನೂ ಆದ ಕುಂಭ ಎಂಬುವನಿಂದ ಜನಿಸಲ್ಪಟ್ಟಿರುವರು.

೧೪೫. ಅವರು ಮಹತ್ತಾದ ವೀರ್ಯ ಮತ್ತು ಬಲ ಪರಾಕ್ರಮಗಳಿಂದ ಶೋಭಿತರಾಗಿರುವರು. ಮತ್ತು ಕಾಪಿಲೇಯ ಎಂಬ ಸಂಕೇತವುಳ್ಳ ಮಹಾ ವೀರ್ಯರೂ. ಉದ್ಧತರೂ, ಆದ ದೈತ್ಯರಾಕ್ಷಸರ ಗಣವು ಒಂದಿರುವುದು.

೧೪೬. ಕಪಿಲನೆಂಬ ನಾಮಾಂಕಿತನಾದ ಯಕ್ಷನಿಂದ ಕೇಶಿನೀ ಎಂಬುವಳಲ್ಲಿ ಸೃಷ್ಟಿಸಲ್ಪಟ್ಟ ಮತ್ತೊಂದು ಪ್ರಜಾವರ್ಗವು ಬಲಶಾಲಿಯಾಗಿಯೂ ಗಣನಾತೀತ ವಾಗಿಯೂ ಯಕ್ಷರಾಕ್ಷಸರೆಂಬ ಪ್ರಸಿದ್ಧಿಯುಳ್ಳದ್ದಾಗಿಯೂ ಇರುವುದು.

9

ಕೇಶಿನೀ ದುಹಿತಾ ಚೈವ ನೀಲಾಯಾಃ ಕ್ಷುದ್ರರಾಕ್ಷಸೀ ।
ಆಲಂಬೇಯೇನ ಜನಿತಾ ನೈಕಾಃ ಸುರಸಿಕೇನ ಹಿ ॥ ೧೪೭ ॥

ನೈಲಾ ಇತಿ ಸಮಾಖ್ಯಾತಾ ದುರ್ಜಯಾ ಘೋರವಿಕ್ರಮಾಃ ।
ಚರಂತಿ ಪೃಥಿವೀಂ ಕೃತ್ಸ್ನಾಂ ತತ್ರ ತೇ ದೇವಲೌಕಿಕಾಃ ॥ ೧೪೮ ॥

ಬಹುತ್ವಾಚ್ಚೈವ ಸರ್ಗಸ್ಯ ತೇಷಾಂ ವಕ್ತುಂ ನ ಶಕ್ಯತೇ ।
ತಸ್ಯಾಸ್ತ್ವಪಿ ಚ ನೀಲಾಯಾ ವಿಕಚಾ ನಾಮ ರಾಕ್ಷಸೀ ॥ ೧೪೯ ॥

ದುಹಿತಾ ಸುತಾಶ್ಚ ವಿಕಚಾ ಮಹಾಸತ್ತ್ವಪರಾಕ್ರಮಾಃ ।
ವಿರೂಪಕೇನ ತಸ್ಯಾಂ ವೈ ನೈರ್ಋತೇನ ಇಹ ಪ್ರಜಾಃ ॥ ೧೫೦ ॥

ಉತ್ಪಾದಿತಾಃ ಸುಘೋರಾಶ್ಚ ಶೃಣು ತಾಸ್ತ್ವನುಪೂರ್ವಶಃ ।
ದಂಷ್ಟ್ರಾಕರಾಲಾ ವಿಕೃತಾ ಮಹಾಕರ್ಣಾ ಮಹೋದರಾಃ ॥ ೧೫೧ ॥

---

೧೪೭. ಮತ್ತು ಕೇಶಿನೀ ಎಂಬುವಳಿಗೆ ನೀಲಾ ಎಂಬ ಕ್ಷುದ್ರ ಶೀಲದ ರಾಕ್ಷಸಿಯು ಪುತ್ರಿಯಾಗಿ ಜನಿಸಿದಳು. ಅವಳಲ್ಲಿ ರಸಿಕನಾದ ಆಲಂಬೇಯ ಅಸುರನಿಂದ ಅನೇಕ ಸಂಖ್ಯೆಯ ಪ್ರಜೆಗಳು ಸೃಷ್ಟಿಮಾಡಲ್ಪಟ್ಟರು

೧೪೮. ಅವರು ಇತರರಿಂದ ಜಯಿಸಲಾಗದವರೂ ಘೋರವಾದ ವಿಕ್ರಮವುಳ್ಳವರೂ ಆಗಿ ನೈಲ ಎಂಬ ಸಂಜ್ಞೆಯನ್ನು ಹೊಂದಿರುವರು. ಅವರು ದೇವಲೋಕ ಮತ್ತು ಸಮಸ್ತ ಪೃಥಿವಿಯಲ್ಲಿಯೂ ಸಂಚರಿಸುತ್ತಿರುವರು.

೧೪೯. ಅವರ ಸೃಷ್ಟಿಯು ಅತಿಶಯವಾಗಿರುವುದರಿಂದ ಅದನ್ನು ವಿಸ್ತಾರವಾಗಿ ವರ್ಣಿಸಲು ಆಗುವುದಿಲ್ಲ. ಆ ನೀಲಾ ಎಂಬುವಳಿಗೆ ವಿಕಚಾ ಎಂಬ ಒಬ್ಬ ರಾಕ್ಷಸಿಯು ಪುತ್ರಿಯಾಗಿ ಜನಿಸಿದಳು.

೧೫೦. ಮತ್ತು ಮಹಾಧೈರ್ಯ-ಪರಾಕ್ರಮಗಳಿಂದ ಕೂಡಿದ ವಿಕಚ ಎಂಬ ಇತರ ಪುತ್ರರು ವಿರೂಪಕನೆಂಬ ನೈರ್ಋತನಿಂದ ವಿಕಚಾ ಎಂಬುವಳಲ್ಲಿ ಹುಟ್ಟಿದ ಪ್ರಜೆಗಳಾಗಿರುವರು.

೧೫೧. ಅವರು ತುಂಬ ಘೋರಕೃತ್ಯವುಳ್ಳವರಾಗಿರುವರು. ಅವರನ್ನು ಕ್ರಮವಾಗಿ ಹೇಳುತ್ತೇನೆ, ಕೇಳಿರಿ. ದಂಷ್ಟ್ರಾಕರಾಳ, ವಿಕೃತ, ಮಹಾಕರ್ಣ, ಮತ್ತು ಮಹೋದರ ಎಂಬುವರು ಅನೇಕರಾಗಿರುವರು.

ಹಾರಕಾ ಭೀಷಕಾ ಶ್ಚೈವ ತಥೈವ ಕ್ಲಾಮಕಾಃ ಪರೇ ।
ರೇರವಾಕಾಃ ಪಿಶಾಚಾಶ್ಚ ವಾಹಕಾಸ್ತ್ರಾಸಕಾಃ ಪರೇ ॥ ೧೫೨ ॥

ಭೂಮಿರಾಕ್ಷಸಕಾ ಹ್ಯೇತೇ ಮಂದಾಃ ಪರುಷವಿಕ್ರಮಾಃ ।
ಚರಂತ್ಯದೃಷ್ಟಪೂರ್ವಾಸ್ತು ನಾನಾಕಾರಾ ಹ್ಯನೇಕಶಃ ॥ ೧೫೩ ॥

ಉತ್ಕೃಷ್ಟಬಲಸತ್ತ್ವಾ ಯೇ ತೇಷಾಂ ವೈ ಖೇಚರಾಃ ಸ್ಮೃತಾಃ ।
ಲಕ್ಷಮಾತ್ರೇಣ ಚಾಕಾಶಂ ಸ್ವಲ್ಪಾತ್ ಸ್ವಲ್ಪಂ ಚರಂತಿ ವೈ ॥ ೧೫೪ ॥

ಏತೈರ್ವ್ಯಾಪ್ತಮಿದಂ ವಿಶ್ವಂ ಶತಶೋಽಥ ಸಹಸ್ರಶಃ ।
ಭೂಮಿರಾಕ್ಷಸಕೈಃ ಸರ್ವೈರನೇಕೈಃ ಕ್ಷುದ್ರರಾಕ್ಷಸೈಃ ॥ ೧೫೫ ॥

ನಾನಾಪ್ರಕಾರೈರಾಕ್ರಾಂತಾ ನಾನಾದೇಶಾಃ ಸಮಂತತಃ ।
ಸಮಾಸಾಭಿಹಿತಾಶ್ಚೈವ ಹ್ಯಷ್ಟೌ ರಾಕ್ಷಸಮಾತರಃ ॥ ೧೫೬ ॥

---

೧೫೨. ಮತ್ತು ಹಾರಕ, ಭೀಷಕ, ಕ್ಲಾಮಕ, ರೇರವಾಕ, ಪಿಶಾಚ, ವಾಹಕ ಮತ್ತು ತ್ರಾಸಕ ಎಂಬ ಘೋರರಾಕ್ಷಸರ ಗುಂಪುಗಳು ಕೆಲವು ಪ್ರಖ್ಯಾತಗಳಾಗಿದೆ.

೧೫೩. ಮಂದಮತಿಯುಳ್ಳವರೂ, ಕ್ರೂರವಾದ ವಿಕ್ರಮವುಳ್ಳವರೂ ಆದ ಈ ಗಣಗಳು ಭೂಮಿ ರಾಕ್ಷಸರೆಂಬ ಸಂಜ್ಞಾಂಕಿತರಾಗಿ ಕಣ್ಣಿಗೆ ಕಾಣಿಸದಂತೆ ಸಮಯೋಚಿತವಾಗಿ ನಾನಾವಿಧದ ಆಕಾರಗಳನ್ನು ಧರಿಸಿ ಭೂಮಿಯಲ್ಲಿ ಸಂಚರಿಸುವರು.

೧೫೪. ಅವರಲ್ಲಿ ಅತ್ಯಧಿಕ ಬಲ ಮತ್ತು ಸತ್ತ್ವಶಾಲಿಗಳು ಆಕಾಶಚರರೆಂದು ಸ್ಮರಿಸಲ್ಪಟ್ಟಿರುವರು, ಅವರ ಸಂಖ್ಯಾ-ವಿಕ್ರಮದೃಷ್ಟಿಗೆ ಆಕಾಶವು ಅಲ್ಪಕ್ಕಿಂತ ಅತ್ಯಲ್ಪವಾದ ಸಂಚಾರಭೂಮಿಯಾಗಿರುವುದು.

೧೫೫. ಹೀಗೆ ಅನೇಕರೂ ಕ್ಷುದ್ರ ಜಾತಿಯ ರಾಕ್ಷಸರೂ ಆದ ಈ ಭೂಮಿ ರಾಕ್ಷಸರೆಂಬುವರ ನೂರು ಮತ್ತು ಸಹಸ್ರವೆಂಬ ಅಗಾಧ ಸಂಖ್ಯೆಯಿಂದ ಈ ಸಕಲ ವಿಶ್ವವು ತುಂಬಿರುವುದು.

೧೫೬. ಇವರು ಅನೇಕ ರೀತಿಗಳಿಂದ ಅನೇಕ ಪ್ರದೇಶಗಳನ್ನು ಸುತ್ತ ಮುತ್ತಲೂ ಆಕ್ರಮಿಸಿಕೊಂಡಿರುವರು. ಈ ರಾಕ್ಷಸರ ಗುಂಪಿಗೆ ಎಂಟುಮಂದಿಯು ಜನನಿಯರು ಸಂಗ್ರಹವಾಗಿ ಹೇಳಲ್ಪಟ್ಟಿರುವರು.

ಅಷ್ಟೌ ವಿಭಾಗಾ ಹ್ಯೇಷಾಂ ಹಿ ವ್ಯಾಖ್ಯಾತಾ ಅನುಪೂರ್ವಶಃ ।
ಭದ್ರಕಾ ನಿಕರಾಃ ಕೇಚಿದಜ್ಞನಿಷ್ಪತ್ತಿಹೇತುಕಾಃ ॥ ೧೫೭ ॥

ಸಹಸ್ರಶತಸಂಖ್ಯಾತಾ ಮರ್ತ್ಯಲೋಕವಿಚಾರಿಣಃ ।
ಪೂತನಾ ಮಾತೃಸಾಮಾನ್ಯಾಸ್ತಥಾ ಭೂತಭಯಂಕರಾಃ ॥ ೧೫೮ ॥

ಬಾಲಾನಾಂ ಮಾನುಷೇ ಲೋಕೇ ಗ್ರಹಾ ಮರಣಹೇತುಕಾಃ ।
ಸ್ಕಂದಗ್ರಹಾದಯೋ ಹಾಸ್ಯಾ ಆಪಕಾಸ್ತ್ರಾಸಕಾದಯಃ ॥ ೧೫೯ ॥

ಕೌಮಾರಾಸ್ತೇ ತು ವಿಜ್ಞೇಯಾ ಬಾಲಾನಾಂ ಗ್ರಹವೃತ್ತಯಃ ।
ಸ್ಕಂದಗ್ರಹವಿಶೇಷಾಣಾಂ ಮಾಯಿಕಾನಾಂ ತಥೈವ ಚ ॥ ೧೬೦ ॥

ಪೂತನಾ ನಾಮ ಭೂತಾನಾಂ ಯೇ ಚ ಲೋಕವಿನಾಯಕಾಃ ।
ಏವಂ ಗಣಸಹಸ್ರಾಣಿ ಚರಂತಿ ಪೃಥಿವೀಮಿಮಾಮ್ ॥ ೧೬೧ ॥

---

೧೫೭. ಹೀಗೆ ಸಾಮಾನ್ಯವಾಗಿರುವ ಈ ರಾಕ್ಷಸರ ಎಂಟು ಸಂಗಡಗಳು ಕ್ರಮವಾಗಿ ವ್ಯಾಖ್ಯಾನಮಾಡಲ್ಪಟ್ಟಿರುವುವು. ಭದ್ರಕಾ ಎಂಬ ಕೆಲವು ರಾಕ್ಷಸರ ಗುಂಪು ಮಾನುಷರಲ್ಲಿ ಅಜ್ಞಪ್ರಜೆಯು ಹುಟ್ಟುವಂತೆ ಪೀಡೆಯನ್ನು ಕೊಡುವರು.

೧೫೮. ಹಾಗೆ ಮರ್ತ್ಯಲೋಕದಲ್ಲಿ ಸಂಚರಿಸುವ ಶತಸಹಸ್ರ ಸಂಖ್ಯೆಯಿಂದ ಕೂಡಿದ ಪೂತನಾ ಎಂಬ ಸಾಮಾನ್ಯ ಮಾತೃಗಣಗಳು ಪ್ರಾಣಿಗಳಿಗೆ ಸ್ವಭಾವವಾಗಿ ಭೀತಿಯನ್ನು ಕೊಡುತ್ತ ಸಂಚರಿಸುವುವು.

೧೫೯. ಮಾನುಷಲೋಕದಲ್ಲಿ ಬಾಲಗ್ರಹವೆಂಬ ಭೂತಜಾತಿಯು ಬಾಲಕರ ಮರಣಕ್ಕೆ ಕಾರಣವಾಗಿರುವುದು. ಹಾಗೆ ಸ್ಕಂದಗ್ರಹ, ಹಾಸ್ಯ, ಆಪಕ, ತ್ರಾಸಕ, ಮುಂತಾದುವುಗಳು ಬಾಲಕರ ಪೀಡೆಗೆ ಸಾಧನಗಳಾಗಿರುವುವು.

೧೬೦. ಇವುಗಳೆಲ್ಲ ಬಾಲಕರಲ್ಲಿ ಅವಸ್ಥಾವಿಕಾರವೃತ್ತಿಗಳನ್ನು ಕೊಡುವ ಕೌಮಾರ ಪೀಡಾರೂಪಗಳಿಂದ ಇರುವುವು. ಈ ರೀತಿಯಾಗಿ ಪೃಥಿವಿಯಲ್ಲಿ ಸಂಚರಿಸುವ ಭೂತಾದಿಗಣದಲ್ಲಿ ಸ್ಕಂದಗ್ರಹ ಮಾಯಿಕಗ್ರಹ ಮುಂತಾದ ವಿಶೇಷಗಳು ಸೇರಿವೆ.

೧೬೧, ಭೂತಗಳಿಗೆ ಮಾತೃ ಎನಿಸಿದ ಪೂತನಾ, ಲೋಕನಾಯಕರೆನಿಸಿದ ವಿನಾಯಕ ಮುಂತಾದ ಸಹಸ್ರಾದಿ ಅನೇಕ ಸಂಖ್ಯೆಯುಗಣಗಳು ಈ ಭೂಮಿಯಲ್ಲಿ ಸಂಚಾರ ಮಾಡುತ್ತಲಿರುವುವು.

**ಯಕ್ಷಾಃ ಪುಣ್ಯಜನಾ ನಾಮ ಪೂರ್ಣಭದ್ರಾಶ್ಚ ಯೇ ಸ್ಮೃತಾಃ ।**
**ಯಕ್ಷಾಣಾಂ ರಾಕ್ಷಸಾನಾಂ ಚ ಪೌಲಸ್ತ್ಯಾಗಸ್ತ್ಯಯಶ್ಚ ಯೇ ॥ ೧೬೨ ॥**

**ನೈರ್ಋತಾನಾಂ ಚ ಸರ್ವೇಷಾಂ ರಾಜಾಭೂದಲಕಾಧಿಪಃ ।**
**ಯಕ್ಷಾ ದೃಷ್ಟ್ವಾ ಪಿಬಂತೀಹ ನೃಣಾಂ ಮಾಂಸಮಸೃಗ್ವಸೇ ॥ ೧೬೩ ॥**

**ರಕ್ಷಾಂಸ್ಯನುಪ್ರವೇಶೇನ ಪಿಶಾಚೈಃ ಪರಿಪೀಡನೈಃ ।**
**ಸರ್ವಲಕ್ಷಣಸಂಪನ್ನಾಃ ಸಮಾಸ್ತೈಶ್ಚಾಪಿ ದೈವತೈಃ ॥ ೧೬೪ ॥**

**ಭಾಸ್ವರಾ ಬಲವಂತಶ್ಚ ಈಶ್ವರಾಃ ಕಾಮರೂಪಿಣಃ ।**
**ಅನಾಭಿಭಾವ್ಯಾ ವಿಕ್ರಾಂತಾಃ ಸರ್ವಲೋಕನಮಸ್ಕೃತಾಃ ॥ ೧೬೫ ॥**

**ಸೂಕ್ಷ್ಮಾಶ್ಚೌಜಸ್ವಿನೋ ಮೇಧ್ಯಾ ವರದಾ ಯಾಜ್ಞಿಕಾಶ್ಚ ವೈ ।**
**ದೇವಾನಾಂ ಲಕ್ಷಣಂ ಹ್ಯೇತದಸುರಾಣಾಂ ತಥೈವ ಚ ॥ ೧೬೬ ॥**

---

೧೬೨. ಆ ಗಣಗಳನ್ನು ಯಕ್ಷ, ಪುಣ್ಯಜನ, ಮತ್ತು ಪೂರ್ಣಭದ್ರ ಎಂಬ ಪಂಗಡಗಳನ್ನಾಗಿ ಪ್ರಾಜ್ಞರು ಸ್ಮರಿಸುತ್ತಾರೆ. ಆ ಯಕ್ಷ, ರಾಕ್ಷಸ, ಪೌಲಸ್ತ್ಯ ಮತ್ತು ಅಗಸ್ತಿ ಎಂಬ ಗಣವಿಶೇಷಗಳಿಗೆ ಒಬ್ಬ ರಾಜನು ಇರುವನು.

೧೬೩. ಮತ್ತು ಸಕಲ ನೈರ್ಋತ ಜನಾಂಗಕ್ಕು ಸೇರಿ ಅಲಕಾನಗರಿಗೆ ರಾಜನಾದ ಕುಬೇರನು ಧೊರೆಯಾಗಿರುವನು. ಇವುಗಳಲ್ಲಿ ಯಕ್ಷ ಜಾತಿಯು ಮನುಷ್ಯರ ರಕ್ತ ವಸೆಗಳನ್ನು ದರ್ಶನ ಮಾತ್ರದಿಂದ ಪಾನಮಾಡುವುದು.

೧೬೪. ರಾಕ್ಷಸ ಜಾತಿಯು ಮನುಷ್ಯ ವ್ಯಕ್ತಿಯಲ್ಲಿ ಆವೇಶವನ್ನು ಹೊಂದಿಯೂ ಪಿಶಾಚ ಜಾತಿಯು ಪ್ರಾಣಿಯನ್ನು ಪೀಡಿಸಿಯೂ ರಕ್ತಾದಿ ಪಾನಮಾಡುತ್ತದೆ. ಹೀಗೆ ದೇವತೆಗಳಂತೆ ಸಕಲ ಲಕ್ಷಣಗಳಿಂದ ಇವು ಕೂಡಿಕೊಂಡಿವೆಯೆಂದು ಸಂಗ್ರಹ ವಾಗಿ ಹೇಳಬಹುದು.

೧೬೫. ಪ್ರಕಾಶ ಶೀಲರೂ, ಬಲಶಾಲಿಗಳೂ, ನಿಯಾಮಕರೂ, ಕಾಮರೂಪಿ ಗಳೂ, ಪರರಿಂದ ತಿರಸ್ಕರಿಸಲು ಅಶಕ್ಯರೂ, ವಿಕ್ರಮಶಾಲಿಗಳೂ ಮತ್ತು ಸರ್ವ ಲೋಕಗಳಿಗೆ ವಂದ್ಯರೂ ಆಗಿ ದೇವತೆಗಳು ಇರುವರು.

೧೬೬. ಮತ್ತು ಸೂಕ್ಷ್ಮರೂಪವುಳ್ಳವರೂ, ದೇಹ ಕಾಂತಿಯುಳ್ಳವರೂ, ಪವಿ ತ್ರರೂ, ವರದಾನ ಶಕ್ತಿಯುಳ್ಳವರೂ, ಮತ್ತು ಯಜ್ಞದಲ್ಲಿ ಪೂಜ್ಯರೂ, ಆಗಿರುವರು. ಹೀಗೆ ದೇವತೆಗಳ ಮತ್ತು ಅಸುರರ ಲಕ್ಷಣಗಳು ನಿರೂಪಿಸಲ್ಪಟ್ಟಿವೆ.

ಹೀನಾ ದೇವೈಸ್ತ್ರಿಭಿಃ ಪಾದೈರ್ಗಂಧರ್ವಾಪ್ಸರಸಃ ಸ್ಮೃತಾಃ ।
ಗಂಧರ್ವೇಭ್ಯಸ್ತ್ರಿಭಿಃ ಪಾದೈರ್ಹೀನಾ ಗುಹ್ಯಕರಾಕ್ಷಸಾಃ ॥ ೧೬೭ ॥

ಐಶ್ವರ್ಯಹೀನಾ ರಕ್ಷೋಭ್ಯಃ ಪಿಶಾಚಾಸ್ತ್ರಿಗುಣಂ ಪುನಃ ।
ಏವಂ ಧನೇನ ರೂಪೇಣ ಆಯುಷಾ ಚ ಬಲೇನ ಚ ॥ ೧೬೮ ॥

ಧರ್ಮೈಶ್ವರ್ಯೇಣ ಬುದ್ಧ್ಯಾ ಚ ತಪಃಶ್ರುತಪರಾಕ್ರಮೈಃ ।
ದೇವಾಸುರೇಭ್ಯೋ ಹೀಯಂತೇ ತ್ರೀಂಸ್ತ್ರೀನ್ ಪಾದಾನ್ ಪರಸ್ಪರಮ್ ॥ ೧೬೯ ॥

ಗಂಧರ್ವಾದ್ಯಾಃ ಪಿಶಾಚಾಂತಾಶ್ಚತಸ್ರೋ ದೇವಯೋನಯಃ ।
ಅತಃ ಶೃಣುತ ಭದ್ರಂ ವಃ ಪ್ರಜಾಃ ಕ್ರೋಧವಶಾನ್ವಯಾಃ ॥ ೧೭೦ ॥

ಕ್ರೋಧಾಯಾಃ ಕನ್ಯಕಾ ಜಜ್ಞೇ ದ್ವಾದಶೈವಾತ್ಮ ಸಂಭವಾಃ ।
ತಾ ಭಾರ್ಯಾಃ ಪುಲಹಸ್ಯಾಸನ್ನಾಮತೋ ಮೇ ನಿಬೋಧತ ॥ ೧೭೧ ॥

---

೧೬೭. ದೇವಗಂಧರ್ವ, ಯಕ್ಷ, ಪಿಶಾಚವೆಂಬ ಜಾತಿಗಳಲ್ಲಿ ದೇವತೆಗಳಿಗಿಂತ ಗಂಧರ್ವ ಅಪ್ಸರ ಸ್ತ್ರೀಯರ ಗಣವು ಮೂರು ಪಾದಗಳಿಂದ ನ್ಯೂನವಾಗಿರುವುದು. ಗಂಧರ್ವಾದಿಗಳಿಗಿಂತ ಗುಹ್ಯಕ ರಾಕ್ಷಸರ ಸಂಘವು ತ್ರಿಗುಣ ನ್ಯೂನವಾದುದು.

೧೬೮. ಮತ್ತು ಪಿಶಾಚಗಳು ಐಶ್ವರ್ಯದಿಂದ ಗುಹ್ಯಕರಿಗಿಂತ ತ್ರಿಗುಣ ನ್ಯೂನವೆಂದು ಅರಿಯಬೇಕು- ಹೀಗೆ ಗಂಧರ್ವ ಆದಿಯಾಗಿ ನಾಲ್ಕು ಪಂಗಡಗಳಲ್ಲಿ ಉತ್ತರೋತ್ತರ ಜಾತಿಯು ಧನ, ರೂಪ, ಆಯುಷ್ಯ ಮತ್ತು ಬಲಗಳಲ್ಲಿ ನ್ಯೂನವಾಗಿರುವುದು.

೧೬೯. ದೇವಾಸುರರಲ್ಲಿ ಪರಸ್ಪರ ತುಲನೆಯಿಂದ ಧರ್ಮ, ಐಶ್ವರ್ಯ, ವಿವೇಕ, ತಪಸ್ಸು, ಶಾಸ್ತ್ರಾರ್ಥ ಪರಿಜ್ಞಾನ, ಮತ್ತು ಪರಾಕ್ರಮ ಇವುಗಳು ತ್ರಿಗುಣ ನ್ಯೂನತ್ವವನ್ನು ಹೊಂದಿರುವುವು.

೧೭೦. ಹೀಗೆ ಗಂಧರ್ವ ಮೊದಲುಗೊಂಡು ಪಿಶಾಚಾಂತವಾದ ನಾಲ್ಕು ಜಾತಿಗಳು ದೇವಯೋನಿ ವಿಶೇಷ ವೆಂದೆನಿಸಿರುವುವು. ಇನ್ನು ಮುಂದೆ ಕ್ರೋಧ ಎಂಬುವಳಿಂದ ವೃದ್ಧಿಹೊಂದಿದ ಮಂಗಳಕರವಾದ ಪ್ರಜಾಸರ್ಗವನ್ನು ಕೇಳಿರಿ.

೧೭೧. ಕ್ರೋಧಾ ಎಂಬುವಳಿಗೆ ಹನ್ನೆರಡು ಮಂದಿ ಕನ್ನಿಕೆಯರು ಜನಿಸಿದರು. ಅವರೆಲ್ಲರೂ ಪುಲಹ ಪ್ರಜಾಪತಿಗೆ ಪತ್ನಿಯರಾದರು. ಅವರ ನಾಮಧೇಯಗಳನ್ನು ಶ್ರವಣಮಾಡಿರಿ.

ಮೃಗೀ ಚ ಮೃಗಮಂದಾ ಚ ಹರಿಭದ್ರಾ ತ್ವಿರಾವತೀ ।
ಭೂತಾ ಚ ಕಪಿಶಾ ದಂಷ್ಟ್ರಾ ಋಷಾ ತಿರ್ಯಾ ತಥೈವ ಚ ॥ ೧೭೨ ॥

ಶ್ವೇತಾ ಚ ಸರಮಾ ಚೈವ ಸುರಸಾ ಚೇತಿ ವಿಶ್ರುತಾ ।
ಮೃಗ್ಯಾಸ್ತು ಹರಿಣಾಃ ಪುತ್ರಾ ಮೃಗಾಶ್ಚಾನ್ಯೇ ಶಶಾಸ್ತಥಾ ॥ ೧೭೩ ॥

ನ್ಯಂಕವಃ ಶರಭಾ ಯೇ ಚ ರುರವಃ ಪೃಷತಾಶ್ಚ ಯೇ ।
ಋಕ್ಷಾಶ್ಚ ಮೃಗಮಂದಾಯಾ ಗವಯಾಶ್ಚಾಪರೇ ತಥಾ ॥ ೧೭೪ ॥

ಮಹಿಷೋಷ್ಟ್ರವರಾಹಾಶ್ಚ ಖಡ್ಗಾ ಗೌರಮುಖಾಸ್ತಥಾ ।
ಹರ್ಯಾಸ್ತು ಹರಯಃ ಪುತ್ರಾ ಗೋಲಾಂಗೂಲಾಸ್ತರಕ್ಷವಃ ॥ ೧೭೫ ॥

ವಾನರಾಃ ಕಿನ್ನರಾಶ್ಚೈವ ಮಾಯುಃ ಕಿಂಪುರುಷಾಸ್ತಥಾ ।
ಸಿಹ್ಮಾ ವ್ಯಾಘ್ರಾಶ್ಚ ನೀಲಾಶ್ಚ ದ್ವೀಪಿನಃ ಕ್ರೋಧಿತಾಧರಾಃ ॥ ೧೭೬ ॥

---

೧೭೨. ಮೃಗೀ, ಮೃಗಮಂದಾ, ಹರಿಭದ್ರಾ, ಇರಾವತೀ, ಭೂತಾ, ಕಪಿಶಾ, ದಂಷ್ಟ್ರಾ, ಋಷಾ ಮತ್ತು ತಿರ್ಯಾ ಎಂಬುವರು ಆ ಕ್ರೋಧಾಪುತ್ರಿಯರಲ್ಲಿ ಕೆಲವರಾಗಿರುವರು,

೧೭೩. ಹಾಗೆ ಶ್ವೇತಾ, ಸರಮಾ ಮತ್ತು ಸುರಸಾ ಎಂಬುವರು ಸೇರಿ ಹನ್ನೆರಡು ಮಂದಿಯು ಪ್ರಸಿದ್ಧರಾಗಿರುವರು. ಇವರಲ್ಲಿ ಮೃಗೀ ಎಂಬುವಳಿಗೆ ಹರಿಣ= ಜಿಂಕೆ ಎಂಬ ಪಶುಗಳು ಪುತ್ರರಾಗಿ ಜನಿಸಿದರು..

೧೭೪. ಮತ್ತು ನ್ಯಂಕು, ಶರಭ, ರುರು, ಪೃಷತ ಎಂಬ ಮೃಗ ಜಾತಿ ಪ್ರಭೇದಗಳು ಮೃಗಿಯಲ್ಲಿ ಹುಟ್ಟಿರುವುವು. ಮೃಗಮಂದಾ ಎಂಬುವಳಿಗೆ ಕರಡಿ ಮತ್ತು ಗವಯ ಮುಂತಾದ ಮೃಗಜಾತಿಯ ಪ್ರಾಣಿಗಳು ಪುತ್ರರಾಗಿ ಜನಿಸಿದುವು.

೧೭೫. ಮತ್ತು ಮಹಿಷ, ಒಂಟೆ, ಹಂದಿ, ಖಡ್ಗಮೃಗ, ಗೌರಮುಖ ಮುಂತಾದುವುಗಳು ಮೃಗಮಂದಾ ಎಂಬುವಳಲ್ಲಿ ಹುಟ್ಟಿರುವುವು. ಹರಿ ಎಂಬುವಳಿಗೆ ಹರಿ, ಗೋಲಾಂಗೂಲ, ತರಕ್ಷು, ಮುಂತಾದುವು ಜನಿಸಿರುವುವು.

೧೭೬. ಮತ್ತು ವಾನರ, ಕಿನ್ನರ, ಮಾಯು, ಕಿಂಪುರುಷ, ಸಿಹ್ಮ, ವ್ಯಾಘ್ರ, ನೀಲ, ದ್ವೀಪಿ ಮುಂತಾದ ಕೋಪದಿಂದ ಪೂರ್ಣವಾದ ಜಂತುಗಳು ಹರಿ ಎಂಬುವಳಲ್ಲಿ ಜನಿಸಿರುವುವು.

ಸರ್ಪಾಶ್ಚಾಜಗರಾ ಗ್ರಾಹಾ ಮಾರ್ಜಾರಾ ಮೂಷಿಕಾಃ ಪರೇ ।
ಮಂಡೂಕಾ ನಕುಲಾಶ್ಚೈವ ವಲ್ಕಲಾ ವನಗೋಚರಾಃ ॥ ೧೭೭ ॥

ಹಂಸಂ ತು ಪ್ರಥಮಂ ಜಜ್ಞೇ ಪುಲಹಸ್ಯ ವರಂ ಶುಭಾ ।
ರಣಚಂದ್ರಂ ಶತಮುಖಂ ದರೀಮುಖಮಥಾಪಿ ಚ ॥ ೧೭೮ ॥

ಹರಿತಂ ಹರಿವರ್ಮಾಣಂ ಭೀಷಣಂ ಶುಭಲಕ್ಷಣಮ್ ।
ಪ್ರಥಿತಂ ಮಥಿತಂ ಚೈವ ಹರಿಣಂ ಲಾಂಗಲಿಂ ತಥಾ ॥ ೧೭೯ ॥

ಶ್ವೇತಾಯಾ ಜಜ್ಞಿರೇ ವೀರಾ ದಶ ವಾನರಪುಂಗವಾಃ ।
ಊರ್ಧ್ವದೃಷ್ಟಿಃ ಕೃತಾಹಾರಃ ಸುವ್ರತೋ ವಿನತೋ ಬುಧಃ ॥ ೧೮೦ ॥

ಪಾರಿಜಾತಃ ಸುಜಾತಶ್ಚ ಹರಿದಾಸೋ ಗುಣಾಕರಃ ।
ಕ್ಷೇಮಮೂರ್ತಿಶ್ಚ ಬಲವಾನ್ ರಾಜಾನಃ ಸರ್ವ ಏವ ತೇ ॥ ೧೮೧

---

೧೭೭. ಹಾಗು ಸರ್ಪ, ಅಜಗರ, ಗ್ರಾಹ, ಮಾರ್ಜಾರ, ಮೂಷಕ, ಮಂಡೂಕ ನಕುಲ, ವಲ್ಕಲ, ಮುಂತಾದ ವನದಲ್ಲಿ ಹುಟ್ಟಿ ಬೆಳೆಯುವ ಪ್ರಾಣಿಗಳು ಪ್ರಜೆಯಾಗಿ ಜನಿಸಿರುವುವು.

೧೭೮. ಮತ್ತು ಶುಭಾ ಎಂಬ ಪುಲಹ ಪತ್ನಿಯು ಮೊದಲನೆಯ ಹಂಸ ಎಂಬ ಪುತ್ರನನ್ನು ಪ್ರಸವಿಸಿದಳು. ಅನಂತರದಲ್ಲಿ ರಣಚಂದ್ರ, ಶತಮುಖ, ದರೀಮುಖ ಪುತ್ರರನ್ನು ಹೊಂದಿದಳು.

೧೭೯. ಹಾಗು ಹರಿತ, ಹರಿವರ್ಮ. ಶುಭಕರಗಳಾದ ಚಿಹ್ನಗಳಿಂದ ಕೂಡಿದ ಭೀಷಣ. ಮತ್ತು ಪ್ರಸಿದ್ಧನಾದ ಮಥಿತ, ಹರಿಣ, ಲಾಂಗಲಿ ಎಂಬ ಪುತ್ರರನ್ನು ಹೊಂದಿರುವಳು.

೧೮೦. ಶ್ವೇತಾ ಎಂಬ ಪುಲಹ ಪತ್ನಿಯಲ್ಲಿ ವೀರರಾದ ಹತ್ತು ಮಂದಿ ವಾನರೋತ್ತಮರು ಹುಟ್ಟಿರುವರು. ಅವರಲ್ಲಿ ಕೆಲವರು ಊರ್ಧ್ವದೃಷ್ಟಿ, ಕೃತಾಹಾರ, ಸುವ್ರತ, ವಿನತ ಮತ್ತು ಬುಧ ಎಂಬ ಸಂಕೇತಗಳನ್ನು ಹೊಂದಿದ್ದರು.

೧೮೧. ಮತ್ತೆ ಕೆಲವು ವಾನರರು ಪಾರಿಜಾತ, ಸುಜಾತ, ಹರಿದಾಸ, ಗುಣಾಕರ, ಮತ್ತು ಬಲಶಾಲಿಯಾದ ಕ್ಷೇಮಮೂರ್ತಿ ಎಂಬುವರು ಸೇರಿ ಆ ಹತ್ತು ಮಂದಿಯು ಪ್ರಸಿದ್ಧರಾಗಿರುವರು, ಅವರೆಲ್ಲರೂ ರಾಜರಾಗಿರುವರು.

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಬಲವಂತಃ ಸುದುಃಸಹಾಃ ।
ಅಶಕ್ಯಾಃ ಸಮರೇ ಜೇತುಂ ದೇವದಾನವಮಾನವೈಃ ॥ ೧೮೨ ॥

ಯಕ್ಷಭೂತಪಿಶಾಚೈಶ್ಚ ರಾಕ್ಷಸೈಃ ಸಭುಜಂಗಮೈಃ ।
ನಾಗ್ನಿಶಸ್ತ್ರವಿಷೈರನ್ಯೈರ್ಮೃತ್ಯುರೇಷಾಂ ವಿಧೀಯತೇ ॥ ೧೮೩ ॥

ಅಸಂಗಗತಯಃ ಸರ್ವೇ ಪೃಥಿವ್ಯಾಂ ವ್ಯೋಮ್ನಿ ಚೈವ ಹಿ ।
ಪಾತಾಲೇ ಚ ಜಲೇ ವಾಯೌ ಹ್ಯವಿನಾಶಿನ ಏವ ತೇ ॥ ೧೮೪ ॥

ದಶಕೋಟಿಸಹಸ್ರಾಣಿ ದಶಾರ್ಬುದಶತಾನಿ ಚ ।
ಮಹಾಪದ್ಮಸಹಸ್ರಾಣಿ ಮಹಾಪದ್ಮಶತಾನಿ ಚ ॥ ೧೮೫ ॥

ದಶಾರ್ಬುದಾನಿ ಕೋಟೀನಾಂ ಸಹಸ್ರಾಣಾಂ ಶತಂ ಶತಮ್ ।
ನಿಯುತಾನಾಂ ಸಹಸ್ರಾಣಿ ನಿಖರ್ವಾಣಾಂ ತಥೈವ ಚ ॥ ೧೮೬ ॥

---

೧೮೨. ಅವರ ಪುತ್ರ ಪ್ರಪೌತ್ರರು ಮಹಾಬಲಶಾಲಿಗಳೂ ಶತ್ರುಗಳಿಂದ ಸಹಿಸಲಾಗದ ಪ್ರತಾಪವುಳ್ಳವರೂ ಆಗಿರುವುದರಿಂದ ರಣರಂಗದಲ್ಲಿ ದೇವ-ದಾನವ-ಮಾನವರಿಂದ ಜಯಿಸಲು ಅಶಕ್ಯರಾಗಿರುವರು.

೧೮೩. ಹಾಗೆ ಈ ಬಲಿಷ್ಠರಿಗೆ ಯಕ್ಷ, ಭೂತ, ಪಿಶಾಚ, ರಾಕ್ಷಸ, ಸರ್ಪ, ಅಗ್ನಿ, ಶಸ್ತ್ರ, ವಿಷ, ಮುಂತಾದ ಮಾರಕ ವಸ್ತುಗಳಿಂದ ಮೃತ್ಯುವು ಇಲ್ಲ.

೧೮೪. ಇವರೆಲ್ಲರೂ ಪೃಥಿವೀ, ಆಕಾಶ, ಪಾತಾಳ, ಜಲ, ವಾಯು ಮುಂತಾದ ಸರ್ವ ಪ್ರದೇಶಗಳಲ್ಲಿಯೂ ಸಂಗ ಅಥವಾ ತಡೆಯಿಲ್ಲದ ಗಮನವುಳ್ಳವರಾಗಿರುವುದರಿಂದ ಆ ಎಲ್ಲ ಪ್ರದೇಶಗಳಲ್ಲಿಯೂ ನಾಶವಿಲ್ಲದವರಾಗಿರುವರು.

೧೮೫. ಸಾಮಾನ್ಯವಾಗಿ ಆ ವಾನರರ ತಂಡವನ್ನು ಎಣಿಸುವುದು ಸಾಧ್ಯವಿರಲಿಲ್ಲ, ಕೆಲವು ಕಡೆ ಹತ್ತು ಸಹಸ್ರಕೋಟಿ, ಮತ್ತೊಂದು ಕಡೆ ಸಹಸ್ರ ಅರ್ಬುದ, ಸಹಸ್ರಮಹಾಪದ್ಮ, ಇನ್ನೊಂದು ಕಡೆಯಲ್ಲಿ ನೂರಾರು ಮಹಾಪದ್ಮವೆಂಬ ಸಂಖ್ಯೆಯಿಂದ ಕೂಡಿದ್ದರು.

೧೮೬. ಹತ್ತು ಕೋಟಿ ಅರ್ಬುದ ಸಂಖ್ಯೆಯ ವಾನರರು ಒಂದುಕಡೆ, ಒಂದೊಂದು ಲಕ್ಷ ವಾನರರು ಮತ್ತೊಂದು ಕಡೆ, ಸಹಸ್ರ ನಿಯುತ ವಾನರರು ಇನ್ನೊಂದು ಕಡೆ, ನಿಖರ್ವ ಸಂಖ್ಯಾತರಾದ ವಾನರರು ಬೇರೊಂದು ಕಡೆ ಎಂಬ ಕ್ರಮದಿಂದ ವಾನರರ ಸಂಖ್ಯೆಯು ಗಣನಾತೀತವಾಗಿದ್ದಿತು.

ದಶಾರ್ಬುದಾನಿ ಕೋಟೀನಾಂ ಷಷ್ಟಿಕೋಟಿಸ್ತಥೈವ ಚ ।
ಅರ್ಬುದಾನಾಂ ಚ ಲಕ್ಷಂ ತು ಕೋಟೀಶತಮಥಾಪರಮ್ ॥ ೧೮೭ ॥

ದಶ ಪದ್ಮಾನಿ ಚಾನ್ಯಾನಿ ಮಹಾಪದ್ಮಾನಿ ವೈ ನವ ।
ಸಂಖ್ಯಾತಾನಿ ಕುಲೀನಾನಾಂ ವಾನರಾಣಾಂ ತರಸ್ವಿನಾಮ್ ॥ ೧೮೮ ॥

ಸರ್ವೇ ತೇಜಸ್ವಿನಃ ಶೂರಾಃ ಕಾಮರೂಪಾ ಮಹಾಬಲಾಃ ।
ದಿವ್ಯಾಭರಣವೇಷಾಶ್ಚ ಬ್ರಹ್ಮಣ್ಯಾ ಶ್ಚಾಹಿತಾಗ್ನಯಃ ॥ ೧೮೯ ॥

ಯಷ್ಟಾರಃ ಸರ್ವಯಜ್ಞಾನಾಂ ಸಹಸ್ರಶತದಕ್ಷಿಣಾಃ ।
ಮುಕುಟೈಃ ಕುಂಡಲೈರ್ಹಾರೈಃ ಕೇಯೂರೈಃ ಸಮಲಂಕೃತಾಃ॥ ೧೯೦ ॥

ವೇದವೇದಾಂಗವಿದ್ವಾಂಸೋ ನೀತಿಶಾಸ್ತ್ರವಿಚಕ್ಷಣಾಃ ।
ಅಸ್ತ್ರಾಣಾಂ ಮೋಚನೇ ಚಾಪಿ ತಥಾ ಸಂಹಾರಕರ್ಮಣಿ ॥ ೧೯೧ ॥

---

೧೮೭. ಹತ್ತುಕೋಟಿ ಅರ್ಬುದ, ಅರವತ್ತು ಕೋಟಿ, ಲಕ್ಷ ಅರ್ಬುದ, ಮತ್ತು ನೂರುಕೋಟಿ ಎಂಬ ಅಗಾಧ ಸಂಖ್ಯೆಯಿಂದ ಕೂಡಿದ ವಾನರರು ಅಲ್ಲಲ್ಲಿ ತಂಡಗಳಾಗಿದ್ದರು.

೧೮೮. ಮತ್ತೆ ಬೇರೆ ಹತ್ತು ಪದ್ಮಸಂಖ್ಯಾತ ವಾನರರು ಒಂಭತ್ತು ಮಹಾಪದ್ಮ ಸಂಖ್ಯಾತರಾದ ವಾನರರು ಸೇರಿ ತಂಡೋಪತಂಡಗಳಾಗಿದ್ದ ವೇಗಶಾಲಿಗಳಾದ, ಮತ್ತು ಸದ್ವಂಶ ಪ್ರಸೂತರಾದ ವಾನರರ ವ್ಯಕ್ತಿಗಳು ಅಗಾಧ ಸಂಖ್ಯೆಯಿಂದ ಎಣಿಸಲ್ಪಟ್ಟಿರುವರು.

೧೮೯. ಈ ಎಲ್ಲ ವಾನರರು ಅತಿ ತೇಜಸ್ವಿಗಳೂ, ಶೂರರೂ, ಕಾಮರೂಪಧಾರಿಗಳೂ, ಮಹಾಬಲವಂತರೂ, ದಿವ್ಯವಾದ ಆಭರಣವೇಷಗಳಿಂದ ಶೋಭಿತರೂ, ಬ್ರಹ್ಮವಸ್ತುಪ್ರಿಯರೂ ಮತ್ತು ಆಹಿತಾಗ್ನಿಗಳೂ ಆಗಿದ್ದರು.

೧೯೦. ಮತ್ತು ಶತ-ಸಹಸ್ರ ಎಂಬ ಕ್ರಮದಿಂದ ಲೆಕ್ಕವಿಲ್ಲದ ದಕ್ಷಿಣಾದಾನವುಳ್ಳ ಮಹಾಯಾಗಗಳನ್ನು ಆಚರಿಸಿದವರೂ ಕಿರೀಟ, ಕುಂಡಲ, ಹಾರ, ಕೇಯೂರ, ಮುಂತಾದ ದಿವ್ಯಾಭರಣಗಳಿಂದ ಭೂಷಿತರೂ ಆಗಿರುವರು.

೧೯೧. ಮತ್ತು ವೇದವೇದಾಂಗಗಳನ್ನು ಅರಿತವರೂ ನೀತಿಶಾಸ್ತ್ರ ಪಾರಂಗತರೂ ಮತ್ತು ಅಸ್ತ್ರಗಳ ಪ್ರಯೋಗ ಮತ್ತು ಉಪಸಂಹಾರ ವಿದ್ಯೆಯಲ್ಲಿ ನಿಷ್ಣಾತರೂ ಆಗಿರುವರು.

ದಿವ್ಯಮಂತ್ರಪುರಸ್ಕಾರಾ ದಿವ್ಯಮಂತ್ರಪುರಸ್ಕೃತಾಃ ।
ಸಮರ್ಥಾ ಬಲಿನಃ ಶೂರಾಃ ಸರ್ವಶಸ್ತ್ರಪ್ರಹಾರಿಣಃ ॥ ೧೯೨ ॥

ದಿವ್ಯರೂಪಧರಾಃ ಸೌಮ್ಯಾ ಜರಾಮರಣವರ್ಜಿತಾಃ ।
ಕುಲಾನಾಂ ಚ ಸಹಸ್ರಾಣಿ ದಶ ತೇಷಾಂ ಮಹಾತ್ಮನಾಮ್ ॥ ೧೯೩ ॥

ಚತುರ್ಷು ಮೇರುಪಾರ್ಶ್ವೇಷು ಹೇಮಕೂಟೇ ಹಿಮಾಹ್ವಯೇ ।
ನೀಲೇ ಶ್ವೇತನಗೇ ಚೈವ ನಿಷಧೇ ಗಂಧಮಾದನೇ ॥ ೧೯೪ ॥

ದ್ವೀಪೇಷು ಸಪ್ತಸು ತಥಾ ಯಾ ಗುಹಾ ಯೇ ಚ ಪರ್ವತಾಃ ।
ನಿಲಯಾಸ್ತೇಷು ತೇ ಪ್ರೋಕ್ತಾ ವಿಶ್ವಕರ್ಮಕೃತಾಃ ಸ್ವಯಮ್ ॥ ೧೯೫ ॥

ಪುರೈಶ್ಚ ವಿವಿಧಾಕಾರೈಃ ಪ್ರಾಕಾರೈಶ್ಚ ವಿಭೂಷಿತಾಃ ।
ಸರ್ವರ್ತುರಮಣೀಯಾಸ್ತೇ ಹ್ಯುದ್ಯಾನಾನಿ ಚ ಸರ್ವಶಃ ॥ ೧೯೬ ॥

---

೧೯೨. ಮತ್ತು ದಿವ್ಯವಾದ ಮಂತ್ರಸಾಧನದಲ್ಲಿ ಪುರಸ್ಕಾರ ಬುದ್ಧಿಯುಳ್ಳವರೂ ಹಾಗೆ ದಿವ್ಯ ಮಂತ್ರಗಳ ಮಹಾಸಿದ್ಧಿಯಿಂದ ಪುರಸ್ಕರಿಸಲ್ಪಟ್ಟವರೂ, ಸಮರ್ಥರೂ ಮಹಾಬಲವಂತರೂ, ಶೂರರೂ ಮತ್ತು ಸರ್ವಶಸ್ತ್ರಗಳ ಪ್ರಹಾರ ನಿಪುಣರೂ ಆಗಿರುವರು.

೧೯೩. ದಿವ್ಯ ರೂಪವನ್ನು ಧರಿಸಿರುವ, ಸೌಮ್ಯಾಕಾರವುಳ್ಳ, ಜರಾಮರಣ ವರ್ಜಿತರಾದ ಮತ್ತು ಮಹಾತ್ಮರೂ ಆದ ಆ ವಾನರರ ವಂಶಗಳು ಹತ್ತು ಸಹಸ್ರ ಸಂಖ್ಯೆಯಿಂದ ಇರುತ್ತವೆ.

೧೯೪. ಮೇರುಪರ್ವತದ ನಾಲ್ಕು ಪಾರ್ಶ್ವಗಳಲ್ಲಿರುವ ಹೇಮಕೂಟ, ಹಿಮವತ್ಪರ್ವತ, ನೀಲಗಿರಿ, ಶ್ವೇತಪರ್ವತ, ನಿಷಧಾಚಲ, ಮತ್ತು ಗಂಧಮಾದನ ಪರ್ವತಗಳಲ್ಲಿ ಆ ವಾನರರ ವಂಶಗಳು ವಾಸಮಾಡಿರುವರು.

೧೯೫. ಮತ್ತು ಸಪ್ತ ದ್ವೀಪಗಳಲ್ಲಿಯೂ ಮತ್ತು ಅಲ್ಲಲ್ಲಿರುವ ಎಲ್ಲ ಗುಹಾ, ಪರ್ವತ ಶ್ರೇಣಿಗಳಲ್ಲಿಯೂ ಆ ವಾನರರಿಗೆ ವಿಶ್ವಕರ್ಮ ದೇವನಿಂದ ಸ್ವಯಂರಚಿತಗಳಾದ ವಾಸಭವನಗಳು ಇರುತ್ತವೆ.

೧೯೬. ಆ ವಾನರ ನಿಲಯಗಳು ಅನೇಕ ವಿಧದ ನಗರ ರೂಪವಾಗಿಯೂ ಅನೇಕ ಪ್ರಾಕಾರಗಳಿಂದ ಭೂಷಿಸಲ್ಪಟ್ಟವುಗಳಾಗಿಯೂ ಸರ್ವ ಋತುಗಳಲ್ಲಿ ರಮಣೀಯಗಳಾಗಿಯೂ ಮತ್ತು ಸುತ್ತ ಉದ್ಯಾನವನಗಳಿಂದ ಶೋಭಿಸಲ್ಪಟ್ಟವುಗಳಾಗಿಯೂ ಇವೆ.

**ಗೃಹಭೂಮಿಷು ಶಯ್ಯಾಸು ಪುಷ್ಪಗಂಧಸುಖೋದಿತಾಃ ।**
**ಆಲೇಪನೈಶ್ಚ ವಿವಿಧೈರ್ದಿವ್ಯಭಕ್ತಿಕೃತೈಸ್ತಥಾ ॥ ೧೯೭ ॥**

**ಸರ್ವರತ್ನಸಮಾಕೀರ್ಣಾ ಮಾನಸೀಂ ಸಿದ್ಧಿಮಾಸ್ಥಿತಾಃ ।**
**ವಾನರಾ ವಾನರೀಭಿಸ್ತೇ ದಿವ್ಯಾಭರಣಭೂಷಿತಾಃ ॥ ೧೯೮ ॥**

**ಪಿಬಂತೋ ಮಧು ಮಾಧ್ವೀಕಂ ಸುಧಾಭಕ್ಷಾನುಮಿಶ್ರಿತಮ್ ।**
**ಕ್ರಿಯಾಮಯಾಃ ಸಮುದಿತಾ ದಿವಿ ದೇವಗಣಾ ಇವ ॥ ೧೯೯ ॥**

**ದೇವಗಂಧರ್ವಮುಖ್ಯಾನಾಂ ಪುತ್ರಾಸ್ತೇ ವೈ ಸುಖೇ ರತಾಃ ।**
**ಧಾರ್ಮಿಕಾಶ್ಚ ವರೋತ್ಸಿಕ್ತಾ ಯುದ್ಧಶೌಂಡಾ ಮಹಾಬಲಾಃ॥ ೨೦೦ ॥**

**ಅಕ್ಷುದ್ರಾಃ ಸರ್ವಸತ್ತ್ವಾನಾಂ ದೇವದ್ವಿಜಪರಾಯಣಾಃ ।**
**ಅಮ್ಲಾನಿನಃ ಸತ್ಯಸಂಧಾ ನಾನಾರ್ಥೇ ಬಹುಜಲ್ಪಿನಃ ॥ ೨೦೧ ॥**

---

೧೯೭. ಅವರು ಗೃಹಗಳ ಭೂಮಿಗಳಲ್ಲಿ ಶಯ್ಯಾ ಮಂಚಾದಿಗಳಲ್ಲಿ ಪುಷ್ಪ ಗಂಧ ಸೌರಭದಿಂದಲೂ ಅನೇಕ ಸುಗಂಧದ್ರವ್ಯಗಳಿಂದ ರಚಿತವಾದ ಗಂಧಾನುಲೇಪನಗಳಿಂದಲೂ ದಿವ್ಯ ಸೌಖ್ಯವನ್ನು ಅನುಭವಿಸುತ್ತಿದ್ದರು.

೧೯೮. ಮತ್ತು ಸಕಲ ವಿಧರತ್ನಗಳಿಂದ ಶೃಂಗರಿಸಲ್ಪಟ್ಟವರೂ ಮಾನಸಸಿದ್ಧಿಯನ್ನು ಹೊಂದಿರುವರೂ, ಮತ್ತು ದಿವ್ಯವಾದ ಆಭರಣಗಳಿಂದ ಅಲಂಕರಿಸಲ್ಪಟ್ಟವರೂ ಆದ ವಾನರರು ವಾನರರಮಣಿಯರೊಡನೆ ಸೌಖ್ಯವನ್ನು ಅನುಭವಿಸುತ್ತಲಿದ್ದರು.

೧೯೯. ಮತ್ತು ಅಮೃತ ಭಕ್ಷದಿಂದ ಮಿಶ್ರಿತವಾಗಿರುವ ಮಾಧ್ವೀಕ (ಜೇನು) ವನ್ನು ಪಾನಮಾಡುತ್ತ ದ್ಯುಲೋಕದಲ್ಲಿ ದೇವಸಮಾಜಗಳಂತೆ ವೀರಕರ್ಮಪ್ರಧಾನರಾಗಿದ್ದರು.

೨೦೦. ಅವರು ದೇವಗಂಧರ್ವರ ವಂಶದಲ್ಲಿ ಪುತ್ರರಾಗಿ ಹುಟ್ಟಿ ಧಾರ್ಮಿಕತೆ, ವರಲಾಭದಿಂದ ಗರ್ವ, ಯುದ್ಧದಲ್ಲಿ ಕುಶಲತೆ, ಮತ್ತು ಅಪಾರವಾದ ಬಲಗಳೆಂಬ ಸದ್ಗುಣಗಳಿಂದ ಮೆರೆಯುತ್ತಲಿದ್ದರು.

೨೦೧. ಮತ್ತು ಆ ವಾನರರು ಸರ್ವಪ್ರಾಣಿಗಳಲ್ಲಿ ಉದಾರ ಚಿತ್ತವುಳ್ಳವರೂ ದೇವ-ದ್ವಿಜರಲ್ಲಿ ಭಕ್ತಿಶ್ರದ್ಧೆಯುಳ್ಳವರೂ, ಕಾಯಿಕ ವಾಚಿಕವಾದ ಆಯಾಸವಿಲ್ಲದವರೂ ಸತ್ಯಸಂಧರೂ ಮತ್ತು ಅರ್ಥಾನುಸಾರವಾಗಿ ಬಹು ವಾಗ್ಮಿಗಳೂ ಆಗಿದ್ದರು.

ಮಿತಭಾಷಾಃ ಕ್ಷಮಾವಂತೋ ಹ್ಯಾಚಾರಪರಿನಿಷ್ಠಿತಾಃ ।
ವನಾಲಂಕಾರಭೂತಾ ಹಿ ಸೃಷ್ಟಾ ವೈ ಬ್ರಹ್ಮಣಾ ಸ್ವಯಮ್ ॥ ೨೦೨ ॥

ಭಕ್ತ್ಯಾ ನಿಮಿತ್ತಂ ಲೋಕೇಷು ರಾಮಸ್ಯಾರ್ಥೇ ಗುಣಾಕರಃ ।
ಕಪೀನಾಮವತಾರೋಽಯಂ ಸರ್ವಪಾಪವಿನಾಶನಃ ॥ ೨೦೩ ॥

ಧನ್ಯಃ ಪುಣ್ಯೋ ಯಶಸ್ಯಶ್ಚ ರಮಣೀಯಃ ಸುಖಾವಹಃ ।
ತದೇವ ಕೀರ್ತಯಿಷ್ಯಾಮಿ ತಚ್ಛೃಣುಧ್ವಮತಂದ್ರಿತಾಃ ॥ ೨೦೪ ॥

ಊರ್ಧ್ವದೃಷ್ಟೇಶ್ಚ ತನಯೋ ವ್ಯಾಘ್ರೋ ನಾಮಾಭವದ್ಬಲೀ ।
ವ್ಯಾಘ್ರಸ್ಯ ಭ್ರಾತರಃ ಪಂಚ ಸ್ವಸಾರಶ್ಚ ತಥಾಸ್ಯ ವೈ ॥ ೨೦೫ ॥

ತಾಂಸ್ತಥಾ ಸ್ವಾನುರೂಪೇಷು ವಾನರೇಷು ಕೃತಾತ್ಮಸು ।
ಪ್ರತಿಪಾದಿತಾ ಸ್ವಯಂ ಭ್ರಾತ್ರಾ ಭ್ರಾತೃದಾರಾಸ್ತಥೈವ ॥ ೨೦೬ ॥

---

೨೦೨. ಹಾಗೆ ಮಿತಭಾಷಿಗಳೂ, ಕ್ಷಮಾಗುಣವಂತರೂ, ಆಚಾರಸಂಪನ್ನರೂ, ಆದ ವಾನರರು ಬ್ರಹ್ಮನಿಂದ ವನಗಳಿಗೆ ಅಲಂಕಾರ ಪ್ರಾಯರಾಗಿ ಸೃಷ್ಟಿಸಲ್ಪಟ್ಟಿರುವರು.

೨೦೩. ಮತ್ತು ರಾಮಭಕ್ತಿಯನ್ನು ತೋರ್ಪಡಿಸುವ ನಿಮಿತ್ತದಿಂದ ಲೋಕಗಳಲ್ಲಿ ಸದ್ಗುಣಗಳಿಗೆ ನಿಧಿಯಂತಿರುವ ಈ ಕಪಿಗಳ ಅವತಾರವು ಭಕ್ತರ ಸಮಸ್ತ ಪಾಪಗಳನ್ನು ನಾಶಮಾಡಲೋಸ್ಕರ ಸಂಭವಿಸಿರುವುದು

೨೦೪. ಈ ಕಪಿಗಳ ಅವತಾರ ಚರಿತ್ರವು ಧನ್ಯವೂ, ಯಶಸ್ಕರವೂ, ಪವಿತ್ರವೂ, ರಮಣೀಯವೂ ಸುಖಕರವೂ ಆಗಿರುವುದು. ಅದನ್ನು ನಿಮಗೆ ಕೀರ್ತನಮಾಡುತ್ತೇನೆ. ಆಲಸ್ಯವಿಲ್ಲದಂತೆ ಅದನ್ನು ಶ್ರವಣಮಾಡಿರಿ.

೨೦೫. ಊರ್ಧ್ವದೃಷ್ಟಿ ಎಂಬುವನಿಗೆ ಬಲಿಷ್ಠನಾದ ವ್ಯಾಘ್ರನೆಂಬ ಪುತ್ರನಿದ್ದನು. ಹಾಗೆಯೇ ವ್ಯಾಘ್ರನಿಗೆ ಐದುಮಂದಿ ಸಹೋದರರೂ ಹಾಗೆಯೇ ಐದುಮಂದಿ ಭಗಿನಿಯರೂ ಇದ್ದರು.

೨೦೬. ಆ ಭಗಿನಿಯರು ತನಗೆ ಅನುರೂಪರಾಗಿಯೂ, ಸಂಸ್ಕೃತ ಚಿತ್ತರಾಗಿಯೂ ಇರುವ ವಾನರರಲ್ಲಿ ಭ್ರಾತೃವಾದ ವ್ಯಾಘ್ರನಿಂದ ಪ್ರದಾನಮಾಡಲ್ಪಟ್ಟರು. ಹಾಗೆಯೇ ಭ್ರಾತೃವಿನ ಪತ್ನಿಯೂ ಪತಿಗೆ ಅನುರೂಪಳಾಗಿದ್ದಳು.

ವ್ಯಾಘ್ರಸ್ಯ ತು ಸುತೋ ಜಜ್ಞೇ ಶರಭೋ ಲೋಕವಿಶ್ರುತಃ ।
ಶರಭಸ್ಯಾಪಿ ವಿದ್ವಾಂಸೋ ಭ್ರಾತರೋ ವೀರ್ಯಸಮ್ಮತಾಃ ॥ ೨೦೭ ॥

ರಾಜಾನೋ ವಾನರಾಣಾಂ ಚ ಸರ್ವಧರ್ಮಪ್ರತಿಷ್ಠಿತಾಃ ।
ಶರಭಸ್ಯ ಸುತೋ ಧೀಮಾನ್ ಶುಕೋ ನಾಮ ಮಹಾಬಲಃ ॥ ೨೦೮ ॥

ತಸ್ಯಾಪಿ ಪುತ್ರೋ ಬಲವಾನ್ ವ್ಯಾಘ್ರೀ ಜಠರಸಂಭವಃ ।
ಸಮ್ಮತಃ ಸರ್ವಶೂರಾಣಾಂ ಚಕ್ರವರ್ತೀ ದುರಾಸದಃ ॥ ೨೦೯ ॥

ಋಕ್ಷೋ ನಾಮ ಮಹಾತೇಜಾಃ ಸರ್ವವಾನರಯೂಥಪಃ ।
ಹಂತಾ ಸದೈವ ಶತ್ರೂಣಾಂ ಸರ್ವಾಸ್ತ್ರವಿಧಿಪಾರಗಃ ॥ ೨೧೦ ॥

ತಸ್ಮೈ ತಾದೃಗ್ವಿಶಿಷ್ಟಾಯ ಸುತಾಂ ಗುಣಗಣೈರ್ಯುತಾಮ್ ।
ಪ್ರಜಾಪತಿರುಪಾದಾಯ ಕನ್ಯಾಂ ಹೇಮವಿಭೂಷಿತಾಮ್ ॥ ೨೧೧ ॥

---

೨೦೭. ವ್ಯಾಘ್ರನಿಗೆ ಲೋಕಗಳಲ್ಲಿ ಪ್ರಖ್ಯಾತಿಯನ್ನು ಗಳಿಸಿರುವ ಶರಭನೆಂಬ ಪುತ್ರನು ಹುಟ್ಟಿದನು. ಶರಭನಿಗೆ ಅನೇಕ ಭ್ರಾತೃಗಳು ಜ್ಞಾನಿಗಳಾಗಿಯೂ ವೀರ್ಯದಲ್ಲಿ ನಿಸ್ಸೀಮರಾಗಿಯೂ ಇದ್ದರು.

೨೦೮. ಮತ್ತು ಅವರು ವಾನರ ರಾಜರೆನಿಸಿಕೊಂಡವರಾಗಿ ಮತ್ತು ಸರ್ವ ಧರ್ಮಗಳನ್ನು ಪ್ರತಿಷ್ಠಿಗೊಳಿಸಿದವರಾಗಿ ಇದ್ದರು. ಶರಭನಿಗೆ ಶುಕ ಎಂಬ ಹೆಸರುಳ್ಳ ಬಲಿಷ್ಠನಾದ ಪುತ್ರನು ಇದ್ದನು.

೨೦೯. ಶುಕ ಎಂಬುವನಿಗೆ ವ್ಯಾಘ್ರಾಂಗನೆಯ ಉದರದಲ್ಲಿ ಜನಿಸಿದವನೂ, ಸಮಸ್ತ ಶೂರರ ಮೆಚ್ಚಿಗೆಯನ್ನು ಪಡೆದವನೂ, ಚಕ್ರವರ್ತಿಯೂ ಮತ್ತು ಶತ್ರುಗಳಿಗೆ ಎದುರಿಸಲು ಅಶಕ್ಯನಾದವನೂ ಆದ ಬಲಿಷ್ಠ ಪುತ್ರನಿದ್ದನು.

೨೧೦. ಅವನು ಋಕ್ಷ ಎಂಬ ಹೆಸರಿನಿಂದ ಪ್ರಸಿದ್ಧನೂ ಮಹಾತೇಜಸ್ವಿಯೂ ವಾನರರ ತಂಡಗಳಿಗೆ ನಾಯಕನೂ ಸರ್ವಕಾಲದಲ್ಲಿ ಶತ್ರುಗಳನ್ನು ಮರ್ದಿಸುವವನೂ ಮತ್ತು ಸರ್ವ ಅಸ್ತ್ರ ವಿದ್ಯೆಯ ಪಾರಂಗತನೂ ಆಗಿದ್ದನು.

೨೧೧. ವಿಶಿಷ್ಟಗುಣಗಳಿಂದ ಕೂಡಿಕೊಂಡಿರುವ ಋಕ್ಷರಾಜನಿಗೆ ಪ್ರಜಾಪತಿಯು ಅನೇಕಗುಣಗಳಿಂದ ಕೂಡಿರುವ ಮತ್ತು ಸುವರ್ಣಾಲಂಕಾರ ಭೂಷಿತಳಾದ ಕನ್ಯೆಯನ್ನು ಕೊಟ್ಟನು.

ವಿರಜೋ ವಿರಜಾಂ ತಸ್ಮೈ ಪ್ರತ್ಯಪಾದಯದಂಜಸಾ ।
ಪಾಣಿಂ ಜಗ್ರಾಹ ತಸ್ಯಾಸ್ತು ಋಕ್ಷೋ ವಾನರಯೂಥಪಃ ॥ ೨೧೨ ॥

ದರ್ಶನೀಯಾನವದ್ಯಾಂಗೀ ಸಾ ಕನ್ಯಾ ಚಾರುಹಾಸಿನೀ ।
ಚಕಮೇ ತಾಂ ಮಹೇಂದ್ರಸ್ತು ದೃಷ್ಟ್ವಾ ವೈ ಪ್ರಿಯದರ್ಶನಾಮ್ ॥ ೨೧೩ ॥

ತೇನ ತಸ್ಯಾಂ ಸುತೋ ಜಾತೋ ವಾಲೀ ವಿಕ್ರಮಪೌರುಷಃ ।
ವಿರಜಾಯಾಂ ಮಹೇಂದ್ರೇಣ ಮಹೇಂದ್ರಸಮವಿಕ್ರಮಃ ॥ ೨೧೪ ॥

ತಥಾ ಸ್ವಾಂಶೋ ಭಾನುನಾ ವೈ ತಸ್ಯಾಮೇವ ಯಥಾವಿಧಿ ।
ರಹಸ್ಯುತ್ಪಾದಿತಃ ಪುತ್ರಃ ಸುಗ್ರೀವೋ ಹರಿಯೂಥಪಃ ॥ ೨೧೫ ॥

ಋಕ್ಷೋ ದೃಷ್ಟ್ವಾ ತು ತನಯೌ ಬಲರೂಪಶ್ರಿಯಾ ಯುತೌ ।
ಹರ್ಷಂ ಚಕ್ರೇ ಸುವಿಪುಲಂ ಸರ್ವವಾನರಯೂಥಪಃ ॥ ೨೧೬ ॥

---

೨೧೨. ವಿರಜ ಪ್ರಜಾಪತಿಯು ತನ್ನ ವಿರಜಾ ಎಂಬ ಕನ್ಯೆಯನ್ನು ಯಥಾನುರೂಪವಾಗಿ ಪ್ರದಾನಮಾಡಿದನು. ವಾನರಯೂಥಾಧಿಪತಿಯಾದ ಋಕ್ಷನು ಆಕೆಯನ್ನು ಪಾಣಿಗ್ರಹಣಮಾಡಿಕೊಂಡನು.

೨೧೩. ಆ ಕನ್ಯೆಯು ನಿರ್ದುಷ್ಟಗಳಾದ ಅವಯಗಳಿಂದ ಶೋಭಿತಳೂ. ಮಂದಹಾಸದಿಂದ ರಂಜಿತಳೂ ಆಗಿ ದರ್ಶನೀಯಳಾಗಿದ್ದಳು. ಪ್ರಿಯವಾದ ದರ್ಶನವುಳ್ಳ ಆ ಕನ್ಯೆಯನ್ನು ನೋಡಿ ಇಂದ್ರನು ಅವಳನ್ನು ಕಾಮಿಸಿದನು.

೨೧೪. ಆಗ ಆ ವಿರಜೆಯಲ್ಲಿ ಮಹೇಂದ್ರನಿಂದ ಮಹೇಂದ್ರನಿಗೆ ಸಮಾನವಾದ ವಿಕ್ರಮವುಳ್ಳವನೂ ಅಗಾಧವಾದ ಪೌರುಷವುಳ್ಳವನೂ ಆದ ವಾಲಿಯೆಂಬ ಪುತ್ರನು ಜನಿಸಿದನು.

೨೧೫. ಹಾಗೆ ಸೂರ್ಯದೇವನಿಂದ ಆ ವಿರಜೆಯಲ್ಲಿ ಕಾಮವಿಧಿಯಿಂದ ಏಕಾಂತದಲ್ಲಿ ಕಪಿಯೂಥನಾಯಕನಾದ ಸುಗ್ರೀವನೆಂಬ, ತನ್ನ ಮಹಿಮಾಂಶದಿಂದ ಕೂಡಿದ ಪುತ್ರನು ಸೃಷ್ಟಿಸಲ್ಪಟ್ಟನು.

೨೧೬. ಸಕಲವಾನರ ಸೇನಾನಾಯಕನಾದ ಋಕ್ಷರಾಜನು ಬಲ-ರೂಪ-ಕಾಂತಿಗಳಿಂದ ಕೂಡಿರುವ ಆ ಇಬ್ಬರು ಪುತ್ರರನ್ನು ನೋಡಿ ಅತಿಶಯವಾದ ಸಂತೋಷವನ್ನು ಅನುಭವಿಸಿದನು.

ಸೋಽಭ್ಯಷಿಂಚತ್ಸುತಂ ಜ್ಯೇಷ್ಠಂ ವಾಲಿನಂ ಹೇಮಮಾಲಿನಮ್ ।
ಅಭಿಷಿಕ್ತಸ್ತತೋ ವಾಲೀ ಸುಗ್ರೀವಾನುಗತೋ ಬಲೀ ॥ ೨೧೭ ॥

ಕಾರಯಾಮಾಸ ರಾಜ್ಯಂ ಚ ದಿವಿ ದೇವೇಶ್ವರೋ ಯಥಾ ।
ಸುಷೇಣಸ್ಯ ಸುತಾ ಚಾಪಿ ಭಾರ್ಯಾ ತಸ್ಯ ಮಹಾತ್ಮನಃ ॥ ೨೧೮ ॥

ತಾರಾ ನಾಮ ಮಹಾಪ್ರಾಜ್ಞಾ ತಾರಾಧಿಪನಿಭಾನನಾ ।
ಸುಷುವೇ ಸಾಪಿ ತನಯಮಂಗದಂ ಕನಕಾಂಗದಮ್ ॥ ೨೧೯ ॥

ಅಂಗದಸ್ಯಾಪಿ ತನಯೋ ಜಾತೋ ಭೀಮಪರಾಕ್ರಮಃ ।
ಮೈಂದಸ್ಯ ಜ್ಯೇಷ್ಠಕನ್ಯಾಯಾಂ ಧ್ರುವೋ ನಾಮ ಮಹಾಯಶಾಃ ॥ ೨೨೦ ॥

ಸುಗ್ರೀವಸ್ಯ ರುಮಾ-ಭಾರ್ಯಾ ಪನಸಸ್ಯ ಸುತಾ ಶುಭಾ ।
ತಸ್ಯಾಪಿ ಚ ಸುತಾ ಜಾತಾಸ್ತ್ರಯಃ ಪರಮಕೀರ್ತಯಃ ॥ ೨೨೧ ॥

---

೨೧೭. ಆಗ ತಂದೆಯು ಸುವರ್ಣಮಾಲಿಕೆಯಿಂದ ಅಲಂಕರಿಸಲ್ಪಟ್ಟ ವಾಲಿಯೆಂಬ ಜ್ಯೇಷ್ಠಪುತ್ರನನ್ನು ಯೌವರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದನು, ತರುವಾಯ ಪಟ್ಟಾಭಿಷಿಕ್ತನಾದ ಬಲಿಷ್ಠನಾದ ವಾಲಿಯು ಸುಗ್ರೀವನಿಂದ ಸೇವಿಸಲ್ಪಟ್ಟಿದ್ದನು.

೨೧೮. ಮತ್ತು ಸುಗ್ರೀವನ ಸಹಾಯಶಕ್ತಿಯಿಂದ ಸ್ವರ್ಲೋಕದಲ್ಲಿ ದೇವೇಂದ್ರನು ರಾಜ್ಯವಾಳಿದಂತೆ ವಾಲಿಯು ರಾಜ್ಯಭಾರಮಾಡಿದನು ಸುಷೇಣನ ಮಗಳು ಆ ಮಹಾತ್ಮನಿಗೆ ಭಾರ್ಯೆಯಾಗಿದ್ದಳು.

೨೧೯. ಆ ವಾಲಿಪತ್ನಿಯು ಚಂದ್ರನಂತೆ ಸುಂದರವಾದ ಮುಖವುಳ್ಳವಳೂ, ಮಹಾಪ್ರಜ್ಞೆಯಿಂದ ಕೂಡಿದವಳೂ, ಮತ್ತು ತಾರಾ ಎಂಬ ಹೆಸರನ್ನು ಧರಿಸಿದವಳೂ ಆಗಿದ್ದಳು. ಅವಳು ಸುವರ್ಣದ ಭುಜಕೀರ್ತಿಗಳಿಂದ ಅಲಂಕೃತನಾದ ಅಂಗದನೆಂಬ ಪುತ್ರನನ್ನು ಪ್ರಸವಿಸಿದಳು.

೨೨೦, ಅಂಗದನಿಗೆ ಭಾರ್ಯೆಯಾದ ಮೈಂದನ ಜ್ಯೇಷ್ಠಕನ್ಯೆಯಲ್ಲಿ ಮಹಾಕೀರ್ತಿಶಾಲಿಯೂ ಮಹಾ ಭಯಂಕರಪ್ರತಾಪವುಳ್ಳವನೂ ಆದ ಧ್ರುವ ಎಂಬ ಕುಮಾರನು ಜನಿಸಿದನು.

೨೨೧. ಪನಸನ ಮಂಗಳಕರ ಪುತ್ರಿಯಾದ ರುಮಾ ಎಂಬುವಳು ಸುಗ್ರೀವನ

ತೇಷಾಂ ದಾರಾಂಸ್ತಥಾಸಾದ್ಯ ಸುಸ್ವರೂಪಾನ್ ಬಲೀ ತತಃ ।
ವಾಲಿನಃ ಪಾರ್ಶ್ವತೋಽತಿಷ್ಠತ್ ಸುಗ್ರೀವಃ ಸಹ ವಾನರೈಃ ॥ ೨೨೨ ॥

ಬಹೂನ್ ವರ್ಷಗಣಾನುಗ್ರೋ ಭ್ರಾತ್ರಾ ಸಹ ಯಥಾಮರಃ ।
ಕೇಸರೀ ಕುಂಜರಸ್ಯಾಥ ಸುತಾಂ ಭಾರ್ಯಾಮವಿಂದತ ॥ ೨೨೩ ॥

ಅಂಜನಾ ನಾಮ ಸುಭಗಾ ಗತ್ವಾ ಪುಂಸವನೇ ಶುಚಿಃ ।
ಪರ್ಯುಪಾಸ್ತೇ ಚ ತಾಂ ವಾಯುರ್ಯೌವನಾದೇವ ಗರ್ವಿತಾಮ್ ॥ ೨೨೪ ॥

ತಸ್ಯಾಂ ಜಾತಸ್ತು ಹನುಮಾನ್ ವಾಯುನಾ ಜಗದಾಯುನಾ ।
ಯೇ ಹ್ಯನ್ಯೇ ಕೇಸರಿಸುತಾ ವಿಖ್ಯಾತಾ ದಿವಿ ಚೇಹ ವೈ ॥ ೨೨೫ ॥

ಜ್ಯೇಷ್ಠಸ್ತು ಹನುಮಾಂಸ್ತೇಷಾಂ ಮತಿಮಾಂಸ್ತು ತತಃ ಸ್ಮೃತಃ ।
ಶ್ರುತಿಮಾನ್ ಕೇತುಮಾಂಶ್ಚೈವ ಮತಿಮಾನ್ ಧೃತಿಮಾನಪಿ ॥ ೨೨೬ ॥

---

ಪತ್ನಿಯಾಗಿದ್ದಳು. ಆ ಪನಸನಿಗೆ ಪ್ರಶಸ್ತವಾದ ಕೀರ್ತಿಸಂಪನ್ನರಾದ ಮೂರು ಮಂದಿ ಪುತ್ರರು ಹುಟ್ಟಿದರು.

೨೨೨. ತರುವಾಯ ಬಲಿಷ್ಠನಾದ ಸುಗ್ರೀವನು ಸುಂದರಿಯರಾದ ಅವರ ಪತ್ನಿಯರನ್ನು ಅಪಹರಿಸಿ ವಾಲಿಯ ಪಾರ್ಶ್ವದಲ್ಲಿ ಇತರ ಅನೇಕ ವಾನರರೊಂದಿಗೆ ಇದ್ದನು.

೨೨೩. ಉಗ್ರಪ್ರತಾಪನಾದ ಸುಗ್ರೀವನು ಭ್ರಾತೃವಿನೊಡನೆ ದೇವೇಂದ್ರನಂತೆ ಅನೇಕ ವರ್ಷಗಳವರೆಗೆ ಇದ್ದನು. ಅನಂತರದಲ್ಲಿ ಕೇಸರೀ ಎಂಬುವನು ಕುಂಜರನ ಮಗಳನ್ನು ಭಾರ್ಯೆಯನ್ನಾಗಿ ಹೊಂದಿದನು.

೨೨೪. ಕೆಸರಿಯ ಭಾರ್ಯೆಯು ಅಂಜನಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಳು. ಶುಚಿಯಾದ ವಾಯುದೇವನು ಸುಂದರಿಯೂ ತಾರುಣ್ಯ ಮದದಿಂದ ಗರ್ವಿತಳೂ ಆದ ಆಕೆಯನ್ನು ಪುತ್ರೋತ್ಪತ್ತಿಗೋಸ್ಕರ ಸೇವಿಸುತ್ತಿದ್ದನು.

೨೨೫. ಆಗ ಅವಳಲ್ಲಿ ಜಗತ್ತಿಗೆ ಪ್ರಾಣದಾತನಾದ ವಾಯುದೇವನಿಂದ ಹನುಮಂತನು ಜನಿಸಿದನು. ಇತರ ಅನೇಕ ಕೇಸರಿಪುತ್ರರು ದ್ಯುಲೋಕದಲ್ಲಿಯೂ ಈ ಲೋಕದಲ್ಲಿಯೂ ಪ್ರಸಿದ್ಧರಾಗಿರುವರು.

೨೨೬. ಅವರಲ್ಲಿ ಜ್ಯೇಷ್ಠ ಪುತ್ರನಾದ ಹನುಮಂತನು ಬಹಳ ಬುದ್ಧಿಶಾಲಿಯೆಂದು ಸ್ಮರಿಸಲ್ಪಟ್ಟಿರುವನು. ಮತ್ತು ವೇದಶಾಸ್ತ್ರ ಪರಿಜ್ಞಾನ, ಪ್ರಜ್ಞಾ, ಮನನ ಶಕ್ತಿ, ಮತ್ತು ಧೈರ್ಯವೆಂಬ ಉತ್ತಮಗುಣ ಪರಿಪೂರ್ಣನಾಗಿರುವನು.

10

ಹನುಮದ್ಭ್ರಾತರೋ ಯೇ ವೈ ತೇ ದಾರೈಃ ಸುಪ್ರತಿಷ್ಠಿತಾಃ ।
ಸ್ವಾನುರೂಪೈಃ ಸುತಾಃ ಪಿತ್ರಾ ಪುತ್ರಪೌತ್ರಸಮನ್ವಿತಾಃ ॥ ೨೨೭ ॥

ಬ್ರಹ್ಮಚಾರೀ ಚ ಹನುಮಾನ್ ನಾಸೌ ದಾರೈಶ್ಚ ಯೋಜಿತಃ ।
ಸರ್ವಲೋಕಾನಪಿ ರಣೇ ಯೋ ಯೋದ್ಧುಂ ಚ ಸಮುತ್ಸಹೇತ್
॥ ೨೨೮ ॥

ಜವೇ ಜವೇ ಚ ವಿತತೇ ವೈನತೇಯ ಇವಾಪರಃ ।
ಅಗ್ನಿಪುತ್ರಶ್ಚ ಬಲವಾನ್ನಲಃ ಪರಮದುರ್ಜಯಃ ॥ ೨೨೯ ॥

ಕ್ಷೇತ್ರೇ ಕನಕಬಿಂದೋಸ್ತು ಜಾತೋ ವಾನರಪುಂಗವಃ ।
ತಥಾ ತ್ವನ್ಯೇ ಮಹಾಭಾಗಾ ಬಲವಂತಶ್ಚ ವಾನರಾಃ ॥ ೨೩೦ ॥

ಸಪ್ರಧಾನಾಸ್ತು ವಿಜ್ಞೇಯಾ ಹರಿಯೂಥಪಯೂಥಪಾಃ ।
ತಾರಶ್ಚ ಕುಸುಮಶ್ಚೈವ ಪನಸೋ ಗಂಧಮಾದನಃ ॥ ೨೩೧ ॥

---

೨೨೭. ಹನುಮಂತನ ಸಹೋದರರೆಲ್ಲರೂ ತಂದೆಯಿಂದ ಅನುರೂಪರಾದ ಕನ್ಯೆಯರನ್ನು ತಂದು ವಿವಾಹಿತರಾಗಿ ಪ್ರತಿಷ್ಠಿತರಾದವರು. ಅವರಿಂದ ಅನೇಕ ಪುತ್ರ ಪೌತ್ರಾದಿ ಸಂತತಿಯು ವೃದ್ಧಿ ಹೊಂದಿತು.

೨೨೮. ಬ್ರಹ್ಮಚರ್ಯ ಧರ್ಮದಲ್ಲಿ ನಿರತನಾದ ಹನುಮಂತನು ಮಾತ್ರ ಪಾಣಿ ಗ್ರಹಣದಿಂದ ಪತ್ನೀವಂತನಾಗಲಿಲ್ಲ. ಅವನು ಅಪ್ರತಿಹತವಾದ ಬಲ ಸಂಪನ್ನನಾಗಿ ತ್ರೈಲೋಕ್ಯದ ಸಂಗಡ ಯುದ್ಧ ಮಾಡುವಷ್ಟು ಉತ್ಸಾಹಶಾಲಿಯಾಗಿದ್ದನು.

೨೨೯. ಉತ್ತಮವಾದ ವೇಗದಿಂದ ಗಮನಮಾಡುವ ವಿಷಯದಲ್ಲಿ ಮತ್ತೊಬ್ಬ ಗರುಡನಂತೆ ಇದ್ದನು. ಬಲಶಾಲಿಯಾದ ಮತ್ತು ಅತ್ಯಂತ ದುರ್ಜಯನಾದ ನಲ ಎಂಬುವನು ಅಗ್ನಿಯ ಪುತ್ರನಾಗಿ ಜನಿಸಿದನು.

೨೩೦. ಅವನು ಕನಕ ಬಿಂದುವಿನ ಭಾರ್ಯೆಯಲ್ಲಿ ಹುಟ್ಟಿದ ವಾನರ ಶ್ರೇಷ್ಠ ನಾಗಿರುವನು. ಹಾಗೆಯೇ ಮಹಾಶಯರೂ ಬಲಶಾಲಿಗಳೂ ಆದ ಇತರ ವಾನರೋ ತ್ತಮರು ವಾನರ ಶ್ರೇಣಿಯಲ್ಲಿ ಪ್ರಸಿದ್ಧರಾಗಿರುವರು.

೨೩೧. ಹಾಗೆ ಪ್ರಧಾನರಾಗಿರುವ ಕಪಿ ಸೇನಾನಾಯಕರನ್ನು ಮುಖ್ಯವಾಗಿ ತಿಳಿಯಬೇಕು. ತಾರ, ಕುಸುಮ, ಪನಸ ಮತ್ತು ಗಂಧಮಾದನ ಎಂಬುವರು ಕಪಿ ಸೇನಾನಾಯಕರಲ್ಲಿ ಕೆಲವರು ಪ್ರಧಾನರಾಗಿರುವರು.

ರೂಪಶ್ರೀರ್ವಿಭವಶ್ಚೈವ ಗವಯೋ ವಿಕಟಃ ಸರಃ ।
ಸುಷೇಣಃ ಸಧನುಶ್ಚೈವ ಸುಬಂಧುಃ ಶತದುಂದುಭಿಃ ॥ ೨೩೨ ॥

ವಿಕಚಃ ಕಪಿಲೋ ರೌದ್ರಃ ಪಾರಿಯಾತ್ರಃ ಪ್ರಭಂಜನಃ ।
ಕುಂಜರಃ ಶರಭೋ ದಂಷ್ಟ್ರೀ ಕಾಲಮೂರ್ತಿರ್ಮಹಾಸುಖಃ ॥ ೨೩೩ ॥

ನಂದಃ ಕಂದರಸೇನಶ್ಚ ನಲೋ ವಾರುಣಿರೇವ ಚ ।
ಚಿರವಃ ಕುರವಸ್ತಾಮ್ರಶ್ಚಿತ್ರಯೋಧೀ ರಥೀತರಃ ॥ ೨೩೪ ॥

ಭೀಮಃ ಶತಬಲಿಶ್ಚೈವ ಕಾಲಚಕ್ರೋಽನಲೋ ನಲಃ ।
ಯಕ್ಷಾಸ್ಯೋ ಗಹನಶ್ಚೈವ ಧೂಮ್ರಃ ಪಂಚರಥಸ್ತಥಾ ॥ ೨೩೫ ॥

ಪಾರಿಜಾತೋ ಮಹಾದೀಪ್ತಃ ಸುತಪಾ ಬಲಸಾಗರಃ ।
ಶ್ರುತಾಯುರ್ವಿಜಯಾಕಾಂಕ್ಷೀ ಗುರುಸೇವೀ ಯಥಾರ್ಥಕಃ ॥ ೨೩೬ ॥

---

೨೩೨. ಮತ್ತು ರೂಪಶ್ರೀ, ವಿಭವ, ಗವಯ, ವಿಕಟ, ಸರ, ಸುಷೇಣ, ಸಧನು, ಸುಬಂಧು ಮತ್ತು ಶತದುಂದುಭಿ ಎಂಬುವರು ಮತ್ತೆ ಕೆಲವು ಪ್ರಧಾನರಾದ ಕಪಿ ಸೇನಾನಿಗಳಾಗಿರುವರು.

೨೩೩. ವಿಕಚ, ಕಪಿಲ, ರೌದ್ರ, ಪಾರಿಯಾತ್ರ, ಪ್ರಭಂಜನ, ಕುಂಜರ, ಶರಭ, ದಂಷ್ಟ್ರೀ, ಕಾಲಮೂರ್ತಿ, ಮತ್ತು ಮಹಾಸುಖ ಎಂಬ ನಾಮಾಂಕಿತರಾಗಿ ಕೆಲವರು ಕಪಿ ಪುಂಗವರಿರುವರು.

೨೩೪. ಹಾಗು ನಂದ, ಕಂದರಸೇನ, ನಲ, ವಾರುಣಿ, ಚಿರವ, ಕುರವ, ತಾಮ್ರ, ಚಿತ್ರಯೋಧಿ, ಮತ್ತು ರಥೀತರ ಎಂಬ ಕಪಿಸೇನಾನಿಗಳು ಪ್ರಧಾನರಾಗಿರುವರು.

೨೩೫. ಭೀಮ, ಶತಬಲಿ, ಕಾಲಚಕ್ರ, ಅನಲ, ನಲ, ಯಕ್ಷಾಸ್ಯ, ಗಹನ, ಧೂಮ್ರ, ಮತ್ತು ಪಂಚರಥರೆಂಬುವರು ಕೂಡ ಪ್ರಧಾನ ಸೇನಾಪತಿ ಪದವನ್ನು ಅಲಂಕರಿಸಿರುವ ವ್ಯಕ್ತಿಗಳಾಗಿರುವರು.

೨೩೬. ಪಾರಿಜಾತ, ಮಹಾದೀಪ್ತ, ಸುತಪ, ಬಲಸಾಗರ, ಶ್ರುತಾಯು, ವಿಜಯಾಕಾಂಕ್ಷೀ, ಗುರುಸೇವೀ, ಮತ್ತು ಯಥಾರ್ಥಕರೆಂಬ ಪ್ರಸಿದ್ಧರಾದ ಕೆಲವು ವ್ಯಕ್ತಿಗಳು ಕಪಿಯೂಥಪರೆನಿಸಿರುವರು.

ಧರ್ಮಚೇತಾಃ ಸುಹೋತ್ರಶ್ಚ ಶಾಲಿಹೋತ್ರೋಽಥ ಸರ್ಪಗಃ ।
ಪುಂಡ್ರಶ್ಚಾವರಗಾತ್ರಶ್ಚ ಚಾರುರೂಪಶ್ಚ ಶತ್ರುಜಿತ್ ॥ ೨೩೭ ॥

ವಿಕಟಃ ಕವಟೋ ವ್ಯೆಂದೋ ಬಿಂದುಕಾರೋಽಸುರಾಂತಕಃ ।
ಮಂತ್ರೀ ಭೀಮರಥಃ ಸಂಗೋ ವಿಭ್ರಾಂತಶ್ಚಾರುಹಾಸವಾನ್ ॥ ೨೩೮ ॥

ಕ್ಷಣಕ್ಷಣಮಿತಾಹಾರೋ ವೃಢಭಕ್ತಿಃ ಪ್ರಮರ್ದನಃ ।
ಜಾಜಲಿಃ ಪಂಚಮುಕುಟೋ ಬಲಬಂಧುಃ ಸಮಾಹಿತಃ ॥ ೨೩೯ ॥

ಪಯಃಕೀರ್ತಿಃ ಶುಭಃ ಕ್ಷೇತ್ರೋ ಬಿಂದುಕೇತುಃ ಸಹಸ್ರಪಾತ್ ।
ನವಾಕ್ಷೋ ಹರಿನೇತ್ರಶ್ಚ ಜೀಮೂತೋಽಥ ಬಲಾಹಕಃ ॥ ೨೪೦ ॥

ಗಜೋ ಗವಯನಾಮಾ ಚ ಸುಬಾಹುಶ್ಚ ಗುಣಾಕರಃ ।
ವೀರಬಾಹುಃ ಕೃತೀ ಕುಂಡೋ ಕೃತಕೃತ್ಯಃ ಶುಭೇಕ್ಷಣಃ ॥ ೨೪೧ ॥

---

೨೩೭. ಧರ್ಮಚೇತ, ಸುಹೋತ್ರ, ಶಾಲಿಹೋತ್ರ, ಸರ್ಪಗ, ಪುಂಡ್ರ, ಅವರಗಾತ್ರ, ಚಾರುರೂಪ ಮತ್ತು ಶತ್ರುಜಿತ್ ಎಂಬುದು ಕಪಿಸೇನಾನಾಯಕರ ಒಂದು ಮುಖ್ಯವಾದ ವರ್ಗವಾಗಿದೆ.

೨೩೮. ವಿಕಟ, ಕವಟ ವ್ಯೆಂದ, ಬಿಂದುಕಾರ, ಅಸುರಾಂತಕ, ಮಂತ್ರೀ, ಭೀಮರಥ, ಸಂಗ, ವಿಭ್ರಾಂತ ಮತ್ತು ಚಾರುಹಾಸವಾನ್ ಎಂಬುವರು ಬಲಿಷ್ಠರಾದ ಕಪಿಸೇನಾಪತಿಗಳಲ್ಲಿ ಸೇರಿರುವರು.

೨೩೯. ಕ್ಷಣಕ್ಷಣ, ಮಿತಾಹಾರ, ದೃಢಭಕ್ತಿ, ಪ್ರಮರ್ದನ, ಜಾಜಲಿ, ಪಂಚಮುಕುಟ, ಬಲಬಂಧು, ಮತ್ತು ಸಮಾಹಿತರೆಂಬುವರು ಗಣ್ಯರಾದ ಕಪಿಯೂಥಪತಿ ವ್ಯಕ್ತಿಗಳಾಗಿರುವರು.

೨೪೦. ಪಯಃಕೀರ್ತಿ, ಶುಭ, ಕ್ಷೇತ್ರ, ಬಿಂದು, ಕೇತು, ಸಹಸ್ರಪಾತ್, ನವಾಕ್ಷ, ಹರಿನೇತ್ರ, ಜೀಮೂತ, ಮತ್ತು ಬಲಾಹಕ ಎಂಬ ನಾಮಾಂಕಿತರು ಕಪಿ ಸೇನಾಪತಿ ಪದವನ್ನು ಅಲಂಕರಿಸಿರುವರು.

೨೪೧. ಗಜ, ಗವಯ, ಸುಬಾಹು, ಗುಣಾಕರ, ವೀರಬಾಹು, ಕೃತೀ, ಕುಂಡ, ಕೃತಕೃತ್ಯ, ಮತ್ತು ಶುಭೇಕ್ಷಣ ಎಂಬುವರು ಕೂಡ ಕಪಿಯೂಥಪರ ಅತಿ ಉತ್ತಮ ವರ್ಗದ ನಾಯಕರಾಗಿರುವರು.

ದ್ವಿವಿದಃ ಕುಮುದೋ ಭಾಸಃ ಸುಮುಖಃ ಸುರುವುರ್ವೃಕಃ ।
ವಿಕಟಃ ಕವಕಶ್ಚೈವ ಜವಸೇನೋ ವೃಷಾಕೃತಿಃ ॥ ೨೪೨ ॥

ಗವಾಕ್ಷೋ ನರದೇವಶ್ಚ ಸುಕೇತುರ್ವಿಮಲಾನನಃ ।
ಸಹಸ್ರಾರಃ ಶುಭಕ್ಷೇತ್ರಃ ಪುಷ್ಪಧ್ವಂಸೋ ವಿಲೋಹಿತಃ ॥ ೨೪೩ ॥

ನವಚಂದ್ರೋ ಬಹುಗುಣಃ ಸಪ್ತಹೋತ್ರೋ ಮರೀಚಿಮಾನ್ ।
ಗೋಧಾಮಾ ಚ ಧನೇಶಶ್ಚ ಗೋಲಾಂಗೂಲಶ್ಚ ನೇತ್ರವಾನ್ ॥ ೨೪೪ ॥

ಇತ್ಯೇತೇ ಹರಯಃ ಕ್ರಾಂತಾಃ ಪ್ರಾಧಾನ್ಯೇನ ಯಥಾರ್ಥತಃ ।
ಬಹುತ್ವಾನ್ನಾಮಧೇಯಾನಾಂ ನ ಶಕ್ಯಮಭಿವರ್ಣಿತುಮ್ ॥ ೨೪೫ ॥

ನಾಗಕೋಟೀದಶಬಲೇ ಏಕೈಕಸ್ಯ ಪ್ರತಿಷ್ಠಿತಮ್ ।
ಸರ್ವವಾನರಸೈನ್ಯಸ್ಯ ಸಪ್ತದ್ವೀಪಸ್ಥಿತಸ್ಯ ತು ॥ ೨೪೬ ॥

---

೨೪೨. ದ್ವಿವಿದ, ಕುಮುದ, ಭಾಸ, ಸುಮುಖ, ಸುರುವು, ವೃಕ, ವಿಕಟ, ಕವಕ, ಜವಸೇನ ಮತ್ತು ವೃಷಾಕೃತಿ ಎಂಬುವರು ಉಚ್ಚಪದವಿಯಲ್ಲಿರುವ ಕಪೀಶ್ವರರಾಗಿರುವರು.

೨೪೩. ಗವಾಕ್ಷ, ನರದೇವ, ಸುಕೇತು, ವಿಮಲಾನನ, ಸಹಸ್ರಾರ, ಶುಭಕ್ಷೇತ್ರ, ಪುಷ್ಪಧ್ವಂಸ, ಮತ್ತು ವಿಲೋಹಿತ ಎಂಬ ನಾಮಾಂಕಿತರು ಕಪೀಶ್ವರ ಸ್ಥಾನವನ್ನು ಅಲಂಕರಿಸಿರುವರು.

೨೪೪. ಮತ್ತು ನವಚಂದ್ರ, ಬಹುಗುಣ, ಸಪ್ತಹೋತ್ರ, ಮರೀಚಿಮಾನ್, ಗೋಧಾಮಾ, ಧನೇಶ, ಗೋಲಾಂಗೂಲ ಮತ್ತು ನೇತ್ರವಾನ್ ಎಂಬ ನಾಮಾಂಕಿತರಾಗಿ ಕೆಲವರು ವಾನರ ಯೂಥಾಧಿಪತಿಗಳಾಗಿರುವರು.

೨೪೫. ವಾನನರ ವರ್ಗಗಳಲ್ಲಿ ಪ್ರಾಧಾನ್ಯವನ್ನು ಅನುಸರಿಸಿ ತಾತ್ತ್ವಿಕವಾಗಿ ಕೆಲವು ವ್ಯಕ್ತಿಗಳು ಮಾತ್ರ ಇಲ್ಲಿ ಹೇಳಲ್ಪಟ್ಟಿವೆ. ಅಪಾರವಾಗಿ ಕಪೀಶ್ವರರ ಹೆಸರುಗಳು ಇರುವುದರಿಂದ ಪ್ರತ್ಯೇಕವಾಗಿ ಎಲ್ಲವನ್ನು ವರ್ಣಿಸುವುದು ಶಕ್ಯವಲ್ಲ.

೨೪೬. ಸಪ್ತ ದ್ವೀಪಗಳಲ್ಲಿ ವಾಸಮಾಡುವ ಸಮಸ್ತ ವಾನರ ಸೈನ್ಯದಲ್ಲಿರುವ ಪ್ರತ್ಯೇಕ ವ್ಯಕ್ತಿಗೆ ಹತ್ತು ಕೋಟಿ ಆನೆಗಳ ಬಲವು ಪೂರ್ಣವಾಗಿ ತುಂಬಿರುವುದು.

ಕಿಷ್ಕಿಂಧಾಮಾಶ್ರಿತೋ ವಾಲೀ ರಾಜಾಸೀಚ್ಛತ್ರುತಾಪನಃ ।
ರಣೇ ನಿಗೂಹ್ಯ ವಾಮೇನ ಭುಜೇನ ಸ ಮಹಾಬಲಃ ॥ ೨೪೭ ॥

ವಿಷ್ಟಭ್ಯ ಪಾರ್ಶ್ವೇ ಸಂಸ್ಥಾಪ್ಯ ರಾವಣಂ ಧ್ಯಾನಮಾಸ್ಥಿತಃ ।
ಮೌಹೂರ್ತಿಕೀಂ ಗತಿಂ ಗತ್ವಾ ಚತುಃಪಾರ್ಶ್ವಾನುಪಸ್ಪೃಶನ್ ॥ ೨೪೮ ॥

ಸಮುದ್ರಂ ದಕ್ಷಿಣಂ ಪೂರ್ವಂ ಪಶ್ಚಿಮಂ ಚ ತಥೋತ್ತರಮ್ ।
ಮನೋವಾಯುಗತಿರ್ಭೂತ್ವಾ ವಾಲೀ ವ್ಯಪಗತಕ್ರಮಃ ॥ ೨೪೯ ॥

ಸ ನಿರ್ಜಿತ್ಯ ಮಹಾವೀರ್ಯೋ ರಾವಣಂ ಲೋಕರಾವಣಮ್ ।
ವಾಲೀ ಬಾಹುವಿನಿರ್ಮುಕ್ತಂ ವಿಹ್ವಲಂ ನಷ್ಟಚೇತಸಮ್ ॥ ೨೫೦ ॥

ವೃಕ್ಷಮೂಲಪ್ರದೇಶೇ ಚ ಸ್ಥಾಪಯಿತ್ವಾ ಬಲೋತ್ಕಟಃ ।
ಸಿಚ್ಯಾಂಭಸಾ ಸುಶೀತೇನ ಹ್ಯಾಪಾದತಲಮಸ್ತಕಾತ್ ॥ ೨೫೧ ॥

---

೨೪೭. ಇವರಲ್ಲಿ ಶತ್ರುಗಳಿಗೆ ತಾಪವನ್ನು ಉಂಟುಮಾಡುವ ವಾಲಿಯೆಂಬ ವಾನರ ರಾಜನು ಕಿಷ್ಕಿಂಧಾನಗರಿಯನ್ನು ಆಕ್ರಮಿಸಿಕೊಂಡಿದ್ದನು. ಆ ಮಹಾ ಬಲಿಷ್ಠನು ಒಂದು ಸಮಯದಲ್ಲಿ ಎಡ ಭುಜದ ಕೆಳಗೆ ಕಂಕುಳಲ್ಲಿ ರಾವಣಾಸುರನನ್ನು ಬಚ್ಚಿಟ್ಟುಕೊಂಡನು.

೨೪೮. ಭುಜಾಧೋ ಭಾಗದಲ್ಲಿ ಅವನನ್ನು ಚಲಿಸದಂತೆ ಬಂಧನಮಾಡಿ ಇರಿಸಿ ಕೊಂಡು ಸಂಧ್ಯಾ ದೇವತೆಯ ಧ್ಯಾನದ ಮುಹೂರ್ತ ಸಮಯವನ್ನು ಅರಿತು ಭೂಮಿಯ ನಾಲ್ಕು ಪಾರ್ಶ್ವಗಳಲ್ಲಿರುವ ಸಮುದ್ರ ತೀರ್ಥದಲ್ಲಿ ಆಚಮನ ಮಾಡಿ ಧ್ಯಾನಪರನಾದನು.

೨೪೯. ಚತುಃಸಮುದ್ರಗಳ ತೀರ್ಥಾಚಮನಕ್ಕೋಸ್ಕರ ಪೂರ್ವ, ಪಶ್ಚಿಮ, ದಕ್ಷಿಣ ಉತ್ತರ ಸಮುದ್ರಗಳ ಬಳಿಗೆ ಮನೋವೇಗ, ವಾಯುವೇಗಗಳಿಂದ ಏಕಕಾಲ ದಲ್ಲಿ ಭ್ರಮಿಸಿದರೂ ಸ್ವಲ್ಪವೂ ಆಯಾಸಪಡುತ್ತಿರಲಿಲ್ಲ.

೨೫೦. ಮಹಾವೀರ್ಯನಾದ ವಾಲಿಯು ಲೋಕಗಳನ್ನು ಕಳವಳಪಡಿಸುವ ರಾವಣಾಸುರನನ್ನು ಜಯಿಸಿ ಬಾಹು ಬಂಧನದಿಂದ ಪೀಡಿತನಾಗಿ ಪ್ರಜ್ಞೆ ತಪ್ಪಿ ಹೋಗುವಂತೆ ಮಾಡಿದನು.

೨೫೧. ಮತ್ತು ಬಲಶಾಲಿಯಾದ ವಾಲಿಯು ಒಂದು ಗಿಡದ ಬುಡದಲ್ಲಿ ಅವ ನನ್ನು ಇರಿಸಿ ತಣ್ಣಗಿರುವ ನೀರನ್ನು ತಂದು ಅವನ ಪಾದಾದಿ ಶಿರಃಪರ್ಯಂತವಾಗಿ ಸರ್ವಾವಯವಗಳಲ್ಲಿ ನೀರನ್ನೆರೆದು ಶೈತ್ಯೋಪಚಾರವನ್ನು ಮಾಡಿದನು.

**ಸ ಚ ತಂ ಲಬ್ಧಸಂಜ್ಞಂ ಚ ಕೃತ್ವಾ ವಿಸ್ಮಯಮಾಸ್ಥಿತಃ ।**
**ಉವಾಚ ರಣಚಂಡಂ ತಂ ರಾಕ್ಷಸೇಂದ್ರಂ ಕಪೀಶ್ವರಃ ॥ ೨೫೨ ॥**

**ಭೋ ಭೋ ರಾಕ್ಷಸರಾಜೇಂದ್ರ ಮಹೇಂದ್ರಸಮವಿಕ್ರಮ ।**
**ಅಸಂಖ್ಯೇಯಂ ಬಲಂ ಜಿತ್ವಾ ಯಮಂ ಸಸಚಿವಂ ರಣೇ ॥ ೨೫೩ ॥**

**ವರುಣಂ ಚ ಕುಬೇರಂ ಚ ಶಶಿನಂ ಭಾಸ್ಕರಂ ತಥಾ ।**
**ಮರುದ್ಗಣಂ ತಥಾ ರುದ್ರಾನಾದಿತ್ಯಾನಶ್ವಿನೌ ವಸೂನ್ ॥ ೨೫೪ ॥**

**ದೈತೇಯಾನ್ ಕಾಲಕೇಯಾಂಶ್ಚ ದಾನವಾನ್ ಸುಮಹಾಬಲಾನ್ ।**
**ಸಿದ್ಧಾಂಸ್ತಥೈವ ಗಂಧರ್ವಾನ್ ಯಕ್ಷರಕ್ಷೋಭುಜಂಗಮಾನ್ ॥ ೨೫೫ ॥**

**ಪಕ್ಷಿಣಾಂ ಪ್ರವರಾಂಶ್ಚೈವ ಗ್ರಹನಕ್ಷತ್ರತಾರಕಾಃ ।**
**ತಥಾ ಭೂತಪಿಶಾಚಾಂಶ್ಚ ವಿವೃದ್ಧಬಲದರ್ಪಿತಾನ್ ॥ ೨೫೬ ॥**

---

೨೫೨. ಮತ್ತು ಆ ಕಪೀಶ್ವರನಾದ ವಾಲಿಯು ಈ ಉಪಚಾರದಿಂದ ರಾವಣನು ಚೇತರಿಸಿಕೊಳ್ಳುವಂತೆ ಮಾಡಿ ಆಶ್ಚರ್ಯಪಟ್ಟವನಾಗಿ ಯುದ್ಧದಲ್ಲಿ ಚಂಡನಾದ ಆ ರಾಕ್ಷಸೇಂದ್ರನಾದ ರಾವಣಾಸುರನನ್ನು ನೋಡಿ ಮಾತನಾಡಿದನು.

೨೫೩. ಎಲೈ ಮಹೇಂದ್ರನಿಗೆ ತುಲ್ಯವಾದ ವಿಕ್ರಮದಿಂದ ಶೋಭಿತನಾದ, ರಾಕ್ಷಸರಿಗೆ ರಾಜೇಂದ್ರನಾದ ರಾವಣನೆ! ನೀನು ಇದುವರೆಗೆ ಮಂತ್ರಿಸಹಿತನಾದ ಯಮನನ್ನು ಮತ್ತು ಗಣನಾತೀತವಾದ ಬಲವನ್ನು ಗೆದ್ದ ಮಹಾವಿಕ್ರಮಿಯಾಗಿರುತ್ತಿ.

೨೫೪. ಮತ್ತು ವರುಣ, ಕುಬೇರ, ಚಂದ್ರ, ಸೂರ್ಯ, ಮರುದ್ದೇವಗಣ, ರುದ್ರ, ಆದಿತ್ಯ, ಅಶ್ವಿನೀದೇವತೆ, ಮತ್ತು ವಸು ಮುಂತಾದ ವಿಕ್ರಮಿಗಳಾದ ದೇವತೆಗಳನ್ನು ಗೆದ್ದು ಜಯಶಾಲಿಯಾಗಿದ್ದಿ.

೨೫೫. ಹಾಗು ಮಹಾಬಲಶಾಲಿಗಳಾದ ದಿತಿ ಪುತ್ರರನ್ನೂ ಕಾಲಿಕಾ ಪುತ್ರರನ್ನೂ ದನು ಎಂಬುವಳ ಪುತ್ರರಾದ ರಾಕ್ಷಸರನ್ನೂ ಸಿದ್ಧ-ಗಂಧರ್ವ-ಯಕ್ಷ-ರಕ್ಷಸ್ಸು-ಭುಜಂಗ ಮುಂತಾದವರನ್ನು ಯುದ್ಧದಲ್ಲಿ ಓಡಿಸಿರುವ ಮಹಾವೀರನಾಗಿರುತ್ತಿ.

೨೫೬. ಪಕ್ಷಿಶ್ರೇಷ್ಠರನ್ನೂ ಗ್ರಹ-ನಕ್ಷತ್ರ-ತಾರಕೆಗಳನ್ನೂ ಹಾಗೆಯೇ ಉತ್ಕಟವಾದ ಬಲಮದದಿಂದ ಉನ್ಮತ್ತರಾದ ಭೂತ-ಪಿಶಾಚ ಮುಂದಾದುವುಗಳನ್ನೂ ಗೆದ್ದಿರುವ ವೀರಾಗ್ರೇಸರನಾಗಿದ್ದಿ.

ಮಾನುಷಾಣಾಂ ನೃಪಾಂಶ್ಚೈವ ಶತಶೋಽಥ ಸಹಸ್ರಶಃ ।
ಕಥಮೀದೃಗ್ಗುಣೋ ಭೂತ್ವಾ ಮನೋವಾಯುಸಮೋ ಜವೇ॥ ೨೫೭ ॥

ಶಕ್ತೋಽಸಿ ಚಾಲನೇ ಮೇರೋಃ ಕೃತಾಂತ ಇವ ದುರ್ಜಯಃ ।
ವಿದ್ರಾವ್ಯ ಸರ್ವಾನ್ ಲೋಕೇಷು ವೀರಾನ್ ಪರಪುರಂಜಯಃ॥ ೨೫೮ ॥

ಬಲೈರಶನಿಕಲ್ಪೈಶ್ಚ ಸಮೀಕೃತ್ಯ ಚ ಪರ್ವತಾನ್ ।
ವಿಕ್ಷೋಭ್ಯ ಸಾಗರಾನ್ ಸಪ್ತ ಸಪ್ತಕೃತ್ವೋ ಮಹಾರಥಃ ॥ ೨೫೯ ॥

ನಿರ್ವಿಕಾರೋ ಜಯಪ್ರೇಪ್ಸುಃ ಸ್ಮಯಮಾನೋ ಬಲಾದ್ಬಲೀ ।
ದುರ್ಬಲೇನ ಮಯಾಕ್ರಾಂತೋ ವಾನರೇಣ ವಿಶೇಷತಃ ॥ ೨೬೦ ॥

ಕಿಮರ್ಥಮೀದೃಶಂ ಶಪ್ತೋ ಬಲವಾನಪಿ ದುರ್ಜಯಃ ।
ಪ್ರಬ್ರೂಹಿ ಹೇತುನಾ ಕೇನ ಬ್ರಹ್ಮನ್ ರಾಕ್ಷಸಪುಂಗವ ॥ ೨೬೧ ॥

---

೨೫೭. ಹೀಗೆಯೇ ಶತ-ಸಹಸ್ರ ಮುಂತಾದ ಅಗಾಧ ಸಂಖ್ಯೆಯಲ್ಲಿ ಮನುಷ್ಯ ರಾಜರನ್ನು ಲಕ್ಷ್ಯವಿಲ್ಲದೆ ಗೆದ್ದಿರುತ್ತಿ. ನೀನು ಇಂತಹ ವಿಶಿಷ್ಟ ಪರಾಕ್ರಮವುಳ್ಳವನೂ ವೇಗದಲ್ಲಿ ಮನಸ್ಸು ಮತ್ತು ವಾಯುಗಳಿಗೆ ತುಲ್ಯನೂ ಆಗಿರುತ್ತಿ.

೨೫೮. ಯಮನಂತೆ ಪರರಿಂದ ಜಯಿಸಲು ಅಶಕ್ಯನೂ ಮೇರುಪರ್ವತವನ್ನು ಕೂಡ ಚಾಲನ ಮಾಡಿಸಲು ಶಕ್ತನೂ ಆಗಿದ್ದಿ, ಮತ್ತು ಸಕಲಲೋಕಗಳಲ್ಲಿರುವ ವೀರರನ್ನು ಪಲಾಯನಮಾಡಿಸಿ ಶತ್ರುಗಳನ್ನು ವಶಮಾಡಿಕೊಂಡಿರುತ್ತೀ.

೨೫೯. ಸಿಡಿಲಿನಂತೆ ಇರುವ ನಿನ್ನ ಬಲಗಳಿಂದ ಪರ್ವತಗಳನ್ನು ಪುಡಿ ಪುಡಿ ಮಾಡಿ ನೆಲಸಮಮಾಡುವ, ಸಪ್ತಸಾಗರಗಳಿಗೆ ಏಳುಸಲ ಕ್ಷೋಭವನ್ನುಂಟುಮಾಡುವ ಮಹಾವೀರ್ಯದಿಂದ ಮೆರೆಯುವ ಮಹಾರಥನು ನೀನು.

೨೬೦. ಯಾವುದೊಂದು ವಿಕಾರವು ಇಲ್ಲದಿರುವವನೂ ಗರ್ವದಿಂದ ಜಯಾರ್ಥಿಯೂ ಆಗಿ ಬಲಾತ್ಕಾರದಿಂದ ನನ್ನ ಬಳಿಗೆ ಬಂದು ವಾನರ ಜಾತಿಯವನೂ ವಿಶೇಷವಾಗಿ ದುರ್ಬಲನೂ ಆದ ನನ್ನಿಂದ ಈ ರೀತಿಯಾಗಿ ಮರ್ದಿಸಲ್ಪಟ್ಟಿರುವುದು ಹೇಗೆ?

೨೬೧. ಬ್ರಹ್ಮರೂಪಿಯಾದ ರಾಕ್ಷಸೋತ್ತಮನೆ! ಬಲಶಾಲಿಯೂ ಅಜೇಯನೂ ಆದ ನೀನು ಈ ರೀತಿಯಾಗಿ ನನ್ನಿಂದ ಪರಾಜಿತನಾಗುವಂತೆ ಯಾವ ಕಾರಣದಿಂದ ಶಪಿಸಲ್ಪಟ್ಟಿರುವೆ? ಅದನ್ನು ನನಗೆ ಹೇಳು.

ಅಭಯಂ ತೇ ಮಯಾ ದತ್ತಂ ವಿಶ್ವಸ್ತೋ ಭವ ತೇ ನ ಭೀಃ ।
ವಚನಂ ವಾಲಿನಃ ಶ್ರುತ್ವಾ ದಶಗ್ರೀವಃ ಪ್ರತಾಪವಾನ್ ॥ ೨೬೨ ॥

ಉವಾಚ ಭಯಸಂವಿಗ್ನಃ ಸಾಂತ್ವಪೂರ್ವಮಿದಂ ವಚಃ ।
ಅಸಂಶಯಂ ಜಿತಾಃ ಸರ್ವೇ ಮಯಾ ದೇವಾಸುರಾ ರಣೇ ॥ ೨೬೩ ॥

ಏವಂವಿಧಸ್ತು ಬಲವಾನ್ ನ ಮಯಾಸಾದಿತಃ ಕ್ವಚಿತ್ ।
ತದಿಚ್ಛಾಮಿ ತ್ವಯಾ ಸಾರ್ಧಂ ಸೌಹೃದಂ ಭಯವರ್ಜಿತಮ್ ॥ ೨೬೪ ॥

ಮತ್ತೋ ಭವೇನ್ನ ತೇ ವೀರ ಕದಾಚಿದ್ವೈ ರಣಾಜಿರಮ್ ।
ಏವಮುಕ್ತೋಽಬ್ರವೀದ್ವಾಲೀ ಭವತ್ವೇತದ್ವಚಸ್ತವ ॥ ೨೬೫ ॥

ಸಮಯೇ ಸ್ಥಾಪಯಿತ್ವಾ ತು ರಾವಣೋ ವಾಲಿನಂ ಪುರಾ ।
ಜಗಾಮ ಲಂಕಾಂ ಸಗಣಃ ಪ್ರಹೃಷ್ಟೇನಾಂತರಾತ್ಮನಾ ॥ ೨೬೬ ॥

---

೨೬೨. ನಾನು ನಿನಗೆ ಅಭಯವನ್ನು ಕೊಟ್ಟಿರುವೆನು. ಇನ್ನು ಮುಂದೆ ನನ್ನಿಂದ ನೀನು ಭಯಪಡಬೇಡ ಎಂದು ವಾಲಿಯು ಹೇಳಿದನು. ಪ್ರತಾಪಶಾಲಿಯಾದ ದಶಮುಖನು ಆ ವಚನವನ್ನು ಶ್ರವಣಮಾಡಿದನು.

೨೬೩. ಮತ್ತು ವಾಲಿಯ ಮುಂದುಗಡೆಯಲ್ಲಿ ಭಯದಿಂದ ಕೂಡಿದವನಾಗಿ ಸಮಾಧಾನಪೂರ್ವಕವಾಗಿ ಮಾತನಾಡಿದನು. ನನ್ನಿಂದ ಯುದ್ಧದಲ್ಲಿ ಎಲ್ಲ ದೇವ-ಅಸುರರು ಸೋಲಿಸಲ್ಪಟ್ಟಿರುವರೆಂಬುದು ನಿಸ್ಸಂಶಯವಾದುದು.

೨೬೪. ಆದರೆ ನಿನ್ನಂತಹ ವೀರಪುರುಷನನ್ನು ನಾನು ಹಿಂದೆಲ್ಲಿಯೂ ಕಂಡು ಅರಿಯೆನು. ಆದುದರಿಂದ ನಾನು ನಿನ್ನೊಡನೆ ಅಭಯಪ್ರದಾನ ಪೂರ್ವಕವಾದ ಮೈತ್ರಿಯನ್ನು ಅಪೇಕ್ಷಿಸುತ್ತಿದ್ದೇನೆ.

೨೬೫. ವೀರನೆ ! ಯಾವಾಗಲೂ ನನಗೆ ನಿನ್ನೊಡನೆ ರಣರಂಗವು ಏರ್ಪಡುವುದು ಬೇಡ. ಎಂಬುದಾಗಿ ರಾವಣನಿಂದ ಪ್ರಾರ್ಥಿಸಲ್ಪಟ್ಟಿರುವ ವಾಲಿಯು ನಿನ್ನ ಮಾತಿನಂತೆ ಆಗಲಿ ಎಂದು ಒಪ್ಪಿಕೊಂಡನು.

೨೬೬. ಹೀಗೆ ಪೂರ್ವದಲ್ಲಿ ರಾವಣನು ವಾಲಿಯನ್ನು ಒಂದು ಶಪಥದಲ್ಲಿ ಬಂಧಿಸಿ ತರುವಾಯ ಸಂತೋಷಗೊಂಡ ಅಂತಃಕರಣವುಳ್ಳವನಾಗಿ ತನ್ನ ಪರಿವಾರದೊಡನೆ ಲಂಕೆಗೆ ಪ್ರಯಾಣಮಾಡಿದನು.

ನಾಲೀ ವಿಜಿತ್ಯ ಬಲವಾನ್ ಪುಷ್ಕರೇ ರಾಕ್ಷಸೇಶ್ವರಮ್ ।
ಆಜಹಾರ ಬಹೂನ್ ಯಜ್ಞಾನ್ ಅನ್ನಪಾನಸಮಾವೃತಾನ್ ॥ ೨೬೭ ॥

ದಕ್ಷಿಣಾಭಿಃ ಪ್ರವೃದ್ಧಾಭಿಃ ಶತಶೋಽಥ ಸಹಸ್ರಶಃ ।
ಅಗ್ನಿಷ್ಟೋಮಾಶ್ವಮೇಧಾಂಶ್ಚ ರಾಜಸೂಯಾನ್ನೃಮೇಧಕಾನ್ ॥ ೨೬೮ ॥

ಸರ್ವಮೇಧಾನಪಿ ಬಹೂನ್ ಸರ್ವದಾನಸಮನ್ವಿತಾನ್ ।
ತರ್ಪಯಿತ್ವಾಥ ದೇವಾಂಶ್ಚ ದೇವೇಂದ್ರಂ ಬಹುಭಿಸ್ತಥಾ ॥ ೨೬೯ ॥

ಬ್ರಹ್ಮಾಣಂ ತೋಷಯಿತ್ವಾ ಚ ಹುತ್ವಾಗ್ನಿಂ ಬಹುವಾರ್ಷಿಕಮ್ ।
ಸುಗ್ರೀವೇಣ ಸಹ ಭ್ರಾತ್ರಾ ಸುಖೀ ಭೂತ್ವಾ ಯುವೀಯಸಾ ॥ ೨೭೦ ॥

ರಾಜ್ಯಂ ಚ ಪಾಲಯಿತ್ವಾ ಸ ಕಪೀನಾಮಕುತೋಭಯಃ ।
ಬ್ರಹ್ಮಣ್ಯೋ ಬ್ರಹ್ಮಪರಮೋ ಧರ್ಮಸೇತುಃ ಕ್ರಿಯಾಪರಃ ॥ ೨೭೧ ॥

---

೨೬೭. ಇತ್ತ ವಾಲಿಯು ರಾಕ್ಷಸೇಶ್ವರನನ್ನು ಜಯಿಸಿ ಪುಷ್ಕರ ಕ್ಷೇತ್ರದಲ್ಲಿ ಅನ್ನಪಾನಗಳ ವಿನಿಯೋಗದ ವಿಜೃಂಭಣೆಯಿಂದ ಕೂಡಿದ ಅನೇಕ ಮಹಾಯಜ್ಞಗಳನ್ನು ಆಚರಿಸಿದನು.

೨೬೮. ಶತ-ಸಹಸ್ರ ಮೊದಲಾದ ಮಹಾಸಂಖ್ಯೆಗಳಿಂದ ಕೂಡಿದ ಅನೇಕ ದಕ್ಷಿಣಾದಾನ ವೈಖರಿಯಿಂದ ಕೂಡಿದ ಅಗ್ನಿಷ್ಟೋಮ, ಅಶ್ವಮೇಧ, ರಾಜಸೂಯ ಮತ್ತು ಪುರುಷಮೇಧಾದಿ ಅನೇಕ ಯಾಗಗಳನ್ನು ಅನುಷ್ಠಾನ ಮಾಡಿದನು.

೨೬೯. ಸಕಲ ವಸ್ತುಗಳ ದಾನ ವೈಭವದಿಂದ ಕೂಡಿದ ಸರ್ವಮೇಧಯಾಗಗಳನ್ನು ಆಚರಿಸಿ ಅಂತಹ ಅನೇಕ ಕರ್ಮಗಳಿಂದ ಅನೇಕ ದೇವತೆಗಳನ್ನೂ ದೇವೇಂದ್ರನನ್ನೂ ತೃಪ್ತಿಪಡಿಸಿದನು.

೨೭೦. ಬ್ರಹ್ಮದೇವನನ್ನು ಪ್ರಸನ್ನಗೊಳಿಸಿ ಅನೇಕ ವರ್ಷಗಳವರೆಗೆ ಅಗ್ನಿಪರಿಚರ್ಯೆಯನ್ನು ಮಾಡುತ್ತ ಹೋಮಮಾಡಿ ತನ್ನ ಕಿರಿಯ ಭ್ರಾತೃವಾದ ಸುಗ್ರೀವನೊಂದಿಗೆ ಸೇರಿ ಸುಖಿಯಾಗಿದ್ದನು.

೨೭೧. ಹೀಗೆ ಬಹುಕಾಲ ಯಾವುದೊಂದು ಭಯನಿಮಿತ್ತವೂ ಇಲ್ಲದಂತೆ ಕಪಿಗಳಿಗೆ ರಾಜನಾಗಿ ರಾಜ್ಯವನ್ನಾಳಿದನು. ಮತ್ತು ಬ್ರಹ್ಮಸೇವೀ, ಬ್ರಹ್ಮಚಿಂತನಾದಿಗಳಲ್ಲಿ ಆಸಕ್ತಿಯುಳ್ಳವನು, ಧರ್ಮಧಾರಕನು ಮತ್ತು ಕ್ರಿಯಾವಂತ ಮುಂತಾದ ಉತ್ತಮ ಗುಣಗಳಿಂದ ಶೋಭಿಸುತ್ತಿದ್ದನು.

ಬಹೂನ್ ವರ್ಷಗಣಾನ್ ರೇಮೇ ಸರ್ವಶಾಸ್ತ್ರವಿಶಾರದಃ ।
ಯಸ್ಯ ದೇವಮುನಿರ್ಗಾಥಾಂ ಜಗೌ ಯಜ್ಞೇಷು ನಾರದಃ ॥ ೨೭೨ ॥

ನ ಯಜ್ಞಹವನೇ ದಾನೇ ಜವೇ ನಾಪಿ ಪರಾಕ್ರಮೇ ।
ತುಲ್ಯೋಽಸ್ತಿ ತ್ರಿಷು ಲೋಕೇಷು ವಾಲಿನೋ ಹೇಮಮಾಲಿನಃ ॥೨೭೩॥

ಶಾಂಶಪಾಯನ ಉವಾಚ :—
ಅಹೋ ಮಹಾಪ್ರಭಾವಸ್ತು ಮಹೇಂದ್ರತನಯೋ ಬಲೀ ।
ವಾಲೀ ಯಜ್ಞಸಹಸ್ರಾಣಾಂ ಯಜ್ವಾ ಪರಮದುರ್ಜಯಃ ॥ ೨೭೪ ॥

ಚಕ್ರವರ್ತೀ ಮಹಾಪ್ರಾಜ್ಞೋ ವಾಲೀ ಚ ಕಥಿತಸ್ತ್ವಯಾ ।
ಮಾರ್ತಂಡಸ್ಯ ತು ನೋ ಬ್ರೂಹಿ ಕಥಂ ಮಾರ್ತಂಡತಾ ಸ್ಮೃತಾ
॥ ೨೭೫ ॥

---

೨೭೨. ಹೀಗೆ ಸರ್ವಶಾಸ್ತ್ರ ನಿಷ್ಣಾತನಾದ ವಾಲಿಯು ಉತ್ತಮ ಸುಖವನ್ನು ಅನುಭವಿಸುತ್ತ ಅನೇಕ ವರ್ಷಗಳ ಕಾಲ ರಮಿಸಿದನು. ಇವನ ವಿಷಯದಲ್ಲಿ ದೇವ ಮುನಿಯಾದ ನಾರದನು ಯಜ್ಞಾರಂಭಗಳಲ್ಲಿ ಗಾಥಾರೂಪವಾದ ಪದ್ಯವನ್ನು ಗಾನ ಮಾಡಿ ಪ್ರಶಂಸೆಯನ್ನು ಸೂಚಿಸಿರುವನು.

೨೭೩. ಯಜ್ಞಾನುಷ್ಠಾನದಲ್ಲಿಯೂ, ಮಹಾವಿತರಣದಲ್ಲಿಯೂ, ವೇಗ ದಲ್ಲಿಯೂ ಅಥವಾ ಪರಾಕ್ರಮದಲ್ಲಿಯೂ ಮೂರು ಲೋಕಗಳಲ್ಲಿ ಅನ್ವೇಷಣ ಮಾಡಿ ದರೂ ಸುವರ್ಣ ಮಾಲೆಯಿಂದ ಅಲಂಕೃತನಾದ ವಾಲಿಗೆ ತುಲ್ಯನು ಇಲ್ಲ ಇದು ನಾರದ ಮುನಿಯ ಪ್ರಶಂಸಾಗಾಥೆಯ ಅರ್ಥವು.

೨೭೪. ಮತ್ತೆ ಶಾಂಶಪಾಯನ ಮುನಿಯು ಪ್ರಶ್ನಿಸಿದನು. ಮಹೇಂದ್ರ ಪುತ್ರ ನಾದ ವಾಲಿಯು ಮಹಾಪ್ರಭಾವವುಳ್ಳವನೂ, ಬಲಶಾಲಿಯೂ, ಸಹಸ್ರಾರು ಯಜ್ಞ ಗಳನ್ನು ಆಚರಿಸಿದವನೂ ಮತ್ತು ಅಜೇಯರಲ್ಲಿ ಗಣ್ಯನೂ ಆಗಿರುವನು. ಇದು ಅತ್ಯಾಶ್ಚರ್ಯವು.

೨೭೫. ಮತ್ತು ಚಕ್ರವರ್ತಿಯೂ ಮಹಾಪ್ರಜ್ಞಾವಂತನೂ ಆಗಿರುವನು. ಇಂತಹ ವಾಲಿಯ ಚರಿತ್ರವನ್ನು ನೀನು ಹೇಳಿರುವೆ. ಮಾರ್ತಂಡ ದೇವ ಎಂದು ಪ್ರಖ್ಯಾತನಾದ ಸೂರ್ಯನಿಗೆ ಮಾರ್ತಂಡ ಎಂಬ ಸಂಜ್ಞೆಯು ಹೇಗೆ ಬಂದಿತೆಂಬುದನ್ನು ಹೇಳು.

**ಸೂತ ಉವಾಚ :—**

**ನಿರುಕ್ತಮಸ್ಯ ತು ವಿಭೋಃ ಯಾಥಾತಥ್ಯೇನ ಸುವ್ರತ ।**
**ಸೃಜ್ಯಮಾನೇಷು ಭೂತೇಷು ಪ್ರಜಾಪತಿರಥ ಸ್ವಯಮ್ ॥ ೨೭೬ ॥**

**ತ್ರೈಲೋಕ್ಯಾದ್ಯತ್ಪರಂ ತೇಜಸ್ತದಾಹೃತ್ಯಾದಿತೇರ್ಹೃದಿ ।**
**ಪ್ರವೇಶಯಾಮಾಸ ತದಾ ಯೋಗೇನ ಮಹತಾ ವೃತಃ ॥ ೨೭೭ ॥**

**ಪೂರ್ವಮಂಡಂ ತು ಭಗವಾನಸ್ಯಾಶ್ಚಕ್ರೇ ತಥೋದರೇ ।**
**ತತ್ರಾವರ್ತತ ಗರ್ಭೋಽವೈ ಅಂಡಸ್ಯಾಭ್ಯಂತರೇ ಬಲೀ ॥ ೨೭೮ ॥**

**ವರ್ಧಮಾನೋಽತಿಮಾತ್ರಂ ವೈ ದೇವಾ ನಿಸ್ತೇಜಸೋಽಭವನ್ ।**
**ಸರ್ವತೋ ನಿರ್ಮಿತಂ ಜ್ಞಾತ್ವಾ ಗರ್ಭಂ ತೇ ಹೃತತೇಜಸಃ ॥ ೨೭೯ ॥**

---

೨೭೬. ವ್ಯಾಪಕನೂ ತಪೋನಿಯಮವಂತನೂ ಆದ ಮುನಿಯೆ ! ಮಾರ್ತಂಡ ಶಬ್ದದ ಅವಯವಾರ್ಥಗಳ ನಿರ್ವಚನವನ್ನು ತತ್ತ್ವಶಃ ನನಗೆ ಹೇಳು, ಎಂದು ಕೇಳಲಾಗಿ ಸೂತಮುನಿಯು ಉತ್ತರವನ್ನು ಹೇಳಿದನು.—ಪ್ರಜಾಪತಿಯು ಅನೇಕ ಭೂತಗಳ ಸೃಷ್ಟಿ ಪ್ರವಾಹವನ್ನು ಮುಂದುವರಿಸುತ್ತ ಬಂದನು.

೨೭೭. ಆಗ ಒಂದು ಸಮಯದಲ್ಲಿ ತ್ರಿಲೋಕಗಳಿಗಿಂತ ಅತೀತವಾದ ಪರಮ ತೇಜಸ್ಸನ್ನು ತಂದು ಮಹಾಯೋಗಾಭ್ಯಾಸ ಮಹಿಮೆಯಿಂದ ಅದಿತಿ ದೇವಿಯ ಹೃದಯದಲ್ಲಿ ಅದನ್ನು ಪ್ರವೇಶಮಾಡಿಸಿದನು.

೨೭೮. ಭಗವಂತನಾದ ಬ್ರಹ್ಮನು ಈಕೆಯ ಉದರದಲ್ಲಿ ಮೊದಲು ಒಂದು ಅಂಡವನ್ನು ಕಲ್ಪಿಸಿದನು. ಆ ಅಂಡದ ಒಳಭಾಗದಲ್ಲಿ ಬಲಯುತವಾದ ಒಂದು ಗರ್ಭವು ಇತ್ತು.

೨೭೯. ಆ ಗರ್ಭವು ಅಲ್ಲಿಯೇ ದಿನಕ್ರಮದಿಂದ ಅತಿಯಾಗಿ ವೃದ್ಧಿಯಾಗುತ್ತ ಬಂದಿತು. ಆಗ ದೇವತೆಗಳು ಆ ಗರ್ಭವು ಸರ್ವ ತೇಜಸ್ಸುಗಳಿಗಿಂತ ಅತಿಶಯಿತವಾಗಿ ನಿರ್ಮಿಸಲ್ಪಟ್ಟಿರುವುದೆಂದು ತಿಳಿದು ಭಯದಿಂದ ತಮ್ಮ ತೇಜಸ್ಸುಗಳಿಂದ ಹೀನರಾದರು.

ಊಚುಃ ಪ್ರಜಾಪತಿಂ ಭೀತಾಃ ಕಥಂ ನೋ ಭವಿತಾ ತ್ವಿದಮ್ ।
ಬಲಂ ತೇಜೋಽಸ್ಯ ಭವಿತಾ ನಿರ್ಮಿತಸ್ಯಾಧಿಕಂ ವಿಭೋ ॥ ೨೮೦ ॥

ನೂನಂ ಕಥಂ ಭವಿಷ್ಯಾಮೋ ನೂನಂ ನಷ್ಟಾ ಹಿ ಶಾಶ್ವತ ।
ಸರ್ವಭೂತಾನಿ ಯಾನೀಹ ಸ್ಥಾವರಾಣಿ ಚರಾಣಿ ಚ ॥ ೨೮೧ ॥

ತಾನಿ ದಗ್ಧಾನಿ ನ ಚಿರಾದ್ಭವಿಷ್ಯಂತಿ ನ ಸಂಶಯಃ ।
ಯದಂಡೇ ಸ್ಥಾಪಿತಂ ತೇಜೋ ಬಲಂ ಚ ದ್ವಿಜಸತ್ತಮ ॥ ೨೮೨ ॥

ತತ್ಸಂಹರ ವಿಚಿಂತ್ಯೇಹ ಯನ್ನಃ ಶ್ರೇಯಸ್ಕರಂ ಭವೇತ್ ।
ಶ್ರುತಿತೇಜಃಪ್ರಭಾವಶ್ಚ ಧಕ್ಷತೇ ಸರ್ವತೋಽಂಜಸಾ ॥ ೨೮೩ ॥

ಸ ಚಿಂತಯಿತ್ವಾ ಭಗವಾನ್ ಪ್ರಜಾಪತಿರಥಾಕ್ಷಿಪತ್ ।
ಬಲಂ ಚಾಂಡೇ ಚಕಾರಾಥ ತತಸ್ತ್ವಂಡಾಂತರೇ ಶಿಶುಃ ॥ ೨೮೪ ॥

---

೨೮೦. ಆಗ ಪ್ರಜಾಪತಿಯನ್ನು ಕುರಿತು ಭೀತರಾಗಿ ಕೇಳಿಕೊಂಡರು. ಸರ್ವಶಕ್ತನೆ! ಇದರ ಪರಿಣಾಮವು ಮುಂದೇನು ಆಗಬಹುದು! ನೂತನವಾಗಿ ನಿರ್ಮಿತವಾಗಿರುವ ಈ ಗರ್ಭಕ್ಕೆ ಮುಂದೆ ಅಧಿಕವಾದ ಬಲ-ತೇಜಸ್ಸುಗಳು ಉಂಟಾಗುವುವು.

೨೮೧. ಶಾಶ್ವತ ಸ್ವರೂಪನಾದ ಪ್ರಜಾಪತಿಯೆ! ನಿಜವಾಗಿ ನಾವು ಮುಂದೆ ಇರುವುದು ಹೇಗೆ! ನಿಜವಾಗಿ ನಾವೆಲ್ಲರೂ ನಷ್ಟರಾದೆವು. ಈಗಿರುವ ಸ್ಥಾವರ ಜಂಗಮಾದಿಯಾದ ಸಮಸ್ತ ಜಂತುಗಳಿಗೂ ಮಹಾವಿಪತ್ತು ಬಂದಿರುವುದು.

೨೮೨. ಅವುಗಳೆಲ್ಲವೂ ಇನ್ನು ಸ್ವಲ್ಪ ಕಾಲದಲ್ಲಿಯೆ ಭಸ್ಮವಾಗುವುವೆಂಬುದರಲ್ಲಿ ಸಂದೇಹವಿಲ್ಲ. ದ್ವಿಜ ಶ್ರೇಷ್ಠನೆ! ಅದರಲ್ಲಿ ಅಸಾಧಾರಣವಾದ ಬಲ ತೇಜಸ್ಸುಗಳು ಇರಿಸಲ್ಪಟ್ಟಿವೆ.

೨೮೩. ಆದ್ದರಿಂದ ನಮ್ಮ ಶ್ರೇಯೋಮಾರ್ಗವನ್ನು ಸ್ವಲ್ಪ ಚಿಂತಿಸಿ ಇದನ್ನು ಹೇಗಾದರೂ ಅಡಗಿಸು, ಶ್ರುತಿ, ವರ್ಚಸ್ಸು, ಪ್ರಭಾವಗಳ ಮಹಿಮೆಯಿಂದ ಈಗ ಸರ್ವ ಪ್ರದೇಶಗಳಲ್ಲಿಯೂ ಬೇಗ ಸುಡುತ್ತಿರುವುದು.

೨೮೪. ಅನಂತರದಲ್ಲಿ ಪೂಜ್ಯನಾದ ಪ್ರಜಾಪತಿಯು ಅದನ್ನು ಯೋಚಿಸಿ ಬಲ ತೇಜಸ್ಸುಗಳನ್ನು ಬೇರೆಯಾಗುವಂತೆ ವಿಂಗಡಿಸಿದನು, ಅದಕ್ಕೋಸ್ಕರ ಬಲವನ್ನು ಒಂದು ಅಂಡರೂಪವನ್ನಾಗಿಯೂ ತೇಜೋಮಯವಾದ ಶಿಶುವನ್ನು ಮತ್ತೊಂದು ಅಂಡರೂಪವಾಗಿಯೂ ಪರಿವರ್ತಿಸಿದನು.

ಯದಂಡಂ ತದ್ಬಲಂ ಪ್ರಾಹುರ್ಯತ್ತೇಜಃ ಸ ಶಿಶುರ್ಮತಃ ।
ತತಸ್ತೂದರಾದ್ವಿನಿಷ್ಕ್ರಾಂತಂ ಮೃತಪಿಂಡೋಪಮಂ ಸ ತು ॥ ೨೮೫ ॥

ಪ್ರಜಾಪತಿಸ್ತತೋ ದೃಷ್ಟ್ವಾ ತದಂಡಂ ವೈ ದ್ವಿಧಾಕರೋತ್ ।
ಶಕಲೇ ದ್ವೇ ಸಮಾಸ್ಥಾಯ ಸ ಏಕಸ್ಮಿನ್ನಪಶ್ಯತ ॥ ೨೮೬ ॥

ಗರ್ಭಂ ದುರ್ಬಲಭಾವೇನ ಯುಕ್ತಂ ತೇಜೋಮಯಂ ಸಕೃತ್ ।
ತತ್ಸಮುದ್ಯಮ್ಯ ಚೋತ್ಸಾಯಾದಿತ್ಯುತ್ಸಂಗೇ ನಿವೇದ್ಯ ಚ ॥ ೨೮೭ ॥

ಉವಾಚಾದಿತ್ಯಭಾವಾಚ್ಚ ಯಸ್ಮಾದಂಡೇನ ವೈ ಸ್ಮೃತಃ ।
ತೇನ ಮಾರ್ತಂಡ ಇತಿ ವೈ ಕಥ್ಯತೇ ಸವಿತಾ ಬುಧೈಃ ॥ ೨೮೮ ॥

ತೇಜಶ್ಚೈವಾಧಿಕಂ ತಸ್ಮೈ ನಿರ್ಮಮೇ ಪ್ರಪಿತಾಮಹಃ ।
ಯೇ ತೇ ಅಂಡಕಪಾಲೇ ದ್ವೇ ತದ್ಬಲಂ ಪರಮಂ ಮತಮ್ ॥ ೨೮೯ ॥

---

೨೮೫. ಮುಂದೆ ಅಂಡವನ್ನು ಬಲರೂಪವನ್ನಾಗಿಯೂ, ತೇಜಸ್ಸನ್ನು ಶಿಶುರೂಪವನ್ನಾಗಿಯೂ ಪ್ರಾಜ್ಞರು ಹೇಳುವರು, ಅದು ಮರಣಹೊಂದಿದ ಅಂಡದಂತೆ ಉದರದಿಂದ ಹೊರಕ್ಕೆ ಹೊರಟು ಬಂತು.

೨೮೬. ತರುವಾಯ ಪ್ರಜಾಪತಿಯು ಆ ಅಂಡವನ್ನು ನೋಡಿ ಅದನ್ನು ಎರಡಾಗಿ ಭಾಗಮಾಡಿದನು. ಆ ಎರಡು ಭಾಗಗಳನ್ನು ಹಿಡಿದುಕೊಂಡು ಒಂದರಲ್ಲಿ ಗರ್ಭವನ್ನು ನೋಡಿದನು.

೨೮೭. ದುರ್ಬಲತೆಯಿಂದ ಕೂಡಿದ ತೇಜೋಮಯವಾದ ಆ ಗರ್ಭವನ್ನು ಒಂದು ಸಲ ನೋಡಿ ಅದನ್ನು ಎತ್ತಿ ಅದಿತಿದೇವಿಯ ತೊಡೆಯಲ್ಲಿ ಅರ್ಪಿಸಿದನು.

೨೮೮. ಮತ್ತು ಈ ಶಿಶುವು ಈ ವಿಧವಾದ ಅಂಡರೂಪದಿಂದ ಅದಿತಿಯ ಪುತ್ರಭಾವವನ್ನು ಹೊಂದಿ ಜನಿಸಿರುವನೆಂದು ಸ್ಮರಿಸಲ್ಪಟ್ಟಿರುವುದರಿಂದ ಮುಂದೆ ಪ್ರಾಜ್ಞರು ಈ ಸೂರ್ಯನನ್ನು ಮಾರ್ತಾಂಡ ಎಂದು ಕರೆಯುವರು.

೨೮೯. ಪ್ರಪಿತಾಮಹನಾದ ಪ್ರಜಾಪತಿಯು ಆ ಸೂರ್ಯನಿಗೆ ಅಧಿಕವಾದ ತೇಜಸ್ಸನ್ನು ನಿರ್ಮಾಣಮಾಡಿದನು. ಆ ಗರ್ಭಕ್ಕೆ ಇದ್ದ ಎರಡು ಅಂಡಕಪಾಲಗಳು ಉತ್ತಮವಾದ ಬಲಗರ್ಭಿತವಾಗಿದ್ದುವು.

ನಾಭೌ ಪೃಥಗ್ವ್ಯವಸ್ಥಾಪ್ಯ ಇರಾವತ್ಯೈ ದದೌ ಪ್ರಭುಃ ।
ಉದರೇ ಪ್ರವೇಶಯಾಮಾಸ ತಸ್ಯಾಃ ಸ ಜನನೇಚ್ಛಯಾ ॥ ೨೯೦ ॥

ಇರಾವತ್ಯಾಸ್ತಥಾ ಜಾತಾಶ್ಚತ್ವಾರೋ ಲೋಕಸಮ್ಮತಾಃ ।
ದೇವೋಪವಾಹ್ಯಾ ರಾಜಾನೋ ಹಸ್ತಿನೋ ಬಲವತ್ತರಾಃ ॥ ೨೯೧ ॥

ಐರಾವಣೋಽಥ ಕುಮುದೋ ಹ್ಯಂಜನೋ ವಾಮನಸ್ತಥಾ ।
ಉತ್ತರತ್ರ ಚ ವೋ ಭೂಯಸ್ತೇಷಾಂ ವಕ್ಷ್ಯಾಮಿ ವಿಸ್ತರಮ್॥ ೨೯೨ ॥

ಯೋಽಯಂ ಪ್ರಧಾನೋ ಲೋಕೇಽಸ್ಮಿನ್ ಅಧಿಕೇನಾಮಿತೌಜಸಾ ।
ಭಗವಾನ್ ಸವಿತಾ ಸಾಕ್ಷಾತ್ ಪ್ರಭಾಸಯತಿ ರಶ್ಮಿಭಿಃ ॥ ೨೯೩ ॥

ನಿರಾಲೋಕಂ ಜಗದಿದಂ ಲೋಕಾಲೋಕಾಂತರಂ ದ್ವಿಜಾಃ ।
ಬಾಹ್ಯಂ ತಮೋವೃತಂ ಸರ್ವಂ ತತ್ಪ್ರಮಾಣಮಶೇಷತಃ ॥ ೨೯೪ ॥

---

೨೯೦. ಪ್ರಭುವಾದ ಬ್ರಹ್ಮನು ಅವುಗಳನ್ನು ನಾಭಿಯಲ್ಲಿ ಬೇರೆಯಾಗಿಟ್ಟು ಇರಾವತಿಗೆ ಕೊಟ್ಟನು. ಮತ್ತು ಆಕೆಯ ಉದರದಲ್ಲಿ ಜನ್ಮ ವೆತ್ತುವುದಕ್ಕೋಸ್ಕರ ಅವುಗಳನ್ನು ಪ್ರವೇಶಮಾಡಿಸಿದನು.

೨೯೧. ಅದರಿಂದ ಇರಾವತಿಗೆ ಲೋಕಗಳಲ್ಲಿ ಪ್ರಸಿದ್ಧಿಯುಳ್ಳ, ದೇವತೆಗಳಿಗೆ ವಾಹನಗಳಾದ ಮಹಾಬಲಶಾಲಿಗಳಾದ ನಾಲ್ಕು ಗಜರಾಜಗಳು ಸಂತತಿಯಾಗಿ ಜನಿಸಿದುವು.

೨೯೨. ಆ ನಾಲ್ಕು ಗಜರಾಜಗಳು ಐರಾವಣ, ಕುಮುದ, ಅಂಜನ ಮತ್ತು ವಾಮನ ಎಂದು ನಾಮಾಂಕಿತಗಳಾಗಿದ್ದುವು. ಮುಂದೆ ಅವುಗಳ ಚರಿತ್ರೆಯನ್ನು ವಿಸ್ತಾರವಾಗಿ ಮತ್ತೆ ಹೇಳುತ್ತೇನೆ.

೨೯೩. ಈ ಲೋಕದಲ್ಲಿ ಅತ್ಯಧಿಕವಾದ ಮತ್ತು ಅಪಾರವಾದ ತೇಜಸ್ಸಿನಿಂದ ಪ್ರಧಾನನಾಗಿರುವ ಪೂಜ್ಯನಾದ ಸೂರ್ಯದೇವನು ತನ್ನ ಕಿರಣಗಳಿಂದ ಪ್ರತ್ಯಕ್ಷವಾಗಿ ಪ್ರಪಂಚವನ್ನು ಪ್ರಕಾಶಪಡಿಸುವನು.

೨೯೪. ದ್ವಿಜರೆ! ಹೀಗೆ ಸೂರ್ಯದೇವನ ಪ್ರಕಾಶಕ್ಕೆ ಬಾಹ್ಯವಾಗಿರುವ ಲೋಕಾಲೋಕ ಪರ್ವತದ ಅಂತರ ಭಾಗವು ಪ್ರಕಾಶಶೂನ್ಯವಾದ ಜಗದ್ರೂಪವಾಗಿ ಸಂಪೂರ್ಣವಾಗಿ ಅಷ್ಟು ಪರಿಮಾಣದಿಂದ ತುಂಬಿರುವುದು.

ಏತದುಕ್ತಂ ಮಯಾ ಸರ್ವಂ ಯಥಾವದ್ದ್ವಿಜಸತ್ತಮಾಃ ।
ಶ್ರುತಂ ಭಗವತೋ ವ್ಯಾಸಾತ್ ಪಾರಾಶರ್ಯಾನ್ಮಹಾತ್ಮನಃ ॥ ೨೯೫ ॥

ಸನತ್ಕುಮಾರೇಣ ಪುರಾ ಪ್ರೋಕ್ತಂ ವೈ ವಾಯುನಾ ಪುರಾ ।
ವಿಮೃಶ್ಯ ಬಹುಧಾ ತತ್ತು ಪುನರನ್ಯೈಃ ಪೃಥಕ್ ಪೃಥಕ್ ॥ ೨೯೬ ॥

ಪುರಾಣಾಮೃತಕಂ ಶ್ರುತ್ವಾ ಪುಣ್ಯಂ ಸರ್ವಾರ್ಥಸಾಧಕಮ್ ।
ಅಭಯೋ ವಿಚರತ್ಯೇವ ಜಾತ್ಯಂತರಶತಂ ಗತಃ ॥ ೨೯೭ ॥

ಮಾರ್ತಂಡಜನನಂ ಹ್ಯೇತದ್ ಗೇಹೇ ಯಸ್ಯ ವ್ಯವಸ್ಥಿತಮ್ ।
ಕಥ್ಯತೇ ವಾ ಕಥಾ ಯಸ್ಯ ನ ತಂ ವಿದ್ಧಿ ಸಮಾನಕಮ್ ॥ ೨೯೮ ॥

ನ ಚಾಕಾಲೇ ಮ್ರಿಯಂತೇಽಸ್ಯ ಬಾಲಾ ಅಪಿ ಕದಾಚನ ।
ಋಕ್ಷಸ್ಯ ಭಗಿನೀ ರಕ್ಷಾ ವಾನರಸ್ಯ ಬಲೀಯಸಃ ॥ ೨೯೯ ॥

---

೨೯೫. ದ್ವಿಜ ಶ್ರೇಷ್ಠರೇ ಪರಾಶರ ಪುತ್ರನಾದ ಮತ್ತು ಮಹಾತ್ಮನಾದ ವ್ಯಾಸ ಮುನಿಯಿಂದ ಶ್ರವಣಮಾಡಿರುವ ಈ ಚರಿತ್ರವು ವಾಸ್ತವವಾಗಿ ಎಲ್ಲವೂ ನನ್ನಿಂದ ನಿಮಗೆ ಹೇಳಲ್ಪಟ್ಟಿದೆ.

೨೯೬. ಹಾಗೆಯೇ ಹಿಂದೆ ಸನತ್ಕುಮಾರ ಮುನಿಯಿಂದಲೂ ವಾಯುದೇವನಿಂದಲೂ ಮತ್ತು ಇತರ ಅನೇಕ ಮಹಾತ್ಮರಿಂದಲೂ ಅನೇಕ ವಿಧವಾಗಿ ವಿಚಾರ ಮಾಡಿ ಈ ಪುರಾಣಚರಿತ್ರವು ಉಪದೇಶಮಾಡಲ್ಪಟ್ಟಿದೆ.

೨೯೭. ಪವಿತ್ರವೂ, ಸರ್ವ ಅರ್ಥಗಳನ್ನು ಸಾಧಿಸುವುದೂ ಆದ ಈ ಪುರಾಣಾಮೃತವನ್ನು ಶ್ರವಣಮಾಡಿದ ಮಾನವನು ಜನ್ಮಾಂತರಗಳಲ್ಲಿ ನಿರ್ಭಯನಾಗಿ ಸಂಚರಿಸುವನು.

೨೯೮. ಈ ಮಾರ್ತಂಡ ಜನನ ಆಖ್ಯಾನವು ಯಾವ ಮಾನವನ ಗೃಹದಲ್ಲಿ ಇರುವುದೋ, ಯಾವ ಮಾನವನಿಗೆ ಇದು ಹೇಳಲ್ಪಡುವುದೋ, ಅಂತಹ ಮಾನವನನ್ನು ಸಾಧಾರಣನನ್ನಾಗಿ ತಿಳಿಯಬೇಡ.

೨೯೯. ಅವನ ಗೃಹದಲ್ಲಿ ಈ ಪುಣ್ಯವೈಭವದಿಂದ ಯಾವಾಗಲೂ ಬಾಲಕರು ಅಕಾಲಮರಣವನ್ನು ಹೊಂದುವುದಿಲ್ಲ. ಬಲಶಾಲಿಯಾದ ಋಕ್ಷನೆಂಬ ವಾನರನ ಭಗಿನಿಯಾದ ರಕ್ಷಾ ಎಂಬುವಳು ಪ್ರಜಾಪತಿಯಿಂದ ಶೂರರಲ್ಲಿ ಗಣ್ಯನಾದ ಪುತ್ರನನ್ನು ಪ್ರಸವಿಸಿದಳು.

ಪ್ರಜಾಪತಿಸಕಾಶಾತ್ ಸಾ ಜಜ್ಞೇ ಶೂರಪರಿಗ್ರಹಮ್ ।
ಋಕ್ಷರಾಜಂ ಮಹಾಪ್ರಾಜ್ಞಂ ಜಾಂಬವಂತಂ ಯಶಸ್ವಿನಮ್॥ ೩೦೦ ॥

ತಸ್ಯ ಜಾಂಬವತೀ ನಾಮ ಸುತಾ ವ್ಯಾಘ್ರ್ಯಾಮಜಾಯತ ।
ವಾಸುದೇವಸ್ಯ ಸಾ ದತ್ತಾ ಪಿತ್ರಾ ರಾಜೀವಲೋಚನಾ ॥ ೩೦೧ ॥

ತಥಾನ್ಯೇ ಋಕ್ಷರಾಜಸ್ಯ ಸುತಾ ಜಾತಾ ಮಹಾಬಲಾಃ ।
ಜಯಂತೋಽಥ ಚ ಸರ್ವಜ್ಞೋ ಮೃಗರಾಟ್ ಸಂಕೃತಿರ್ಜಯಃ
॥ ೩೦೨ ॥
ಮಾರ್ಜಾರೋ ಬಲಿಬಾಹುಶ್ಚ ಲಕ್ಷಣಜ್ಞಃ ಶ್ರುತಾರ್ಥಕೃತ್ ।
ಭೋಜೋ ರಾಕ್ಷಸಜಿಚ್ಚೈವ ಪಿಶಾಚವನಗೋಚರೌ ॥ ೩೦೩ ॥

ಶರಭಃ ಶಲಭಶ್ಚೈವ ವ್ಯಾಘ್ರಃ ಸಿಹ್ಮಸ್ತಥೈವ ಚ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ॥ ೩೦೪ ॥

---

೩೦೦. ಆ ಪುತ್ರನು ಋಕ್ಷರಾಜನೂ ಮಹಾ ಪ್ರಾಜ್ಞನೂ ಮತ್ತು ಜಾಂಬವಾನ್ ಎಂಬ ಸಂಜ್ಞೆಯ ಪ್ರಸಿದ್ಧಿಯಿಂದ ಮಹಾ ಕೀರ್ತಿಯನ್ನು ಗಳಿಸಿದವನೂ ಆಗಿದ್ದನು.

೩೦೧. ಅವನಿಗೆ ವ್ಯಾಘ್ರಿ ಎಂಬ ಪತ್ನಿಯಲ್ಲಿ ಜಾಂಬವತಿಯೆಂಬ ಪುತ್ರಿಯು ಜನಿಸಿದಳು. ಕಮಲದಂತೆ ಸುಂದರ ನೇತ್ರಗಳಿಂದ ಕೂಡಿದ ಜಾಂಬವತಿಯು ತಂದೆಯಿಂದ ಶ್ರೀಕೃಷ್ಣನಿಗೆ ಕೊಡಲ್ಪಟ್ಟಳು.

೩೦೨. ಹಾಗೆಯೆ ಋಕ್ಷರಾಜನಿಗೆ ಮಹಾ ಬಲಿಷ್ಠರಾದ ಇತರ ಅನೇಕ ಪುತ್ರರು ಹುಟ್ಟಿದರು. ಅವರಲ್ಲಿ ಜಯಂತ, ಸರ್ವಜ್ಞ, ಮೃಗರಾಟ್, ಸಂಕೃತಿ, ಜಯ ಎಂಬುವರು ಕೆಲವರು ಸೇರಿರುವರು.

೩೦೩. ಮಾರ್ಜಾರ, ಬಲಿಬಾಹು, ಲಕ್ಷಣಜ್ಞ, ಶ್ರುತಾರ್ಥಕೃತ್, ಭೋಜ, ರಾಕ್ಷಸಜಿತ್, ಪಿಶಾಚ ಮತ್ತು ವನಗೋಚರ ಎಂಬುವರು ಕೆಲವರು ಋಕ್ಷರಾಜನ ಪುತ್ರರಾಗಿರುವರು.

೩೦೪. ಶರಭ, ಶಲಭ, ವ್ಯಾಘ್ರ ಮತ್ತು ಸಿಂಹ ಮುಂತಾದ ಅನೇಕ ಪುತ್ರರಿಂದ ಋಕ್ಷರಾಜನ ವಂಶವು ಸಂತತವಾಗಿ ಬೆಳೆಯಿತು. ಆ ಶತ ಸಹಸ್ರಸಂಖ್ಯಾತವಾದ ಪುತ್ರಪೌತ್ರರ ಗಣವು ಅನೇಕವಾಗಿತ್ತು.

ಋಕ್ಷಾಣಾಮೇವ ತು ಗಣೋ ದೇವದಾನವಪೂಜಿತಃ ।
ಮಾರ್ಜಾರಸ್ಯ ತು ಮಾರ್ಜಾರಾ ಮಾದ್ಯಾಃ ಪುತ್ರಾ ಮಹಾಬಲಾಃ ॥ ೩೦೫ ॥

ಬಭೂವುಃ ಶತಸಾಹಸ್ರಾಃ ಸರ್ವೇ ವೀರ್ಯಸಮನ್ವಿತಾಃ ।
ಆಚಾರ್ಯಾಃ ಶ್ವಾಪದಾದೀನಾಂ ಶರಭಾಣಾಂ ಮಹೌಜಸಃ ॥ ೩೦೬ ॥

ಖಾದಕಾಃ ಪೃಷತಾದೀನಾಂ ಮೂಷಿಕಾಣಾಂ ಚ ಪಕ್ಷಿಣಾಮ್ ।
ಲಾಘವೇ ಪ್ಲವನೇ ಯುಕ್ತಾಃ ಸರ್ವಸತ್ತ್ವಾವಸಾದಕಾಃ ॥ ೩೦೭ ॥

ಗ್ರಾಮೇಷು ವನಖಂಡೇಷು ಕೋಟರೇಷು ಗುಹಾಸು ಚ ।
ಗೃಹೇಷು ಗೃಹಗರ್ಭೇಷು ಗೃಹವಾಸಾವಲಂಬಿನಃ ॥ ೩೦೮ ॥

ನಾನಾಗತಿಷು ಸಂಚಾರಾಃ ಕುಶಲಾ ಗ್ರಾಮಗೋಚರಾಃ ।
ತಥಾ ವನಚರಾಶ್ಚೈವ ಸ್ವಭಾವಾತ್ ಸಮವಸ್ಥಿತಾಃ ॥ ೩೦೯ ॥

---

೩೦೫. ಹೀಗೆ ಋಕ್ಷಜಾತಿಯ ಗಣವು ದೇವ ದಾನವರಿಂದ ಪೂಜ್ಯವಾಗಿ ಮಹಾ ಮಹಿಮೆಯಿಂದ ಪೂರ್ಣವಾಗಿತ್ತು. ಮಾರ್ಜಾರ ಎಂಬುವನಿಗೆ ಬಲಯುತವಾದ ಅನೇಕ ಮಾರ್ಜಾರ ಪುತ್ರರಿದ್ದರು.

೩೦೬. ಇಂತಹ ವಾನರರು ಶ್ವಾಪದ, ಶರಭ ಮುಂತಾದ ಪ್ರಾಣಿಗಳಿಗೆ ಗುರುಗಳಾಗಿಯೂ ಮಹಾವೀರ್ಯ ಕಾಂತಿಗಳಿಂದ ಕೂಡಿದವರಾಗಿಯೂ ಆಗಿ ಶತ ಸಹಸ್ರಾದಿ ಅನೇಕ ಸಂಖ್ಯೆಯಿಂದ ಇದ್ದರು.

೩೦೭. ಹರಿಣ, ಮೂಷಕ, ಪಕ್ಷಿ ಮುಂತಾದುವುಗಳನ್ನು ಭಕ್ಷಿಸುತ್ತ ಮತ್ತು ಲಾಘವ, ಪ್ಲವನ ಮುಂತಾದ ಬಲಕರ್ಮಗಳಲ್ಲಿ ಪಟುಗಳಾಗಿಯೂ ಸರ್ವಪ್ರಾಣಿಗಳಿಗೆ ನಾಶಕರವಾಗಿಯೂ ಇದ್ದರು.

೩೦೮. ಆ ಜಾತಿಗಳು ಅನೇಕ ಗ್ರಾಮ, ಅರಣ್ಯಭಾಗ, ಪೊಟರೆ, ಗವಿ, ಮನೆ, ಗೃಹಗರ್ಭ ಮುಂತಾದ ವಿವಿಧ ದೇಶಗಳೆಂಬ ಗೃಹಗಳಲ್ಲಿ ವಾಸಮಾಡಿಕೊಂಡಿದ್ದುವು.

೩೦೯. ಅನೇಕ ಗಮ್ಯಸ್ಥಾನಗಳಲ್ಲಿ ಸಂಚರಿಸುವುವೂ, ಕೌಶಲದಿಂದ ಕೂಡಿರುವುವೂ, ಅನೇಕ ಗ್ರಾಮಚಾರಿಗಳೂ, ಸ್ವಾಭಾವಿಕವಾಗಿ ವನಚರಗಳಾಗಿಯೂ ಇದ್ದುವು.

ರಾತ್ರೌ ದಿವಾಚರಾಶ್ಚೈವ ಸಂಧ್ಯಾಸು ಚ ಚರಂತಿ ತೇ ।
ನೀಲಜೀಮೂತವರ್ಣಾಶ್ಚ ಕಪಿಲಾಃ ಕೇಕರಾರುಣಾಃ ॥ ೩೧೦ ॥

ಕೃಷ್ಣವರ್ಣಾಸ್ತಥಾ ಪಿಂಗಾ ಭಕ್ತಿಚಿತ್ರಾಸ್ತಥಾಪರೇ ।
ನಖದಂಷ್ಟ್ರಾಯುಧಾ ಘೋರಾ ಮಯೂರಸಮಭಾಷಣಾಃ ॥ ೩೧೧ ॥

ಸರಮಾಯಾಃ ಸುತೌ ಜಾತೌ ಶೂರೌ ಪರಮದುಃಸಹೌ ।
ಶ್ಯಾಮಶ್ಚ ಶಬಲಶ್ಚೈವ ಯಮಸ್ಯಾನುಚರೌ ಸ್ಮೃತೌ ॥ ೩೧೨ ॥

ತಯೋಃ ಪುತ್ರಾ ದುರಾಧರ್ಷಾಃ ಪುತ್ರಪೌತ್ರಸಮನ್ವಿತಾಃ ।
ಶ್ರುತಿಮಾಪ್ತಃ ಪುನರ್ವಂಶಃ ಸಾರಮೇಯೇಷು ಸರ್ವದಾ ॥ ೩೧೩ ॥

ಸಾಂಪ್ರತಂ ತತ್ಸಜಾತೀಯಾ ಘೋರರೂಪಾ ಮಹಾಬಲಾಃ ।
ವಿಷಾದಯಂತಿ ಚ ನರಾನ್ ಸರ್ವಜಾತಿಸಮನ್ವಿತಾನ್ ॥ ೩೧೪ ॥

---

೩೧೦. ಅವುಗಳು ರಾತ್ರಿ, ಹಗಲು, ಮತ್ತು ಸಂಧ್ಯಾಕಾಲವೆಂಬ ಎಲ್ಲ ಕಾಲಗಳಲ್ಲಿ ಸಂಚರಿಸುತ್ತಿರುವುವು, ಮತ್ತು ಆ ವಾನರರಲ್ಲಿ ಕೆಲವು ನೀಲಮೇಘದ ವರ್ಣ, ಕಪಿಲವರ್ಣ, ಕೆಂಬೂತದ ವರ್ಣ ಮುಂತಾದ ಅನೇಕವರ್ಣಗಳಿಂದ ಶೋಭಿತಗಳಾಗಿದ್ದುವು.

೩೧೧. ಮತ್ತೆ ಕೆಲವು ಕಪ್ಪು ಬಣ್ಣ, ಅನೇಕ ಧಾತುಗಳ ವರ್ಣಗಳಿಂದ ರಂಜಿತಗಳಾಗಿದ್ದುವು. ಮತ್ತು ಉಗುರು, ಕೋರೆಹಲ್ಲುಗಳು ಅವುಗಳಿಗೆ ಆಯುಧಗಳಾಗಿದ್ದುವು. ಮತ್ತು ನವಿಲಿನಂತೆ ವಿಚಿತ್ರವಾದ ಭಾಷಣವಿತ್ತು.

೩೧೨. ಸರಮಾ ಎಂಬುವಳಿಗೆ ಶೂರರೂ ಮತ್ತು ಅತ್ಯಂತ ಅಜೇಯರೂ ಆದ ಶ್ಯಾಮ-ಶಬಲ ಎಂಬ ಇಬ್ಬರು ಪುತ್ರರು ಜನಿಸಿದರು. ಅವರು ಯಮನಿಗೆ ಅನುಚರರಾಗಿರುವರೆಂದು ಸ್ಮರಿಸಲ್ಪಟ್ಟಿರುವರು.

೩೧೩. ಅವರಿಗೆ ಪುತ್ರ ಪೌತ್ರಾದಿಗಳಿಂದ ಅವಿಚ್ಛಿನ್ನಸಂತತಿಯನ್ನು ಪ್ರತಿಷ್ಠೆಗೊಳಿಸುವ ಅನೇಕ ಪುತ್ರರು ಹುಟ್ಟಿದರು. ಅವರ ವಂಶವು ಸಾರಮೇಯ ಎಂದು ಪ್ರಸಿದ್ಧಿಯನ್ನು ಹೊಂದಿರುವುದು.

೩೧೪. ಈಗ ಅವರ ಸಮಾನಜಾತಿಯೂ ಘೋರವಾದ ರೂಪವುಳ್ಳದ್ದೂ ಮಹಾಬಲಿಷ್ಠವೂ ಆದ ಪ್ರಾಣಿವರ್ಗವು ಸಕಲ ಜಾತಿಗಳಲ್ಲಿ ಹುಟ್ಟಿದ ಮಾನವರನ್ನು ವಿಷಾದಪಡಿಸುತ್ತಿರುವುದು.

ಗ್ರಾಮಾಸಕ್ತೋ ನಿವಾಸಸ್ತು ತೇಷಾಮೇವ ಭವತ್ಯುತ ।
ಯ ಇದಂ ಶೃಣುಯಾಜ್ಜನ್ಮ ದಂಷ್ಟ್ರಿಣಾಂ ಶ್ರಾವಯೇತ್ತು ಯಃ॥ ೩೧೫ ॥

ದಂಷ್ಟ್ರಿಭ್ಯೋ ನ ಭಯಂ ತಸ್ಯ ನ ಚೋರೇಭ್ಯೋ ನ ಚಾನ್ಯತಃ ।
ತಾತ್ಕಾಲಮರಣಂ ಚೈವ ಭವತೀತಿ ವಿನಿರ್ಣಯಃ ॥ ೩೧೬ ॥

ನ ಚ ಬಂಧನಮಾಪ್ನೋತಿ ನ ವಿಯೋನಿಂ ನ ಸಂಕರಮ್ ।
ವಾನಪ್ರಸ್ಥಾಶ್ರಿತಂ ಧರ್ಮಮಾಪ್ನೋತಿ ಮುನಿಸೇವಿತಮ್ ॥ ೩೧೭ ॥

ಸಂಪನ್ನಶ್ಚೈವ ದಿವ್ಯೇನ ಧನೇನ ಚ ಬಲೇನ ಚ ।
ಚ್ಯವತೇ ನ ಚ ಜ್ಞಾನೇನ ಜಾಯತೇ ದೇವಯೋನಿಷು ॥ ೩೧೮ ॥

ದ್ವೀಪಿನಃ ಶರಭಾಃ ಸಿಹ್ಮಾ ವ್ಯಾಘ್ರಾ ನೀಲಾಶ್ಚ ಶಲ್ಯಕಾಃ ।
ಋಕ್ಷಾ ಮಾರ್ಜಾರಲೋಹಾಸಾ ವಾನರಾ ಮಾಯುವಸ್ತಥಾ ॥ ೩೧೯ ॥

---

೩೧೫. ಅವುಗಳಿಗೆ ಗ್ರಾಮಗಳಲ್ಲಿ ವಾಸವು ನಿಯತವಾಗಿ ಕಲ್ಪಿಸಲ್ಪಟ್ಟಿರುವುದು. ಈ ದಂಷ್ಟ್ರಿಗಳಿಂದ ಕೂಡಿದ ಪ್ರಾಣಿಗಳ ಜನ್ಮ ಚರಿತ್ರವನ್ನು ಮಾನವನು ಶ್ರವಣ ಮಾಡುವುದು ಪುಣ್ಯಸಾಧನೋಪಾಯವು.

೩೧೬. ಮತ್ತು ಅಂತಹ ಮಾನವನಿಗೆ ದಂಷ್ಟ್ರಿ ಪ್ರಾಣಿಗಳಿಂದಲೂ ಕಳ್ಳರಿಂದಲೂ, ಬೇರೆ ಯಾವ ಪ್ರಾಣಿಯಿಂದಲೂ ಭೀತಿಯುಂಟಾಗುವುದಿಲ್ಲ. ಮತ್ತು ಅವನಿಗೆ ಅಕಾಲ ಮರಣವು ಸಂಭವಿಸುವುದಿಲ್ಲವೆಂಬುದು ಪ್ರಾಮಾಣಿಕವಾದ ವ್ಯವಸ್ಥೆಯು.

೩೧೭. ಮತ್ತು ಬಂಧನವನ್ನು ಹೊಂದುವುದಿಲ್ಲ. ಮತ್ತೆ ಕೆಟ್ಟಯೋನಿಯಲ್ಲಿ ಜನ್ಮವೆತ್ತುವುದಿಲ್ಲ. ಮತ್ತು ವರ್ಣ ಸಂಕರ ದೋಷವನ್ನು ಹೊಂದುವುವಿಲ್ಲ. ಅನೇಕ ಮುನಿಗಳಿಂದ ಪರಿಗ್ರಹಿಸಲ್ಪಟ್ಟ ವಾನ ಪ್ರಸ್ಥ ಧರ್ಮವನ್ನು ಆಶ್ರಯಿಸುತ್ತಾನೆ.

೩೧೮. ಮತ್ತು ಅಂತಹ ಮಾನವನು ದಿವ್ಯವಾದ ಧನ, ಧಾನ್ಯ, ಬಲ ಇವುಗಳಿಂದ ಸಂಪನ್ನನಾಗುವನು. ಮತ್ತು ಜ್ಞಾನದಿಂದ ಭ್ರಷ್ಟನಾಗುವುದಿಲ್ಲ. ಉತ್ತಮವಾದ ದೇವಯೋನಿಯಲ್ಲಿ ಹುಟ್ಟುತ್ತಾನೆ.

೩೧೯. ಹೀಗೆ ದ್ವೀಪಿ, ಶರಭ, ಸಿಹ್ಮ, ವ್ಯಾಘ್ರ, ನೀಲ, ಶಲ್ಯಕ, ಋಕ್ಷ, ಮಾರ್ಜಾರ, ಲೋಹಾಸ, ವಾನರ ಮತ್ತು ಮಾಯು ಎಂದು ವಿವಿಧವಾಗಿರುವ ಸಮಸ್ತ ಪ್ರಾಣಿಗಳು ವಾನರ ಜಾತಿಯ ಪ್ರಭೇದಗಳಾಗಿರುವುವು.

**ಏತಾ ಏಕಾದಶ ಮತಾ ವಾನರಾಣಾಂ ತು ಜಾತಯಃ ।**
**ಏಷಾಂ ಪ್ರಣೇತಾ ಸರ್ವೇಷಾಂ ವಾಲೀ ರಾಜಾ ಪ್ರತಾಪವಾನ್॥ ೩೨೦ ॥**

**ದೇವಾಸುರವಿಮರ್ದೇಷು ಜಿಷ್ಣುತಾಂ ನಿತ್ಯಮಾನಿನಾಮ್ ।**
**ಪ್ರಸಹ್ಯ ಹಂತಾ ರೌದ್ರಾಣಾಮಸುರಾಣಾಂ ಬಲೀಯಸಾಮ್ ॥ ೩೨೧ ॥**

**ಉತ್ಸಿಕ್ತಬಲನಾಶಾಯ ವಿಚಿಂತ್ಯ ತು ಮಹಾತ್ಮನಾ ।**
**ಪಕ್ಷ ಏಷ ಸಮುದ್ದಿಷ್ಟೋ ಮಹೇಂದ್ರಸ್ಯ ಸಹಾಯವಾನ್ ॥ ೩೨೨ ॥**

**ವಿಹಿತಃ ಪೂರ್ವಮೇವಾತ್ರ ಬ್ರಹ್ಮಣಾ ಲೋಕಧಾರಿಣಾ ।**
**ಇತ್ಯೇತೇ ಹರಯಃ ಪ್ರೋಕ್ತಾ ಇರಾವತ್ಯಾ ನಿಬೋಧತ ॥ ೩೨೩ ॥**

**ಸೂರ್ಯಸ್ಯಾಂಡಕಪಾಲೇ ದ್ವೇ ಸಮಾನೀಯ ತು ಭೌವನಃ ।**
**ಹಸ್ತಾಭ್ಯಾಂ ಪರಿಗೃಹ್ಯಾಥ ರಥಂತರಮಗಾಯತ ॥ ೩೨೪ ॥**

---

೩೨೦. ಹೀಗೆ ಒಟ್ಟಾಗಿ ವಾನರ ಜಾತಿಗಳು ಹನ್ನೊಂದು ವಿಧವಾಗಿವೆಯೆಂದು ಮುನಿಗಳ ಮತವು. ಈ ಎಲ್ಲ ವಾನರ ಜಾತಿಯನ್ನು ಇರಿಸಲು ಪ್ರತಾಪವಂತನಾದ ವಾಲಿಯೆಂಬ ಕಪಿರಾಜನು ಮೂಲಕಾರಣನಾಗಿರುವನು.

೩೨೧. ದೇವ–ದಾನವರ ಪರಸ್ಪರ ಯುದ್ಧಗಳಲ್ಲಿ ನಿತ್ಯಮಾನಿಗಳಾಗಿ ಶತ್ರು ಪಕ್ಷವನ್ನು ಸಂಹಾರಮಾಡುತ್ತಿರುವ ಬಲವಂತರಾದ ರೌದ್ರ ರಾಕ್ಷಸರನ್ನು ಬಲಾತ್ಕರಿಸಿ ನಿಗ್ರಹಿಸಲು ಈ ವಾಲಿಯು ಸಮರ್ಥನಾಗಿರುವನು.

೩೨೨. ಮಹಾತ್ಮನಾದ ಬ್ರಹ್ಮನು ಮತ್ತರಾದ ಶತ್ರುಗಳ ಸೈನ್ಯವನ್ನು ಸಂಹಾರ ಮಾಡಲು ಬಹುವಾಗಿ ಯೋಚಿಸಿ ಮಹೇಂದ್ರನಿಗೆ ಸಹಾಯಾರ್ಥವಾಗಿ ಈ ವಾಲಿಯ ಸಹಾಯವನ್ನು ಕಲ್ಪಿಸಿರುವನು.

೩೨೩ ಸಮಸ್ತ ಲೋಕಗಳನ್ನು ಧರಿಸಿರುವ ಬ್ರಹ್ಮನಿಂದ ವಾಲಿಯ ಜನ್ಮವು ಈ ಉದ್ದೇಶದಿಂದ ಏರ್ಪಡಿಸಲ್ಪಟ್ಟಿದೆ. ಈ ರೀತಿಯಾಗಿ ಹರಿ ಎಂಬುವಳಲ್ಲಿ ಹುಟ್ಟಿರುವ ಪ್ರಜಾವರ್ಗವನ್ನು ಕೇಳಿರುವಿರಿ. ಮುಂದೆ ಇರಾವತಿಯ ಸಂತತಿಯನ್ನು ಕೇಳಿರಿ.

೩೨೪. ಭೌವನನೆಂಬುವನು ಸೂರ್ಯನ ಎರಡು ಅಂಡಕಪಾಲಗಳನ್ನು ತಂದು ತನ್ನ ಎರಡು ಹಸ್ತಗಳಿಂದ ಹಿಡಿದುಕೊಂಡು ರಥಂತರವೆಂಬ ಸಾಮವನ್ನು ಗಾನ ಮಾಡಿದನು.

ಸಾಮ್ನಾ ಪ್ರಸ್ತೂಯಮಾನೇ ತು ಸದ್ಯ ಏವ ಗತೋಽಭವತ್ ।
ಸಂಪ್ರಾಯಚ್ಛದಿರಾವತ್ಯೈ ಪುತ್ರಾರ್ಥಂ ಸ ತು ಭೌವನಃ ॥ ೩೨೫ ॥

ಇರಾವತ್ಯಾಃ ಸುತೋ ಯಸ್ಮಾತ್ ತಸ್ಮಾದೈರಾವಣಃ ಸ್ಮೃತಃ ।
ದೇವರಾಜೋಪವಾಹ್ಯತ್ವಾತ್ ಪ್ರಥಮಃ ಸ ಮತಂಗರಾಟ್ ॥ ೩೨೬ ॥

ಶ್ವೇತಾಭ್ರಾಭಶ್ಚತುರ್ದಂತಃ ಶ್ರೀಮಾನೈರಾವತೋ ಗಜಃ ।
ಅಂಜನಸ್ಯೈಕ ಮೂಲಸ್ಯ ಸುವರ್ಣಾಭಸ್ಯ ಹಸ್ತಿನಃ ॥ ೩೨೭ ॥

ಷಡ್ದಂತಸ್ಯ ಹಿ ಭದ್ರಸ್ಯ ಹ್ಯುಪವಾಹ್ಯಸ್ಯ ವೈ ಬಲೇಃ ।
ತಸ್ಯ ಪುತ್ರೋಽಂಜನಶ್ಚೈವ ಸುಪ್ರತೀಕಶ್ಚ ವಾಮನಃ ॥ ೩೨೮ ॥

ಪದ್ಮಶ್ಚೈವ ಚತುರ್ಥೋಽಭೂದ್ಧಸ್ತಿನೀ ಚಾಭ್ರಮುಸ್ತಥಾ ।
ದಿಗ್ಗಜಾನ್ ಬಲಿನಶ್ಚೈವಾಭ್ರಮುರ್ಜನಯತಾಪ್ಸುಗಾನ್ ॥ ೩೨೯ ॥

---

೩೨೫. ಈ ರೀತಿಯಾಗಿ ಸಾಮಗಾನವನ್ನು ಪ್ರಾರಂಭಿಸಲಾಗಿ ಅಲ್ಲಿ ಒಂದು ಶಿಶುವು ಹುಟ್ಟಿತು. ಆ ಭೌವನನು ಅದನ್ನು ಪುತ್ರಾರ್ಥಿನಿಯಾದ ಇರಾವತಿಗೆ ಕೊಟ್ಟನು.

೩೨೬. ಇರಾವತಿಯ ಪುತ್ರನಾದುದರಿಂದ ಆ ಪುತ್ರನಿಗೆ ಐರಾವಣ ಎಂಬ ಅನ್ವರ್ಥವಾದ ನಾಮವು ಉಂಟಾಯಿತು, ಅದು ದೇವರಾಜನಾದ ಇಂದ್ರನ ವಾಹನವಾದ ಆನೆಯಾದ್ದರಿಂದ ಗಜರಾಜನಾಯಿತು.

೩೨೭. ಆ ಐರಾವತಗಜವು ಬಿಳಿಯ ಮೋಡದಂತೆ ವರ್ಣವುಳ್ಳದೂ ನಾಲ್ಕು ದಂತಗಳಿಂದ ಕೂಡಿರುವುದೂ ಆಗಿ ಕಾಂತಿಯಿಂದ ಶೋಭಿಸುತ್ತಲಿತ್ತು, ಸುವರ್ಣದಂತೆ ಕಾಂತಿಯುಳ್ಳ ಅಂಜನವೆಂಬ ಆನೆಗೆ ಸಂತತಿಯು ಉಂಟಾಯಿತು.

೩೨೮. ಆ ಅಂಜನ ಗಜವು ಆರುದಂತಗಳಿಂದ ಕೂಡಿರುವುದೂ, ಭದ್ರವೆಂಬ ಜಾತಿ ವಿಶೇಷವೂ, ಬಲಿಯ ವಾಹನವೂ ಆಗಿದ್ದಿತು. ಅದಕ್ಕೆ ನಾಲ್ಕು ಪುತ್ರರ ಪೈಕಿ ಮೂರು ಮಂದಿಯು ಅಂಜನ, ಸುಪ್ರತೀಕ ಮತ್ತು ವಾಮನ ಎಂಬ ಹೆಸರನ್ನು ಧರಿಸಿದ್ದವು.

೩೨೯. ನಾಲ್ಕನೆಯದು ಪದ್ಮನಾಮಾಂಕಿತವಾಗಿತ್ತು ಹಾಗೆ ಅಭ್ರಮು ಎಂಬ ಒಂದು ಹೆಣ್ಣಾನೆಯು ಪುತ್ರಿಯಾಗಿತ್ತು. ಆ ಅಭ್ರಮು ಎಂಬುವುದು ಜಲದಲ್ಲಿ ಸಂಚರಿಸುವ ಬಲಶಾಲಿಗಳಾದ ದಿಗ್ಗಜಗಳನ್ನು ಪ್ರಸವಿಸಿತು.

ಭದ್ರಂ ಮೃಗಂ ಚ ಮಂದಂ ಚ ಸಂಕೀರ್ಣಂ ಚತುರಃ ಸುತಾನ್ ।
ಸಂಕೀರ್ಣೋ ಹ್ಯಂಜನೋ ಯೋಽಸಾವೌಪವಾಹ್ಯೋ ಯಮಸ್ಯ ಸಃ ॥ ೩೩೦ ॥

ಭದ್ರೋ ಯಃ ಸುಪ್ರತೀಕಸ್ತು ಹರಿತಃ ಸ ಹ್ಯಪಾಂಪತೇಃ ।
ಪದ್ಮೋ ಮಂದಸ್ತು ಯೋ ಗೌರೋ ದ್ವಿಪೋ ಹ್ಯೈಲಬಿಲಸ್ಯ ಚ ॥ ೩೩೧ ॥

ಮೃಗಶ್ಯಾಮಸ್ತು ಯೋ ಹಸ್ತೀ ಚೌಪವಾಹ್ಯಃ ಸ ಪಾವಕೇಃ ।
ಪದ್ಮೋತ್ತಮಃ ಪದ್ಮಗುಲ್ಮೋ ಗಜೋ ವಾತಗಜೋ ಗಜಃ ॥ ೩೩೨ ॥

ಚಪಲೋಽರಿಷ್ಟಸಂಜ್ಞಶ್ಚ ತಸ್ಯಾಷ್ಟೌ ಜಜ್ಞಿರೇ ಸುತಾಃ ।
ಉದಗ್ರಭಾವೇನೋಪೇತಾ ಜಾಯಂತೇ ತಸ್ಯ ಚಾನ್ವಯೇ ॥ ೩೩೩ ॥

ಶ್ವೇತವಾಲನಖಾಃ ಪಿಂಗಾ ವರ್ಷಾವಂತೋ ಮತಂಗಜಾಃ ।
ಸಾಮಜಾಂಸ್ತು ಪ್ರವಕ್ಷ್ಯಾಮಿ ನಾಗಾನನ್ಯಾನಪಿ ಕ್ರಮಾತ್ ॥ ೩೩೪ ॥

---

೩೩೦. ಭದ್ರ, ಮೃಗ, ಮಂದ್ರ ಮತ್ತು ಸಂಕೀರ್ಣವೆಂಬುದಾಗಿ ನಾಲ್ಕು ಮಂದಿ ಪುತ್ರರ ಜಾತಿಗಳಿದ್ದುವು, ಸಂಕೀರ್ಣವೆಂಬ ಗಜವು ಯಮನ ವಾಹನ ವಾದ ದಿಗ್ಗಜವಾಗಿದ್ದಿತು.

೩೩೧. ಭದ್ರ ಜಾತಿಯ ಸುಪ್ರತೀಕವೆಂಬ ಗಜವು ಪಶ್ಚಿಮ ದಿಗಧಿಪತಿಯಾದ ವರುಣನ ವಾಹನವಾಗಿದ್ದಿತು. ಮಂದ ಜಾತಿಯ ಪದ್ಮ ಎಂಬ ಗೌರವರ್ಣದ ಗಜವು ಕುಬೇರನ ವಾಹನವಾಗಿದ್ದಿತು.

೩೩೨. ಮೃಗದಂತೆ ಕಪ್ಪು ಬಣ್ಣವುಳ್ಳದ್ದರಿಂದ ಮೃಗಶ್ಯಾಮವೆಂಬ ಅನ್ವರ್ಥ ನಾಮಾಂಕಿತವಾದ ಗಜವು ಅಗ್ನಿಯ ವಾಹನವಾಗಿದ್ದಿತು. ಆ ಗಜಕ್ಕೆ ಅಂತಹಮೃಗ ಶ್ಯಾಮ ಪದ್ಮೋತ್ತಮ, ಪದ್ಮಗುಲ್ಮ, ಗಜ, ಅಗಜ, ವಾತಗಜ ಎಂಬುದಾಗಿ ಕೆಲವು ಪುತ್ರರಿದ್ದರು.

೩೩೩. ಮತ್ತು ಚಪಲ ಅರಿಷ್ಟ ಎಂಬುವು ಕೂಡಿ ಎಂಟು ಮಂದಿ ಪುತ್ರರು ಅಗ್ನಿಯ ದಿಗ್ಗಜಕ್ಕೆ ಇದ್ದರು. ಆ ಪುತ್ರರು ಉನ್ನತವಾದ ಪ್ರಭಾವದಿಂದ ಕೂಡಿ ಆ ವಂಶದಲ್ಲಿ ಹುಟ್ಟಿರುವರು.

೩೩೪. ಬಿಳಿಯ ಬಣ್ಣದ ಬಾಲ, ಉಗುರುಗಳಿಂದ ಕೂಡಿ ಪಿಂಗಳ ವರ್ಣದಿಂದ ಶೋಭಿಸಲ್ಪಟ್ಟವುಗಳಾಗಿ ಮದವೃಷ್ಟಿಯನ್ನು ಸುರಿಸುತ್ತಲಿದ್ದ ಮಹಾಗಜಗಳಾದುವು ಇವಲ್ಲದೆ ಸಾಮಗಾನದಿಂದ ಹುಟ್ಟಿರುವ 'ಇತರ ಗಜಗಳನ್ನು ಕ್ರಮದಿಂದ ವರ್ಣಿಸು ತ್ತೇನೆ.

ಕಪಿಲಃ ಪುಂಡರೀಕಶ್ಚ ಸುನಾಮಾನೌ ರಥಂತರಾತ್ ।
ಜಾತೌ ನಾಮ್ನಾ ಶ್ರುತೌ ತಾಭ್ಯಾಂ ಸುಪ್ರತೀಕಪ್ರಮರ್ದನೌ ॥ ೩೩೫ ॥

ಶೂರಾಃ ಸ್ಥೂಲಶಿರೋದಂತಾಃ ಶುದ್ಧಬಾಲನಖಾಸ್ತಥಾ ।
ಬಲಿನ ಶಂಕಿತಾಶ್ಚೈವ ಸ್ಮೃತಾಸ್ತದ್ವಂಶಿನೋ ಗಜಾಃ ॥ ೩೩೬ ॥

ಪುಷ್ಪದಂತೋ ಬೃಹತ್ಸಾಮ್ನಃ ಷಡ್ದಂತಃ ಪದ್ಮಪುಚ್ಛವಾನ್ ।
ತಾಮ್ರಪರ್ಣಶ್ಚ ತತ್ಪುತ್ರಾಃ ಸಂಘಚಾರಿವಿಷಾಣಿನಃ ॥ ೩೩೭ ॥

ಅನ್ವಯೇ ಚಾಸ್ಯ ಜಾಯಂತೇ ಲಂಬೋಷ್ಠಾಶ್ಚಾರುದರ್ಶನಾಃ ।
ಶ್ಯಾಮತ್ವಗ್ರಸನಾಶುಂಡಾ ನಾಗಾಃ ಪೀನಾಯತಾನನಾಃ ॥ ೩೩೮ ॥

ವಾಮದೇವೋಽಂಜನಃ ಶ್ಯಾಮಃ ಸಾಮ್ನೋ ಜಜ್ಞೇಽಥ ವಾಮನಃ ।
ಭಾರ್ಯಾ ಚೈವಾಂಗನಾ ತಸ್ಯ ನೀಲವಲ್ಲಕ್ಷಣೌ ಸುತೌ ॥ ೩೩೯ ॥

---

೩೩೫. ರಥಂತರ ಸಾಮದಿಂದ ಕಪಿಲ, ಪುಂಡರೀಕವೆಂಬ ಶುಭನಾಮಾಂಕಿತ ಗಳಾದ ಗಜಗಳು ಹುಟ್ಟಿದುವು. ಅವುಗಳಿಗೆ ಸುಪ್ರತೀಕ, ಪ್ರಮರ್ದನ ಎಂಬ ನಾಮ ಧೇಯಗಳಿಂದ ಪ್ರಸಿದ್ಧವಾದ ಎರಡು ಗಜಗಳು ಜನಿಸಿದುವು.

೩೩೬. ಅವರ ವಂಶದಲ್ಲಿ ಹುಟ್ಟಿದ ಸಮಸ್ತ ಗಜಗಳು ಶೂರವಾದುವುಗಳೂ ಸ್ಥೂಲವಾದ ಶಿರಸ್ಸು, ದಂತಗಳುಳ್ಳವುಗಳೂ, ಶುದ್ಧವಾದ ಬಾಲ, ನಖಗಳುಳ್ಳವುಗಳೂ ಬಲಶಾಲಿಗಳೂ ಮತ್ತು ಶಂಕಾರಹಿತವಾದುವುಗಳೂ ಆಗಿದ್ದುವು.

೩೩೭. ಬೃಹತ್ಸಾಮದಿಂದ ಪುಷ್ಪದಂತವೆಂಬ ಹೆಸರಿನ ಗಜವು ಜನಿಸಿರುವುದು. ಅದಕ್ಕೆ ಷಡ್ದಂತ, ಪದ್ಮಪುಚ್ಛವಾನ್, ತಾಮ್ರಪರ್ಣ ಎಂಬ ಗುಂಪಾಗಿ ಸಂಚರಿಸುವ ಶೀಲವುಳ್ಳ ಪುತ್ರರು ಜನಿಸಿದರು.

೩೩೮. ಇದರ ವಂಶದಲ್ಲಿ ಲಂಬಾಯಮಾನವಾದ ಓಷ್ಠ, ಕಪ್ಪಾದ ಚರ್ಮ, ಸೊಂಡಲು, ನಾಲಿಗೆ ಮತ್ತು ದಪ್ಪವಾಗಿಯೂ ವಿಸ್ತಾರವಾಗಿಯೂ ಇರುವ ಮುಖ ಗಳಿಂದ ರಮ್ಯವಾದ ದರ್ಶನವುಳ್ಳ ಗಜಗಳು ಹುಟ್ಟುದವು.

೩೩೯. ಕಾಡಿಗೆಯಂತೆ ಕಪ್ಪಾದ ವಾಮನವೆಂಬ ಆನೆಯು ವಾಮದೇವಸಾಮ ದಿಂದ ಉತ್ಪನ್ನವಾಗಿರುವುದು. ಅದಕ್ಕೆ ಅಂಗನಾ ಎಂಬ ಭಾರ್ಯೆಯು ಮತ್ತು ನೀಲ ವಾನ್, ಲಕ್ಷಣ ಎಂಬ ಪುತ್ರರು ಇದ್ದರು.

**ಚಂಡಾಶ್ಚಾರುಶಿರೋಗ್ರೀವಾ ವ್ಯೂಢೋರಸ್ಕಾಸ್ತರಸ್ವಿನಃ ।**
**ನೀಚೈರ್ಬದ್ಧಾಃ ಕುಲೇ ತಸ್ಯ ಜಾಯಂತೇ ನಿಬಿಡಾ ಗಜಾಃ ॥ ೩೪೦ ॥**

**ಸುಪ್ರತೀಕಸ್ತು ವೈರೂಪ್ಯಾತ್ ಸಾಮ್ನಃ ಸಾರೂಪ್ಯಮಾಗತಃ ।**
**ತಸ್ಯ ಪ್ರಹಾರೀ ಸಂಪಾತಿಃ ಪೃಥುಶ್ಚೇತಿ ಸುತಾಸ್ತ್ರಯಃ ॥ ೩೪೧ ॥**

**ಪ್ರಾಂಶವೋ ದೀರ್ಘತಾಲ್ವೋಷ್ಠಾಃ ಸುವಿಭಕ್ತಶಿರೋರುಹಾಃ ।**
**ಜಾಯಂತೇ ಮೃದುಸಂಭೋಗಾ ವಂಶೇ ತಸ್ಯ ಮತಂಗಜಾಃ ॥ ೩೪೨ ॥**

**ಅಂಜನಾದಂಜನಃ ಸಾಮ್ನೋ ವಿಜಜ್ಞೇ ಚಾಂಜನಾವತೀ ।**
**ಸುತೌ ಜಾತೌ ತಯೋಶ್ಚಾಪಿ ಪ್ರಮಾಥಿಪುರುಷೌ ಸ್ಮೃತೌ ॥ ೩೪೩ ॥**

**ಮಹಾವಿಭಕ್ತಶಿರಸಃ ಸ್ನಿಗ್ಧಜೀಮೂತಸನ್ನಿಭಾಃ ।**
**ಸುದರ್ಶನಾಃ ಸುವರ್ಷ್ಮಾಣಃ ಪದ್ಮಾಭಾಃ ಪರಿಮಂಡಲಾಃ ॥ ೩೪೪ ॥**

---

೩೪೦. ಅದರ ವಂಶದಲ್ಲಿ ಅತಿ ಕ್ರೂರವಾದ ಸುಂದರವಾದ ಶಿರಸ್ಸು, ಕಂಠಗಳುಳ್ಳ, ವಿಶಾಲವಾದ ಎದೆಯುಳ್ಳ ಮಹಾ ವೇಗಶಾಲಿಗಳಾದ ಮತ್ತು ಹ್ರಸ್ವಾಕಾರವಾಗಿ ಬೆಳೆದ ದಟ್ಟವಾದ ಗಜಗಳು ಹುಟ್ಟಿರುವುವು.

೩೪೧. ಸುಪ್ರತೀಕವೆಂಬ ಗಜವು ವೈರೂಪ್ಯವೆಂಬ ಸಾಮದಿಂದ ಸರೂಪವಾದ ಪುತ್ರತ್ವವನ್ನು ಹೊಂದಿರುವುದು. ಅದಕ್ಕೆ ಪ್ರಹಾರೀ, ಸಂಪಾತೀ, ಮತ್ತು ಪೃಥುಎಂಬ ನಾಮಾಂಕಿತಗಳಾದ ಮೂರು ಪುತ್ರರು ಹುಟ್ಟಿದರು.

೩೪೨. ಅದರ ವಂಶದಲ್ಲಿ ಹುಟ್ಟಿರುವ ಗಜಗಳು ದೀರ್ಘಾಕಾರ, ದೀರ್ಘವಾದ ತಾಲು ಓಷ್ಠ, ವಿಂಗಡಿಸಿದಂತೆ ಇರುವ ಕೂದಲು, ಮೃದುವಾದ ದೇಹ ಇವುಗಳಿಂದ ಕೂಡಿದವುಗಳಾಗಿ ಇರುತ್ತವೆ.

೩೪೩. ಅಂಜನಾವತಿಯು ಅಂಜನವೆಂಬ ಸಾಮದಿಂದ ಪುತ್ರರನ್ನು ಪ್ರಸವಿಸಿದಳು. ಅವರಿಗೆ ಪ್ರಮಾಥಿ ಮತ್ತು ಪುರುಷ ಎಂಬ ನಾಮಪ್ರಸಿದ್ಧಿಯಿಂದ ಕೂಡಿದ ಇಬ್ಬರು ಪುತ್ರರು ಜನಿಸಿರುವರು.

೩೪೪. ಮಹಾಪರಿಮಾಣದಿಂದ ಕೂಡಿದ, ವಿಭಕ್ತವಾಗಿ ತೋರುವ, ಶಿರಸ್ಸುಗಳಿಂದಲೂ ದಟ್ಟವಾದ ಮೋಡದಂತೆ ನೀಲವರ್ಣದಿಂದಲೂ, ಸುಂದರವಾದ ದೇಹಗಳಿಂದಲೂ ಪದ್ಮವೆಂಬ ಗುಂಡಾಗಿರುವ ಚಿಹ್ನೆಗಳಿಂದಲೂ ಶೋಭಿಸಿತ್ತಿರುವ ಸುಂದರವಾದ ಗಜಗಳು ಆ ವಂಶದಲ್ಲಿ ಹುಟ್ಟಿರುವುವು.

ಘೋರಾಃ ಪೀನಾಯತಮುಖಾ ಗಜಾಸ್ತಸ್ಯಾನ್ವಯೇಽಭವನ್ ।
ಜಜ್ಞೇ ಚಾಂದ್ರಮಸಃ ಸಾಮ್ನಾ ಕುಮುದಃ ಕುಮುದದ್ಯುತಿಃ ॥ ೩೪೫ ॥

ಪಿಂಗಲಾಯಾಂ ಸುತೌ ತಸ್ಯ ಮಹಾಪದ್ಮೋರ್ಮಿಮಾಲಿನೌ ।
ಶೈಲಜೀಮೂತಸಂಕಾಶಾನ್ ಸುಬುದ್ಧಾನ್ ಬಲಿನೋ ವರಾನ್
॥ ೩೪೬ ॥

ಹಸ್ತಿಯುದ್ಧಪ್ರಿಯಾನ್ನಾಗಾನ್ ವಿದ್ಧಿ ತಸ್ಯ ಕುಲೋದ್ಭವಾನ್ ।
ಏತಾನ್ ದೇವಾಸುರೇ ಯುದ್ಧೇ ಜಯಾರ್ಥಂ ಜಗೃಹುಃ ಸುರಾಃ
॥ ೩೪೭ ॥

ಕೃತಾರ್ಥೈಶ್ಚ ವಿಸೃಷ್ಟಾಸ್ತೇ ಪೂರ್ವೋಕ್ತಾಃ ಪ್ರಯಯುರ್ದಿಶಃ ।
ಏತೇಷಾಂ ಚಾನ್ವಯೇ ಜಾತಾನ್ ವಿನೀತಾಂಸ್ತ್ರಿದಶಾ ದದುಃ॥ ೩೪೮ ॥

ಅಂಗಾಯ ಲೋಮಪಾದಾಯ ಸೂತ್ರಕಾರಾಯ ವೈ ದ್ವಿಪಾನ್ ।
ದ್ವಿರದೋ ರದನದ್ವಾಭ್ಯಾಂ ಹಸ್ತೀ ಹಸ್ತಾತ್ ಕರಾತ್ಕರೀ ॥ ೩೪೯ ॥

---

೩೪೫. ಮತ್ತು ಆ ಗಜಗಳು ಶೌರ್ಯ, ಸ್ಥೂಲವಾದ ವಿಸ್ತಾರವುಳ್ಳ ಮುಖಗಳಿಂದ ಕೂಡಿಕೊಂಡಿದ್ದುವು. ಚಂದ್ರಸಾಮದಿಂದ ಕುಮುದ ಪುಷ್ಪದ ಕಾಂತಿಯುಳ್ಳ ಕುಮುದವೆಂಬ ಗಜವು ಹುಟ್ಟಿತು.

೩೪೬. ಕುಮುದ ಗಜಕ್ಕೆ ಪಿಂಗಲಾ ಎಂಬ ಪತ್ನಿಯಲ್ಲಿ ಮಹಾಪದ್ಮ, ಊರ್ಮಿಮಾಲೀ ಎಂಬ ಇಬ್ಬರು ಪುತ್ರರು ಹುಟ್ಟಿದರು. ಮತ್ತು ಇದರ ವಂಶದಲ್ಲಿ ಹುಟ್ಟಿದ ಗಜಗಳು ನೀಲ ಮೇಘಗಳಂತೆ ಕಪ್ಪಾಗಿಯೂ,ಅತಿಯಾಗಿ ವೃದ್ಧಿಯನ್ನು ಹೊಂದಿದುವುಗಳಾಗಿಯೂ ಬಲಿಷ್ಠ ಮತ್ತು ಉತ್ಕೃಷ್ಟಗಳಾಗಿಯೂ ಇರುವುವು.

೩೪೭. ಮತ್ತು ಆ ಆನೆಗಳನ್ನು ಗಜಯುದ್ಧದಲ್ಲಿ ಪ್ರಿತಿಯುಳ್ಳವುಗಳನ್ನಾಗಿ ತಿಳಿಯಬೇಕು. ಈ ಗಜಗಳನ್ನು ದೇವಾಸುರ ಯುದ್ಧಗಳಲ್ಲಿ ರಾಕ್ಷಸರನ್ನು ಜಯಿಸುವುದಕ್ಕೋಸ್ಕರ ದೇವತೆಗಳು ಸ್ವೀಕರಿಸಿದರು.

೩೪೮. ಕೃತಾರ್ಥರಾದ ದೇವತೆಗಳಿಂದ ಬಿಡಲ್ಪಟ್ಟವುಗಳಾಗಿ ಆ ಗಜಗಳು ಹಿಂದೆ ಹೇಳಿದಂತೆ ಆಯಾಯ ದಿಕ್ಕುಗಳನ್ನು ಸೇರಿದುವು. ಇವುಗಳ ವಂಶದಲ್ಲಿ ಹುಟ್ಟಿರುವ ಶಿಕ್ಷಿತವಾದ ಆ ಗಜಗಳನ್ನು ದೇವತೆಗಳು ಪ್ರದಾನಮಾಡಿದರು.

೩೪೯. ಆ ಗಜಗಳನ್ನು ಅಂಗ ದೇಶಾಧಿಪತಿಯಾದ ಗಜಲಕ್ಷಣ ಸೂತ್ರಕಾರನಾದ ಲೋಮಪಾದನೆಂಬ ರಾಜನಿಗೆ ಅವುಗಳನ್ನು ಕೊಟ್ಟರು. ಇವುಗಳಿಗೆ ಎರಡು ದಂತಗಳು

ವಾರಣೋ ವಾರಣಾದ್ದಂತೀ ದಂತಾಭ್ಯಾಂ ಗರ್ಜನಾದ್ಗಜಃ ।
ಕುಂಜರಃ ಕುಂಜಚಾರಿತ್ವಾನ್ನಾಗೋ ನಾಗಮ್ಯಮಸ್ಯ ಯತ್ ॥ ೩೫೦ ॥

ಮತ್ತಂ ಯಾತೀರಿ ಮಾತಂಗೋ ದ್ವಿಪೋ ದ್ವಾಭ್ಯಾಂ ಪಿಬನ್ ಸ್ಮೃತಃ ।
ಸಾಮಜಃ ಸಾಮಜಾತತ್ವಾದಿತಿ ನಿರ್ವಚನಕ್ರಮಃ ॥ ೩೫೧ ॥

ಏಷಾಂ ಜಿಹ್ವಾಪರಾವೃತ್ತಿರ್ಹ್ಯುಕ್ತಾನ್ಯೈಶ್ಚಾಗ್ನಿಶಾಪಜಾ ।
ಬಲಸ್ಯಾನವಬೋಧೋ ಽಥೋ ಯಾ ಚೈಷಾಂ ಗೂಢಮುಷ್ಕತಾ ॥ ೩೫೨ ॥

ಉಭಯಂ ದಂತಿನಾಮೇತಜ್ಜ್ಞೇಯಂ ತು ಸುರಶಾಪಜಮ್ ।
ದೇವದಾನವಗಂಧರ್ವಪಿಶಾಚೋರಗರಕ್ಷಸಾಮ್ ॥ ೩೫೩ ॥

---

ಇರುವುದರಿಂದ ದ್ವಿರದ ಎಂಬುದಾಗಿಯೂ ಸೊಂಡಿಲಿನರೂಪವಾದ ಹಸ್ತ ಅಥವಾ ಕರವೆಂಬ ಅವಯವವಿರುವುದರಿಂದ ಹಸ್ತೀ ಮತ್ತು ಕರೀ ಎಂಬುವಾಗಿಯೂ ಹೆಸರು ಬಂದಿವೆ.

೩೫೦. ಪರರನ್ನು ತಡೆಯುವುದರಿಂದ ವಾರಣ, ದಂತಗಳಿರುವುದರಿಂದ ದಂತೀ, ಗರ್ಜಿಸುತ್ತಿರುವುದರಿಂದ ಗಜ, ಪೊದೆಗಳಲ್ಲಿ ಸಂಚರಿಸುವುದರಿಂದ ಕುಂಜರ, ಗುಂಪಿನ ಬಳಿಗೆ ಹೋಗುವುದು ಅಶಕ್ಯವಾದ್ದರಿಂದ ನಾಗ ಎಂಬ ಅನ್ವರ್ಥವಾದ ಅನೇಕ ಸಂಜ್ಞೆಗಳು ಇರುವುವು.

೩೫೧. ಮದಿಸಿದಗಮನವುಳ್ಳದ್ದರಿಂದ ಮಾತಂಗ ಎಂದೂ ಎರಡು ಮುಖಗಳಿಂದ ಪಾನಮಾಡುವುದರಿಂದ ದ್ವಿಪ ಎಂದೂ ಸಾಮಗಾನದಿಂದ ಹುಟ್ಟಿರುವುದರಿಂದ ಸಾಮಜ ಎಂದೂ ಸ್ಮರಿಸಲ್ಪಟ್ಟಿವೆ. ಇದು ಸಂಜ್ಞಾ ಶಬ್ದಗಳ ನಿರ್ವಚನವು.

೩೫೨. ಇವುಗಳಿಗೆ ಅಗ್ನಿಶಾಪದಿಂದ ಜಿಹ್ವಾಪರಿವೃತ್ತಿಯು ಉಂಟಾಗಿದೆಯೆಂದು ಹೇಳಲ್ಪಟ್ಟಿರುವುದು. ಮತ್ತು ತನ್ನ ಸಾಮರ್ಥ್ಯವು ತನಗೆ ತಿಳಿಯದಿರುವುದು, ಗುಪ್ತವಾದ ವೃಷಣೇಂದ್ರಿಯ ವಿರುವಿಕೆ-ಎಂಬುವು ಗಜ ಸಾಮಾನ್ಯದಲ್ಲಿ ಇಂದಿಗೂ ಅಸಾಧಾರಣ ಧರ್ಮಗಳು ಕಾಣಿಸುವುವು.

೩೫೩. ಅವುಗಳು ಗಜಗಳಿಗೆ ದೇವಶಾಪದಿಂದ ಉಂಟಾಗಿರುವುವೆಂದು ತಿಳಿಯಬೇಕು. ದೇವ, ದಾನವ, ಗಂಧರ್ವ, ಸರ್ಪ ಮತ್ತು ರಾಕ್ಷಸ ಕನ್ಯೆಯರಲ್ಲಿಯೂ ದಿಗ್ಗಜಗಳಿಂದ ಸಂತತಿಯು ಬೆಳೆದಿರುವುದು.

ಕನ್ಯಾಸು ಜಾತಾ ದಿಙ್ನಾಗೈರ್ನಾನಾಸತ್ತ್ವಸ್ತತೋ ಗಜಾಃ ।
ಸಂಭೂತಿಶ್ಚ ಪ್ರಸೂತಿಶ್ಚ ನಾಮನಿರ್ವಚನಂ ತಥಾ ॥ ೩೫೪ ॥

ಏತದ್ಗಜಾನಾಂ ವಿಜ್ಞೇಯಮೇಷಾಂ ರಾಜಾ ಸ ಚಾಭ್ರಮುಃ ।
ಕೌಶಿಕ್ಯಾ ಹ್ಯಾಸಮುದ್ರಾತ್ತು ಗಂಗಾಯಾಶ್ಚೋಯದುತ್ತರಮ್ ॥ ೩೫೫ ॥

ಅಂಜನಸ್ಯೈಕಮೂಲಸ್ಯ ವಿಜ್ಞೇಯಂ ಗಹನಂ ತು ತತ್ ।
ಉತ್ತರಂ ಚೈವ ವಿಂಧ್ಯಸ್ಯ ಗಂಗಾಯಾ ದಕ್ಷಿಣಂ ಚ ಯತ್ ॥ ೩೫೬ ॥

ಗಂಗೋದ್ಭೇದೇ ಸಕೇರುಭ್ಯಃ ಸುಪ್ರತೀಕಸ್ಯ ಪತ್ತನಮ್ ।
ಅಪರೇಣೋತ್ಕಲಂ ಚೈವ ಕಾವೇರೀಭ್ಯಶ್ಚ ಪಶ್ಚಿಮಮ್ ॥ ೩೫೭ ॥

ಏಕಸೂಕಾತ್ಮಜಸ್ಯೈತದ್ವಾಮನಸ್ಯ ವನಂ ಸ್ಮೃತಮ್ ।
ಅಪರೇಣ ತು ಲೌಹಿತ್ಯಮಾಸಿಂಧೋಃ ಪಶ್ಚಿಮೇನ ತು ॥ ೩೫೮ ॥

---

೩೫೪. ದೇವಾದಿ ಕನ್ಯೆಯರಲ್ಲಿ ದಿಙ್ನಾಗಗಳಿಂದ ವಿವಿಧ ಸತ್ತ್ವಗಳಿಂದ ಕೂಡಿದ ಗಜಗಳು ಹುಟ್ಟಿರುವುವು. ಈರೀತಿಯಾಗಿ ಗಜಗಳ ಉತ್ಪತ್ತಿ, ಸಂತತಿ ಮತ್ತು ಅವುಗಳ ನಾಮ ನಿರ್ವಚನಗಳನ್ನು ಹೇಳಿರುತ್ತೇನೆ.

೩೫೫. ಈ ರೀತಿಯಾಗಿ ಗಜಗಳ ಮಹಿಮೆಯನ್ನು ತಿಳಿಯಬೇಕು. ಈ ಗಜಗಳಿಗೆ ಅಭ್ರಮು ಎಂಬುದು ರಾಜನಾಗಿರುವುದು. ಕೌಶಿಕೀ ನದಿಯ ಮೊದಲುಗೊಂಡು ಸಮುದ್ರದವರೆಗಿನ ಗಂಗಾನದಿಯ ಉತ್ತರ ಭಾಗವೆಲ್ಲವೂ ಏಕಮೂಲವಾದ ಅಂಜನವೆಂಬ ಗಜದ ವಾಸ ಭೂಮಿಯಾದ, ಗಹನವಾದ ವನವೆಂದು ಭಾವಿಸಬೇಕು.

೩೫೬. ವಿಂಧ್ಯಪರ್ವತದ ಉತ್ತರ ಮತ್ತು ಗಂಗಾನದಿಯ ದಕ್ಷಿಣದಲ್ಲಿರುವ, ಗಂಗಾಪ್ರವಾಹ ಸಂಗಮ ಸಹಿತವಾದ ಸಕೇರು ದೇಶಗಳನ್ನು ವ್ಯಾಪಿಸಿ ಸುಪ್ರತೀಕವೆಂಬ ಗಜರಾಜನ ಪಟ್ಟಣವಾಗಿರುವುದು.

೩೫೭. ಉತ್ಕಲ ದೇಶದ ಅಪರಭಾಗ ಮತ್ತು ಕಾವೇರೀ ನದಿಯ ಪಶ್ಚಿಮ ಭಾಗವನ್ನೆಲ್ಲ ವ್ಯಾಪಿಸಿ ಏಕಸೂಕಾ ಪುತ್ರನಾದ ವಾಮನವೆಂಬ ದಿಗ್ಗಜಕ್ಕೆ ಸೇರಿರುವ ಪಟ್ಟಣವೆಂದು ಸ್ಮರಿಸಲ್ಪಟ್ಟಿರುವುದು.

೩೫೮. ಸಮುದ್ರದ ಪಶ್ಚಿಮ ಭಾಗದಲ್ಲಿರುವ ಲೋಹಿತ ದೇಶದ ಅಪರಭಾಗವನ್ನು ವ್ಯಾಪಿಸಿ ಪರ್ವತ ಶ್ರೇಣಿಯಿಂದ ಕೂಡಿದ ಪದ್ಮವೆಂಬ ದಿಗ್ಗಜದ ವಾಸಭೂಮಿಯೆಂದು ಅರಿಯಬೇಕು.

ಪದ್ಮಸ್ಯೈತದ್ವನಂ ಪ್ರೋಕ್ತಮನುಪರ್ವತಮೇವ ತತ್ ।
ಭೂತಾ ವಿಜಜ್ಞೇ ಭೂತಾಂಸ್ತು ರುದ್ರಸ್ಯಾನುಚರಾನಿಹ ॥ ೩೫೯ ॥

ಸ್ಥೂಲಾನ್ ಕೃಶಾಂಶ್ಚ ದೀರ್ಘಾಂಶ್ಚ ವಾಮಕಾನ್ ಹ್ರಸ್ವಕಾನ್‌ಸಮಾನ್।
ಲಂಬಕರ್ಣಾನ್ ಪ್ರಲಂಬೌಷ್ಠಾನ್ ಲಂಬಜಿಹ್ವಾಂಸ್ತನೂದರಾನ್ ॥ ೩೬೦ ॥

ಏಕನೇತ್ರಾನ್ ವಿರೂಪಾಂಶ್ಚ ಲಂಬಸ್ಫಿಕ್‌ಸ್ಥೂಲಪಿಂಡಿಕಾನ್ ।
ಸಕೃಷ್ಣಗೌರಾನ್ನೀಲಾಂಶ್ಚ ಶ್ವೇತಾನ್ ವೈ ಲೋಹಿತಾನನಾನ್ ॥ ೩೬೧ ॥

ಬಭ್ರೂನ್ ವೈ ಶಬಲಾನ್ ಧೂಮ್ರಾನ್ ವಿಕದ್ರೂನ್ನಾಸಮಾರುಣಾನ್ ।
ಮುಂಜಕೇಶಾನ್ ಹೃಷ್ಟರೋಮ್ಣಃ ಸರ್ಪಯಜ್ಞೋಪವೀತಿನಃ॥ ೩೬೨ ॥

ಬಹುಶೀರ್ಷಾನ್ ವಿಪಾದಾಂಶ್ಚ ಹ್ಯೇಕಶೀರ್ಷಾನಶೀರ್ಷಕಾನ್ ।
ಚಂಡಾಂಶ್ಚ ವಿಕಟಾಂಶ್ಚೈವ ನಿರ್ಮಿತಾಂಶ್ಚ ದ್ವಿಜಿಹ್ವಕಾನ್ ॥ ೩೬೩ ॥

---

೩೫೯. ಈ ರೀತಿಯಾಗಿ ದಿಗ್ಗಜಗಳಿಗೆ ವಿಭಕ್ತವಾದ ವಾಸಸ್ಥಳಗಳಿರುವುವು. ಭೂತಾ ಎಂಬುವಳು ರುದ್ರನ ಅನುಚರರಾಗಿರುವರುವ ಅನೇಕ ವಿಧವಾದ ಭೂತಗಳನ್ನು ಪ್ರಸವಿಸಿದಳು.

೩೬೦, ಅವುಗಳ ಆಕಾರವು ಬಹು ವಿಕಾರವಾದ ಸನ್ನಿವೇಶದಿಂದ ಇದ್ದಿತು. ಕೃಶ, ದೀರ್ಘ, ಹ್ರಸ್ವ, ವಾಮನ, ಸಮಾಕಾರ, ಲಂಬಾಯಮಾನವಾದ ಕರ್ಣ, ಓಷ್ಠ, ಮತ್ತು ಜಿಹ್ವಾರೂಪವಾದ ಅವಯವ ಇಂತಹ ವಿಕಾರಗಳಿದ್ದುವು.

೩೬೧. ಒಂದು ನೇತ್ರ, ವಿರೂಪ, ಲಂಬಿಯಾದ ಬೆನ್ನುಮೂಳೆ, ಸ್ಥೂಲವಾದ ಉದರಗ್ರಂಥಿ, ಕಪ್ಪು ಅಥವಾ ಗೌರವರ್ಣ, ನೀಲ, ಶ್ವೇತ ಮತ್ತು ಕೆಂಪಾದ ಮುಖ— ಈ ರೀತಿಯಾಗಿ ಬಗೆಬಗೆಯಾದ ವಿರೂಪಗಳು ಅವುಗಳ ಆಕಾರಗಳಲ್ಲಿ ಕಾಣುತ್ತಲಿದ್ದುವು.

೩೬೨. ಬೂದು, ಚಿತ್ರ, ಧೂಮ್ರ, ವಿಕದ್ರು, ಸಾಮಾನ್ಯವಾದ ರಕ್ತ ಎಂಬ ವರ್ಣಭೇದಗಳು, ಮುಂಜತೃಣದಂತೆ ಕೇಶಗಳು; ರೋಮಾಂಚಗಳು, ಸರ್ಪವೆಂಬ ಯಜ್ಞೋಪವಿತಗಳು, ಎಂಬ ಕೆಲವು ವಿಕಾರಗಳು ಪ್ರಕಾಶಿಸುತ್ತಲಿದ್ದುವು.

೩೬೩. ಅನೇಕ ಶಿರಸ್ಸು, ಪಾದನ್ಯೂನತೆ, ಏಕಶಿರಸ್ಸು, ಶಿರನ್ಯೂನತೆ, ಚಂಡ, ಉದ್ಧತ, ವಿಕಟ, ಕೃಶ, ಮತ್ತು ಎರಡು ಜಿಹ್ವೆಗಳು ಎಂಬುದಾಗಿ ಒಂದೊಂದು ವ್ಯಕ್ತಿಗಳಲ್ಲಿ ಒಂದೊಂದು ವಿಧದ ವಿಕಾರವು ಕಾಣುತ್ತಲಿತ್ತು.

**ಮುಂಡಾಂಶ್ಚ ಜಟಿಲಾಂಶ್ಚೈವ ಕುಬ್ಜಾನ್ ವಕ್ರಾನ್ ಸವಾಮನಾನ್ ।**
**ಸರಃಶ್ರೇಷ್ಠ ಸಮುದ್ರಾದ್ರಿಸದೀಪುಲಿನಸೇವಿನಃ ॥ ೩೬೪ ॥**

**ಏಕಕರ್ಣಾನ್ ಮಹಾಕರ್ಣಾನ್ ಶಂಕುಕರ್ಣಾನಕರ್ಣಕಾನ್ ।**
**ದಂಷ್ಟ್ರಿಣೋ ನಖಿನಶ್ಚೈವ ನಿರ್ದಂತಾಂಶ್ಚ ವಿಜಿಹ್ವಕಾನ್ ॥ ೩೬೫ ॥**

**ಏಕಹಸ್ತಾನ್ ದ್ವಿಹಸ್ತಾಂಶ್ಚ ತ್ರಿಹಸ್ತಾಂಶ್ಚಾಪ್ಯಹಸ್ತಕಾನ್ ।**
**ಏಕಪಾದಾನ್ ದ್ವಿಪಾದಾಂಶ್ಚ ತ್ರಿಪಾದಾನ್ ಬಹುಪಾದಕಾನ್ ॥ ೩೬೬ ॥**

**ಮಹಾಯೋಗಾನ್ಮಹಾಸತ್ತ್ವಾನ್ ಸುಮನಸ್ಕಾನ್ಮಹಾಬಲಾನ್ ।**
**ಸರ್ವತ್ರಗಾನಪ್ರತಿಘ್ನಾನ್ ಬ್ರಹ್ಮಜ್ಞಾನ್ ಕಾಮರೂಪಿಣಃ ॥ ೪೬೭ ॥**

**ಘೋರಾನ್ ಕ್ರೂರಾಂಶ್ಚ ಮೇಧ್ಯಾಂಶ್ಚ ಮಧ್ಯಮೇಧ್ಯಾನ್ ಸುಧಾರ್ಮಿಕಾನ್ ।**
**ಕೂಟದಂತಾನ್ ಮಹಾಜಿಹ್ವಾನ್ ವಿಕೇಶಾನ್ ವಿಕೃತಾನನಾನ್ ॥ ೩೬೮ ॥**

---

೩೬೪. ಮುಂಡ, ಜಟಿಲ, ಕುಬ್ಜ, ವಕ್ರ, ವಾಮನ ಮುಂತಾದ ಆಕೃತಿ ವಿಕಾರಗಳಿಂದ ಕೂಡಿದ್ದುವು. ಅಲ್ಲದೆ ದೊಡ್ಡ ಸರೋವರ, ಸಮುದ್ರ, ಗಿರಿ, ನದೀ, ಮಳಲು ದಿಣ್ಣೆ ಮುಂತಾದ ಸ್ಥಳಗಳಲ್ಲಿ ವಾಸಮಾಡುತ್ತಲಿದ್ದುವು.

೩೬೫. ಭೂತವ್ಯಕ್ತಿಗಳನ್ನು ನೋಡಿದರೆ ವಿಸ್ಮಯವಾಗುವಂತೆ ಏಕಕರ್ಣ, ಮಹಾಕರ್ಣ, ಶಂಕು ಆಕಾರದ ಕರ್ಣ, ಕರ್ಣ ಶೂನ್ಯತೆ, ದಂಷ್ಟ್ರಾ, ನಖ, ದಂತ ಶೂನ್ಯತೆ, ಜಿಹ್ವಾ ಊನತೆ ಮುಂತಾದ ವಿವಿಧ ವಿಕಾರಗಳಿದ್ದವು,

೩೬೬. ಮತ್ತು, ಏಕಹಸ್ತ, ದ್ವಿಹಸ್ತ, ತ್ರಿಹಸ್ತ, ಹಸ್ತಶೂನ್ಯತೆಗಳಿಂದಲೂ, ಏಕಪಾದ, ದ್ವಿಪಾದ, ತ್ರಿಪಾದ ಮತ್ತು ಬಹುಪಾದಗಳೆಂಬ ಪಾದವಿಕಾರಗಳಿಂದಲೂ ಕೆಲಕೆಲವು ವ್ಯಕ್ತಿಗಳು ಆಶ್ಚರ್ಯವನ್ನುಂಟು ಮಾಡುತ್ತಿದ್ದುವು.

೩೬೭. ಅವುಗಳಲ್ಲಿ ಮಹತ್ತಾದ ಯುಕ್ತಿ, ಶಕ್ತಿ, ಉದಾರವಾದ ಸತ್ತ್ವಗುಣ ಮನಸ್ಸು ಇವುಗಳಿಂದಕೂಡಿ ಎಲ್ಲಕಡೆಗಳಲ್ಲಿಯೂ ತಡೆಯಿಲ್ಲದ ಸಂಚಾರವುಳ್ಳವುಗಳಾಗಿಯೂ ಬ್ರಹ್ಮಜ್ಞಾನಿಗಳಾಗಿಯೂ ಮತ್ತು ಕಾಮರೂಪವನ್ನು ಧರಿಸಿದವುಗಳಾಗಿಯೂ ಕೆಲವು ವ್ಯಕ್ತಿಗಳು ಇದ್ದುವು.

೩೬೮. ಘೋರ, ಕ್ರೂರ, ಮೇಧ್ಯ, ಮದ್ಯಪಾನದಿಂದ ಮೇಧ್ಯ, ಧಾರ್ಮಿಕ ವ್ಯಕ್ತಿಗಳಾಗಿಯೂ ಸ್ಥಿರವಾದ ದಂತ, ದೀರ್ಘವಾದ ಜಿಹ್ವಾ ಕೇಶಶೂನ್ಯತೆ, ಮುಖ ವಿಕಾರಗಳಿಂದ ಕೂಡಿದ ವ್ಯಕ್ತಿಗಳಾಗಿಯೂ ಇದ್ದುವು.

ಹಸ್ತಾದಾಂಶ್ಚ ಮುಖಾದಾಂಶ್ಚ ಶಿರೋದಾಂಶ್ಚ ಕಪಾಲಿನಃ ।
ಧನ್ವಿನೋ ಮುದ್ಗರಧರಾನಸಿಶೂಲಧರಾಂಸ್ತಥಾ || ೩೭೯ ||

ದಿಗ್ವಾಸಸಶ್ಚಿತ್ರವೇಷಾಂಶ್ಚಿತ್ರ ಮಾಲ್ಯಾನುಲೇಪನಾನ್ ।
ಅನ್ನಾದಾನ್ ಪಿಶಿತಾದಾಂಶ್ಚ ಸುರಾಪಾನ್ ಸೋಮಪಾಂಸ್ತಥಾ || ೩೮೦ ||

ಕೇಚಿತ್ ಸಂಧ್ಯಾಚರಾ ಘೋರಾಃ ಕೇಚಿತ್ ಸೌಮ್ಯಾ ದಿವಾಚರಾಃ ।
ನಕ್ತಂಚರಾಃ ಖರಸ್ಪರ್ಶಾ ಘೋರಾಸ್ತೇಷಾಂ ನಿಶಾಚರಾಃ || ೩೮೧ ||

ಪರತ್ವೇನ ಭವಂ ದೇವಂ ಸರ್ವೇ ತೇ ಗತಮಾನಸಾಃ ।
ನೈಷಾಂ ಭಾರ್ಯಾಸ್ತಿ ಪುತ್ರಾ ವಾ ಸರ್ವೇ ತೇ ಹ್ಯೂರ್ಧ್ವರೇತಸಃ || ೩೮೨ ||

ಶತಂ ತಾನಿ ಸಹಸ್ರಾಣಿ ಭೂತಾನಾಮಾತ್ಮಯೋಗಿನಾಮ್ ।
ಭವಪಾರಿಷದಾಸ್ತೇ ವೈ ಸರ್ವೇ ಭೂತಾಃ ಪ್ರಕೀರ್ತಿತಾಃ || ೩೮೩ ||

---

೩೭೯. ಮತ್ತು ಹಸ್ತ, ಮುಖ, ಶಿರಸ್ಸು ಮುಂತಾದುವುಗಳನ್ನು ಭಕ್ಷಿಸುವ, ಕಪಾಲ, ಬಿಲ್ಲು, ದಂಡ, ಕತ್ತಿ, ಶೂಲ-ಮುಂತಾದ ಆಯುಧಗಳನ್ನು ಧರಿಸಿರುವ, ವಿಕಾರ ರೂಪ ವುಳ್ಳ, ಭೂತಗಳು ಭೂತಾ ಎಂಬುವಳಿಂದ ಜನಿಸಿದುವು.

೩೮೦. ಮತ್ತು ದಿಗಂಬರ, ವಿಚಿತ್ರವಾದ ವೇಷ, ಚಿತ್ರವರ್ಣದ ಮಾಲ್ಯ-ಅನು ಲೇಪನಗಳನ್ನು ಧರಿಸಿ, ಅನ್ನ-ಮಾಂಸಗಳನ್ನು ಭಕ್ಷಿಸುತ್ತಲೂ, ಸುರಾ-ಸೋಮಗಳನ್ನು ಪಾನಮಾಡುತ್ತಲೂ, ವಿಚಿತ್ರವಾದ ನಡತೆಯುಳ್ಳವುಗಳೂ ಆಗಿದ್ದುವು.

೩೮೧. ಇವುಗಳಲ್ಲಿ ಕೆಲವು ಉಗ್ರವಾದ ಭೂತಗಳು ಸಂಧ್ಯಾಕಾಲದಲ್ಲಿಯೂ, ಸೌಮ್ಯವಾದ ಮತ್ತೆ ಕೆಲವು ಭೂತಗಳು ಹಗಲಿನಲ್ಲಿಯೂ ಸಂಚರಿಸುತ್ತಿದ್ದುವು. ಅವುಗಳಲ್ಲಿ ನಿಶಾಚರ ಭೂತಗಳು ತೀಕ್ಷ್ಣವಾದ ಸ್ಪರ್ಶ, ಘೋರ ರೂಪಗಳಿಂದ ಕೂಡಿ ದ್ದುವು.

೩೮೨. ಈ ಭೂತಗಳು ಸ್ವಾಮಿಯಾದ ಈಶ್ವರನನ್ನು ಪವಿತ್ರ ಭಾವನೆಯಿಂ ದಲೂ, ಉತ್ತಮವಾದ ಭಕ್ತಿಯಿಂದಲೂ ಧ್ಯಾನಿಸುತ್ತಿದ್ದುವು. ಇವುಗಳಿಗೆ ಭಾರ್ಯೆ ಅಥವಾ ಪುತ್ರ ಮುಂತಾದ ಕುಟುಂಬ ವರ್ಗವು ಇರಲಿಲ್ಲ. ಎಲ್ಲವೂ ಊರ್ಧ್ವ ರೇತಸ್ಸು ಎನ್ನಿಸಿಕೊಂಡಿದ್ದುವು.

೩೮೩. ಹೀಗೆ ಆತ್ಮಯೋಗದಿಂದ ಕೂಡಿದ ಭೂತಗಳ ಸಂಖ್ಯೆಯು ಶತಸಹಸ್ರ

ಕಪಿಶಾಯಾಶ್ಚ ಕೂಷ್ಮಾಂಡಾ ಜಜ್ಞಿರೇ ಚ ಪುನಃ ಪುನಃ ।
ಮಿಥುನೇನ ಪಿಶಾಚಾಶ್ಚ ವರ್ಣೇನ ಕಪಿಶೇನ ತು ॥ ೩೭೪ ॥

ಕಪಿಶತ್ವಾತ್ ಪಿಶಾಚಾಸ್ತೇ ಸರ್ವೇ ಚ ಪಿಶಿತಾಶನಾಃ ।
ಯುಗ್ಮಾನಿ ಷೋಡಶಾದ್ಯಾನಿ ವರ್ತಮಾನಸ್ತದನ್ವಯಃ ॥ ೩೭೫ ॥

ನಾಮತಸ್ತಾನ್ ಪ್ರವಕ್ಷ್ಯಾಮಿ ರೂಪತಶ್ಚ ತದನ್ವಯಮ್ ।
ಛಗಲಶ್ಛಗಲಾ ಚೈವ ವಕ್ರೋ ವಕ್ರಮುಖೀ ತಥಾ ॥ ೩೭೬ ॥

ದುಷ್ಪೂರಃ ಪೂರಣಾ ಚೈವ ಸೂಚೀ ಸೂಚೀಮುಖಸ್ತಥಾ ।
ವಿಪಾದಶ್ಚವಿಪಾದೀ ಚ ಜ್ವಾಲಾ ಚಾಂಗಾರಕಸ್ತಥಾ ॥ ೩೭೭ ॥

ಕುಂಭಪಾತ್ರಶ್ಚ ಕುಂಭೀ ಚ ಪ್ರತುಂಡಶ್ಚ ಪ್ರತುಂದಿಕಾ ।
ಉಪವೀರಶ್ಚ ವೀರಾ ಚ ಹ್ಯುಲೂಖಲ ಉಲೂಖಲೀ ॥ ೩೭೮ ॥

---

ಮುಂತಾದ ಅಧಿಕ ಪರಿಮಾಣದಿಂದಇತ್ತು. ಆ ಎಲ್ಲ ಭೂತಗಳು ಈಶ್ವರನಿಗೆ ಸಭಿಕರಾಗಿ ಕೀರ್ತಿಸಲ್ಪಟ್ಟಿರುವುವು.

೩೭೪. ಕಪಿಶಾ ಎಂಬುವಳಿಗೆ ಕೂಷ್ಮಾಂಡವೆಂಬ ಒಂದು ಬಗೆಯ ಪಿಶಾಚಗಳು ಹೊಂಬಣ್ಣದಿಂದ ಕೂಡಿ ಮಿಥುನ ರೂಪಗಳಾಗಿ ಪುನಃ ಪುನಃ ಹುಟ್ಟಿದುವು.

೩೭೫. ಅವುಗಳು ಕಪಿಶ=ಹೊಂಬಣ್ಣದಿಂದಿರುವುದರಿಂದ ಪಿಶಾಚವೆಂದು ಹೆಸರನ್ನು ಹೊಂದಿದುವು. ಅವು ಮಾಂಸವನ್ನು ಭಕ್ಷಿಸುವುವು. ಷೋಡಶ ಯುಗ್ಮ ಮುಂತಾದ ರೂಪದಿಂದ ಅವುಗಳ ಸಂತತಿಯು ನಡೆಯುತ್ತಿದೆ.

೩೭೬. ಅವುಗಳ ನಾಮರೂಪಗಳನ್ನೂ ವಂಶ ವಿಸ್ತಾರವನ್ನೂ ಹೇಳುವೆನು, ಛಗಲ, ಛಗಲಾ ವಕ್ರ, ವಕ್ರ ಮುಖೀ, ಎಂಬುವ ಯುಗ್ಮಗಳು ಆದಿಯಲ್ಲಿರುವುವು.

೩೭೭, ದುಷ್ಪೂರ, ಪೂರಣಾ, ಸೂಚೀ, ಸೂಚೀ ಮುಖಾ, ವಿಪಾದ, ವಿಪಾದೀ ಜ್ವಾಲಾ, ಅಂಗಾರಕ, ಎಂಬ ನಾಮಾಂಕಿತವಾದ ಕೆಲವು ಮಿಥುನಗಳು ಆ ಗಣದಲ್ಲಿ ಸೇರಿವೆ.

೩೭೮. ಮತ್ತು ಕುಂಭ ಪಾತ್ರ, ಕುಂಭೀ, ಪ್ರತುಂದ, ಪ್ರತುಂದೀ, ಉಪ ವೀರ, ಉಪವೀರಾ, ಉಲೂಖಲ, ಉಲೂಖಲೀ, ಎಂಬುವು ಆ ಗಣದಲ್ಲಿ ಸೇರಿದ ಮತ್ತೆ ಕೆಲವು ಯುಗ್ಮಗಳು.

ಅರ್ಕಮರ್ಕೋऽರ್ಕಮರ್ಕೀ ಚ ಕುಷಂಡಶ್ಚ ಕುಷಂಡಿಕಾ ।
ಪಾಣಿಪಾತ್ರಃ ಪಾಣಿಪಾತ್ರೀ ಪಾಂಶುಃ ಪಾಂಶುಮತೀ ತಥಾ ॥ ೩೭೯ ॥

ನಿತುಂದಶ್ಚ ನಿತುಂದೀ ಚ ನಿಪುಣೋ ನಿಪುಣೀ ತಥಾ ।
ಬಾಲಾದೋ ಕೇಷಣಾದೀ ಚ ಪ್ರಸ್ಕಂದಃ ಸ್ಕಂದಿಕಾ ತಥಾ ॥ ೩೮೦ ॥

ಷೋಡಶಾನಾಂ ಪಿಶಾಚಾನಾಂ ಗಣಾಃ ಪ್ರೋಕ್ತಾಸ್ತು ಷೋಡಶ ।
ಅಜಾಮುಖಾ ವಕ್ರಮುಖಾ ಪೂರಣಾಃ ಸ್ಕಂದಿನಸ್ತಥಾ ॥ ೩೮೧ ॥

ವಿಷಾದಾಂಗಾರಿಕಾಶ್ಚೈವ ಕುಂಭಪಾತ್ರಾಃ ಪ್ರತುಂದಿಕಾಃ ।
ಉಪವೀರೋಲೂಖಲಿಕಾ ಅರ್ಕಮರ್ಕಾಃ ಕುಷಂಡಿಕಾಃ ॥ ೩೮೨ ॥

ಪಾಂಶವಃ ಪಾಣಿಪಾತ್ರಾಶ್ಚ ನೈತುಂದಾ ನಿಪುಣಾಸ್ತಥಾ ।
ಸೂಚೀಮುಖೋಚ್ಛೇಷಣಾದ್ಯಾಃ ಕುಲಾನ್ಯೇತಾನಿ ಷೋಡಶ॥ ೩೮೩ ॥

---

೩೭೯. ಹಾಗು ಅರ್ಕಮರ್ಕ, ಅರ್ಕಮರ್ಕೀ, ಕುಷಂಡ, ಕುಷಂಡಿಕಾ, ಪಾಣಿಪಾತ್ರ, ಪಾಣಿಪಾತ್ರೀ, ಪಾಂಶು, ಪಾಂಶುಮತೀ, ಎಂಬುವ ಯುಗ್ಮಗಳು ಆ ವರ್ಗದಲ್ಲಿ ಸೇರಿದುವುಗಳು.

೩೮೦. ನಿತುಂದ, ನಿತುಂದೀ, ನಿಪುಣ, ನಿಪುಣೀ, ಬಾಲಾದ, ಕೇಷಣಾದೀ, ಪ್ರಸ್ಕಂದ, ಸ್ಕಂದಿಕಾ, ಎಂಬ ಮತ್ತೆ ಕೆಲವು ಮಿಥುನಗಳನ್ನು ಆ ವರ್ಗದಲ್ಲಿ ಸೇರಿವೆಯೆಂದು ಅರಿಯಬೇಕು.

೩೮೧. ಇವುಗಳಲ್ಲಿ ಹದಿನಾರು ಪಿಶಾಚಗಳಿಂದ ಹದಿನಾರು ಗಣಗಳು ಕಲ್ಪಿತವಾಗಿರುವಂತೆ ಹೇಳಲ್ಪಟ್ಟಿವೆ. ಅವುಗಳಲ್ಲಿ ಅಜಾಮುಖ, ವಕ್ರಮುಖ, ಪೂರಣ, ಸ್ಕಂದಿ, ಎಂಬುವ ನಾಲ್ಕು ಗಣಗಳು ಸೇರಿಕೊಂಡಿವೆ.

೩೮೨. ವಿಷಾದ, ಅಂಗಾರಕ, ಕುಂಭಪಾತ್ರ, ಪ್ರತುಂದಕ, ಉಪವೀರ ಉಲೂಖಲ, ಅರ್ಕಮರ್ಕ, ಕುಷಂಡಿಕಾ, ಎಂಬುವು ಹಾಗೆ ಮುಖ್ಯವಾದ ಮತ್ತೆ ಕೆಲವು ಗಣಗಳೆಂದು ಭಾವಿಸಬೇಕು.

೩೮೩. ಪಾಂಶು, ಪಾಣಿಪಾತ್ರ, ನಿತುಂದ, ನಿಪುಣ, ಸೂಚೀಮುಖ, ಉಚ್ಛೇಷಣಾದ, ಮುಂತಾದ ಕುಲಗಳು ಆ ಹದಿನಾರು ವರ್ಗಗಳಲ್ಲಿ ಸೇರಿದುವುಗಳಾಗಿ ತಿಳಿಯಬೇಕು.

ಇತ್ಯೇತಾ ಹ್ಯಭಿಜಾತಾಸ್ತು ಕೂಷ್ಮಾಂಡಾನಾಂ ಪ್ರಕೀರ್ತಿತಾಃ ।
ಪಿಶಾಚಾಸ್ತೇ ಪಿಶಾಚ್ಯಸ್ತಾಃ ಸಕುಲ್ಯಾಃ ಸಂಪ್ರಜಜ್ಞಿರೇ ॥ ೩೮೪ ॥

ಬೀಭತ್ಸಂ ವಿಕೃತಾಕಾರಂ ಪುತ್ರಪೌತ್ರಮನಂತಕಮ್ ।
ಅತಸ್ತೇಷಾಂ ಪಿಶಾಚಾನಾಂ ಲಕ್ಷಣಾನಿ ನಿಬೋಧತ ॥ ೩೮೫ ॥

ಸರ್ವಾಂಗಕೇಶಾ ವೃತ್ತಾಕ್ಷಾ ದಂಷ್ಟ್ರಿಣೋ ನಖಿನಸ್ತಥಾ ।
ತಿರ್ಯಗಂಗಾಃ ಪುರುಷಾದಾಃ ಪಿಶಾಚಾಸ್ತೇ ಹ್ಯಜಾಮುಖಾಃ ॥ ೩೮೬ ॥

ಅಕರ್ಣಕಾ ಹ್ಯರೋಮಾಣೋಽವಾಸಸಶ್ಚರ್ಮವಾಸಸಃ ।
ಕುಷಂಡಕಪಿಶಾಚಾಸ್ತೇ ಪ್ರಿಯಭಕ್ಷಾಃ ಸದಾಮಿಷಾಃ ॥ ೩೮೭ ॥

ವಕ್ರಾಂಗಹಸ್ತಪಾದಾಶ್ಚ ವಕ್ರಶೀಲಮತಾಸ್ತಥಾ ।
ಜ್ಞೇಯಾ ವಕ್ರಾಃ ಪಿಶಾಚಾಸ್ತೇ ವಕ್ರಗಾಃ ಕಾಮರೂಪಿಣಃ ॥ ೩೮೮ ॥

---

೩೮೪. ಈ ರೀತಿಯಾಗಿ ಕೂಷ್ಮಾಂಡವೆಂಬ ಪಿಶಾಚಗಳ ವಂಶದ ಪ್ರಜೆಗಳು ಹೇಳಲ್ಪಟ್ಟಿವೆ. ಆ ಪಿಶಾಚಗಳು ಮತ್ತು ಪಿಶಾಚಸ್ತ್ರೀಯರು ಸಮಾನ ಕುಲದಲ್ಲಿ ವಂಶವನ್ನು ಬೆಳೆಸಿದುವು.

೩೮೫. ಜುಗುಪ್ಸೆ ಉಂಟಾಗುವ ವಿಕಾರದಿಂದ ಕೂಡಿದ ಆಕಾರವುಳ್ಳ ಅವರ ಪುತ್ರಪೌತ್ರ ಸಂತತಿಯು ಅಪಾರವಾಗಿರುವುದು. ಇನ್ನು ಮುಂದೆ ಆ ಪಿಶಾಚಗಳ ವಿಶೇಷ ಲಕ್ಷಣಗಳನ್ನು ಶ್ರವಣಮಾಡಿರಿ.

೩೮೬. ಎಲ್ಲ ಅವಯವಗಳಲ್ಲಿ ಕೂದಲು, ಗುಂಡಗಿರುವ ಕಣ್ಣು, ಕೋರೆಯ ಹಲ್ಲು, ಉಗುರು, ಅಡ್ಡಲಾದ ದೇಹ, ಪುರುಷಭಕ್ಷಣ, ಈ ಲಕ್ಷಣಗಳಿಂದ ಕೂಡಿದ ಪಿಶಾಚಗಳು ಅಜಾಮುಖಜಾತಿಗೆ ಸೇರಿರುವುವು.

೩೮೭. ಕಿವಿ, ರೋಮ, ವಸ್ತ್ರ, ಇವುಗಳಿಂದ ಶೂನ್ಯವಾಗಿ, ಚರ್ಮವೇ ವಸ್ತ್ರವಾಗಿಉಳ್ಳ, ಮಾಂಸಭಕ್ಷಣದಲ್ಲಿ ಬಹುರುಚಿಉಳ್ಳ, ಪಿಶಾಚಗಳು ಕುಷಂಡ ಪಿಶಾಚಗಳೆಂದು ಎನಿಸಿರುವುವು.

೩೮೮. ವಕ್ರವಾದ ದೇಹ, ಕೈ, ಕಾಲು ಮತ್ತು ವಕ್ರವಾದ ಶೀಲ, ಮತಗಳು, ವಕ್ರಗತಿ ಇವುಗಳಿಂದ ಕೂಡಿ ಕಾಮರೂಪವನ್ನು ಧರಿಸುವ ಪಿಶಾಚಗಳು ವಕ್ರ ಎಂಬ ನಾಮಾಂಕಿತಗಳಾಗಿವೆ.

ಲಂಬೋದರಾಸ್ತುಂಡನಾಸಾ ಹ್ರಸ್ವಕಾಯಶಿರೋಭುಜಾಃ ।
ನಿತುಂದಕಾಃ ಪಿಶಾಚಾಸ್ತೇ ತಿಲಭಕ್ಷಾಃ ಪ್ರಿಯಾಸೃಜಃ ॥ ೩೮೯ ॥

ವಾನರಾಕೃತಯಶ್ಚೈವ ವಾಚಾಲಾಃ ಪ್ಲುತಗಾಮಿನಃ ।
ಪಿಶಾಚಾ ಅರ್ಕಮರ್ಕಾಸ್ತೇ ವೃಕ್ಷವಾಸೋದನಪ್ರಿಯಾಃ ॥ ೩೯೦ ॥

ಊರ್ಧ್ವಬಾಹೂರ್ಧ್ವರೋಮಾಣ ಉದ್ಧೃತಾಕ್ಷಾ ಯಥಾಲಯಾಃ ।
ಮುಂಚಂತಿ ಪಾಂಸುಮಂಗೇಭ್ಯಃ ಪಿಶಾಚಾಃ ಪಾಂಶವಸ್ತು ತೇ॥ ೩೯೧ ॥

ಭ್ರಮರೀಸನ್ನಿಭಾಃ ಶುಷ್ಕಾಃ ಸಶೂಲಾಶ್ಚೀರವಾಸಸಃ ।
ಉಪವೀರಾಃ ಪಿಶಾಚಾಸ್ತೇ ಶ್ಮಶಾನಾಯತನಾಃ ಸದಾ ॥ ೩೯೨ ॥

ನಿಷ್ಟಬ್ಧಾಕ್ಷಾ ಮಹಾಜಿಹ್ವಾ ಲೇಲಿಹಾನಾ ಹ್ಯುಲೂಖಲಾಃ ।
ಉಲೂಖಲೈರಾಭರಣಾ ರತ್ನಧಾರಾಶ್ಚ ತೇ ಖಲಾಃ ॥ ೩೯೩ ॥

---

೩೮೯. ಲಂಬಿಯಾದ ಹೊಟ್ಟೆ, ದೀರ್ಘವಾದ ಮೂಗು, ಹ್ರಸ್ವವಾದ ದೇಹ, ತಲೆ, ಭುಜ, ತಿಲಭಕ್ಷಣ, ರಕ್ತಪಾನದಲ್ಲಿ ಪ್ರೀತಿ, ಎಂಬುದು ನಿತುಂದಕ ಪಿಶಾಚಗಳ ಲಕ್ಷಣವು.

೩೯೦. ಕಪಿಗಳ ಆಕಾರ, ವಾಚಾಲತೆ, ಪ್ಲುತಗತಿ, ಹೆಚ್ಚಾಗಿ ವೃಕ್ಷಗಳಲ್ಲಿವಾಸ, ಅನ್ನಭಕ್ಷಣದಲ್ಲಿ ರುಚಿ, ಎಂಬುದು ಅರ್ಕಮರ್ಕ ಎಂಬಜಾತಿಯ ಪಿಶಾಚಗಳ ಲಕ್ಷಣವು.

೩೯೧. ಊರ್ಧ್ವಮುಖವಾದ ಬಾಹು, ರೋಮಗಳಿಂದ ಶೋಭಿಸುವುದು, ಮೇಲಕ್ಕೆಎದ್ದ ನೇತ್ರ, ಗುಡಿಸಿಲಿನಂತೆ ಆಕಾರ, ಮತ್ತು ತಮ್ಮ ದೇಹದಿಂದ ಧೂಳಿಯನ್ನು ಎರಚುವುದು, ಇದೆಲ್ಲ ಪಾಂಶು ಎಂಬ ಪಿಶಾಚಗಳ ಲಕ್ಷಣವು.

೩೯೨. ಹೆಣ್ಣುದುಂಬಿಯಂತಿರುವ, ಒಣಗಿದಂತಿರುವ, ಶೂಲವನ್ನು ನಾರುಬಟ್ಟೆಯನ್ನು ಧರಿಸಿರುವ, ಮತ್ತು ಯಾವಾಗಲೂ ಶ್ಮಶಾನದಲ್ಲಿ ವಾಸಮಾಡುವ ಪಿಶಾಚಗಳನ್ನು ಉಪವೀರಜಾತಿಯ ಪಿಶಾಚಗಳೆಂದು ಅರಿಯಬೇಕು.

೩೯೩. ಸ್ಥಿರವಾದಕಣ್ಣು, ಉದ್ದವಾದ ನಾಲಿಗೆ, ನೆಕ್ಕುತ್ತಿರುವ ಶೀಲ, ಉಲೂಖಲವೆಂಬ ರತ್ನಹಾರದ ಆಭರಣ, ಮತ್ತು ಮೂರ್ಖತನ ಈ ಆಕಾರವಿಶೇಷವು ಉಲೂಖಲವೆಂಬ ಪಿಶಾಚಗಳ ಲಕ್ಷಣವು.

ಪಾಣಿಪಾತ್ರಾಃ ಪಿಶಾಚಾಸ್ತೇ ನಿಸೃಷ್ಟಬಲಿಭೋಜನಾಃ ।
ಹಸ್ತ್ಯುಷ್ಟ್ರಸ್ಥೂಲಶಿರಸೋ ವಿನತೋದ್ಧತಪಿಂಡಿಕಾಃ ॥ ೩೯೪ ॥

ಪಿಶಾಚಾಃ ಕುಂಭಪಾತ್ರಾಸ್ತೇ ಅದೃಷ್ಟಾನ್ನಾನಿ ಭುಂಜತೇ ।
ಸೂಕ್ಷ್ಮಾಸ್ತು ರೋಮಶಾಃ ಪಿಂಗಾ ದೃಷ್ಟಾದೃಷ್ಟಾಶ್ಚರಂತಿ ಯೇ॥ ೩೯೫ ॥

ಅಯುಕ್ತಾನ್ ಪ್ರಚರಂತೀಹ ನಿಪುಣಾಸ್ತೇ ಪಿಶಾಚಕಾಃ ।
ಆಕರ್ಣಾದ್ದಾರಿತಾಸ್ಯಾಶ್ಚ ಲಂಬಭ್ರೂಸ್ಥೂಲನಾಸಿಕಾಃ ॥ ೩೯೬ ॥

ಶೂನ್ಯಾಗಾರಪ್ರಿಯಾಃ ಸ್ಥೂಲಾಃ ಪಿಶಾಚಾಸ್ತೇ ತು ಪೂರಣಾಃ ।
ಹಸ್ತಪಾದಾಕ್ರಾಂತತುಂಡಾ ಹ್ರಸ್ವಕಾಃ ಕ್ಷಿತಿದೃಷ್ಟಯಃ ॥ ೩೯೭ ॥

ಬಾಲಾದಾಸ್ತೇ ಪಿಶಾಚಾ ವೈ ಸೂತಿಕಾಗೃಹಸೇವಿನಃ ।
ಪೃಷ್ಠತಃ ಪಾಣಿಪಾದಾಶ್ಚ ಪೃಷ್ಠತೋ ವಾತರಂಹಸಃ ॥ ೩೯೮ ॥

---

೩೯೪. ಹೊರಕ್ಕೆ ಹಾಕಿದ ಬಲಿಯ ಅನ್ನವನ್ನು ತಿನ್ನುವ, ಆನೆ ಒಂಟೆಗಳಂತೆ ದಪ್ಪವಾದ ತಲೆಗಳುಳ್ಳ, ಬಗ್ಗಿದ ಮತ್ತು ದಪ್ಪವಾದ ದೇಹವುಳ್ಳ, ಪಿಶಾಚಗಳನ್ನು ಪಾಣಿಪಾತ್ರ ಪಿಶಾಚಗಳೆಂದು ಕರೆಯುವರು.

೩೯೫. ಮತ್ತು ಕಣ್ಣಿಗೆ ಕಾಣದ ಅನ್ನವನ್ನು ಭುಂಜಿಸುವ, ಸೂಕ್ಷ್ಮವಾದ, ಬಹುರೋಮ ಪೂರ್ಣಗಳಾದ, ಹೊಂಬಣ್ಣದ, ಮತ್ತು ಪ್ರತ್ಯಕ್ಷ ಪರೋಕ್ಷಗಳಲ್ಲಿ ಸಂಚರಿಸುವ ಪಿಶಾಚಗಳು ಕುಂಭಪಾತ್ರ ಪಿಶಾಚ ಜಾತಿಗೆ ಸೇರಿರುವುವು.

೩೯೬. ಕಿವಿಯವರೆಗೆ ಸೀಳಿದಂತಿರುವ ಮುಖ, ಲಂಬಿಸುವ ಹುಬ್ಬು, ದಪ್ಪವಾದ ಮೂಗು, ಮುಂತಾದ ವಿಕಾರಗಳಿಂದ ಕೂಡಿ ಸಂಬಂಧ ವಿಲ್ಲದಂತೆ ಸಂಚರಿಸುವ ಪಿಶಾಚಗಳು ನಿಪುಣ ಪಿಶಾಚ ಎಂದು ಕರೆಯಲ್ಪಡುವುವು.

೩೯೭. ಕೈಕಾಲುಗಳಿಂದ ತುಂಬಿಹೋದ ಉದರವುಳ್ಳ, ಹ್ರಸ್ವವಾದ, ಭೂಮಿಯಲ್ಲಿ ದೃಷ್ಟಿಯನ್ನಿಟ್ಟಿರುವ, ಸ್ಥೂಲವಾದ, ಮತ್ತು ಶೂನ್ಯ ಗೃಹವಾಸದಲ್ಲಿ ಪ್ರೀತಿಯುಳ್ಳ, ಪಿಶಾಚಗಳನ್ನು ಪೂರಣ ಪಿಶಾಚಗಳೆಂದು ಅರಿಯಬೇಕು.

೩೯೮. ಸೂತಿಕಾಗೃಹವನ್ನು ಸೇವಿಸುವುವೂ, ಹಿಂಭಾಗದಲ್ಲಿ ಕಾಲು ಕೈಗಳಿಂದ ಕೂಡಿರುವುವೂ, ವಾಯುವೇಗದಿಂದ ಹಿಮ್ಮುಖಗಳಾಗಿ ಓಡುವುವೂ ಮತ್ತು ಬಾಲಕರನ್ನು ತಿನ್ನುವುವೂ, ಆದ ಪಿಶಾಚಗಳು ಬಾಲಾದ ಪಿಶಾಚ ಎಂದು ಕರೆಯಲ್ಪಡುವುವು.

ವಿಷಾದಕಾಃ ಪಿಶಾಚಾಸ್ತೇ ಸಂಗ್ರಾಮೇ ರುಧಿರಾಶನಾಃ ।
ನಗ್ನಕಾ ಹ್ಯನಿಕೇತಾಶ್ಚ ಲಗ್ನಶೇಫಾಂಡಪಿಂಡಕಾಃ ॥ ೩೯೯ ॥

ಪಿಶಾಚಾಃ ಸ್ಕಂದಿನಸ್ತೇ ವೈ ಅನ್ಯ ಉಚ್ಛೇಷಣಾದಿನಃ ।
ಷೋಡಶೈತಾ ಹಿ ಜಾತ್ಯಸ್ತಾಃ ಪಿಶಾಚಾನಾಂ ಪ್ರಕೀರ್ತಿತಾಃ ॥ ೪೦೦ ॥

ಏವಂವಿಧಾನ್ ಪಿಶಾಚಾಂಸ್ತು ದೀನಾನ್ ದೃಷ್ಟ್ವಾನುಕಂಪಯಾ ।
ಬ್ರಹ್ಮಾ ತೇಭ್ಯೋ ವರಂ ಪ್ರಾದಾತ್ ಕಾರುಣ್ಯಾದಲ್ಪ ಚೇತಸಃ॥ ೪೦೧ ॥

ಅಂತರ್ಧಾನಂ ಪ್ರಜಾಯಾಂ ಹಿ ಕಾಮರೂಪಿತ್ವಮೇವ ಚ ।
ಸಂಧ್ಯೇ ಉಭೇ ಪ್ರಚಾರಂ ಚ ಸ್ಥಾನಾನ್ಯಾಜೀವಮೇವ ಚ ॥ ೪೦೨ ॥

ಗೃಹಾಣಿ ಯಾನಿ ಭಗ್ನಾನಿ ಶೂನ್ಯಾನ್ಯಲ್ಪಜಲಾನಿ ಚ ।
ವಿಧ್ವಸ್ತಾನಿ ಚ ಯಾನಿ ಸ್ಯುರನಾಚಾರೋಷಿತಾನಿ ಚ ॥ ೪೦೩ ॥

---

೩೯೯. ಯುದ್ಧರಂಗದಲ್ಲಿ ರಕ್ತಪಾನಮಾಡುವ ಅಭಿಲಾಷೆ, ನಗ್ನರೂಪ, ವಾಸಸ್ಥಳ ಶೂನ್ಯತೆ, ಲಂಬಾಯಮಾನವಾದ ವೃಷಣ-ಉದರಗಳು, ಎಂಬುದು ವಿಷಾದಕ ಪಿಶಾಚಗಳ ಲಕ್ಷಣವು.

೪೦೦. ಉಚ್ಛಿಷ್ಟವನ್ನು ತಿನ್ನುವ ಬೇರೆ ಜಾತಿಯ ಪಿಶಾಚಗಳನ್ನು ಸ್ಕಂದಿ ಪಿಶಾಚವೆಂದು ಕರೆಯುವರು, ಈ ರೀತಿಯಾಗಿ ಹದಿನಾರು ಜಾತಿಯ ಪಿಶಾಚಗಳು ಹೇಳಲ್ಪಟ್ಟಿವೆ.

೪೦೧. ಈ ವಿಧವಾದ ದೀನ ಪಿಶಾಚಗಳನ್ನು ನೋಡಿ ಬ್ರಹ್ಮನು ಅವುಗಳ ಅಲ್ಪ ಪ್ರಜ್ಞೆಯಿಂದ ಕರುಣೆಯಿಟ್ಟು ಅವುಗಳಿಗೆ ಇಷ್ಟವಾದ ವರಗಳನ್ನು ಅನುಗ್ರಹಿಸಿದನು.

೪೦೨. ಪ್ರಜೆಗಳಲ್ಲಿ ಅಂತರ್ಧಾನಶಕ್ತಿ, ಕಾಮರೂಪ, ಎರಡು ಸಂಧ್ಯಾಕಾಲಗಳಲ್ಲಿ ಸಂಚಾರ, ಜೀವಿಸಿರುವವರೆಗೂ ನಿಯತವಾದ ಕೆಲವು ವಾಸಸ್ಥಳ ಮುಂತಾದುವುಗಳನ್ನು ವರವಾಗಿ ಕೊಟ್ಟನು.

೪೦೩. ವಿಶೇಷವಾಗಿ ಭಂಗಹೊಂದಿ, ಶೂನ್ಯವಾಗಿ, ಅಲ್ಪಜನರಿಂದಕೂಡಿ, ಅಲ್ಲಲ್ಲಿ ನಾಶಹೊಂದಿ, ಅನಾಚಾರದಿಂದಕೂಡಿರುವ ಮನೆಗಳು ಪಿಶಾಚಗಳಿಗೆ ವಾಸಸ್ಥಾನಗಳಾಗಿರುವುವು.

ಅಸಂಮೃಷ್ಟೋಪಲಿಪ್ತಾನಿ ಸಂಸ್ಕಾರೈರ್ವರ್ಜಿತಾನಿ ತು ।
ರಾಜಮಾರ್ಗೋಪಥ್ಯಾಶ್ಚ ನಿಷ್ಕುಟಾಶ್ಚತ್ವರಾಣಿ ಚ ॥ ೪೦೪ ॥

ದ್ವಾರಾಣ್ಯಟ್ಟಾಲಕಾಂಶ್ಚೈವ ನಿರ್ಗಮಾಸ್ಸಂಕ್ರಮಾಸ್ತಥಾ ।
ಪಥೋ ನದ್ಯೋಽಥ ತೀರ್ಥಾನಿ ಚೈತ್ಯವೃಕ್ಷಾ ಮಹಾಪಥಮ್ ॥ ೪೦೫ ॥

ಪಿಶಾಚಾ ವಿನಿವಿಷ್ಟಾ ವೈ ಸ್ಥಾನೇಷ್ವೇತೇಷು ಸರ್ವಶಃ ।
ಅಧಾರ್ಮಿಕೋ ಜನಸ್ತೇಷಾಮಾಜೀವೋ ವಿಹಿತಃ ಸುರೈಃ ॥ ೪೦೬ ॥

ವರ್ಣಾಶ್ರಮಾಃ ಸಂಕರಿಕಾಃ ಕಾರುಶಿಲ್ಪಿಜನಾಸ್ತಥಾ ।
ಪ್ರಕೃತೋಪಧಿಸಂಧಾನಾಶ್ಚೋರಾ ವಿಶ್ವಾಸಘಾತಿನಃ ॥ ೪೦೭ ॥

ಏತೈರನ್ಯೈಶ್ಚ ಬಹುಭಿರನ್ಯಾಯೋಪಾರ್ಜಿತೈರಪಿ ।
ಆರಭ್ಯಂತೇ ಕ್ರಿಯಾ ಯಾಸ್ತು ಪಿಶಾಚಾಸ್ತತ್ರ ದೈವತಮ್ ॥ ೪೦೮ ॥

---

೪೦೪. ಮತ್ತುಸಾರಿಸಿ ಗುಡಿಸದೆ ಇರುವ, ಮತ್ತಾವವಿಧ ಸಂಸ್ಕಾರಗಳೂ ಇಲ್ಲದ ಮನೆ, ರಾಜಮಾರ್ಗ, ಅದನ್ನು ಸಂಧಿಸುವಬೀದಿ, ಗುಡಿಸಲು ಮತ್ತು ಚೌಕ ಮುಂತಾದುವು ಪಿಶಾಚಗಳು ವಾಸಮಾಡುವ ಸ್ಥಳಗಳು.

೪೦೫. ಬಾಗಿಲು, ಅಟ್ಟ, ಮೆಟ್ಟಲು, ಸೇತುವೆ, ಬೀದಿ, ನದೀ, ತೀರ್ಥ, ಶೂನ್ಯಾಲಯದಲ್ಲಿರುವ ಗಿಡ, ಮತ್ತು ದೊಡ್ಡಮಾರ್ಗ ಇಂತಹ ಸ್ಥಳಗಳಲ್ಲಿ ಪಿಶಾಚಗಳು ವಾಸಮಾಡುತ್ತವೆ.

೪೦೬. ಈ ಮೇಲೆ ಹೇಳಿದ ಪ್ರತಿ ಯೊಂದು ಸ್ಥಾನಗಳಲ್ಲಿಯೂ ಸಾಮಾನ್ಯವಾಗಿ ಪಿಶಾಚಗಳು ಸ್ಥಿರವಾಗಿ ವಾಸಿಸುವುವು. ಅಧರ್ಮದಲ್ಲಿ ಆಸಕ್ತಿಯುಳ್ಳ ಮನುಷ್ಯನು ಆ ಪಿಶಾಚಗಳಿಗೆ ಪ್ರಾಣವಾಗಿ ದೇವತೆಗಳಿಂದ ಕಲ್ಪಿಸಲ್ಪಟ್ಟಿರುವನು.

೪೦೭ ಮತ್ತು ವರ್ಣ-ಆಶ್ರಮಗಳ ಸಂಕರ ಜಾತಿ, ಕಾರು, ಶಿಲ್ಪಿ, ಕಪಟ ಸಂಧಾನವುಳ್ಳ ಪುರುಷ, ಚೋರ ಮತ್ತು ವಿಶ್ವಾಸಘಾತಿ ಈ ಆಶ್ರಯಗಳಿಂದ ಪಿಶಾಚಗಳು ಬದುಕಿರುವುವು.

೪೦೮. ಇಲ್ಲಿ ಹೇಳಿದ ಮತ್ತು ಇತರ ಅನೇಕ ವಿಧ ಪಿಶಾಚಗಳಿಗೆ ಅನೇಕ ವಿಧವಾದ, ಅನ್ಯಾಯದಿಂದ ಆರ್ಜಿಸಿದ, ಧನವನ್ನು ವ್ಯಯಮಾಡಿ ಪಿಶಾಚ ದೇವತೆಯನ್ನು ಆರಾಧಿಸಿ ತೃಪ್ತಿಗೊಳಿಸಬೇಕು.

ಮಧುಮಾಂಸೋದನೈರ್ದಧ್ನಾ ತಿಲಚೂರ್ಣೈಃ ಸುರಾಸವೈಃ ।
ಧೂಪೈರ್ಹಾರಿದ್ರಕೈಸರೈಸ್ತಿಲಭಕ್ಷಗುಡೋದನೈಃ ॥ ೪೦೯ ॥

ಕೃಷ್ಣಾನಿ ಚೈವ ವಾಸಾಂಸಿ ಧೂಪಃ ಸುಮನಸೋಽಕ್ಷಯಃ ।
ಏವಮುಕ್ತಾಸ್ತು ಬಲಯಸ್ತ್ವೇಷಾಂ ವೈ ಪರ್ವಸಂಧಿಷು ॥ ೪೧೦ ॥

ಪಿಶಾಚಾನಾಮನುಜ್ಞಾಯ ಬ್ರಹ್ಮಾ ಚಾಧಿಪತಿಂ ದದೌ ।
ಸರ್ವಭೂತಪಿಶಾಚಾನಾಂ ಗಿರೀಶಾಂ ಶೂಲಪಾಣಿನಾಮ್ ॥ ೪೧೧ ॥

ದಂಷ್ಟ್ರಾ ತ್ವಜನಯತ್ಪುತ್ರಾನ್ ಸಿಹ್ಮಾನ್ ವ್ಯಾಘ್ರಾಂಶ್ಚ ಭಾಮಿನೀ ।
ದ್ವೀಪಿನಶ್ಚ ಸುತಾಸ್ತಸ್ಯಾಃ ಶ್ವಾಪದಾಶ್ಚಾಮಿಷಾಶಿನಃ ॥ ೪೧೨ ॥

ಖುಷಾಯಾಸ್ತ್ವಪಿ ಕಾರ್ತ್ಸ್ನ್ಯೇನ ಪ್ರಜಾಸರ್ಗಂ ನಿಬೋಧತ ।
ತಸ್ಯಾ ದುಹಿತರಃ ಪಂಚ ತಾಸಾಂತ್ತಿನಾಮಾನಿ ಮೇ ಶೃಣು ॥ ೪೧೩ ॥

---

೪೦೯. ಅವುಗಳಿಗೆ ಮಧು,ಮಾಂಸ, ಅನ್ನ, ದಧಿ, ತಿಲ, ಚೂರ್ಣ, ಮದ್ಯ, ಧೂಪ, ಅರಿಶಿನದಿಂದ ಮಿಶ್ರವಾದ ಭಕ್ಷ, ತಿಲಭಕ್ಷ್ಯ. ಮತ್ತು ಗುಡೋದನ ಮುಂತಾದ ಅನ್ನವನ್ನು ಬಲಿಯಾಗಿ ಕೊಡಬೇಕು.

೪೧೦. ಮತ್ತು ಕಪ್ಪು ಬಟ್ಟೆ, ಧೂಪ, ಹೂವು, ಇವುಗಳಿಂದ ಕೂಡಿದ ಬಲಿಯನ್ನು ಪಿಶಾಚಗಳಿಗೆ ಅರ್ಪಿಸಬೇಕು. ಇವುಗಳಿಗೆ ಪರ್ವ ಸಂಧಿ ಕಾಲಗಳಲ್ಲಿ ವಿಶೇಷವಾಗಿ ಬಲಿನದಾನಗಳು ಹೇಳಲ್ಪಟ್ಟಿವೆ.

೪೧೧. ಬ್ರಹ್ಮನು ಎಲ್ಲ ಭೂತ ಪಿಶಾಚಗಳಿಗೆ, ಬೆಟ್ಟಗಳಿಗೆ ಶೂಲಧಾರಿಗಳಿಗೆ ಸಮ್ಮತಿಯಿರುವಂತೆ ರುದ್ರಮೂರ್ತಿಯನ್ನು ಅಧಿಪತಿಯನ್ನಾಗಿ ಕೊಟ್ಟಿರುವನು.

೪೧೨. ದಂಷ್ಟ್ರಾಎಂಬ ಭಾಮಿನಿಯು ಸಿಂಹ ವ್ಯಾಘ್ರ ದ್ವೀಪಿ ಮುಂತಾದ ಪ್ರಾಣಿಗಳನ್ನು ಪುತ್ರರನ್ನಾಗಿ ಪ್ರಸವಿಸಿದಳು. ಮತ್ತು ಆಕೆಗೆ ಮಾಂಸವನ್ನು ತಿನ್ನುವ ಶ್ವಾಪದ ಮೃಗಗಳು ಪುತ್ರರಾದರು.

೪೧೩. ಮುಂದೆಖುಷಾ ಎಂಬುವಳಿಗೆ ಹುಟ್ಟಿದ ಪ್ರಜಾ ಸೃಷ್ಟಿಯನ್ನು ಸಂಪೂರ್ಣವಾಗಿ ಕೇಳಿರಿ. ಅವಳಿಗೆ ಐದು ಮಂದಿ ಪುತ್ರಿಯರಿದ್ದರು, ಮೊದಲು ಅವರ ಹೆಸರನ್ನು ಶ್ರವಣಮಾಡಿ.

ಮೀನಾಮೀನಾ ತಥಾ ವೃತ್ತಾ ಪರಿವೃತ್ತಾ ತಥೈವ ಚ ।
ಅನುವೃತ್ತಾ ಚ ವಿಜ್ಞೇಯಾ ತಾಸಾಂ ವೈ ಶೃಣುತ ಪ್ರಜಾಃ ॥ ೪೧೪ ॥

ಸಹಸ್ರದಂಷ್ಟ್ರಮಕರಾಃ ಪಾಠೀನಾಸ್ತಿಮಿರೋಹಿತಾಃ ।
ಇತ್ಯೇವ ಮಾದಿರ್ಹಿ ಗಣೋ ಮೈನೋ ವಿಸ್ತೀರ್ಣ ಉಚ್ಯತೇ॥ ೪೧೫ ॥

ಗ್ರಹಾಶ್ಚತುರ್ವಿಧಾ ಜ್ಞೇಯಾ ಮದ್ಗುರಾಃ ಶಂಕವಸ್ತಥಾ ।
ಉಗ್ರಾಶ್ಚ ಶಿಶುಮಾರಾಶ್ಚಾಮೀನಾ ಚೈತಾನ್ ವ್ಯಜಾಯತ ॥ ೪೧೬ ॥

ವೃತ್ತಾ ಕೂರ್ಮವಿಕಾರಾಣಿ ನೈಕಾನಿ ಜಲಚಾರಿಣಾಮ್ ।
ತಥಾ ಶಂಖವಿಕಾರಾಣಿ ಜನಯಾಮಾಸ ನೈಕಶಃ ॥ ೪೧೭ ॥

ಮಂಡೂಕಾನಾಂ ವಿಕಾರಾಣಿ ಹ್ಯನುವೃತ್ತಾ ವ್ಯಜಾಯತ ।
ಐಣೇಯಾನಾಂ ವಿಕಾರಾಣಿ ಶಂಬೂಕಾನಾಂ ತಥೈವ ಚ ॥ ೪೧೮ ॥

---

೪೧೪. ಮೀನಾ, ಅಮೀನಾ, ವೃತ್ತಾ ಪರಿವೃತ್ತಾ ಎಂದು ಐದು ಮಂದಿ ಖಷಾ ಪುತ್ರಿಯರ ಹೆಸರುಗಳನ್ನು ತಿಳಿಯಬೇಕು. ಅವರ ಪ್ರಜಾ ಸೃಷ್ಟಿಯನ್ನು ಕೇಳಿರಿ.

೪೧೫. ಸಹಸ್ರ ದಂಷ್ಟ್ರ, ಮಕರ ,ಪಾಠೀನ, ತಿಮಿ, ರೋಹಿತ ಮುಂತಾದ ಮೀನುಗಳ ವಿಸ್ತಾರವಾದ ಸೃಷ್ಟಿಯು ಮೀನಾ ಎಂಬುವಳಿಂದ ಉಂಟಾಗಿರುವುದು.

೪೧೬. ಮದ್ಗುರ, ಶಂಕು, ಉಗ್ರ, ಶಿಶುಮಾರ ಎಂಬ ನಾಲ್ಕು ಬಗೆಯ ಮೊಸಳೆಗಳು ಇರುವುವು. ಅವುಗಳನ್ನು ಅಮೀನಾ ಎಂಬ ಖಷಾಪುತ್ರಿಯು ಪ್ರಸವಿಸಿರುವಳು.

೪೧೭. ಮತ್ತು ವೃತ್ತಾ ಎಂಬುವಳು ಅನೇಕ ವಿಧವಾದ ಜಲ ಚರ ಪ್ರಾಣಿಗಳ ಗುಂಪನ್ನೂ ಆಮೆಯ ಪ್ರಭೇದಗಳನ್ನೂ ಮತ್ತು ಶಂಖಜಾತಿಯ ವಿಕಾರಗಳನ್ನೂ ಹೊಂದಿರುವಳು.

೪೧೮. ಅನುವೃತ್ತಾ ಎಂಬುವಳು ಕಪ್ಪೆಗಳ ಜಾತಿಗಳನ್ನುಪ್ರಸವಿಸಿದಳು. ಮತ್ತು ಪರಿವೃತ್ತಾ ಎಂಬುವಳು ಜಿಂಕೆ ಮತ್ತು ಶಂಬೂಕ ಎಂಬ ಜಲಚರ ಪ್ರಾಣಿ ಜಾತಿಗಳನ್ನು ಪ್ರಸವಿಸಿದಳು.

**ತಥಾ ಶುಕ್ತಿವಿಕಾರಾಣಿ ವರಾಟವಿಕೃತಾನಿ ಚ ।**
**ತಥಾ ಶಂಖವಿಕಾರಾಣಿ ಪರಿವೃತ್ತಾ ವ್ಯಜಾಯತ ॥ ೪೧೯ ॥**

**ಕಾಲಕಂಠವಿಕಾರಾಣಿ ಜಲೂಕಾವಿಕೃತಾನಿ ಚ ।**
**ಇತ್ಯೇಷ ಹಿ ಖುಷಾವಂಶಃ ಪಂಚಶಾಖಃ ಪ್ರಕೀರ್ತಿತಃ ॥ ೪೨೦ ॥**

**ತಿರ್ಯಾಹೇತುಕಮಪ್ಯಾಹುರ್ಬಹುಲಂ ವಂಶವಿಸ್ತರಮ್ ।**
**ಸಂಸ್ವೇದಜವಿಕಾರಾಣಿ ಯಥಾ ಯೇಭ್ಯೋ ಭವಂತಿ ಹ ॥ ೪೨೧ ॥**

**ಸ್ವೇದಕ್ಲಿನ್ನಶರೀರೇಭ್ಯೋ ಯೂಕಾಲಿಕ್ಷಾದಿಕಾ ದ್ವಿಜಾಃ ।**
**ಮನುಷ್ಯಸ್ವೇದಮಲಜಾ ಉಶನಾ ನಾಮ ಜಂತವಃ ॥ ೪೨೨ ॥**

**ನಾನಾಪಿಪೀಲಕಗಣಾಃ ಕೀಟಕಾ ಬಹುಪಾದಕಾಃ ।**
**ಶಂಖೋಪಲವಿಕಾರಾಣಿ ಕೀಲಕಾವರಕಾಣಿ ಚ ॥ ೪೨೩ ॥**

---

೪೧೯. ಹಾಗು ಚಿಪ್ಪಿನ ಅನೇಕ ಬಗೆಗಳು, ಕವಡೆಗಳು, ಮತ್ತು ಶಂಖಗಳ ವಿವಿಧ ಜಾತಿಗಳು ಪರಿವೃತ್ತಾ ಎಂಬುವಳಿಂದ ಜನಿಸಿದುವು.

೪೨೦. ಕಾಲಕಂಠಎಂಬ ಜಲಚರಪ್ರಾಣಿ ಮತ್ತು ಜಲೂಕಾ ಎಂಬ ಪ್ರಾಣಿ ಇಂತಹ ಕೆಲವುಬಗೆಯ ಜಾತಿಗಳು ಪರಿವೃತ್ತೆಯಿಂದ ಜನಿಸಿದುವು. ಹೀಗೆ ಖುಷಾ ಎಂಬುವಳ ವಂಶವು ಐದುಬಗೆಯಾಗಿ ಪ್ರಸರಿಸಿತೆಂದು ಕೀರ್ತಿಸಲ್ಪಟ್ಟಿದೆ.

೪೨೧. ತಿರ್ಯಾ ಎಂಬುವಳಿಂದ ಬಹುವಿಧವಾದ ವಂಶ ವಿಸ್ತಾರವು ಆಯಿತೆಂದು ಪ್ರಾಜ್ಞರು ಹೇಳುತ್ತಾರೆ. ಬೆವರಿನಿಂದ ಹುಟ್ಟುವ ಅನೇಕ ಬಗೆಯ ಪ್ರಾಣಿ ಜಾತಿಗಳು ಆ ವಂಶದಲ್ಲಿ ಸೇರಿವೆ.

೪೨೨. ದ್ವಿಜರೇ! ಬೆವರಿನಿಂದ ಒದ್ದೆಯಾದ ದೇಹಗಳಿಂದ ಹೇನು, ಚೀರು ಮುಂತಾದ ಜಂತುಗಳು ಜನಿಸಿದುವು. ಮನುಷ್ಯನ ಬೆವರಿನಿಂದ ಮತ್ತು ಮಲದಿಂದ ಹುಟ್ಟುವ ಜಂತುಗಳಿಗೆ ಉಶನಾ ಎಂದು ಹೆಸರು.

೪೨೩. ಅನೇಕ ಇರುವೆಗಳ ಜಾತಿ, ಹುಳು, ಹೆಚ್ಚುಪಾದಗಳಿಂದ ನಡೆಯುವ ಪ್ರಾಣಿಜಾತಿ, ಶಂಖ, ಕಲ್ಲುಗಳಲ್ಲಿರುವ ಪ್ರಾಣಿಜಾತಿ, ಗಿಡ-ಬಳ್ಳಿಗಳ ಆವರಣದಲ್ಲಿ ಇರುವ ಪ್ರಾಣಿಜಾತಿ, ಇವುಗಳೆಲ್ಲ ತಿರ್ಯಾವಂಶದಲ್ಲಿ ಸೇರಿರುವುವು.

ಇತ್ಯೇವಮಾದಿಬಹುಲಾಃ ಸ್ವೇದಜಾಃ ಪಾರ್ಥಿವಾ ಗಣಾಃ ।
ಯಥಾ ಘರ್ಮಾದಿತಪ್ತಾಭ್ಯಶ್ಚಾದ್ಭ್ಯೋ ವೃಷ್ಟಿಭ್ಯ ಏವ ಚ ॥ ೪೨೪ ॥

ನೈಕಾ ಮೃಗಶರೀರೇಭ್ಯೋ ಜಾಯಂತೇ ಜಂತವಸ್ತ್ವಿಮೇ ।
ಮಕ್ಷಿಕಾಃ ಪಿಚ್ಛಲಾ ದಂಶಾಸ್ತಥಾ ತಿತ್ತಿರಿಪುತ್ತಿಕಾಃ ॥ ೪೨೫ ॥

ನೀಲಾಛತ್ರಾಶ್ಚ ಜಾಯಂತೇ ಮಲಜಾ ಬಹುವಿಸ್ತರಾಃ ।
ಜಲಜಾಃ ಸ್ವೇದಜಾಶ್ಚೈವ ಜಾಯಂತೇ ಜಂತವಸ್ತ್ವಿಮೇ ॥ ೪೨೬ ॥

ಕಾಶತೋಯಜಕಾಃ ಕೀಟಾ ನಲದಾ ಬಹುಪಾದಕಾಃ ।
ಸಿಹ್ಮಲಾ ರೋಮಲಾಶ್ಚೈವ ಪಿಚ್ಛಲಾಃ ಪರಿಕೀರ್ತಿತಾಃ ॥ ೪೨೭ ॥

ಇತ್ಯೇವಮಾದಿರ್ಹಿ ಗಣೋ ಜಲಜಸ್ವೇದಜಃ ಸ್ಮೃತಃ ।
ಶಿಂಬಿಭ್ಯೋ ಮಾಷಮುದ್ಗಾನಾಂ ಜಾಯಂತೇ ಕೃಮಯಸ್ತಥಾ ॥ ೪೨೮ ॥

---

೪೨೪. ಹೀಗೆ ಹಿಂದೆ ಹೇಳಿದ ಅನೇಕ ಪ್ರಾಣಿಗಳು ಪೃಥಿವಿಯ ಗಣಕ್ಕೆ ಸೇರಿ ಬೆವರಿನಿಂದ ಹುಟ್ಟುವ ಸ್ವಭಾವವುಳ್ಳವುಗಳು. ತಾಪದಿಂದ ಉಷ್ಣವಾದ ನೀರಿನಿಂದಲೂ, ಮಳೆಯ ನೀರಿನಿಂದಲೂ ಇಂತಹ ಪ್ರಾಣಿಗಳು ಜನಿಸುತ್ತವೆ.

೪೨೫. ಈ ಜಂತು ವಿಶೇಷಗಳು ಅನೇಕ ಬಗೆಯಾಗಿ ಮೃಗ ದೇಹಗಳಿಂದ ಜನಿಸುತ್ತವೆ. ನೊಣ, ಪಿಚ್ಛಲ, ದಂಶ, ತಿತ್ತಿರಿ, ಪುತ್ತಿಕ ಎಂಬ ಚಿಕ್ಕಚಿಕ್ಕ ಪ್ರಾಣಿಗಳು ಅಸಂಖ್ಯಾತವಾಗಿ ಹುಟ್ಟುತ್ತವೆ.

೪೨೬. ನೀಲಾಛತ್ರ ಎಂಬ ಪ್ರಾಣಿಗಳು ಬಹು ವಿಸ್ತಾರವಾಗಿ ಮಲದಿಂದ ಹುಟ್ಟುತ್ತವೆ. ಹೀಗೆ ನೀರು, ಬೆವರುಗಳಿಂದ ಈ ಜಂತುಗಳು ಜನ್ಮವೆತ್ತುವುವು.

೪೨೭. ಕಾಷತೋಯಜಕ, ಕೀಟ, ನಲದ, ಬಹುಪಾದ, ಸಿಂಹಲ, ರೋಮಲ ಎಂಬ ಬಹುರೋಮಪಾದಗಳಿಂದ ಕೂಡಿದ ಜಂತುಗಳು ಪಿಚ್ಛಿಲ ಎಂದು ಕೀರ್ತಿಸಲ್ಪಟ್ಟಿವೆ.

೪೨೮. ಇವೇ ಮೊದಲಾದ ಪ್ರಾಣಿಗಳ ಗಣವು ಜಲಜ ಮತ್ತು ಸ್ವೇದಜ ಎಂದು ಕರೆಯಲ್ಪಟ್ಟಿದೆ. ಅಲ್ಲದೆ ಉದ್ದು, ಹೆಸರು ಮುಂತಾದ ಧಾನ್ಯಗಳ ತೆನೆಗಳಿಂದ ಅನೇಕ ಕ್ರಿಮಿಗಳು ಹುಟ್ಟುತ್ತವೆ.

ಬಿಲ್ವಜಂಬ್ವಾಮ್ರಪೂಗೇಭ್ಯಃ ಫಲೇಭ್ಯಶ್ಚೈವ ಜಂತವಃ ।
ಮುದ್ಗೇಭ್ಯಃ ಪನಸೇಭ್ಯಶ್ಚ ತಂಡುಲೇಭ್ಯಸ್ತಥೈವ ಚ ॥ ೪೨೯ ॥

ತಥಾ ಕೋಟರಶುಷ್ಕೇಭ್ಯೋ ನಿಹಿತೇಭ್ಯೋ ಭವಂತಿ ಹಿ ।
ಅನ್ಯೇಭ್ಯೋಽಪಿ ಹಿ ಜಾಯಂತೇ ನ ಹಿ ತೇಭ್ಯಶ್ಚಿರಂ ಸದಾ ॥ ೪೩೦ ॥

ಜಂತವಸ್ತುರಗಾದಿಭ್ಯೋ ವಿಷಾಣಿಭ್ಯಸ್ತಥೈವ ಚ ।
ಬಹೂನ್ಯಹಾನಿ ನಿಕ್ಷಿಪ್ತೇ ಸಂಭವಂತಿ ಚ ಗೋಮಯೇ ॥ ೪೩೧ ॥

ಜಾಯಂತೇ ಕ್ರಿಮಯೋ ವಿಪ್ರಾಃ ಕಾಷ್ಠೇಭ್ಯಶ್ಚಾಪಿ ಸರ್ವಶಃ ।
ಸಂಸ್ವೇದಜಾಶ್ಚ ಜಾಯಂತೇ ವೃಶ್ಚಿಕಾಃ ಶುಷ್ಕಗೋಮಯಾತ್ ॥ ೪೩೨ ॥

ಗೋಭ್ಯೋ ಹಿ ಮಹಿಷೇಭ್ಯಶ್ಚ ತಥಾನ್ಯೇಭ್ಯಶ್ಚ ಜಂತವಃ ।
ಮತ್ಸ್ಯಾದಿಭ್ಯಶ್ಚ ವಿವಿಧಾ ಅನ್ನಕೂಟೇ ವಿಶೇಷತಃ ॥ ೪೩೩ ॥

---

೪೨೯. ಬಿಲ್ವ, ನೇರಳೆ, ಮಾವು, ಅಡಿಕೆ, ಹಣ್ಣು, ಹೆಸರು, ಅಕ್ಕಿ, ಹಲಸು ಮುಂತಾದುವುಗಳಿಂದ ವಿವಿಧ ಪ್ರಾಣಿಗಳು ಜನಿಸುತ್ತವೆ.

೪೩೦. ಹಾಗೆ ಒಣಗಿದ ಪೊದೆ ಮತ್ತು ನಿರ್ಮಾಣ ಮಾಡಿದ ಗೂಡು ಇನ್ನು ಅನೇಕ ಪ್ರದೇಶಗಳಿಂದ ಬಗೆಬಗೆಯ ಪ್ರಾಣಿಗಳು ಹುಟ್ಟುತ್ತವೆ. ಆದರೆ ಅವುಗಳಿಗೆ ಬಹುಕಾಲಸ್ಥಿತಿಯು ಇರುವುದಿಲ್ಲ.

೪೩೧. ಕುದುರೆ ಮುಂತಾದ ಪ್ರಾಣಿಗಳಿಂದಲೂ ಕೊಂಬುಗಳುಳ್ಳ ಪ್ರಾಣಿಗಳಿಂದಲೂ, ಬಹಳದಿವಸ ಕೊಳೆಯುತ್ತಿರುವ ಗೋಮಯದಿಂದಲೂ ಅನೇಕ ಕ್ರಿಮಿಗಳು ಹುಟ್ಟುತ್ತವೆ.

೪೩೨. ವಿಪ್ರರೇ, ಕಾಷ್ಠಗಳಲ್ಲಿಯೂ ಅನೇಕವಾಗಿ ಕ್ರಿಮಿಗಳು ಹುಟ್ಟುತ್ತವೆ. ಮತ್ತು ಬೆವರಿನಿಂದ ಅನೇಕ ಕ್ರಿಮಿಗಳು ಹುಟ್ಟುವಂತೆ ಒಣಗಿದ ಗೋಮಯದಿಂದ ಚೇಳುಗಳು ಹುಟ್ಟುತ್ತವೆ.

೪೩೩. ಗೋವು, ಎಮ್ಮೆ ಇವುಗಳ ದೇಹಗಳಿಂದ ಮತ್ತೆ ಕೆಲವು ಜಂತುಗಳು ಮೀನು ಅನ್ನದರಾಶಿ ಮುಂತಾದುವುಗಳಿಂದ ಒಂದುಬಗೆಯ ಜಂತುಗಳು ವಿಶೇಷವಾಗಿ ಹುಟ್ಟುತ್ತವೆ.

ವೈಕಾರಿಕಾಶ್ಚ ಜಾಯಂತೇ ತಥಾ ಗಾಜಕುಲಾನಿ ಚ ।
ತಥಾನ್ಯಾನಿ ಚ ಸೂಕ್ಷ್ಮಾಣಿ ಜಲೌಕಾದೀನಿ ಜಾತಯಃ ॥ ೪೩೪ ॥

ಕಪೋತಕುರರಾದಿಭ್ಯಃ ಸೂಕ್ಷ್ಮಾಃ ಶೂಕಾಸ್ತಥೈವ ಚ ।
ಮಾಕ್ಷಿಕಾಣಾಂ ವಿಕಾರಾಣಿ ಜಾಯಂತೇ ಜಾತಯೋಽಪರೇ ॥ ೪೩೫ ॥

ಪ್ರಾಯೇಣಾನುವಸಂತ್ಯಸ್ಮಿನ್ಯುಚ್ಛಿಷ್ಟೋದಕಕರ್ದಮೇ ।
ಮಶಕಾನಾಂ ವಿಕಾರಾಣಿ ಭ್ರಮರಾಣಾಂ ತಥೈವ ಚ ॥ ೪೩೬ ॥

ಗೋಭ್ಯಃ ಸಮಭಿಜಾಯಂತೇ ಪುತ್ತಿಕಾಪುತ್ರಸಪ್ತಕಾಃ ।
ಮಣಿಚ್ಛೇದಾಃ ಸ್ಮೃತಾ ವ್ಯಾಲಾಃ ಪೋತಜಾಃ ಪರಿಕೀರ್ತಿತಾಃ ॥ ೪೩೭ ॥

ಶತವೇರಿವಿಕಾರಾಣಿ ಕರೀಷೇಭ್ಯೋ ಭವಂತಿ ಹಿ ।
ಏವಮಾದಿರಸಂಖ್ಯಾತೋ ಗಣಃ ಸಂಸ್ವೇದಜೋ ಮಯಾ ॥ ೪೩೮ ॥

---

೪೩೪. ವೈಕಾರಿಕ, ಗಾಜಕುಲ ಮುಂತಾದ ಪ್ರಾಣಿಗಳು ಮತ್ತು ಅತಿ ಸೂಕ್ಷ್ಮವಾದ ಜಲೂಕ ಎಂಬ ಪ್ರಾಣಿಗಳು ಗಣನಾತೀತವಾಗಿ ಹುಟ್ಟುತ್ತವೆ.

೪೩೫. ಪಾರಿವಾಳ, ಕುರರ, ಗಿಣಿ ಮುಂತಾದ ಪಕ್ಷಿಗಳಿಂದ ಕೆಲವು ಪ್ರಾಣಿಗಳೂ, ಜೇನು, ನೊಣ, ಮುಂತಾದ ಪ್ರಾಣಿಜಾತಿಗಳೂ ಹುಟ್ಟುತ್ತವೆ.

೪೩೬. ಈ ಕ್ರಿಮಿಕೀಟಗಳು ಪ್ರಾಯಕವಾಗಿ ಅನ್ನಾದಿ ಆಹಾರವಸ್ತು, ಎಂಜಲು, ನೀರು, ಕೆಸರು, ಮುಂತಾದುವುಗಳಲ್ಲಿ ವಾಸಮಾಡುತ್ತವೆ. ಹೀಗೆ ದುಂಬಿ, ನೊಣಗಳ ಜಾತಿಗಳು ಹುಟ್ಟಿವೆ.

೪೩೭. ಗೋವುಗಳ ದೇಹಗಳಿಂದ ಏಳುಬಗೆಯ ಪುತ್ತಿಕಾ ಎಂಬ ಸೂಕ್ಷ್ಮ ಪ್ರಾಣಿಗಳು ಹುಟ್ಟುತ್ತವೆ. ಮಣಿಚ್ಛೇದ ಎಂಬ ಹಾವಿನ ಜಾತಿಯು ತೆಪ್ಪದಲ್ಲಿ ಹುಟ್ಟುವುದು ಎಂದು ಕೀರ್ತಿಸಲ್ಪಟ್ಟಿದೆ.

೪೩೮. ಶತವೇರಿ ಎಂಬ ಜಾತಿ ವಿಶೇಷವು ಒಣಗಿದ ಗೋಮಯದಿಂದ ಜನಿಸುತ್ತಿದೆ. ಇಂತಹ ಅಸಂಖ್ಯೇಯವಾದ ಪ್ರಾಣಿ ವರ್ಗವು ಸ್ವೇದಜವೆಂದು ಕರೆಯಲ್ಪಡುತ್ತದೆ.

**ಸಮಾಸಾಭಿಹಿತೋ ಹ್ಯೇಷ ಪ್ರಾಕ್ಕರ್ಮವಶಜಃ ಸ್ಮೃತಃ ।**
**ಯೇ ಚಾನ್ಯೇ ನೈರ್ಋತಾಃ ಸತ್ತ್ವಾಸ್ತೇ ಸ್ಮೃತಾ ಉಪಸರ್ಗಜಾಃ ॥ ೪೩೯ ॥**

**ಭೂತಾಸ್ತು ಯೋನಿಜಾಃ ಕೇಚಿತ್ ಕೇಚಿದೌತ್ಪತ್ತಿಕಾಃ ಸ್ಮೃತಾಃ ।**
**ಪ್ರಾಯೇಣ ದೇವಾಃ ಸರ್ವೇ ವೈ ವಿಜ್ಞೇಯಾ ಹ್ಯುಪಪತ್ತಿಜಾಃ ॥ ೪೪೦ ॥**

**ಕೇಚಿತ್ತು ಯೋನಿಜಾ ದೇವಾಃ ಕೇಚಿದ್ದೇಸಾ ನಿಮಿತ್ತತಃ ।**
**ದುಲ್ಲೋಲಕಂ ಲಲೋಹಂ ಚ ಸರಮಾ ದ್ವಾ ವ್ಯಜಾಯತ ॥ ೪೪೧ ॥**

**ತಯೋರಪತ್ಯಂ ಚತ್ವಾರೋ ವಿಜ್ಞೇಯಾಃ ಸ್ಯಮರಾದಯಃ ।**
**ಶ್ಯಾಮಾಶ್ಚ ಶಬಲಾಶ್ಚೈವ ಲೋಹಿತಾ ಅಂಜನಾಸ್ತಥಾ ॥ ೪೪೨ ॥**

**ಕೃಷ್ಣಧೂಮ್ರಾರುಣಾಶ್ಚೈವ ದುಲ್ಲೋಲಸ್ಯಾಷ್ಟ ಕದ್ರುಕಾಃ ।**
**ಸರ್ಪಾಣಾಂ ಸುರಸಾ ಜಜ್ಞೇ ಶತಂ ನೈಕಶಿರೋಭೃತಾಮ್ ॥ ೪೪೩ ॥**

---

೪೩೯. ಸಂಗ್ರಹವಾಗಿ ಹೇಳಲ್ಪಟ್ಟ ಈ ಸೃಷ್ಟಿಯು ಪ್ರಾಣಿಗಳ ಪ್ರಾರಬ್ಧ ಕರ್ಮ ವಶದಿಂದ ಹುಟ್ಟಿದೆ ಎಂದು ಸ್ಮರಿಸಲ್ಪಟ್ಟಿದೆ. ಮತ್ತೆ ಕೆಲವು ರಾಕ್ಷಸ ಜಾತಿಗೆ ಒಳಪಟ್ಟ ಪ್ರಾಣಿ ಸೃಷ್ಟಿಯು ಉಪಸರ್ಗದಿಂದ ಹುಟ್ಟಿರುವುದು.

೪೪೦. ಹೀಗೆ ಪ್ರಾಣಿಗಳೆಲ್ಲ ಕೆಲವು ಯೋನಿಜ ಎಂದೂ ಕೆಲವು ಔತ್ಪತ್ತಿಕ ಎಂದು ಸ್ಮರಿಸಲ್ಪಟ್ಟಿವೆ. ಪ್ರಾಯಕವಾಗಿ ದೇವತೆಗಳು ಎಲ್ಲರೂ ಉಪಪತ್ತಿ ಇಂದ ಹುಟ್ಟಿದವರೆಂದು ತಿಳಿಯಬೇಕು.

೪೪೧. ಕೆಲವು ದೇವತೆಗಳು ಯೋನಿಜರೂ ಮತ್ತೆ ಕೆಲವರು ಬೇರೆ ನಿಮಿತ್ತದಿಂದ ಹುಟ್ಟಿದವರೂ, ಆಗಿರುವರು. ಸರಮಾ ಎಂಬುವಳು ದುಲ್ಲೋಲಕ, ಲಲೋಹ ಎಂಬ ಎರಡು ಪ್ರಾಣಿಗಳನ್ನು ಹೊಂದಿದಳು.

೪೪೨. ಅವುಗಳಿಗೆ ಸ್ಯಮರ ಮುಂತಾದ ನಾಲ್ಕು ಬಗೆಯ ಸಂತತಿಯು ಆಯಿತೆಂದು ತಿಳಿಯಬೇಕು. ಶ್ಯಾಮ, ಶಬಲ, ಲೋಹಿತ, ಅಂಜನ ಎಂಬ ನಾಲ್ಕು ಬಗೆಯ ಪ್ರಾಣಿಗಳು ಆ ಜಾತಿಯಲ್ಲಿ ಸೇರಿರುವುವು.

೪೪೩. ಕೃಷ್ಣ, ಧೂಮ್ರ, ಅರುಣ, ಕದ್ರು ಎಂಬ ನಾಲ್ಕು ಬಗೆಯು ಸೇರಿ ಎಂಟು ಜಾತಿಯು ದುಲ್ಲೋಲ ಸಂತತಿಗೆ ಸೇರಿದೆ, ಸುರಸಾ ಎಂಬುವಳು ಅನೇಕ ತಲೆಗಳುಳ್ಳ ನೂರಾರು ಸರ್ಪಗಳನ್ನು ಹೊಂದಿದಳು.

ಸರ್ಪಾಣಾಂ ತಕ್ಷಕೋ ರಾಜಾ ನಾಗಾನಾಂ ಚಾಪಿ ವಾಸುಕಿಃ ।
ತಮೋಬಹುಲ ಇತ್ಯೇಷ ಗಣಃ ಕ್ರೋಧವಶಾನ್ವಯಃ ॥ ೪೪೪ ॥

ಪುಲಹಸ್ಯಾತ್ಮಜಃ ಸರ್ಗಸ್ತಾಮ್ರಾಯಾಸ್ತು ನಿಬೋಧತ ।
ಷಟ್ಕನ್ಯಾಸ್ತ್ವಭಿವಿಖ್ಯಾತಾಸ್ತಾಮ್ರಾಯಾಶ್ಚ ವಿಜಜ್ಞಿರೇ ॥ ೪೪೫ ॥

ಗೃಧ್ರೀ ಭಾಸೀ ಶುಕೀ ಕ್ರೌಂಚೀ ಶ್ಯೇನೀ ಚ ಧೃತರಾಷ್ಟ್ರಿಕಾ ।
ಅರುಣಸ್ಯ ಚ ಗೃಧ್ರೀ ತು ವೀರ್ಯವಂತೌ ಮಹಾಬಲೌ ॥ ೪೪೬ ॥

ಸಂಪಾತಿಂ ಚ ಜಟಾಯುಂ ಚ ಪ್ರಸೂತಾ ಪಕ್ಷಿಸತ್ತಮೌ ।
ಸಂಪಾತೇರ್ವಿಜಯಾಃ ಪುತ್ರಾ ದ್ವಿರಾಸ್ಯಾಃ ಪ್ರಸಹಾಶ್ಚ ಯೇ ॥ ೪೪೭ ॥

ಜಟಾಯುಷಃ ಪುರಾಃ ಪುತ್ರಾಃ ಕಂಕಗೃಧ್ರಾಶ್ಚ ಕರ್ಣಿಕಾಃ ।
ಭಾರ್ಯಾ ಗರುತ್ಮತಶ್ಚೈವ ಭಾಸೀ ಕ್ರೌಂಚೀ ತಥಾ ಶುಕೀ ॥ ೪೪೮ ॥

---

೪೪೪. ಇವುಗಳಲ್ಲಿ ಸರ್ಪಜಾತಿಗೆ ತಕ್ಷಕನು ರಾಜನು. ಹಾಗು ನಾಗ ಜಾತಿಗೆ ವಾಸುಕಿಯು ರಾಜನು. ಹೀಗೆ ತಮೋ ಗುಣದಿಂದ ತುಂಬಿದ ಈ ಸಂತತಿಯು ಕ್ರೋಧಾ ಎಂಬುವಳಿಂದ ಬಂದಿದೆ.

೪೪೫. ಪುಲಹ ಪ್ರಜಾಪತಿಯಿಂದ ತಾಮ್ರಾ ಎಂಬುವಳಲ್ಲಿ ಹುಟ್ಟಿದ ಸೃಷ್ಟಿಯನ್ನು ಕೇಳಿರಿ. ತಾಮ್ರಾ ಎಂಬುವಳಿಗೆ ಪ್ರಸಿದ್ಧರಾದ ಆರು ಜನ ಕನ್ಯೆಯರು ಹುಟ್ಟಿದರು.

೪೪೬. ಅವರಿಗೆ ಗೃಧ್ರೀ, ಭಾಸೀ, ಶುಕೀ, ಕ್ರೌಂಚೀ, ಶ್ಯೇನೀ ಮತ್ತು ಧೃತರಾಷ್ಟ್ರಿಕಾ ಎಂಬ ಹೆಸರುಗಳಿದ್ದುವು. ಅರುಣನ ಪತ್ನಿಯಾದ ಗೃಧ್ರೀ ಎಂಬುವಳು ಮಹಾ ಬಲ—ವೀರ್ಯಗಳಿಂದ ಕೂಡಿದ ಪುತ್ರರನ್ನು ಹೊಂದಿದಳು.

೪೪೭. ಆ ಪುತ್ರರು ಸಂಪಾತಿ ಮತ್ತು ಬಟಾಯು ಎಂಬ ಪ್ರಸಿದ್ಧರಾದ ಪಕ್ಷಿಶ್ರೇಷ್ಠರಾಗಿದ್ದರು. ಸಂಪಾತಿಗೆ ಎರಡು ಮುಖವುಳ್ಳ ಮತ್ತು ಸಹನ ಶಕ್ತಿಯುಳ್ಳ ವಿಜಯ ಎಂಬ ಪುತ್ರರು ಜನಿಸಿದರು.

೪೪೮. ಜಟಾಯುವಿಗೆ ಕಂಕ, ಗೃಕ್ರ ಮತ್ತು ಕರ್ಣಿಕ ಎಂಬ ಪುರ ಎಂಬ ನಾಮಾಂಕಿತ ಪಕ್ಷಿಗಳು ಪುತ್ರರಾದರು. ಭಾಸೀ ಕ್ರೌಂಚೀ ಮತ್ತು ಶುಕೀ ಎಂಬುವರು ಗರುಡನ ಭಾರ್ಯೆಯರಾದರು.

ಧೃತರಾಷ್ಟ್ರೀ ತಥಾ ಶ್ಯೇನೀ ತಾಸ್ವಪತ್ಯಾನಿ ವಚ್ಮಿ ತೇ ।
ಶುಕೀ ಗರುತ್ಮತಃ ಪುತ್ರಾನ್ ಸುಷುವೇ ಷಟ್ ಪರಿಶ್ರುತಾನ್ ॥ ೪೪೯ ॥

ಸುಖಂ ಸುನೇತ್ರಂ ವಿಶಿಖಂ ಸುರೂಪಂ ಸುರಸಂ ಬಲಮ್ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಗರುಡಾನಾಂ ಮಹಾತ್ಮನಾಮ್॥ ೪೫೦ ॥

ಚತುರ್ದಶ ಸಹಸ್ರಾಣಿ ಪುರಾಣಾಂ ಪನ್ನಗಾಶಿನಾಮ್ ।
ಪುತ್ರಪೌತ್ರವಿಸರ್ಗಾಚ್ಚ ತೇಷಾಂ ವೈ ವಂಶವಿಸ್ತರೈಃ ॥ ೪೫೧ ॥

ವ್ಯಾಪ್ತಾನಿ ಯಾನಿ ಸ್ಥಾನಾನಿ ತಾನಿ ವಕ್ಷ್ಯೇ ಯಥಾಕ್ರಮಮ್ ।
ಶಾಲ್ಮಲಿದ್ವೀಪಮಖಿಲಂ ದೇವಕೂಟಂ ಚ ಪರ್ವತಮ್ ॥ ೪೫೨ ॥

ಮಣಿಮಂತಂ ಚ ಶೈಲೇಂದ್ರಂ ಸಹಸ್ರಶಿಖರಂ ತಥಾ ।
ಪರ್ಣಮಾಲಂ ಸುಕೇಶಂ ಚ ಶತಶೃಂಗಂ ತಥಾಚಲಮ್ ॥ ೪೫೩ ॥

---

೪೪೯. ಮತ್ತು ಧೃತರಾಷ್ಟ್ರೀ, ಶ್ಯೇನೀ ಎಂಬುವರು ಗರುಡನ ಪತ್ನಿಯರು. ಅವರೆಲ್ಲರಲ್ಲಿ ಉಂಟಾದ ಸಂತತಿಯನ್ನು ಹೇಳುವೆನು. ಶುಕಿಯು ಗರುಡನಿಂದ ಪ್ರಸಿದ್ಧರಾದ ಆರುಮಂದಿ ಪುತ್ರರನ್ನು ಪ್ರಸವಿಸಿದಳು.

೪೫೦. ಅವರಿಗೆ ಸುಖ, ಸುನೇತ್ರ, ವಿಶಿಖ, ಸ್ವರೂಪ, ಸುರಸ ಮತ್ತು ಬಲ ಎಂದು ಹೆಸರಿದ್ದುವು. ಮಹಾತ್ಮರಾದ ಆ ಗರುಡರಿಗೆ ಪುತ್ರ-ಪ್ರಪೌತ್ರ ಕ್ರಮದಿಂದ ಸಂತತಿಯು ಬೆಳೆಯಿತು.

೪೫೧. ಆ ಗರುಡ ಪಕ್ಷಿಗಳು ಹದಿನಾಲ್ಕು ಸಾವಿರ ಸಂಖ್ಯೆಯಿಂದ ಕೂಡಿದ್ದುವು. ಅವುಗಳ ಪುತ್ರ ಪೌತ್ರ ಸೃಷ್ಟಿಕ್ರಮದಿಂದ ವಂಶವು ಅತಿಯಾಗಿ ಬೆಳೆಯಿತು.

೪೫೨. ಅಂತಹ ಗರುಡ ಪಕ್ಷಿಜಾತಿಯಿಂದ ವ್ಯಾಪಿಸಲ್ಪಟ್ಟ ಸ್ಥಾನಗಳನ್ನು ಕ್ರಮವಾಗಿ ಹೇಳುತ್ತೇನೆ. ಸಂಪೂರ್ಣವಾದ ಶಾಲ್ಮಲಿ ದ್ವೀಪ, ಮತ್ತು ದೇವಕೂಟವೆಂಬ ಪರ್ವತಗಳು ವ್ಯಾಪಿಸಲ್ಪಟ್ಟಿವೆ.

೪೫೩. ಮಣಿಮಾನ್ ಎಂಬ ಗಿರಿರಾಜ, ಸಹಸ್ರ ಶಿಖರ, ಎಂಬ ಪರ್ವತ, ಪರ್ಣಮಾಲ, ಸುಕೇಶ, ಶತಶೃಂಗವೆಂಬ ಪರ್ವತಗಳು, ಗರುಡ ಪಕ್ಷಿಗಳಿಂದ ಆಕ್ರಮಿಸಲ್ಪಟ್ಟಿವೆ.

ಕೌರರಂ ಪಂಚಶಿಖರಂ ಹೇಮಕೂಟಂ ಚ ಪರ್ವತಮ್ ।
ಪ್ರಚಂಡವಾಯುಪ್ರಜವೈರ್ದೀಪಿತೈಃ ಪದ್ಮರಾಗಿಭಿಃ ॥ ೪೫೪ ॥

ಶೈಲಶೃಂಗಾಣಿ ವ್ಯಾಪ್ತಾನಿ ಗಾರುಡೈಸ್ತೈರ್ಮಹಾತ್ಮಭಿಃ ।
ಭಾಸೀಪುತ್ರಾಃ ಸ್ಮೃತಾ ಭಾಸಾ ಉಲೂಕಾಃ ಕಾಕಕುಕ್ಕುಟಾಃ॥ ೪೫೫ ॥

ಮಯೂರಾಃ ಕಲವಿಂಕಾಶ್ಚ ಕಪೋತಾ ಲಾವತಿತ್ತಿರಾಃ ।
ಕ್ರೌಂಚಾ ವಾಧ್ರೀಣಸಾಃ ಶ್ಯೇನಾಃ ಕುರರಾಃ ಸಾರಸಾ ಬಕಾಃ॥ ೪೫೬ ॥

ಇತ್ಯೇವಮಾದಯೋಽನ್ಯೇಽಪಿ ಕ್ರವ್ಯಾದಾ ಯೇ ಚ ಪತ್ರಿಣಃ ।
ಧೃತರಾಷ್ಟ್ರೀ ತು ಹಂಸಾಂಶ್ಚ ಕಲಹಂಸಾಂಶ್ಚ ಭಾಮಿನೀ ॥ ೪೫೭ ॥

ಚಕ್ರವಾಕಾಂಶ್ಚ ವಿಹಗಾನ್ ಸರ್ವಾಂಶ್ಚೈವೌದಕಾನ್ ದ್ವಿಜಾನ್ ।
ಶ್ಯೇನ್ಯನಂತಂ ವಿಜಜ್ಞೇ ತು ಪುತ್ರಪೌತ್ರಂ ದ್ವಿಜೋತ್ತಮಾಃ ॥ ೪೫೮ ॥

---

೪೫೪. ಕುರರ, ಪಂಚಶಿಖರ, ಮತ್ತು ಹೇಮಕೂಟ ಪರ್ವತಗಳನ್ನು ಪ್ರಚಂಡವಾದ ವಾಯುವಿನ ವೇಗವುಳ್ಳ, ಪದ್ಮರಾಗ ರತ್ನಗಳಂತೆ ಜ್ವಲಿಸುತ್ತಿದ್ದ ಗರುಡ ಜಾತಿಯು ವ್ಯಾಪಿಸಿ ಕೊಂಡಿದೆ.

೪೫೫. ಆ ಮಹಾತ್ಮರಾದ ಗರುಡ ಪಕ್ಷಿಗಳ ಸಂತತಿಯಿಂದ ಅನೇಕ ಗಿರಿ ಶೃಂಗಗಳು ವ್ಯಾಪಿಸಲ್ಪಟ್ಟಿವೆ. ಭಾಸ, ಉಲೂಕ, ಕಾಕ, ಕುಕ್ಕುಟ ಎಂಬ ಪಕ್ಷಿಗಳು ಭಾಸಿ ಎಂಬುವಳ ಸಂತತಿಯಾಗಿ ಸ್ಮರಿಸಲ್ಪಟ್ಟಿವೆ.

೪೫೬. ನವಿಲು, ಗುಬ್ಬಚ್ಚಿ, ಪಾರಿವಾಳ, ಲಾವ, ತಿತ್ತಿರಿ, ಕ್ರೌಂಚ, ವಾಧ್ರೀಣಸ, ಶ್ಯೇನ, ಕುರರ, ಸಾರಸ ಮತ್ತು ಬಕ ಎಂಬಿವೇ ಮುಂತಾದ ವಿವಿಧ ಪಕ್ಷಿಗಳನ್ನು ಭಾಸೀ ಪುತ್ರರೆಂದು ತಿಳಿಯಬೇಕು.

೪೫೭. ಇವಲ್ಲದೆ ಮಾಂಸವನ್ನು ತಿನ್ನುವ ಇನ್ನು ಕೆಲವು ಪಕ್ಷಿಗಳು ಈಗಣಕ್ಕೆ ಸೇರಿವೆ. ಧೃತರಾಷ್ಟ್ರೀ ಎಂಬ ಭಾಮಿನಿಯು ಹಂಸ — ಕಲ ಹಂಸಗಳನ್ನು ಪ್ರಸವಿಸಿದಳು.

೪೫೮. ಮತ್ತು ಧೃತರಾಷ್ಟ್ರಿಯು ಚಕ್ರವಾಕಪಕ್ಷಿಗಳನ್ನೂ ನೀರಿನಲ್ಲಿ ಹುಟ್ಟುವ ಇತರ ಎಲ್ಲ ಜಾತಿಯ ಪಕ್ಷಿಗಳನ್ನೂ ಪ್ರಸವಿಸಿದಳು, ದ್ವಿಜೋತ್ತಮರೆ! ಶ್ಯೇನಿ ಎಂಬುವಳು ಅನಂತವಾದ ಪುತ್ರಪೌತ್ರ ಸಂತಾನವನ್ನು ಹೊಂದಿದಳು.

ಗರುಡಸ್ಯಾತ್ಮಜಾಃ ಪ್ರೋಕ್ತಾ ಇರಾಯಾಃ ಶೃಣುತ ಪ್ರಜಾಃ ।
ಇರಾ ವಿಜಜ್ಞೇ ತಸ್ಯಾ ವೈ ತಿಸ್ರಃ ಕಮಲಲೋಚನಾಃ ॥ ೪೫೯ ॥

ವನಸ್ಪತೀನಾಂ ವೃಕ್ಷಾಣಾಂ ವೀರುಧಾಂ ಚೈವ ಮಾತರಃ ।
ಲತಾ ಚೈವಾಲತಾ ಚೇತಿ ವೀರುಧಾ ಚೇತಿ ತತ್ರ ಯಾ ॥ ೪೬೦ ॥

ಲತಾ ವನಸ್ಪತಿರ್ಜಜ್ಞೇ ಪುಷ್ಪಾದಪಿ ಫಲಾವಹಾನ್ ।
ಪುಷ್ಪೈಃ ಫಲಗ್ರಹೈರ್ವೃಕ್ಷಾನಲತಾ ಸಮುಸೂಯತ ॥ ೪೬೧ ॥

ಗುಲ್ಮಾಸ್ತಥಾ ಲತಾವಲ್ಲ್ಯಸ್ತ್ವಕ್ಸಾರಾಸ್ತೃಣಜಾತಯಃ ।
ವೀರುಧಸ್ತದಪತ್ಯಂ ಹಿ ವಂಶಶ್ಚಾತ್ರ ಸಮಾಪ್ಯತೇ ॥ ೪೬೨ ॥

ಏತೇ ಕಶ್ಯಪದಾಯಾದಾ ವ್ಯಾಖ್ಯಾತಾಃ ಸ್ಥಾಣುಜಂಗಮಾಃ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಯೈರಿದಂ ಸಂತತಂ ಜಗತ್ ॥ ೪೬೩ ॥

---

೪೫೯. ಗರುಡನ ಪುತ್ರಗಣವನ್ನು ಹೇಳಿರುವೆನು. ಮುಂದೆ ಇರಾ ಎಂಬುವಳ ವಂಶವನ್ನು ಕೇಳಿರಿ. ಇರಾ ಎಂಬುವಳು ಕಮಲದಂತೆ ಕಣ್ಣುಗಳಿಂದ ರಾಜಿಸುವ ಮೂರು ಮಂದಿ ಕನ್ಯೆಯರನ್ನು ಪ್ರಸವಿಸಿರುವಳು

೪೬೦. ಮತ್ತು ವನಸ್ಪತಿ, ವೃಕ್ಷ, ವೀರುತ್ ಎಂಬ ಮೂರು ಬಗೆಗಳ ಸ್ಥಾವರ ಜಾತಿಗೆ ಕಾರಣರಾಗಿರುವ, ಲತಾ, ಅಲತಾ ಮತ್ತು ವೀರುಧಾ ಎಂದು ನಾಮಾಂಕಿತರಾದ ಇರಾ ಪುತ್ರಿಯರು ಮೂರು ಮಂದಿ ಇದ್ದರು.

೪೬೧. ಇವುಗಳಲ್ಲಿ ಲತಾ ಎಂಬುವಳು ಹೂವಿಲ್ಲದೆ ಫಲಿಸುವ ಸ್ವಭಾವವುಳ್ಳ ವನಸ್ಪತಿ ಎಂಬುವುಗಳನ್ನು ಹೊಂದಿರುವಳು. ಹಾಗೆ ಅಲತಾ ಎಂಬುವಳಿಂದ ಮೊದಲು ಪುಷ್ಪವು ಕಾಣಿಸಿ ಕ್ರಮವಾಗಿ ಫಲಿಸುವ ವೃಕ್ಷ ಜಾತಿಯು ಹುಟ್ಟಿತು.

೪೬೨. ಚಿಕ್ಕ ಬಳ್ಳಿಗಳ ಪೊದೆಗಳು, ತ್ವಕ್=ಸಿಪ್ಪೆಯ ಸಾರದಿಂದ ಕೂಡಿರುವ ಅನೇಕ ಹುಲ್ಲಿನ ಜಾತಿಗಳು ವೀರುಧಾ ಎಂಬುವಳಿಂದ ಜನಿಸಿರುವುವು. ಈ ರೀತಿಯಾಗಿ ಅವುಗಳ ವಂಶವು ಸಮಾಪ್ತಿಗೊಂಡಿರುವುದು.

೪೬೩. ಈ ರೀತಿಯಾಗಿ ಸ್ಥಾವರ-ಮತ್ತು ಜಂಗಮ ಪ್ರಾಣಿಗಳು ಕಶ್ಯಪ ಮುನಿಯ ಪುತ್ರರಾಗಿ ಜನಿಸಿರುವುವು. ಅವುಗಳ ಮೂಲದಿಂದ ಪುತ್ರ-ಪೌತ್ರ ಮೊದಲಾದ ಸಂತತಿಯು ಬೆಳೆದಿರುವುವು. ಆ ಸಂತತಿಯಿಂದ ಪ್ರಪಂಚವು ವ್ಯಾಪಿಸಲ್ಪಟ್ಟಿದೆ.

ಏಷ ಸರ್ಗೈಕದೇಶಸ್ಯ ಕೀರ್ತಿತೋಽವಯವೋ ಮಯಾ ।
ಮಾರೀಚೋ ವಃ ಪ್ರಜಾಸರ್ಗಃ ಸಮಾಸೇನ ಪ್ರಕೀರ್ತಿತಃ ॥ ೪೬೪ ॥

ನ ಶಕ್ಯಂ ವ್ಯಾಸತೋ ವಕ್ತುಂ ವರ್ಷಾಣಾಂ ಚ ಶತೈರಪಿ ।
ಅದಿತಿರ್ಧರ್ಮಶೀಲಾ ತು ಬಲಶೀಲಾ ದಿತಿಸ್ತಥಾ ॥ ೪೬೫ ॥

ತಪಃಶೀಲಾ ತು ಸುರಭಿರ್ಮಾಯಾಶೀಲಾ ದನುಸ್ತಥಾ ।
ಗಂಧಶೀಲಾ ಮುನಿಶ್ಚೈವ ಕ್ರೋಧಾಧ್ಯಯನಶೀಲಿನೀ ॥ ೪೬೬ ॥

ಗೀತಶೀಲಾ ಹ್ಯರಿಷ್ಟಾ ತು ಕ್ರೂರಶೀಲಾ ಖಶಾ ಸ್ಮೃತಾ ।
ಕ್ರೋಧಶೀಲಾ ತಥಾ ಕದ್ರೂಃ ಕ್ರೋಧಾ ಚ ಶುಚಿಶೀಲಿನೀ ॥ ೪೬೭ ॥

ವಾಹಶೀಲಾ ತು ವಿನತಾ ತಾಮ್ರಾ ವೈ ಘಾತಶೀಲಿನೀ ।
ಇರಾನುಗ್ರಹಶೀಲಾ ತು ಹ್ಯನಾಯುರ್ಭಕ್ಷಣೇ ರತಾ ॥ ೪೬೮ ॥

---

೪೬೪. ಸೃಷ್ಟಿ ಪ್ರಪಂಚದ ಒಂದು ಭಾಗವನ್ನು ಮಾತ್ರ ನಾನು ಹೇಳಿರುವೆನು. ಹೀಗೆ ಮರಿಚಿ ಮುನಿಯೆಂಬ ಮೂಲಕಾರಣದಿಂದ ಬಂದಿರುವ ಸೃಷ್ಟಿಯನ್ನು ಸಂಗ್ರಹ ವಾಗಿ ಹೇಳಿ ಮುಗಿಸಿರುವೆನು.

೪೬೫. ಆದರೆ ಇವುಗಳನ್ನು ವಿಸ್ತಾರವಾಗಿ ಹೇಳಿ ಮುಗಿಸಲು ನೂರಾರು ವರ್ಷಗಳ ವರೆಗೆ ಹೇಳಿದರೂ ಸಾಧ್ಯವಿಲ್ಲ. ಕಶ್ಯಪ ಪತ್ನಿಯರಲ್ಲಿ ಅದಿತಿಯು ಧರ್ಮ ಶೀಲವುಳ್ಳವಳೂ ದಿತಿಯು ಬಲಶೀಲವುಳ್ಳವಳೂ ಆಗಿರುವರು.

೪೬೬. ಸುರಭಿಗೆ ತಪಸ್ಸಿನ ಶೀಲವು, ದನು ಎಂಬುವಳಿಗೆ ಮಾಯಾ ಶೀಲವು, ಮುನಿ ಎಂಬುವಳಿಗೆ ಗಂಧ ಶೀಲವು ಮತ್ತು ಕ್ರೋಧಾ ಎಂಬುವಳಿಗೆ ಅಧ್ಯಯನ ಶೀಲವು. ಈ ರೀತಿಯಾಗಿ ಒಬ್ಬೊಬ್ಬಳು ಒಂದೊಂದು ವಿಶೇಷ ಶೀಲವುಳ್ಳವಳಾಗಿರುವಳು.

೪೬೭. ಅರಿಷ್ಟಾ ಎಂಬುವಳು ಗೀತ ಶೀಲವನ್ನೂ, ಖಶಾ ಎಂಬುವಳು ಕ್ರೂರ ಶೀಲವನ್ನೂ, ಕದ್ರೂ ಎಂಬುವಳು ಕ್ರೋಧ ಶೀಲವನ್ನೂ ಮತ್ತು ಕ್ರೋಧಾ ಎಂಬುವಳು ಶುಚಿ ಶೀಲವನ್ನೂ ಧರಿಸಿರುವರು.

೪೬೮. ವಿನತೆಯು ವಾಹಶೀಲವುಳ್ಳವಳು. ತಾಮ್ರಾ ಎಂಬುವಳು ಘಾತ ಶೀಲ ವುಳ್ಳವಳು, ಇರಾ ಎಂಬುವಳು ಅನುಗ್ರಹ ಶೀಲವುಳ್ಳವಳು ಮತ್ತು ಅನಾಯುಷಾ ಎಂಬುವಳು ಭಕ್ಷಣ ಶೀಲವುಳ್ಳವಳಾಗಿರುವಳು.

ಅಭವಂಲ್ಲೋಕಮಾತೃಣಾಂ ಶೀಲಾನ್ಯೇತಾನಿ ಸರ್ವಶಃ ।
ಧರ್ಮತಃ ಶೀಲತೋ ಬುದ್ಧ್ಯಾ ಕ್ಷಮಯಾ ಬಲರೂಪತಃ ॥ ೪೬೯ ॥

ರಜಃಸತ್ತ್ವತಮೋದ್ರಿಕ್ತಾ ಧಾರ್ಮಿಕಾಧಾರ್ಮಿಕಾಶ್ಚ ವೈ ।
ಮಾತುಸ್ತುಲ್ಯಾಭಿಜಾತಾಶ್ಚ ಕಶ್ಯಪಸ್ಯಾತ್ಮಜಾಃ ಪ್ರಭೋಃ ॥ ೪೭೦ ॥

ದೇವತಾಸುರಗಂಧರ್ವಾ ಯಕ್ಷರಾಕ್ಷಸಪನ್ನಗಾಃ ।
ಪಿಶಾಚಾಃ ಪಶವಶ್ಚೈವ ಮೃಗಾಃ ಪತಗವೀರುಧಃ ॥ ೪೭೧ ॥

ಯಸ್ಮಾದ್ದಾಕ್ಷಾಯಣೀಷ್ವೇತೇ ಜಜ್ಞಿರೇ ಮಾನುಷೀಷ್ವಿಹ ।
ಮನುಷ್ಯಪ್ರಕೃತೀಸ್ತಸ್ಮಾದ್ದೇವಾದೀಂಶ್ಚ ವಿಜಾನತೇ ॥ ೪೭೨ ॥

ಯಸ್ಮಾಚ್ಚ ಸಂಭವಃ ಕೃತ್ಸ್ನೋ ದೇವಾನಾಂ ಮಾನುಷೇಷ್ವಿಹ ।
ಮನ್ವಂತರೇಷು ಸರ್ವೇಸು ತಸ್ಮಾಚ್ಛ್ರೇಷ್ಠಾಸ್ತು ಮಾನುಷಾಃ॥ ೪೭೩ ॥

---

೪೬೯. ಹೀಗೆ ಲೋಕಜನನಿಯರಾದ ಅದಿತಿ ಮುಂತಾದವರಲ್ಲಿ ಎಲ್ಲರಲ್ಲಿಯೂ ವಿಲಕ್ಷಣವಾದ ಈ ಶೀಲಗಳು ಇದ್ದುವು. ಇವರಿಂದ ಹುಟ್ಟಿದ ಪ್ರಜೆಗಳಲ್ಲಿ ಧರ್ಮ, ಶೀಲ, ಬುದ್ಧಿ, ಕ್ಷಮಾ, ಬಲ ಮತ್ತು ರೂಪವೆಂಬ ಗುಣಗಳು ಅನುರೂಪಗಳಾಗಿದ್ದುವು.

೪೭೦. ಪ್ರಭುವಾದ ಕಶ್ಯಪ ಮುನಿಯ ಪ್ರಜೆಗಳು ಉದ್ರೇಕಗೊಂಡ ಸತ್ತ್ವ ರಜಸ್ತಮೋ ಗುಣಗಳ ಸಂಪರ್ಕವುಳ್ಳವರಾಗಿಯೂ ಧಾರ್ಮಿಕ ಅಥವಾ ಅಧಾರ್ಮಿಕ ಆಚರಣವುಳ್ಳವರಾಗಿಯೂ ಜನನಿಯರನ್ನು ಹೋಲುವ ಸಂತತಿಯಾಗಿದ್ದರು.

೪೭೧. ಈ ಕಶ್ಯಪ ಪ್ರಜೆಗಳಲ್ಲಿ ದೇವತಾ, ಅಸುರ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗ, ಪಿಶಾಚ, ಪಶು, ಮೃಗ, ಪಕ್ಷಿ ಮತ್ತು ಲತಾ ಮುಂತಾದುವುಗಳು ಸೇರಿರುವುವು.

೪೭೨. ದೇವಾದಿಗಳು ಮನುಷ್ಯ ಸ್ವಭಾವದಿಂದ ಕೂಡಿದ ದಕ್ಷ ಕನ್ಯೆಯರಲ್ಲಿ ಜನ್ಮವೆತ್ತಿರುವುದರಿಂದ ದೇವಾದಿಗಳನ್ನು ಮನುಷ್ಯ ಶೀಲದಿಂದ ಕೂಡಿರುವರನ್ನಾಗಿ ಪ್ರಾಜ್ಞರು ಹೇಳುತ್ತಾರೆ.

೪೭೩. ಸಕಲ ಮನ್ವಂತರಗಳಲ್ಲಿ ದೇವತೆಗಳ ಉತ್ಪತ್ತಿಯೆಲ್ಲವೂ ಮನುಷ್ಯ ಜಾತಿಯಲ್ಲಿಯೇ ಆಗಿರುವುದರಿಂದ ಎಲ್ಲ ಪ್ರಜಾವರ್ಗದಲ್ಲಿ ಮಾನವರು ಶ್ರೇಷ್ಠರಾದವರು.

ಧರ್ಮಾರ್ಥಕಾಮಮೋಕ್ಷಾಣಾಂ ಮಾನುಷಾಃ ಸಾಧಕಾಸ್ತು ವೈ ।
ತತೋಽರ್ವಾಕ್ಸ್ರೋತಸಸ್ತೇ ವೈ ಉತ್ಪದ್ಯಂತೇ ಸುರಾಸುರಾಃ॥ ೪೭೪ ॥

ಜಾಯಂತೇ ಕಾರ್ಯಸಿದ್ಧ್ಯರ್ಥಂ ಮಾನುಷೇಷು ಪುನಃ ಪುನಃ ।
ಇತ್ಯೇಷ ವಂಶಪ್ರಭವಃ ಪ್ರಸಂಖ್ಯಾತಸ್ತು ವಿಸ್ತರಾತ್ । ॥ ೪೭೫ ॥

ಸುರಾಣಾಮಸುರಾಣಾಂ ಚ ಗಂಧರ್ವಾಪ್ಸರಸಾಂ ತಥಾ ।
ಯಕ್ಷರಕ್ಷಃಪಿಶಾಚಾನಾಂ ಸುಪರ್ಣೋರಗಪಕ್ಷಿಣಾಮ್ ॥ ೪೭೬ ॥

ವ್ಯಾಲಾನಾಂ ಶಿಖಿನಾಂ ಚೈವ ಔಷಧೀನಾಂ ಚ ಸರ್ವಶಃ ।
ಕೃಮಿಕೀಟಪತಂಗಾನಾಂ ಕ್ಷುದ್ರಾಣಾಂ ಜಲಚಾರಿಣಾಮ್ ॥ ೪೭೭ ॥

ಪಶೂನಾಂ ಬ್ರಾಹ್ಮಣಾನಾಂ ಚ ಶ್ರೀಮತಾಂ ಪುಣ್ಯಲಕ್ಷಣಃ ।
ಆಯುಷ್ಯಶ್ಚೈವ ಧನ್ಯಶ್ಚ ಶ್ರೀಮಾನ್ ಹಿತಸುಖಾವಹಃ ॥ ೪೭೮ ॥

---

೪೭೪. ಮಾನವರು ಧರ್ಮ-ಅರ್ಥ-ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸುವ ಶಕ್ತಿಯನ್ನು ಹೊಂದಿರುವುದು ಅವರ ಒಂದು ಅತಿಶಯವು, ದೇವ-ದಾನವ ಮುಂತಾದವರು ಮಾನವರಿಗಿಂದ ಅರ್ವಾಕ್ ಸ್ರೋತಸ್ಸು ಎಂದೆನಿಸಿದವರಾಗಿ ಜನಿಸುವರು.

೪೭೫. ದೇವಾದಿಗಳು ಆಯಾಯ ಕಾರ್ಯಸಿದ್ಧಿಗೋಸ್ಕರ ಮಾನವರಲ್ಲಿ ಮತ್ತೆ ಮತ್ತೆ ಜನಿಸುವರು. ಈ ರೀತಿಯಾಗಿ ವಿಸ್ತಾರವಾಗಿ ವಂಶದ ಉತ್ಪತ್ತಿಯು ವರ್ಣಿಸಲ್ಪಟ್ಟಿತು.

೪೭೬. ಸುರ, ಅಸುರ, ಗಂಧರ್ವ, ಅಪ್ಸರಃ ಸ್ತ್ರೀ, ಯಕ್ಷ, ರಾಕ್ಷಸ, ಪಿಶಾಚ, ಗರುಡ, ಸರ್ಪ ಮತ್ತು ಪಕ್ಷಿಗಳ ವಂಶಪ್ರವೃತ್ತಿಯು ವರ್ಣಿಸಲ್ಪಟ್ಟಿದೆ.

೪೭೭. ವ್ಯಾಲ, ನವಿಲು, ಓಷಧಿ, ಕ್ರಿಮಿ, ಕೀಟ, ಪಕ್ಷಿ, ಕ್ಷುದ್ರವಾದ ಜಲಚರ ಪಕ್ಷಿ ಮುಂತಾದ ಅನೇಕ ಬಗೆಯ ಪ್ರಾಣಿಗಳ ವಂಶಾವಳಿಯ ಉತ್ಪತ್ತಿಯು ವರ್ಣಿಸಲ್ಪಟ್ಟಿದೆ.

೪೭೮. ಮತ್ತು ಪಶು, ಶ್ರೀಮಂತರಾದ ವಿಪ್ರ ಮುಂತಾದವರ ವಂಶವು ವರ್ಣಿಸಲ್ಪಟ್ಟಿದೆ. ಈ ವಂಶಗಳ ಉತ್ಪತ್ತಿಯು ಪವಿತ್ರವೂ, ಆಯುಷ್ಯಪ್ರದವೂ, ಧನ್ಯವೂ, ಸಂಪತ್ಪ್ರದವೂ ಮತ್ತು ಹಿತ-ಸುಖಗಳನ್ನು ಕೊಡುವುದೂ ಆಗಿದೆ.

ಶ್ರೋತವ್ಯಶ್ಚೈವ ಸತತಂ ಗ್ರಾಹ್ಯಶ್ಚೈವಾನಸೂಯತಃ ॥ ೪೭೯ ॥

ಇಮಂ ತು ವಂಶಂ ನಿಯಮೇನ ಯಃ ಪಠೇ—
ನ್ಮಹಾತ್ಮನಾಂ ಬ್ರಾಹ್ಮಣವಂದ್ಯಸಂಸದಿ ।
ಅಪತ್ಯಲಾಭಂ ಲಭತೇ ಚ ಪುಷ್ಕಲಂ
ಪ್ರಿಯಂ ಧನಂ ಪ್ರೇತ್ಯ ಚ ಶೋಭನಾಂ ಗತಿಮ್ ॥ ೪೮೦ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಸಪ್ತಮೋಽಧ್ಯಾಯಃ

---

೪೭೯. ಇಂತಹ ವಂಶ ಚರಿತ್ರವನ್ನು ಅಸೂಯಾ ದೋಷವಿಲ್ಲದೆ ಭಕ್ತಿ ಶ್ರದ್ಧೆಗಳಿಂದ ಶ್ರವಣಮಾಡಬೇಕು. ಶ್ರವಣದಿಂದ ಹಿಂದೆ ಹೇಳಿದ ಫಲಗಳು ಲಭಿಸುವುವು.

೪೮೦. ಪೂಜ್ಯರಾದ ವಿಪ್ರರ ಸಭೆಯಲ್ಲಿ ಮಹಾತ್ಮರಾದ ಈ ಪ್ರಜೆಗಳ ವಂಶವನ್ನು ನಿಯಮದಿಂದ ಪಠನಮಾಡಿದ ಮಾನವನು ಸಂತತಿಯನ್ನು ಹೊಂದುತ್ತಾನೆ. ಮತ್ತು ಅತಿಶಯವಾದ ಇಷ್ಟ ಧನವನ್ನು ಹೊಂದುತ್ತಾನೆ. ಅಲ್ಲದೆ ಅವನಿಗೆ ಮರಣಾನಂತರದಲ್ಲಿ ಸದ್ಗತಿಯು ಲಭಿಸುತ್ತದೆ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಏಳನೆಯ ಅಧ್ಯಾಯವು ಮುಗಿದುದು.

## ಅಷ್ಟಮೋಽಧ್ಯಾಯಃ

ಸೂತ ಉವಾಚ :—

ಏವಂ ಪ್ರಜಾಸು ಸೃಷ್ಟಾಸು ಕಶ್ಯಪೇನ ಮಹಾತ್ಮನಾ ।
ಪ್ರತಿಷ್ಠಿತಾಸು ಸರ್ವಾಸು ಚರಾಸು ಸ್ಥಾವರಾಸು ಚ ॥ ೧ ॥

ಅಭಿಷಿಚ್ಯಾಧಿಪತ್ಯೇಷು ತೇಷಾಂ ಮುಖ್ಯಾನ್ ಪ್ರಜಾಪತಿಃ ।
ತತಃ ಕ್ರಮೇಣ ರಾಜ್ಯಾನಿ ಆದೇಷ್ಟುಮುಪಚಕ್ರಮೇ ॥ ೨ ॥

ದ್ವಿಜಾನಾಂ ವೀರುಧಾಂ ಚೈವ ನಕ್ಷತ್ರಾಣಾಂ ಗ್ರಹೈಃ ಸಹ ।
ಯಜ್ಞಾನಾಂ ತಪಸಾಂ ಚೈವ ಸೋಮಂ ರಾಜ್ಯೇಽಭ್ಯಷೇಚಯತ್ ॥ ೩ ॥

ಬೃಹಸ್ಪತಿಂ ತು ವಿಶ್ವೇಷಾಂ ದದಾವಂಗಿರಸಾಂ ಪತಿಮ್ ।
ಭೃಗೂಣಾಮಧಿಪಂ ಚೈವ ಕಾವ್ಯಂ ರಾಜ್ಯೇಽಭ್ಯಷೇಚಯತ್ ॥ ೪ ॥

ಆದಿತ್ಯಾನಾಂ ಪುನರ್ವಿಷ್ಣುಂ ವಸೂನಾಮಥ ಪಾವಕಮ್ ।
ಪ್ರಜಾಪತೀನಾಂ ದಕ್ಷಂ ಚ ಮರುತಾಮಥ ವಾಸವಮ್ ॥ ೫ ॥

---

೧. ಸೂತಮುನಿಯು ಇಂತೆಂದನು :—ಮಹಾತ್ಮನಾದ ಕಶ್ಯಪಮುನಿಯಿಂದ ಈ ರೀತಿಯಾಗಿ ಸ್ಥಾವರಜಂಗಮವೆಂಬ ಸಮಸ್ತ ಪ್ರಜೆಗಳು ಸೃಷ್ಟಿಸಲ್ಪಟ್ಟು ಪ್ರತಿಷ್ಠೆಗೊಳಿಸಲ್ಪಟ್ಟುವು.

೨. ಪ್ರಜಾಪತಿಯು ಅವರಲ್ಲಿ ಮುಖ್ಯರಾದವರನ್ನು ಪ್ರಭುತ್ವಸ್ಥಾನದಲ್ಲಿ ಪಟ್ಟಾಭಿಷೇಕಮಾಡಿ ಅನಂತರದಲ್ಲಿ ಕ್ರಮವಾಗಿ ರಾಜ್ಯಗಳನ್ನು ಆಜ್ಞಾಪೂರ್ವಕವಾಗಿ ಅರ್ಪಿಸಲು ಪ್ರಾರಂಭಿಸಿದನು.

೩. ದ್ವಿಜ, ಲತೆ, ನಕ್ಷತ್ರ, ಗ್ರಹ, ಯಜ್ಞ, ತಪಸ್ಸು, ಮುಂತಾದುವುಗಳ ರಾಜ್ಯಾಧಿಕಾರದಲ್ಲಿ ಸೋಮನನ್ನು ಪಟ್ಟಗಟ್ಟಿದನು.

೪. ಸಮಸ್ತ ಅಂಗಿರೋ ಮುನಿಗಳಿಗೆ ಬೃಹಸ್ಪತಿಯನ್ನು ಪತಿಯನ್ನಾಗಿ ಮಾಡಿದನು. ಹಾಗೂ ಭೃಗುಮುನಿಗಳ ಗಣದ ರಾಜ್ಯಾಧಿಕಾರದಲ್ಲಿ ಶುಕ್ರನನ್ನು ಪಟ್ಟಗಟ್ಟಿದನು.

೫. ಹಾಗೆ ಆದಿತ್ಯಗ್ರಹಕ್ಕೆ ವಿಷ್ಣು, ವಸುಗಣಕ್ಕೆ ಅಗ್ನಿ, ಪ್ರಜಾಪತಿಗಣಕ್ಕೆ ದಕ್ಷಬ್ರಹ್ಮ ಮತ್ತು ದೇವತೆಗಳಿಗೆ ಇಂದ್ರನೂ ಕ್ರಮವಾಗಿ ರಾಜರಾದರು.

ದೈತ್ಯಾನಾಮಥ ರಾಜಾನಂ ಪ್ರಹ್ಲಾದಂ ದಿತಿನಂದನಮ್ ।
ನಾರಾಯಣಂ ತು ಸಾಧ್ಯಾನಾಂ ರುದ್ರಾಣಾಂ ಚ ವೃಷಧ್ವಜಮ್ ॥ ೬ ॥

ವಿಪ್ರಚಿತ್ತಿಂ ಚ ರಾಜಾನಂ ದಾನವಾನಾಮಥಾದಿಶತ್ ।
ಅಪಾಂ ಚ ವರುಣಂ ರಾಜ್ಯೇ ರಾಜ್ಞಾಂ ವೈಶ್ರವಣಂ ತಥಾ ॥ ೭ ॥

ಯಕ್ಷಾಣಾಂ ರಾಕ್ಷಸಾನಾಂ ಚ ಪಾರ್ಥಿವಾನಾಂ ಧನಸ್ಯ ಚ ।
ವೈವಸ್ವತಂ ಪಿತೄಣಾಂ ಚ ಯಮಂ ರಾಜ್ಯೇಽಭಿಷೇಚಯತ್ ॥ ೮ ॥

ಸರ್ವಭೂತಪಿಶಾಚಾನಾಂ ಗಿರಿಶಂ ಶೂಲಪಾಣಿನಮ್ ।
ಶೈಲಾನಾಂ ಹಿಮವಂತಂ ಚ ನದೀನಾಮಥ ಸಾಗರಮ್ ॥ ೯ ॥

ಗಂಧರ್ವಾಣಾಮಧಿಪತಿಂ ಚಕ್ರೇ ಚಿತ್ರರಥಂ ತಥಾ ।
ಉಚ್ಚೈಃಶ್ರವಸಮಶ್ವಾನಾಂ ರಾಜಾನಂ ಚಾಭ್ಯಷೇಚಯತ್ ॥ ೧೦ ॥

---

೬. ದೈತ್ಯರಿಗೆ ದಿತಿ ಪುತ್ರನಾದ ಪ್ರಹ್ಲಾದನನ್ನು ರಾಜನನ್ನಾಗಿ ಕಲ್ಪಿಸಿದನು. ಮತ್ತು ಸಾಧ್ಯಗಣಕ್ಕೆ ನಾರಾಯಣನನ್ನೂ ರುದ್ರಗಣಕ್ಕೆ ಶಂಕರನನ್ನೂ ರಾಜನನ್ನಾಗಿ ರಚಿಸಿದನು.

೭. ಮತ್ತು ದಾನವರಿಗೆ ವಿಪ್ರಚಿತ್ತಿ ಎಂಬ ಅಸುರನನ್ನು ರಾಜನನ್ನಾಗಿ ನಿಯಮಿಸಿದನು. ಜಲಗಳ ಆಧಿಪತ್ಯದಲ್ಲಿ ವರುಣನನ್ನೂ ರಾಜರ ಆಧಿಪತ್ಯದಲ್ಲಿ ಕುಬೇರನನ್ನೂ ನಿಯಮಿಸಿದನು.

೮. ಮತ್ತು ಕುಬೇರನು ಯಕ್ಷ, ರಾಕ್ಷಸ, ಪಾರ್ಥಿವ ಮತ್ತು ಧನ ಇವುಗಳ ಆಧಿಪತ್ಯವನ್ನು ಹೊಂದಿದನು. ಪಿತೃಗಳ ಆಧಿಪತ್ಯದಲ್ಲಿ ಸೂರ್ಯಪುತ್ರನಾದ ಯಮನು ಪಟ್ಟಾಭಿಷಿಕ್ತನಾದನು.

೯. ಎಲ್ಲ ಭೂತಪಿಶಾಚಗಳಿಗೆ ಶೂಲಧಾರಿಯಾದ ಈಶ್ವರನನ್ನೂ ಪರ್ವತಗಳಿಗೆ ಹಿಮಾಚಲನನ್ನೂ ಮತ್ತು ನದಿಗಳಿಗೆ ಸಾಗರವನ್ನೂ ಪತಿಯನ್ನಾಗಿ ಕಲ್ಪಿಸಿದನು.

೧೦. ಗಂಧರ್ವರಿಗೆ ಚಿತ್ರರಥನನ್ನು ಅಧಿಪತಿಯನ್ನಾಗಿ ಮಾಡಿದನು. ಕುದುರೆಗಳಿಗೆ ಉಚ್ಚೈಶ್ರವ ಎಂಬ ಅಶ್ವವನ್ನು ರಾಜನನ್ನಾಗಿ ಮಾಡಿದನು.

ಮೃಗಾಣಾಮಥ ಶಾರ್ದೂಲಂ ಗೋವೃಷಂ ಚ ಕಕುದ್ಮಿನಾಮ್ ।
ಪಕ್ಷಿಣಾಮಥ ಸರ್ವೇಷಾಂ ಗರುಡಂ ಪತತಾಂ ವರಮ್ ॥ ೧೧ ॥

ಗಂಧಾನಾಂ ಮರುತಾಂ ಚೈವ ಭೂತಾನಾಮಶರೀರಿಣಾಮ್ ।
ಸಮಕಾಲಬಲಾನಾಂ ಚ ವಾಯುಂ ಬಲವತಾಂ ವರಮ್ ॥ ೧೨ ॥

ಸರ್ವೇಷಾಂ ದಂಷ್ಟ್ರಿಣಾಂ ಶೇಷಂ ನಾಗಾನಾಮಥ ವಾಸುಕಿಮ್ ।
ಸರೀಸೃಪಾಣಾಂ ಸರ್ಪಾಣಾಂ ಪನ್ನಗಾನಾಂ ಚ ತಕ್ಷಕಮ್ ॥ ೧೩ ॥

ಸಾಗರಾಣಾಂ ನದೀನಾಂ ಚ ಮೇಘಾನಾಂ ವರ್ಷಿತಸ್ಯ ಚ ।
ಆದಿತ್ಯಾನಾಮನ್ಯತಮಂ ಪರ್ಜನ್ಯಮಭಿಷಿಕ್ತವಾನ್ ॥ ೧೪ ॥

ಸರ್ವಾಪ್ಸರೋಗಣಾನಾಂ ಚ ಕಾಮದೇವಂ ತಥಾ ಪ್ರಭುಮ್ ।
ಋತೂನಾಮಥ ಮಾಸಾನಾಮಾರ್ತವಾನಾಂ ತಥೈವ ಚ ॥ ೧೫ ॥

---

೧೧. ಮೃಗಗಳಲ್ಲಿ ಶಾರ್ದೂಲವನ್ನೂ, ಹಿನಿಯುಳ್ಳ ಪ್ರಾಣಿಗಳಲ್ಲಿ ಎತ್ತನ್ನೂ, ಹಾರುವ ಪಕ್ಷಿಗಳಲ್ಲಿ ಉತ್ತಮವಾದ ಗರುಡನನ್ನೂ ಅಧಿಪತಿಯನ್ನಾಗಿ ರಚಿಸಿದನು.

೧೨. ಗಂಧ, ಮರುದ್ಗಣ, ಮೂರ್ತಿಯಿಲ್ಲದಭೂತ, ಒಂದೇ ಕಾಲದಲ್ಲಿ ಅನೇಕ ವಿಧವಾದ ಬಲವನ್ನು ತೋರಿಸುವ ಬಲಿಷ್ಠಪ್ರಾಣಿ ಇವುಗಳಿಗೆ ಶ್ರೇಷ್ಠವಾದ ವಾಯುವನ್ನು ಪತಿಯನ್ನಾಗಿ ಕಲ್ಪಿಸಿದನು.

೧೩. ಮತ್ತು ಕೋರೆಹಲ್ಲುಗಳುಳ್ಳ ಎಲ್ಲಾ ಪ್ರಾಣಿಗಳಿಗೆ ಆದಿಶೇಷನೂ ನಾಗಗಳಿಗೆ ವಾಸುಕಿಯೂ ಹರಿದುಹೋಗುವ ಸರ್ಪಜಾತಿಯ ಹಾವುಗಳಿಗೆ ತಕ್ಷಕನೂ ರಾಜರಾದರು.

೧೪. ಸಾಗರ, ನದಿ, ಮೇಘ, ವೃಷ್ಟಿ ಇವುಗಳ ರಾಜ್ಯಾಧಿಕಾರದಲ್ಲಿ ದ್ವಾದಶಾದಿತ್ಯರಲ್ಲಿ ಒಬ್ಬನಾದ ಪರ್ಜನ್ಯದೇವನು ಅಭಿಷಿಕ್ತನಾದನು.

೧೫. ಎಲ್ಲ ಅಪ್ಸರಸ್ತ್ರೀಯರ ಗಣಕ್ಕೆ ಕಾಮದೇವನು ಪ್ರಭುವಾದನು. ಹಾಗೂ ಋತು-ಮಾಸ-ಆರ್ತವಗಳಿಗೆ ಸಂವತ್ಸರ ಪ್ರಜಾಪತಿಯು ಪ್ರಭುವಾದನು.

ಯಕ್ಷಾಣಾಂ ಚ ವಿಪಕ್ಷಾಣಾಂ ಮುಹೂರ್ತಾನಾಂ ಚ ಪರ್ವಣಾಮ್ ।
ಕಲಾಕಾಷ್ಠಾಪ್ರಮಾಣಾನಾಂ ಗತೇರಯನಯೋಸ್ತಥಾ ॥ ೧೬ ॥

ಗಣಿತಸ್ಯಾಥ ಯೋಗಸ್ಯ ಚಕ್ರೇ ಸಂವತ್ಸರಂ ಪ್ರಭುಮ್ ।
ಪ್ರಜಾಪತೇರ್ವಿರಜಸಃ ಪೂರ್ವಸ್ಯಾಂ ದಿಶಿ ವಿಶ್ರುತಮ್ ॥ ೧೭ ॥

ಪುತ್ರಂ ನಾಮ್ನಾ ಸುಧನ್ವಾನಂ ರಾಜಾನಂ ಸೋಽಭ್ಯಷೇಚಯತ್ ।
ದಕ್ಷಿಣಸ್ಯಾಂ ದಿಶಿ ತಥಾ ಕರ್ದಮಸ್ಯ ಪ್ರಜಾಪತೇಃ ॥ ೧೮ ॥

ಪುತ್ರಂ ಶಂಖಪದಂ ನಾಮ ರಾಜಾನಂ ಸೋಽಭ್ಯಷೇಚಯತ್ ।
ಪಶ್ಚಿಮಸ್ಯಾಂ ದಿಶಿ ತಥಾ ರಜಸಃ ಪುತ್ರಮಚ್ಯುತಮ್ ॥ ೧೯ ॥

ಕೇತುಮಂತಂ ಮಹಾತ್ಮಾನಂ ರಾಜಾನಂ ಚಾಭ್ಯಷೇಚಯತ್ ।
ತಥಾ ಹಿರಣ್ಯರೋಮಾಣಂ ಪರ್ಜನ್ಯಸ್ಯ ಪ್ರಜಾಪತೇಃ ॥ ೨೦ ॥

---

೧೬. ಮತ್ತು ಆ ಸಂವತ್ಸರ ಪ್ರಜಾಪತಿಗೆ ಯಕ್ಷ, ವಿಪಕ್ಷ, ಮುಹೂರ್ತ, ಪರ್ವ ಕಾಲ, ಕಲಾ, ಕಾಷ್ಠಾ ಎಂಬ ಕಾಲಾಂಶಗಳು ತೇಜೋಗತಿ, ಅಯನ, ಇವುಗಳೆಲ್ಲವೂ ನಿಯಮ್ಯಗಳಾಗಿದ್ದವು.

೧೭. ಮತ್ತು ಗಣಿತ, ಯೋಗ ಇವುಗಳಿಗೂ ಸಂವತ್ಸರನನ್ನು ಪ್ರಭುವನ್ನಾಗಿ ಮಾಡಿದನು. ವಿರಜ ಎಂಬ ಪ್ರಜಾಪತಿಯ ಪ್ರಸಿದ್ಧನಾದ ಪುತ್ರನು ಪೂರ್ವ ದಿಕ್ಕಿನಲ್ಲಿ ಅಧಿಪತಿಯಾದನು.

೧೮. ಅವನು ಸುಧನ್ವಾ ಎಂಬ ಹೆಸರಿನಿಂದ ಪ್ರಖ್ಯಾತನಾಗಿ ರಾಜ್ಯದಲ್ಲಿ ಇರಿಸಲ್ಪಟ್ಟಿದ್ದನು. ಹಾಗೆ ದಕ್ಷಿಣ ದಿಕ್ಕಿನಲ್ಲಿ ಕರ್ದಮ ಪ್ರಜಾಪತಿಯ ಪುತ್ರನಾದ ಶಂಖಪದ ಎಂಬುವನನ್ನು ರಾಜನನ್ನಾಗಿ ಪಟ್ಟಗಟ್ಟಿದನು.

೧೯. ಹಾಗೆಯೇ ಪಶ್ಚಿಮ ದಿಕ್ಕಿನಲ್ಲಿ ರಜಸ್ಸು ಎಂಬ ಪ್ರಜಾಪತಿಯ ಪುತ್ರನೂ ಮಹಾತ್ಮನೂ ಆದ ಕೇತುಮಂತನನ್ನು ರಾಜನನ್ನಾಗಿ ಪಟ್ಟಗಟ್ಟಿದನು.

೨೦. ಮತ್ತು ಪರ್ಜನ್ಯ ಎಂಬ ಪ್ರಜಾಪತಿಯ ಹಿರಣ್ಯರೋಮ ಎಂಬ ಹೆಸರಿನ ವೀರಪುತ್ರನಿಗೆ ಉತ್ತರ ದಿಕ್ಕಿನ ಪ್ರಭುತ್ವದಲ್ಲಿ ಪಟ್ಟಾಭಿಷೇಕಮಾಡಿದನು.

ಉದೀಚ್ಯಾಂ ದಿಶಿ ದುರ್ಧರ್ಷಪುತ್ರಂ ರಾಜ್ಯೇಽಭ್ಯಷೇಚಯತ್ ।
ಮನುಷ್ಯಾಣಾಮಧಿಪತಿಂ ಚಕ್ರೇ ವೈವಸ್ವತಂ ಮನುಮ್ ॥ ೨೧ ॥

ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ ।
ಯಥಾಪ್ರದೇಶಮದ್ಯಾಪಿ ಧರ್ಮೇಣ ಪರಿಪಾಲ್ಯತೇ ॥ ೨೨ ॥

ಸ್ವಾಯಂಭುವೇಽಂತರೇ ಪೂರ್ವಂ ಬ್ರಹ್ಮಣಾ ತೇಽಭಿಷೇಚಿತಾಃ ।
ನೃಪಾಶ್ಚೈತೇಽಭಿಷಿಚ್ಯಂತೇ ಮನವೋ ಯೇ ಭವಂತಿ ವೈ ॥ ೨೩ ॥

ಮನ್ವಂತರೇಷ್ವತೀತೇಷು ಗತಾ ಹ್ಯೇತೇಷು ಪಾರ್ಥಿವಾಃ ।
ಏವಮನ್ಯೇಽಭಿಷಿಚ್ಯಂತೇ ಪ್ರಾಪ್ತೇ ಮನ್ವಂತರೇ ಪುನಃ ॥ ೨೪ ॥

ಅತೀತಾನಾಗತಾಃ ಸರ್ವೇ ಸ್ಮೃತಾ ಮನ್ವಂತರೇಶ್ವರಾಃ ।
ರಾಜಸೂಯೇಽಭಿಷಿಕ್ತಶ್ಚ ಪ್ರಭುರೇಭಿರ್ನರೋತ್ತಮಃ ॥ ೨೫ ॥

---

೨೧. ಮತ್ತು ಬ್ರಹ್ಮದೇವನು ಅನೇಕ ಮಾನವರ ಗುಂಪುಗಳಿಗೆ ಸೂರ್ಯ ಪುತ್ರನಾದ ಮನುರಾಜನನ್ನು ಅಧಿಪತಿಯನ್ನಾಗಿ ಕಲ್ಪಿಸಿದನು.

೨೨. ಆ ಮಾನವರಿಂದ ಏಳು ದ್ವೀಪ, ಅನೇಕ ಪಟ್ಟಣಗಳಿಂದ ಕೂಡಿದ ಸಮಸ್ತ ಪೃಥಿವಿಯು ಆಯಾಯ ಪ್ರದೇಶಗಳಲ್ಲಿ ಈಗ ಕೂಡ ಧರ್ಮದಿಂದ ರಕ್ಷಿಸಲ್ಪಡುತ್ತಿರುವುದು.

೨೩. ಪೂರ್ವದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಅವರು ಬ್ರಹ್ಮನಿಂದ ಪಟ್ಟಾಭಿಷಿಕ್ತರಾದರು. ಹಾಗೆಯೇ ಎಲ್ಲಾ ಮನುಗಳೂ ರಾಜರಾಗಿ ಪಟ್ಟಾಭಿಷಿಕ್ತರಾಗುತ್ತಾರೆ.

೨೪. ಕಳೆದುಹೋದ ಅನೇಕ ಮನ್ವಂತರಗಳಲ್ಲಿ ಅನೇಕ ಪಾರ್ಥಿವರು ಕಳೆದುಹೋಗಿರುವರು. ಹೊಸ ಮನ್ವಂತರವು ಪ್ರಾಪ್ತವಾಗಲು ಮತ್ತೆ ಬೇರೆ ರಾಜರು ಪಟ್ಟಾಭಿಷಿಕ್ತರಾಗುವರು.

೨೫. ಹೀಗೆ ಹಿಂದೆ ಕಳೆದ ಮತ್ತು ಮುಂದೆ ಬರುವ ಅನೇಕ ಮನ್ವಂತರಗಳಲ್ಲಿ ಮನ್ವಂತರಾಧಿಪತಿಗಳು ಸ್ಮರಿಸಲ್ಪಟ್ಟಿರುವರು. ಈ ಪ್ರವಾಹದಲ್ಲಿ ಮಾನವಶ್ರೇಷ್ಠನಾದ ಪೃಥುರಾಜನು ರಾಜಸೂಯ ಯಾಗದಲ್ಲಿ ಪಟ್ಟಾಭಿಷಿಕ್ತನಾಗಿರುವನು.

ವೇದದೃಷ್ಟೇನ ವಿಧಿನಾ ಹ್ಯಧಿರಾಜಃ ಪ್ರತಾಪವಾನ್ ।
ಏತಾನುತ್ಪಾದ್ಯ ಪುತ್ರಾಂಸ್ತು ಪ್ರಜಾಸಂತಾನಕಾರಣಾತ್ ॥ ೨೬ ॥

ಪುನರೇವ ಮಹಾಭಾಗಃ ಪ್ರಜಾನಾಂ ಪತಿರೀಶ್ವರಃ ।
ಕಶ್ಯಪೋ ಗೋತ್ರಕಾಮಸ್ತು ಚಚಾರ ಪರಮಂ ತಪಃ ॥ ೨೭ ॥

ಪುತ್ರೌ ಗೋತ್ರಕರೌ ಮಹ್ಯಂ ಭವೇತಾಮಿತಿ ಚಿಂತಯನ್ ।
ತಸ್ಯ ಪ್ರಧ್ಯಾಯಮಾನಸ್ಯ ಕಶ್ಯಪಸ್ಯ ಮಹಾತ್ಮನಃ ॥ ೨೮ ॥

ಬ್ರಹ್ಮಣೋಽಂಶೌ ಸುತೌ ಪಶ್ಚಾತ್ ಪ್ರಾದುರ್ಭೂತೌ ಮಹೌಜಸೌ ।
ವತ್ಸಾರಶ್ಚಾಸಿತಶ್ಚೈವ ತಾವುಭೌ ಬ್ರಹ್ಮವಾದಿನೌ ॥ ೨೯ ॥

ವತ್ಸಾರಾನ್ನಿಧ್ರುವೋ ಜಜ್ಞೇ ರೇಭ್ಯಶ್ಚ ಸುಮಹಾಯಶಾಃ ।
ರೇಭ್ಯಸ್ಯ ರೈಭ್ಯೋ ವಿಜ್ಞೇಯೋ ನಿಧ್ರುವಸ್ಯ ನಿಬೋಧತ ॥ ೩೦ ॥

---

೨೬. ಆವನು ವೇದದಲ್ಲಿ ಹೇಳಿದ ವಿಧಾನದಿಂದ ಪ್ರತಾಪವಂತನಾದ ರಾಜನೆನಿಸಿಕೊಂಡು ಪ್ರಜಾಸಂತತಿಯ ಕಾರಣದಿಂದ ಈ ಅನೇಕ ಪುತ್ರರನ್ನು ಅರ್ಜಿಸಿದನು.

೨೭. ಮತ್ತೆ ಮಹಾಭಾಗ್ಯನಾದ ಮತ್ತು ಸಮರ್ಥನಾದ ಕಶ್ಯಪ ಪ್ರಜಾಪತಿಯು ವಂಶಾಭಿವೃದ್ಧಿಯ ಅಭಿಲಾಷೆಯುಳ್ಳವನಾಗಿ ಉತ್ಕೃಷ್ಟವಾದ ತಪಸ್ಸನ್ನು ಆಚರಿಸಿದನು.

೨೮. ಮತ್ತು ಆ ಮಹಾತ್ಮನಾದ ಕಶ್ಯಪನು ನನಗೆ ವಂಶ ಸ್ಥಾಪಕರಾದ ಇಬ್ಬರು ಪುತ್ರರು ಹುಟ್ಟಬೇಕೆಂದು ಚಿಂತಿಸುತ್ತಲಿದ್ದನು.

೨೯. ತರುವಾಯ ಮಹಾ ಪರಾಕ್ರಮದಿಂದ ಕೂಡಿರುವವರೂ ಬ್ರಹ್ಮವಾದಿಗಳೂ ಮತ್ತು ಬ್ರಹ್ಮನ ಅಂಶದಿಂದ ಕೂಡಿದವರೂ ಆದ ವತ್ಸಾರ-ಅಸಿತ ಎಂಬ ಇಬ್ಬರು ಪುತ್ರರು ಪ್ರಾದುರ್ಭವಿಸಿದರು.

೩೦. ಆ ವತ್ಸಾರನಿಂದ ಮಹಾ ಯಶಸ್ವಿಯಾದ ರೇಭ್ಯ ಮತ್ತು ನಿಧ್ರುವರೆಂಬ ಇಬ್ಬರು ಪುತ್ರರು ಜನಿಸಿದರು. ರೇಭ್ಯನಿಗೆ ರೈಭ್ಯ ಎಂಬ ಪುತ್ರನು ಜನಿಸಿದನು. ನಿಧ್ರುವನ ಸಂತತಿಯನ್ನು ಕೇಳಿರಿ.

ಚ್ಯವನಸ್ಯ ಸುಕನ್ಯಾಯಾಂ ಸುಮೇಧಾಃ ಸಮಪದ್ಯತ ।
ನಿಧ್ರುವಸ್ಯ ತು ಯಾ ಪತ್ನೀ ಮಾತಾ ವೈ ಕುಂಡಪಾಯಿನಾಮ್ ॥ ೩೧ ॥

ಅಸಿತಸ್ಯೈಕಪರ್ಣಾಯಾಂ ಬ್ರಹ್ಮಿಷ್ಠಃ ಸಮಪದ್ಯತ ।
ಶಾಂಡಿಲ್ಯಾನಾಂ ವರಃ ಶ್ರೀಮಾನ್ ದೇವಲಃ ಸುಮಹಾಯಶಾಃ ॥ ೩೨ ॥

ನಿಧ್ರುವಾಃ ಶಾಂಡಿಲಾ ರೈಭ್ಯಾಸ್ತ್ರಯಃ ಪಕ್ಷಾಸ್ತು ಕಾಶ್ಯಪಾಃ ।
ವಜ್ರಿಪ್ರಭೃತಯೋ ದೇವಾ ದೇವಾಸ್ತಸ್ಯ ಪ್ರಜಾಸ್ತ್ವಿಮಾಃ ॥ ೩೩ ॥

ಚತುರ್ಯುಗೇ ತ್ವತಿಕ್ರಾಂತೇ ಮನೋರ್ಹ್ಯೇಕಾದಶೇ ಪ್ರಭೋಃ ।
ಅಥಾವಶಿಷ್ಟೇ ತಸ್ಮಿಂಸ್ತು ದ್ವಾಪರೇ ಸಂಪ್ರವರ್ತಿತೇ ॥ ೩೪ ॥

ಮರುತ್ತಸ್ಯ ನರಿಷ್ಯಂತಸ್ತಸ್ಯ ಪುತ್ರೋ ದಮಃ ಕಿಲ ।
ರಾಜ್ಯವರ್ಧನಕಸ್ತಸ್ಯ ಸುಧೃತಿಸ್ತತ್ಸುತೋ ನರಃ ॥ ೩೫ ॥

---

೩೧. ಆ ನಿಧ್ರುವನಿಗೆ ಚ್ಯವನ ಮುನಿಯ ಕನ್ಯೆಯಲ್ಲಿ ಸುಮೇಧಾ ಎಂಬುವನು ಜನಿಸಿದನು. ನಿಧ್ರುವನ ಪತ್ನಿಯು ಕುಂಡಪಾಯಿ ಎಂಬ ಮಹಾ ಯಾಗಗಳನ್ನು ಮಾಡಿದವರಿಗೆ ತಾಯಿಯಾದಳು.

೩೨. ಅಸಿತ ಮುನಿಗೆ ಏಕಪರ್ಣಾ ಎಂಬ ಭಾರ್ಯೆಯಲ್ಲಿ ಬ್ರಹ್ಮಿಷ್ಠನೂ, ಶಾಂಡಿಲ್ಯ ಮುನಿಗಣದಲ್ಲಿ ಪ್ರಶಸ್ತನೂ, ಶ್ರೀಮಂತನೂ, ಮಹಾ ಯಶಸ್ವಿಯೂ ಆದ ದೇವಲಮುನಿಯು ಜನ್ಮವೆತ್ತಿದನು.

೩೩. ಹೀಗೆ ಕಶ್ಯಪ ಮುನಿಯೆಂಬ ಮೂಲಪುರುಷನಿಂದ ನಿಧ್ರುವ-ಶಾಂಡಿಲ-ರೈಭ್ಯ ಎಂಬ ಮೂರು ಪಕ್ಷಗಳು ಪ್ರಸವಿಸಿದವು. ಇಂದ್ರನೇ ಮುಂತಾದ ದೇವತೆಗಳೆಲ್ಲರೂ ಆ ಮಹಾತ್ಮನ ಪ್ರಜಾಸಂತತಿಯಲ್ಲಿ ಸೇರಿರುವರು.

೩೪. ಪ್ರಭುವಾದ ಮನುವಿನ ಮನ್ವಂತರದಲ್ಲಿ ನಾಲ್ಕು ಯುಗಗಳು ಕಳೆದು ಅವಶಿಷ್ಟವಾದ ಹನ್ನೊಂದನೆಯ ಆ ದ್ವಾಪರಯುಗವು ನಡೆಯಲು ಉಪಕ್ರಮವಾಯಿತು.

೩೫. ಆಗಿನ ರಾಜಪುತ್ರ ವಂಶಾವಳಿಯಲ್ಲಿ ಮರುತ್ತನಿಗೆ ನರಿಷ್ಯಂತ, ಅವನಿಗೆ ದಮ, ಅವನಿಗೆ ರಾಜ್ಯವರ್ಧನ ಮತ್ತು ಅವನಿಗೆ ಸುಧೃತಿ ಎಂಬುವರು ಪುತ್ರರಾಗಿ ಜನಿಸಿದರು.

ಕೇವಲಶ್ಚ ತತಸ್ತಸ್ಯ ಬಂಧುಮಾನ್ ವೇಗವಾಂಸ್ತತಃ ।
ಬುಧಸ್ತಸ್ಯಾಭವದ್ಯಸ್ಯ ತೃಣಬಿಂದುರ್ಮಹೀಪತಿಃ || ೩೬ ||

ತ್ರೇತಾಯುಗಮುಖೇ ರಾಜಾ ತೃತೀಯೇ ಸ ಬಭೂವ ಹ ।
ತಸ್ಯ ಚೇಲವಿಲಾ ಕನ್ಯಾಲಂಬುಷಾಗರ್ಭಸಂಭವಾ || ೩೭ ||

ತಸ್ಯಾಂ ಜಾತೋ ವಿಶ್ರವಾಸ್ತು ಪೌಲಸ್ತ್ಯಕುಲವರ್ಧನಃ ।
ಬೃಹಸ್ಪತಿರ್ಬೃಹತ್ಕೀರ್ತಿರ್ದೇವಾಚಾರ್ಯಸ್ತು ಕೀರ್ತಿತಃ || ೩೮ ||

ಕನ್ಯಾಂ ತಸ್ಯೋಪಯೇಮೇ ಸ ನಾಮ್ನಾ ವೈ ದೇವವರ್ಣಿನೀಮ್ ।
ಪುಷ್ಪೋತ್ಕಟಾಂ ಚ ವಾಕಾಂ ಚ ಸುತೇ ಮಾಲ್ಯವತಸ್ತಥಾ || ೩೯ ||

ಕೈಕಸೀಂ ಮಾಲಿನಃ ಕನ್ಯಾಂ ತಾಸಾಂ ತು ಶೃಣುತ ಪ್ರಜಾಃ ।
ಜ್ಯೇಷ್ಠಂ ವೈಶ್ರವಣಂ ತಸ್ಯ ಸುಷುವೇ ದೇವವರ್ಣಿನೀ || ೪೦ ||

---

೩೬. ಅವನಿಗೆ ಕೇವಲನೂ, ಅವನಿಗೆ ಬಂಧುಮಂತನೂ, ಅವನಿಗೆ ವೇಗವಂತನೂ, ಅವನಿಗೆ ಬುಧನೂ, ಅವನಿಗೆ ತೃಣಬಿಂದು ರಾಜನೂ ಕ್ರಮವಾಗಿ ಪುತ್ರರಾಗಿ ಜನಿಸಿದನು.

೩೭. ಆ ತೃಣಬಿಂದು ರಾಜನು ಮೂರನೆಯ ತ್ರೇತಾಯುಗದ ಅಂಶದಲ್ಲಿ ರಾಜನಾಗಿದ್ದನು. ಅವನಿಗೆ ಅಲಂಬುಷಾ ಎಂಬುವಳ ಗರ್ಭದಲ್ಲಿ ಹುಟ್ಟಿದ ಇಲವಿಲಾ ಎಂಬುವಳು ಪತ್ನಿಯಾಗಿದ್ದಳು.

೩೮. ಅವಳಲ್ಲಿ ಪೌಲಸ್ತ್ಯ ವಂಶವನ್ನು ವೃದ್ಧಿಗೊಳಿಸುವ ವಿಶ್ರವ ಎಂಬುವನು ಹುಟ್ಟಿದನು. ಮಹಾ ಕೀರ್ತಿಸಂಪನ್ನನಾದ ಬೃಹಸ್ಪತಿಯು ದೇವಾಚಾರ್ಯನೆಂದು ಕೀರ್ತಿಸಲ್ಪಟ್ಟಿರುವನು.

೩೯. ಅವನ ಪುತ್ರಿಯೂ ದೇವವರ್ಣಿನೀ ಎಂಬ ಹೆಸರಿನವಳೂ ಆದ ಕನ್ಯೆಯನ್ನು ವಿಶ್ರವನು ಮದುವೆಯಾದನು. ಮತ್ತು ಮಾಲ್ಯವಂತನ ಪುತ್ರಿಯರಾದ ಪುಷ್ಪೋತ್ಕಟಾ ಮತ್ತು ವಾಕಾ ಎಂಬುವರನ್ನೂ ಮದುವೆಯಾದನು.

೪೦. ಹಾಗು ಮಾಲಿಯ ಪುತ್ರಿಯಾದ ಕೈಕಸಿಯು ಅವನ ಪತ್ನಿಯಾದಳು. ಅವರಿಗೆ ಹುಟ್ಟಿದ ಪ್ರಜೆಗಳನ್ನು ಶ್ರವಣಮಾಡಿರಿ. ದೇವವರ್ಣಿನಿಯು ಜ್ಯೇಷ್ಠ ಪುತ್ರನಾದ ವೈಶ್ರವಣನನ್ನು ಪ್ರಸವಿಸಿದಳು.

ದಿವ್ಯೇನ ವಿಧಿನಾ ಯುಕ್ತಮಾರ್ಷೇಣ ಚ ಶ್ರುತೇನ ಚ ।
ರಾಕ್ಷಸೇನ ಚ ರೂಪೇಣ ಆಸುರೇಣ ಬಲೇನ ಚ ॥ ೪೧ ॥

ತ್ರಿಪಾದಂ ಸುಮಹಾಕಾಯಂ ಸ್ಥೂಲಶೀರ್ಷಂ ಮಹಾಹನುಮ್ ।
ಅಷ್ಟದಂಷ್ಟ್ರಂ ಹರಿಚ್ಛ್ಮಶ್ರುಂ ಶಂಕುಕರ್ಣಂ ವಿಲೋಹಿತಮ್॥ ೪೨ ॥

ಹ್ರಸ್ವಬಾಹುಂ ಪ್ರಬಾಹುಂ ಚ ಪಿಂಗಲಂ ಸುದ್ವಿಭೀಷಣಮ್ ।
ವೈವರ್ತಜ್ಞಾನಸಂಪನ್ನಂ ಸಂಬುದ್ಧಂ ಚೈವ ಸಂಭವಾತ್ ॥ ೪೩ ॥

ಪಿತಾ ದೃಷ್ಟ್ವಾಬ್ರವೀತ್ತಂ ತು ಕುಬೇರೋಽಯಮಿತಿ ಸ್ವಯಮ್ ।
ಕುತ್ಸಾಯಾಂ ಕ್ವಿತಿ ಶಬ್ದೋಽಯಂ ಶರೀರಂ ಬೇರಮುಚ್ಯತೇ ॥ ೪೪ ॥

ಕುಬೇರಃ ಕುಶರೀರತ್ವಾನ್ನಾಮ್ನಾ ವೈ ತೇನ ಸೋಽಂಕಿತಃ ।
ಯಸ್ಮಾದ್ವಿಶ್ರವಸೋಽಪತ್ಯಂ ಸಾದೃಶ್ಯಾದ್ವಿಶ್ರವಾ ಇವ ॥ ೪೫ ॥

---

೪೧. ಆ ವೈಶ್ರವಣನು ದಿವ್ಯವಾದ ವಿಧಾನ, ವೇದಶಾಸ್ತ್ರಗಳ ಶ್ರವಣ, ರಾಕ್ಷಸರ ರೂಪ ಮತ್ತು ಆಸುರ ಬಲಗಳಿಂದ ವಿರಾಜಮಾನನಾಗಿದ್ದನು.

೪೨. ಮತ್ತು ಮೂರುಕಾಲು, ದೊಡ್ಡದಾದ ದೇಹ, ದಪ್ಪತಲೆ, ವಿಶಾಲವಾದ ಕಪೋಲ, ಎಂಟು ಕೋರೆ ಹಲ್ಲು, ಹಸುರು ಬಣ್ಣದ ಮೀಸೆ, ಶಂಕು ಆಕಾರದ ಕೆಂಪು ಕಿವಿ, ಎಂಬ ವಿಲಕ್ಷಣ ಅವಯವಗಳಿಂದ ಕೂಡಿದ್ದನು.

೪೩. ಹ್ರಸ್ವವಾದ ತೋಳು, ಹೊಂಬಣ್ಣ, ಭಯಂಕರವಾದ ಆಕೃತಿ, ಅಧಿಕ ಸಂಖ್ಯೆಯ ಬಾಹು, ಜನ್ಮ ಮೊದಲುಗೊಂಡು ಜ್ಞಾನ ಮತ್ತು ಪ್ರಪಂಚ ವಿವರ್ತನ ಅನುಭವಗಳಿಂದ ಶೋಭಿಸುತ್ತಿದ್ದನು.

೪೪. ತಂದೆಯು ಅವನನ್ನು ನೋಡಿ ಇವನು ಕುಬೇರನೆಂದು ಭಾವಿಸಿ ತಾನಾಗಿ ಹೇಳಿದನು. ಕುಬೇರ ಎಂಬ ಶಬ್ದದಲ್ಲಿರುವ ಕು ಎಂಬುದು ನಿಂದಾರ್ಥವನ್ನೂ ಬೇರ ಎಂಬುದು ದೇಹವನ್ನೂ ಬೋಧಿಸುತ್ತವೆ.

೪೫. ಒಟ್ಟಾಗಿ ಸೇರಿ ನಿಂದ್ಯವಾದ ದೇಹವುಳ್ಳದ್ದರಿಂದ ಅವನು ಕುಬೇರನೆಂಬ ಹೆಸರಿನಿಂದ ಅಂಕಿತನಾದನು. ಅವನು ವಿಶ್ರವನಿಗೆ ಪುತ್ರನೂ, ವಿಶ್ರವನಿಗೆ ತುಲ್ಯನೂ ಆಗಿದ್ದನು.

ತಸ್ಮಾದ್ವೈಶ್ರವಣೋ ನಾಮ ನಾಮ್ನಾ ತೇನ ಭವಿಷ್ಯತಿ ।
ಋದ್ಧ್ಯಾಂ ಕುಬೇರೋಽಜನಯದ್ವಿಶ್ರುತಂ ನಲಕೂಬರಮ್ ॥ ೪೬ ॥

ರಾವಣಂ ಕುಂಭಕರ್ಣಂ ಚ ಕನ್ಯಾಂ ಶೂರ್ಪಣಖೀಂ ತಥಾ ।
ವಿಭೀಷಣಚತುರ್ಥಾಂಸ್ತು ಕೈಕಸ್ಯಜನಯತ್ ಸುತಾನ್ ॥ ೪೭ ॥

ಶಂಕುಕರ್ಣೋ ದಶಗ್ರೀವಃ ಪಿಂಗಲೋ ರಕ್ತಮೂರ್ಧಜಃ ।
ಚತುಷ್ಪಾದ್ವಿಂಶತಿಭುಜೋ ಮಹಾಕಾಯೋ ಮಹಾಬಲಃ ॥ ೪೮ ॥

ಜಾತ್ಯಂಜನನಿಭೋ ದಂಷ್ಟ್ರೀ ಲೋಹಿತಗ್ರೀವ ಏವ ಚ ।
ರಾಕ್ಷಸೇನೌಜಸಾ ಯುಕ್ತೋ ರೂಪೇಣ ಚ ಬಲೇನ ಚ ॥ ೪೯ ॥

ಸತ್ತ್ವಬುದ್ಧಿಜಿತೈರ್ಯಕ್ಷರಾಕ್ಷಸೈರೇವ ರಾವಣಃ ।
ನಿಸರ್ಗದಾರುಣಃ ಕ್ರೂರೋ ರಾವಣೋ ದ್ರಾವಣಸ್ತು ಸಃ ॥ ೫೦ ॥

---

೪೬. ಆದುದರಿಂದ ಅವನು ವೈಶ್ರವಣ ಎಂಬ ಹೆಸರಿನಿಂದಲೂ ಪ್ರಖ್ಯಾತನಾಗುವನು. ಆ ಕುಬೇರನು ಋದ್ಧಿದೇವಿಯಲ್ಲಿ ಪ್ರಸಿದ್ಧನಾದ ನಲಕೂಬರನೆಂಬ ಪುತ್ರನನ್ನು ಸೃಷ್ಟಿಸಿದನು.

೪೭. ಕೈಕಸಿ ಎಂಬುವಳು ರಾವಣ, ಕುಂಭಕರ್ಣ, ವಿಭೀಷಣ ಮತ್ತು ಶೂರ್ಪಣಖೀ ಎಂಬ ಪುತ್ರರನ್ನು ಪ್ರಸವಿಸಿದಳು.

೪೮. ಅವರಲ್ಲಿ ರಾವಣನು ಶಂಕು ಆಕಾರದ ಕಿವಿ, ಹತ್ತುತಲೆ, ಹೊಂಬಣ್ಣ, ಕೆಂಪು ಕೂದಲು, ನಾಲ್ಕು ಕಾಲು, ಇಪ್ಪತ್ತು ಭುಜ, ದೊಡ್ಡ ದೇಹ ಮತ್ತು ಅಪಾರವಾದ ಬಲಗಳಿಂದ ಕೂಡಿದ್ದನು.

೪೯. ಮತ್ತು ಒಳ್ಳೆ ಕಾಡಿಗೆಗೆ ಸಮಾನನೂ, ಕೋರೆಹಲ್ಲು, ಕೆಂಪು ಕಂಠಗಳುಳ್ಳವನೂ, ರಾಕ್ಷಸರ ಅತಿ ಬಲದಿಂದ ಕೂಡಿದವನೂ ಮತ್ತು ರೂಪವೀರ್ಯಗಳ ಅತಿಶಯದಿಂದ ತುಂಬಿದವನೂ ಆಗಿದ್ದನು.

೫೦. ಹಾಗು ಯಕ್ಷ—ರಾಕ್ಷಸರನ್ನು ಸತ್ತ್ವ ಮತ್ತು ಬುದ್ಧಿಗಳಿಂದ ಜಯಿಸಿ ರಾವಣ ಎನ್ನಿಸಿದ್ದನು. ಅವನು ಸ್ವಭಾವವಾಗಿ ಭಯಂಕರನೂ ಕ್ರೂರನೂ ಆಗಿ ಎಲ್ಲರನ್ನೂ ದ್ರಾವಣ—ಓಡಿಸುವುದರಿಂದ ರಾವಣನೆನೆಸಿದ್ದನು.

ಹಿರಣ್ಯಕಶಿಪುರ್ಹ್ಯಾಸೀದ್ರಾವಣಃ ಪೂರ್ವಜನ್ಮನಿ ।
ಚತುರ್ಯುಗಾನಿ ರಾಜಾಭೂತ್ತ್ರಯೋದಶ ಸ ರಾಕ್ಷಸಃ ॥ ೫೧ ॥

ತಾಃ ಪಂಚಕೋಟ್ಯೋ ವರ್ಷಾಣಾಂ ಸಂಖ್ಯಾತಾಃ ಸಂಖ್ಯಯಾ ದ್ವಿಜಾಃ ।
ನಿಯುತಾನ್ಯೇಕಷಷ್ಟಿಂ ಚ ಶ‍ಬ್ದಾಂ ಗಣಿತಾನಿ ವೈ ॥ ೫೨ ॥

ಷಷ್ಟಿಂ ಚೈವ ಸಹಸ್ರಾಣಿ ವರ್ಷಾಣಾಂ ವೈ ಸ ರಾವಣಃ ।
ದೇವತಾನಾಮೃಷೀಣಾಂ ಚ ಘೋರಂ ಕೃತ್ವಾ ಪ್ರಜಾಗರಮ್ ॥ ೫೩ ॥

ತ್ರೇತಾಯುಗೇ ಚತುರ್ವಿಂಶೇ ರಾವಣಸ್ತಪಸಃ ಕ್ಷಯಾತ್ ।
ರಾಮಂ ದಾಶರಥಿಂ ಪ್ರಾಪ್ಯ ಸಗಣಃ ಕ್ಷಯಮೀಯಿವಾನ್ ॥ ೫೪ ॥

ಮಹೋದರಃ ಪ್ರಹಸ್ತಶ್ಚ ಮಹಾಪಾರ್ಶ್ವಃ ಖರಸ್ತಥಾ ।
ಪುಷ್ಪೋತ್ಕಟಾಯಾಃ ಪುತ್ರಾಸ್ತೇ ಕನ್ಯಾ ಕುಂಭೀನಸೀ ತಥಾ ॥ ೫೫ ॥

ತ್ರಿಶಿರಾ ದೂಷಣಶ್ಚೈವ ವಿದ್ಯುಜ್ಜಿಹ್ವಃ ಸರಾಕ್ಷಸಃ ।
ಕನ್ಯಾನುಪಾಲಿಕಾ ಚೈವ ವಾಕಾಯಾಃ ಪ್ರಸವಃ ಸ್ಮೃತಃ ॥ ೫೬ ॥

---

೫೧ ಅವನು ಪೂರ್ವಜನ್ಮದಲ್ಲಿ ಹಿರಣ್ಯಕಶಿಪುವೆಂಬ ಅಸುರನಾಗಿದ್ದನು. ಆ ರಾಕ್ಷಸನು ಹದಿಮೂರು ಚತುರ್ಯುಗಗಳ ವರೆಗೆ ರಾಜನಾಗಿ ಆಳಿದನು.

೫೨. ದ್ವಿಜರೇ, ಅವನು ಆಳಿದ ಕಾಲದಲ್ಲಿರುವ ವರ್ಷಗಳ ಗಣನೆಯು ಈ ವಿಧವಾಗಿ ಇತ್ತು. ಐದು ಕೋಟಿ ಅರವತ್ತೊಂದು ನಿಯುತ ವರ್ಷಗಳು ಎಣಿಸಲ್ಪಟ್ಟಿವೆ.

೫೩. ಆ ರಾವಣನು ಅರವತ್ತು ಸಹಸ್ರ ವರ್ಷಗಳ ವರೆಗೆ ಅಲ್ಲಲ್ಲಿ ದೇವತೆ ಮತ್ತು ಋಷಿಗಳ ಕೂಡ ಘೋರ ಯುದ್ಧವನ್ನು ಮಾಡಿದನು.

೫೪. ಹೀಗಿರಲು ಇಪ್ಪತ್ತನಾಲ್ಕನೆಯ ತ್ರೇತಾಯುಗದಲ್ಲಿ ಆ ರಾವಣನು ತಪೋಮಹಿಮೆಯ ವ್ಯಯದಿಂದ ದಶರಥನ ಪುತ್ರನಾದ ರಾಮನನ್ನು ಎದುರಿಸಿ ಸೈನ್ಯ ಸಹಿತನಾಗಿ ನಾಶಹೊಂದಿದನು.

೫೫. ಮಹೋದರ, ಪ್ರಹಸ್ತ, ಮಹಾಪಾರ್ಶ್ವ, ಖರ ಎಂಬುವರೂ ಕುಂಭೀನಸೀ ಎಂಬ ಕನ್ಯೆಯೂ ಪುಷ್ಪೋತ್ಕಟಾ ಎಂಬುವಳ ಪುತ್ರರಾಗಿ ಜನಿಸಿದರು.

೫೬. ಹಾಗೆ ತ್ರಿಶಿರಾ, ದೂಷಣ, ವಿದ್ಯುಜ್ಜಿಹ್ವ ಎಂಬ ರಾಕ್ಷಸರೂ ಅನುಪಾಲಿಕಾ ಎಂಬ ಕನ್ಯೆಯೂ ವಾಕಾ ಎಂಬುವಳ ಸಂತತಿಯಾಗಿ ಸ್ಮರಿಸಲ್ಪಟ್ಟಿರುವರು.

ಇತ್ಯೇತೇ ಕ್ರೂರಕರ್ಮಾಣಃ ಪೌಲಸ್ತ್ಯಾ ರಾಕ್ಷಸಾ ದಶ ।
ದಾರುಣಾಭಿಜನಾಃ ಸರ್ವೇ ದೇವೈರಪಿ ದುರಾಸದಾಃ ॥ ೫೭ ॥

ಸರ್ವೇ ಲಬ್ಧವರಾಃ ಶೂರಾಃ ಪುತ್ರಪೌತ್ರೈಃ ಸಮನ್ವಿತಾಃ ।
ಯಕ್ಷಾಣಾಂ ಚೈವ ಸರ್ವೇಷಾಂ ಪೌಲಸ್ತ್ಯಾ ಯೇ ಚ ರಾಕ್ಷಸಾಃ ॥ ೫೮ ॥

ಅಗಸ್ತ್ಯವೈಶ್ವಾಮಿತ್ರಾಣಾಂ ಕ್ರೂರಾಣಾಂ ಬ್ರಹ್ಮರಕ್ಷಸಾಮ್ ।
ವೇದಾಧ್ಯಯನಶೀಲಾನಾಂ ತಪೋವ್ರತನಿಷೇವಿಣಾಮ್ ॥ ೫೯ ॥

ತೇಷಾಮ್ಮೈಡವಿಡೋ ರಾಜಾ ಪೌಲಸ್ತ್ಯಃ ಸವ್ಯಪಿಂಗಲಃ ।
ಇತರೇ ಯೇ ಯಜ್ಞಜುಷಸ್ತೇ ವೈ ರಕ್ಷೋಗಣಾಸ್ತ್ರಯಃ ॥ ೬೦ ॥

ಯಾತುಧಾನಾ ಬ್ರಹ್ಮಧಾನಾ ವಾರ್ತಾಶ್ಚೈವ ದಿವಾಚರಾಃ ।
ನಿಶಾಚರಗಣಾಸ್ತೇಷಾಂ ಚತ್ವಾರಃ ಕವಿಭಿಃ ಸ್ಮೃತಾಃ ॥ ೬೧ ॥

---

೫೭. ಈ ರೀತಿಯಾಗಿ ಬಹು ಕ್ರೂರಕರ್ಮವನ್ನು ಮಾಡುವ ಭಯಂಕರವಾದ ಜನ್ಮವುಳ್ಳ ಪೌಲಸ್ತ್ಯ ಎಂಬ ಹತ್ತುಮಂದಿ ರಾಕ್ಷಸರು ಎಲ್ಲರೂ ದೇವತೆಗಳಿಂದಲೂ ಉಲ್ಲಂಘಿಸಲು ಆಗದವರಾದರು.

೫೮. ಎಲ್ಲರೂ ವರವನ್ನು ಹೊಂದಿದವರೂ ಶೂರರೂ ಪುತ್ರಪೌತ್ರ ಸಂತತಿಯಿಂದ ಕೂಡಿದವರೂ ಆಗಿದ್ದರು. ಈ ಎಲ್ಲಾ ಯಕ್ಷರಿಗೂ ಮತ್ತು ಪೌಲಸ್ತ್ಯ ರಾಕ್ಷಸರಿಗೂ ಒಬ್ಬನು ರಾಜನಾಗಿದ್ದನು.

೫೯. ಅಗಸ್ತ್ಯ ವಿಶ್ವಾಮಿತ್ರ ಮುಂತಾದ ಗೋತ್ರದಲ್ಲಿ ಹುಟ್ಟಿರುವ ಕ್ರೂರರಾದ ವೇದಾಧ್ಯಯನದಲ್ಲಿ ಶೀಲವಂತರಾದ ಮತ್ತು ತಪಸ್ಸು, ವ್ರತ ಇವುಗಳಲ್ಲಿ ನಿಯಮದಿಂದಿರುವ ಬ್ರಹ್ಮರಾಕ್ಷಸರು ಆ ಪಂಗಡದಲ್ಲಿದ್ದರು.

೬೦. ಅವರಿಗೆ ಪುಲಸ್ತ್ಯ ವಂಶದಲ್ಲಿ ಹುಟ್ಟಿದ ಎಡಭಾಗದಲ್ಲಿ ಪಿಂಗಲರೂಪವುಳ್ಳ ಐಲವಿಲ ಎಂಬ ವಿಶ್ರವನು ರಾಜನಾಗಿದ್ದನು. ಮತ್ತು ಯಜ್ಞಭಾಗಕ್ಕೆ ಅರ್ಹರಾದ ಇತರ ರಾಕ್ಷಸರ ಗಣಗಳು ಮೂರಾಗಿದ್ದುವು.

೬೧. ಆ ರಾಕ್ಷಸರಲ್ಲಿ ದಿವಾಚರರೆಂಬ ಜಾತಿಯಲ್ಲಿ ಯಾತುಧಾನ ಬ್ರಹ್ಮಧಾನ ಮತ್ತು ವಾರ್ತಾ ಎಂದು ಮೂರು ಪಂಗಡಗಳಿದ್ದುವು. ಹಾಗೆಯೇ ನಿಶಾಚರರ ಗುಂಪು ನಾಲ್ಕಾಗಿ ಪ್ರಾಜ್ಞರಿಂದ ಸ್ಮರಿಸಲ್ಪಟ್ಟವೆ.

ಪೌಲಸ್ತ್ಯಾ ನೈರ್ಋತಾ ಶ್ಚೈವ ಆಗಸ್ತ್ಯಾಃ ಕೌಶಿಕಾಸ್ತಥಾ ।
ಇತ್ಯೇತಾಃ ಸಪ್ತ ತೇಷಾಂ ವೈ ಜಾತಯೋ ರಾಕ್ಷಸಾಃ ಸ್ಮೃತಾಃ॥ ೬೨ ॥

ತೇಷಾಂ ರೂಪಂ ಪ್ರವಕ್ಷ್ಯಾಮಿ ಸ್ವಾಭಾವ್ಯೇನ ವ್ಯವಸ್ಥಿತಮ್ ।
ವೃತ್ತಾಕ್ಷಾಃ ಪಿಂಗಲಾಕ್ಷ್ಚೈವ ಮಹಾಕಾಯಾ ಮಹೋದರಾಃ ॥ ೬೩ ॥

ಅಷ್ಟದಂಷ್ಟ್ರಾಃ ಶಂಕುಕರ್ಣಾ ಊರ್ಧ್ವರೋಮಾಣ ಏವ ಚ ।
ಆಕರ್ಣಾದ್ದಾರಿತಾಸ್ಯಾಶ್ಚ ಮುಂಜಧೂಮ್ರೋರ್ಧ್ವಮೂರ್ಧಜಾಃ ॥ ೬೪ ॥

ಸ್ಥೂಲಶೀರ್ಷಾಃ ಸಿತಾಭಾಶ್ಚ ಹ್ರಸ್ವಸಕ್ಥಿಪ್ರಬಾಹವಃ ।
ತಾಮ್ರಾಸ್ಯಾ ಲಂಬಜಿಹ್ವೋಷ್ಠಾ ಲಂಬಭ್ರೂಸ್ಥೂಲನಾಸಿಕಾಃ ॥ ೬೫ ॥

ನೀಲಾಂಗಾ ಲೋಹಿತಗ್ರೀವಾ ಗಂಭೀರಾಕ್ಷಾ ವಿಭೀಷಣಾಃ ।
ಮಹಾಘೋರಸ್ವರಾಶ್ಚೈವ ವಿಕಟೋದ್ವೃದ್ಧಪಿಂಡಿಕಾಃ ॥ ೬೬ ॥

---

೬೨. ಪೌಲಸ್ತ್ಯ, ನೈರ್ಋತ, ಆಗಸ್ತ್ಯ ಮತ್ತು ಕೌಶಿಕ ಎಂಬುವು ಆ ನಿಶಾಚರ ರರ ಗುಂಪುಗಳು. ಹೀಗೆಯೇ ಒಟ್ಟು ರಾಕ್ಷಸರಲ್ಲಿ ಏಳು ಜಾತಿಗಳು ಇರುವುವೆಂದು ಸ್ಮರಿಸಲ್ಪಟ್ಟಿವೆ.

೬೩. ಆ ರಾಕ್ಷಸರಿಗೆ ಸ್ವಾಭಾವಿಕವಾಗಿ ವ್ಯವಸ್ಥೆ ಹೊಂದಿರುವ ರೂಪವನ್ನು ಹೇಳುವೆನು. ಗುಂಡಗಿರುವ ಕಣ್ಣು, ಪಿಂಗಳರೂಪ, ದೊಡ್ಡ ದೇಹ ಮತ್ತು ದೊಡ್ಡ ಉದರ ಎಂಬ ವಿಕಾರಗಳಿದ್ದವು.

೬೪. ಎಂಟು ಕೋರೆಯಹಲ್ಲು, ಶಂಕುಆಕಾರದ ಕಿವಿ, ಊರ್ಧ್ವಾಗ್ರವಾದ ರೋಮ, ಕಿವಿಯವರೆಗೆ ಸೀಳಿದಂತಿರುವ ಮುಖ, ಮುಂಜ ಎಂಬ ಹುಲ್ಲಿನಂತೆ ಧೂಮ್ರ ವರ್ಣ ಊರ್ಧ್ವಾಗ್ರಳಿಂದ ಇರುವ ಕೂದಲು ಮುಂತಾದ ವಿಕಾರಗಳಿದ್ದುವು.

೬೫, ಮತ್ತು ದಪ್ಪತಲೆ, ಕಪ್ಪುಕಾಂತಿ, ಚಿಕ್ಕತೊಡೆ, ಹೆಚ್ಚುತೋಳು, ಕೆಂಪು ಮುಖ ಲಂಬಿಯಾದ ನಾಲಿಗೆ-ತುಟಿ-ಹುಬ್ಬು ಮತ್ತು ದಪ್ಪವಾದ ಮೂಗು ಈ ವಿಧ ವಾದ ವಿಕಾರಗಳಿಂದ ಪೂರ್ಣವಾಗಿದ್ದರು.

೬೬. ಕಪ್ಪುದೇಹ, ಕೆಂಪುಕಂಠ, ಆಳವಾದ ಕಣ್ಣು, ಭಯಂಕರಮೂರ್ತಿ, ಅತಿ ಉಗ್ರವಾದಸ್ವರ, ವಿಕಾರವಾಗಿ ಕಟ್ಟಲ್ಪಟ್ಟಂತಿರುವ ಹೊಟ್ಟೆ ಮುಂತಾದ ವಿಕಾರಗಳು ಆ ವ್ಯಕ್ತಿಗಳಲ್ಲಿ ಕಾಣಿಸುತ್ತಿದ್ದುವು.

ಸ್ಥೂಲಾಶ್ಚ ತುಂಗನಾಸಾಶ್ಚ ಶಿಲಾಸಂಹನನಾ ದೃಢಾಃ ।
ದಾರುಣಾಭಿಜನಾಃ ಕ್ರೂರಾಃ ಪ್ರಾಯಶಃ ಕ್ಲಿಷ್ಟಕರ್ಮಿಣಃ ॥ ೬೭ ॥

ಸಕುಂಡಲಾಂಗದಾಪೀಡಾ ಮುಕುಟೋಷ್ಣೀಷಧಾರಿಣಃ ।
ವಿಚಿತ್ರಾಭರಣಾಶ್ಚಿತ್ರಸ್ರಗ್ಮಾಲ್ಯಗಂಧಾನುಲೇಪನಾಃ ॥ ೬೮ ॥

ಅನ್ನಾದಾಃ ಪಿಶಿತಾದಾಶ್ಚ ಪುರುಷಾದಾಶ್ಚ ತೇ ಸ್ಮೃತಾಃ ।
ಇತ್ಯೇತದ್ರೂಪಸಾಧರ್ಮ್ಯಂ ರಾಕ್ಷಸಾನಾಂ ಸ್ಮೃತಂ ಬುಧೈಃ ॥ ೬೯ ॥

ನ ಸಮಾಸ್ತೇ ಬಲೇ ಬುದ್ಧೌ ಯುದ್ಧೇ ಮಾಯಾಕೃತೇ ತದಾ ।
ಪುಲಹಸ್ಯ ಮೃಗಾಃ ಪುತ್ರಾಃ ಸರ್ವೇ ವ್ಯಾಲಾಶ್ಚ ದಂಷ್ಟ್ರಿಣಃ ॥ ೭೦ ॥

ಭೂತಾಃ ಸರ್ಪಾಃ ಪಿಶಾಚಾಶ್ಚ ಸೃಮರಾ ಹಸ್ತಿನಸ್ತಥಾ ।
ವಾನರಾಃ ಕಿನ್ನರಾಶ್ಚೈವ ಮಾಯುಃ ಕಿಂಪುರುಷಾಸ್ತಥಾ ॥ ೭೧ ॥

---

೬೭. ಸ್ಥೂಲವಾದ ಆಕಾರ, ಉದ್ದಮೂಗು, ಕಲ್ಲಿನಂತೆ ಗಟ್ಟಿಯಾದದೇಹ, ಭಯಂಕರ ಉತ್ಪತ್ತಿ, ಕ್ರೂರವೇಷ, ಪ್ರಾಯಕವಾಗಿ ಕ್ಲೇಶವನ್ನುಂಟುಮಾಡುವ ಕರ್ಮ-ಇವುಗಳಿಂದ ಕೂಡಿದ್ದರು.

೬೮. ಕುಂಡಲ, ಭುಜಕೀರ್ತಿ, ಕಿರೀಟ, ರುಮಾಲು ಮುಂತಾದ ಅನೇಕ ಆಭರಣಗಳನ್ನು ಧರಿಸಿದವರೂ ವಿಚಿತ್ರವಾದ ಅಲಂಕಾರ, ಪುಷ್ಪಹಾರ, ಸುಗಂಧಾನು ಲೇಪನ ಎಂಬ ಭೋಗಗಳಿಂದ ಕೂಡಿದವರೂ ಆಗಿದ್ದರು.

೬೯. ಅನ್ನ, ಮಾಂಸ, ಪುರುಷರನ್ನು ಭುಂಜಿಸುತ್ತಿರುವವರೂ ಆಗಿದ್ದರು. ಹೀಗೆ ರಾಕ್ಷಸರಲ್ಲಿ ಇರುವ ಸಾಮಾನ್ಯ ರೂಪವು ವಿದ್ವಾಂಸರಿಂದ ಹೇಳಲ್ಪಟ್ಟಿದೆ.

೭೦. ಅವರು ಬಲ, ಬುದ್ಧಿ ಯುದ್ಧ, ಮಾಯಾಡಂಬರ, ಮುಂತಾದುವುಗಳಲ್ಲಿ ನಿರುಪಮರಾಗಿದ್ದರು. ಪುಲಹನಿಗೆ ವ್ಯಾಲ, ದಂಷ್ಟ್ರಿ ಮೊದಲಾದ ಅನೇಕ ಮೃಗಗಳು ಪುತ್ರರಾಗಿದ್ದುವು.

೭೧. ಭೂತ, ಸರ್ಪ, ಪಿಶಾಚ, ಸೃಮರ, ಗಜ, ವಾನರ, ಕಿನ್ನರ, ಮಾಯು ಮತ್ತು ಕಿಂಪುರುಷ ಮುಂತಾದವರು ಪುಲಹಪುತ್ರರ ಸಮೂಹದಲ್ಲಿ ಸೇರಿರುವರು.

ಪ್ರಾಗಪ್ಯೇತೇ ಪರಿಕ್ರಾಂತಾ ಮಯಾ ಕ್ರೋಧವಶಾನ್ವಯಾಃ ।
ಅನಪತ್ಯಃ ಕ್ರತುರ್ಹ್ಯಸ್ಮಿನ್ ಸ್ಮೃತೋ ವೈವಸ್ವತೇಽಂತರೇ ॥ ೭೨ ॥

ನ ತಸ್ಯ ಪತ್ನ್ಯಃ ಪುತ್ರಾ ವಾ ತೇಜಃ ಸಂಕ್ಷಿಪ್ಯ ಚ ಸ್ಥಿತಃ ।
ಅತ್ರೇರ್ವಂಶಂ ಪ್ರವಕ್ಷ್ಯಾಮಿ ತೃತೀಯಸ್ಯ ಪ್ರಜಾಪತೇಃ ॥ ೭೩ ॥

ತಸ್ಯ ಪತ್ನ್ಯಸ್ತು ಸುಂದರ್ಯೋ ದಶೈವಾಸನ್ ಪತಿವ್ರತಾಃ ।
ಭದ್ರಾಶ್ವಸ್ಯ ಘೃತಾಚ್ಯಾಂ ವೈ ದಶಾಪ್ಸರಸಿ ಸೂನವಃ ॥ ೭೪ ॥

ಭದ್ರಾ ಶೂದ್ರಾ ಚ ಮದ್ರಾ ಚ ಶಲಭಾ ಮಲದಾ ತಥಾ ।
ಬಲಾ ಹಲಾ ಚ ಸಪ್ತೈತಾ ಯಾ ಚ ಗೋಚಪಲಾಃ ಸ್ಮೃತಾಃ ॥ ೭೫ ॥

ತಥಾ ತಾಮರಸಾ ಚೈವ ರತ್ನಕೂಟಾ ಚ ತಾದೃಶಃ ।
ತತ್ರ ಯೋ ವಂಶಕೃಚ್ಚಾಸೌ ತಸ್ಯ ನಾಮ ಪ್ರಭಾಕರಃ ॥ ೭೬ ॥

---

೭೨. ಕ್ರೋಧಾ ಎಂಬುವಳ ಅಧೀನದಿಂದ ಹುಟ್ಟಿದ ಈ ಪ್ರಜೆಗಳು ನನ್ನಿಂದ ಪೂರ್ವದಲ್ಲಿಯೂ ವರ್ಣಿಸಲ್ಪಟ್ಟಿರುವರು. ಈ ವಂಶದಲ್ಲಿ ವೈವಸ್ವತ ಮನ್ವಂತರದಲ್ಲಿ ಪ್ರಜಾರಹಿತನಾಗಿ ಕ್ರತು ಎಂಬುವನು ಇದ್ದನೆಂದು ಸ್ಮರಿಸಲ್ಪಟ್ಟಿರುವನು.

೭೩. ಅವನಿಗೆ ಪತ್ನಿ ಅಥವಾ ಪುತ್ರರು ಇರಲಿಲ್ಲ. ಅವನು ತನ್ನ ತೇಜಸ್ಸನ್ನು ಸಂಗ್ರಹಿಸಿಕೊಂಡಿದ್ದನು ಇನ್ನುಮುಂದೆ ಮೂರನೆಯ ಅತ್ರಿ ಪ್ರಜಾಪತಿಯ ವಂಶ ವನ್ನು ಹೇಳುವೆನು.

೭೪. ಆ ಅತ್ರಿಮುನಿಗೆ ಸುಂದರಿಯರೂ ಪತಿವ್ರತೆಯರೂ ಆದ ಹತ್ತುಮಂದಿ ಪತ್ನಿಯರಿದ್ದರು. ಭದ್ರಾಶ್ವನಿಗೆ ಘೃತಾಚೀ ಎಂಬ ಅಪ್ಸರೆಯಲ್ಲಿ ಹತ್ತುಮಂದಿ ಪುತ್ರರು ಜನಿಸಿದರು.

೭೫. ಭದ್ರಾ, ಶೂದ್ರಾ, ಮದ್ರಾ, ಶಲಭಾ ಮಲದಾ ಬಲಾ, ಹಲಾ ಮತ್ತು ಗೋಚಪಲಾ ಎಂದು ಎಂಟು ಮಂದಿಯು ಅತ್ರಿಮುನಿಯ ಪತ್ನಿಯರಲ್ಲಿ ಸೇರಿರುವರು.

೭೬. ಹಾಗೆ ತಾಮರಸಾ, ರತ್ನಕೂಟಾ ಎಂಬಿಬ್ಬರು ಸೇರಿ ಹತ್ತು ಮಂದಿಯು ಅತ್ರಿಮುನಿಯ ಪತ್ನಿಯರು. ಅವರಲ್ಲಿ ಹುಟ್ಟಿದ ಪ್ರಜೆಗಳಲ್ಲಿ ವಂಶ ಪ್ರತಿಷ್ಠಾಪಕನಿಗೆ ಪ್ರಭಾಕರನೆಂದು ಹೆಸರು ಇದ್ದಿತು.

ಮುದ್ರಾಯಾಂ ಜನಯಾಮಾಸ ಸೋಮಂ ಪುತ್ರಂ ಯಶಸ್ವಿನಮ್ ।
ಸ್ವರ್ಭಾನುನಾ ಹತೇ ಸೂರ್ಯೇ ಪತಮಾನೇ ದಿವೋ ಮಹೀಮ್ ॥ ೭೭ ॥

ತಮೋಽಭಿಭೂತೇ ಲೋಕೇಽಸ್ಮಿನ್ ಪ್ರಭಾ ಯೇನ ಪ್ರವರ್ತಿತಾ ।
ಸ್ವಸ್ತಿ ತೇಽಸ್ತ್ವಿತಿ ಚೋಕ್ತೋ ವೈ ಪತನ್ನಿಹ ದಿವಾಕರಃ ॥ ೭೮ ॥

ಬ್ರಹ್ಮರ್ಷೇರ್ವಚನಾತ್ತಸ್ಯ.ನ ಪಪಾತ ದಿವೋ ಮಹೀಮ್ ।
ಅತ್ರಿಃಶ್ರೇಷ್ಠಾನಿ ಗೋತ್ರಾಣಿ ಯಶ್ಚಕಾರ ಮಹಾತಪಾಃ ॥ ೭೯ ॥

ಯಜ್ಞೇಷ್ವನಿಧನಂ ಚೈವ ಸುರೈರ್ಯಸ್ಯ ಪ್ರವರ್ತಿತಮ್ ।
ಸ ತಾಸು ಜನಯಾಮಾಸ ಪುತ್ರಾನಾತ್ಮಸಮಾನಕಾನ್ ॥ ೮೦ ॥

ದಶ ತಾನ್ ವೈ ಸುಮಹತಾ ತಪಸಾ ಭಾವಿತಃ ಪ್ರಭುಃ ।
ಸ್ವಸ್ತ್ಯಾತ್ರೇಯಾ ಇತಿ ಖ್ಯಾತಾ ಋಷಯೋ ವೇದಪಾರಗಾಃ ॥ ೮೧ ॥

---

೭೭. ಆ ಅತ್ರಿಮುನಿಯು ಮುದ್ರಾ ಎಂಬುವಳಲ್ಲಿ ಯಶಸ್ವಿಯಾದ ಚಂದ್ರನೆಂಬ ಪುತ್ರನನ್ನು ಸೃಷ್ಟಿಸಿದನು. ರಾಹುವಿನಿಂದ ಸೂರ್ಯನು ನುಂಗಲ್ಪಟ್ಟವನಾಗಿ ಆಕಾಶದಿಂದ ಭೂಮಿಗೆ ಬೀಳುವವನಾದನು.

೭೮. ಆಗ ಈ ಲೋಕವು ಕತ್ತಲೆಯಿಂದ ಮುಚ್ಚಿಹೋಗಲಾಗಿ ಪ್ರಭಾ ಪುಂಜವನ್ನು ಬೀರುತ್ತಿದ್ದ ಸೂರ್ಯನು ನಿನಗೆ ಕಲ್ಯಾಣವಾಗಲೆಂದು ಆ ಬ್ರಹ್ಮರ್ಷಿಯಾದ ಅತ್ರಿಯಿಂದ ಹೇಳಲ್ಪಟ್ಟನು.

೭೯. ಆ ಬ್ರಹ್ಮರ್ಷಿಯ ವಚನದಿಂದ ಸೂರ್ಯನು ಆಕಾಶದಿಂದ ಭೂಮಿಗೆ ಪತಿತನಾಗಲಿಲ್ಲ. ಅಂತಹ ಮಹಾ ತಪಸ್ವಿಯಾದ ಅತ್ರಿಮುನಿಯು ಶ್ರೇಷ್ಠವಾದ ಅನೇಕ ವಂಶಗಳನ್ನು ನಿರ್ಮಿಸಿದನು.

೮೦. ದೇವತೆಗಳಿಂದ ಆ ಅತ್ರಿಮುನಿಗೆ ಯಜ್ಞಾನುಷ್ಠಾನಗಳಲ್ಲಿ ಮರಣ ರಾಹಿತ್ಯವು ಕಲ್ಪಿಸಲ್ಪಟ್ಟಿತು. ಅವನು ತನ್ನ ಪತ್ನಿಯರಲ್ಲಿ ತನಗೆ ಸಮಾನರಾದ ಪುತ್ರರನ್ನು ಸೃಷ್ಟಿಸಿದನು.

೮೧. ಆ ಪ್ರಭುವು ಹೆಚ್ಚಾದ ತಪಸ್ಸಿನಿಂದ ಸಂಸ್ಕೃತನಾಗಿ ಸೃಷ್ಟಿಸಿದ ಹತ್ತು ಮಂದಿ ಪುತ್ರರು ಸ್ವಸ್ತ್ಯಾತ್ರೇಯ ಎಂದು ಪ್ರಸಿದ್ಧರಾದ ಮತ್ತು ವೇದಪಾರಂಗತರಾದ ಋಷಿಗಳಾದರು.

ತೇಷಾಂ ದ್ವೌ ಖ್ಯಾತಯಶಸೌ ಬ್ರಹ್ಮಿಷ್ಠೌ ಸುಮಹೌಜಸೌ ।
ದತ್ತೋ ಹ್ಯನುಮತೋ ಜ್ಯೇಷ್ಠೋ ದುರ್ವಾಸಾಸ್ತಸ್ಯ ಚಾನುಜಃ ॥ ೮೨ ॥

ಯವೀಯಸೀ ಸುತಾ ತೇಷಾಮಬಲಾ ಬ್ರಹ್ಮವಾದಿನೀ ।
ಅತ್ರಾಪ್ಯುದಾಹರಂತೀಮಂ ಶ್ಲೋಕಂ ಪೌರಾಣಿಕಾಃ ಪುರಾ ॥ ೮೩ ॥

ಅತ್ರೇಃ ಪುತ್ರಂ ಮಹಾತ್ಮಾನಂ ಶಾಂತಾತ್ಮಾನಮಕಲ್ಮಷಮ್ ।
ದತ್ತಾತ್ರೇಯಂ ತನುಂ ವಿಷ್ಣೋಃ ಪುರಾಣಜ್ಞಾಃ ಪ್ರಚಕ್ಷತೇ ॥ ೮೪ ॥

ತಸ್ಯ ಗೋತ್ರಾನ್ವಯಾಜ್ಜಾತಾಶ್ಚತ್ವಾರಃ ಪ್ರಥಿತಾ ಭುವಿ ।
ಶ್ಯಾವಾಶ್ವಾ ಮುದ್ಗಲಾಶ್ಚೈವ ವಾಗ್ಭೂತಕಗವಿಷ್ಠಿರಾಃ ॥ ೮೫ ॥

ಏತೇಽತ್ರೀಣಾಂ ತು ಚತ್ವಾರಃ ಸ್ಮೃತಾಃ ಪಕ್ಷಾ ಮಹೌಜಸಃ ।
ಕಾಶ್ಯಪೋ ನಾರದಶ್ಚೈವ ಪರ್ವತೋಽರುಂಧತೀ ತಥಾ ॥ ೮೬ ॥

---

೮೨. ಅವರಲ್ಲಿ ಪ್ರಸಿದ್ಧವಾದ ಕೀರ್ತಿ ಯುಳ್ಳವರೂ ಬ್ರಹ್ಮಜ್ಞಾನಿಗಳೂ ಆದ ಜ್ಯೇಷ್ಠ ಪುತ್ರನಾದ ದತ್ತ ಮತ್ತು ಕಿರಿಯವನಾದ ದುರ್ವಾಸ ಎಂಬ ಇಬ್ಬರು ಮುನಿಗಳಿದ್ದರು.

೮೩. ಆ ಸ್ವಸ್ತ್ಯಾತ್ರೇಯರಿಗೆ ಕಿರಿಯವಳಾದ ಮತ್ತು ಬ್ರಹ್ಮ ವಾದಿನಿಯಾದ ಒಬ್ಬಳು ಅಬಲೆಯಿದ್ದಳು. ಪೂರ್ವಕಾಲದಲ್ಲಿ ಪೌರಾಣಿಕರು ಈ ವಿಷಯದಲ್ಲಿ ಈ ಒಂದು ಶ್ಲೋಕವನ್ನು ಕೊಂಡಾಡುತ್ತಿದ್ದರು.

೮೪. ಅತ್ರಿಪುತ್ರನೂ, ಮಹಾತ್ಮನೂ, ನಿರ್ವಿಕಾರವಾದ ಅಂತಃಕರಣವುಳ್ಳವನೂ ಪಾಪ ಸಂಪರ್ಕಶೂನ್ಯನೂ ಆದ ದತ್ತಾತ್ರೇಯ ಮುನಿಯನ್ನು ಪುರಾಣಜ್ಞರು ವಿಷ್ಣುವಿನ ಅಂಶದ ಮೂರ್ತಿಯನ್ನಾಗಿ ವರ್ಣಿಸುತ್ತಾರೆ.

೮೫. ಆ ಮುನಿಯ ವಂಶಸಂತತಿಯಿಂದ ಶ್ಯಾವಾಶ್ವ, ಮುದ್ಗಲ, ವಾಗ್ಭೂತಕ ಮತ್ತು ಗವಿಷ್ಠಿರ ಎಂದು ಭೂಲೋಕದಲ್ಲಿ ಪ್ರಸಿದ್ಧರಾದ ನಾಲ್ಕು ಮಂದಿಯ ಪಕ್ಷಗಳು ಜನಿಸಿದುವು.

೮೬. ಇವರು ಮಹತ್ತಾದ ಶಕ್ತಿಯಿಂದ ಕೂಡಿದವರಾಗಿ ಅತ್ರಿಮುನಿಯ ನಾಲ್ಕು ಪಕ್ಷಗಳೆಂದು ಸ್ಮರಿಸಲ್ಪಟ್ಟಿರುವರು. ಮತ್ತು ಕಾಶ್ಯಪ ಮುನಿಯ ವಂಶದಲ್ಲಿ ಹುಟ್ಟಿದ ನಾರದ, ಪರ್ವತ ಮತ್ತು ಅರುಂಧತಿಯು ಅವತರಿಸಿದರು.

ಜಜ್ಞಿರೇ ಮಾನಸಾ ಹ್ಯೇತೇಽರುಂಧತ್ಯಾಸ್ತನ್ನಿಬೋಧತ ।
ನಾರದಸ್ತು ವಸಿಷ್ಠಾಯಾರುಂಧತೀಂ ಪ್ರತ್ಯಪಾದಯತ್ ॥ ೮೭ ॥

ಊರ್ಧ್ವರೇತಾ ಮಹಾತೇಜಾ ದಕ್ಷಶಾಪಾತ್ತು ನಾರದಃ ।
ಪುರಾ ದೇವಾಸುರೇ ತಸ್ಮಿನ್ ಸಂಗ್ರಾಮೇ ತಾರಕಾಮಯೇ ॥ ೮೮ ॥

ಅನಾವೃಷ್ಟ್ಯಾ ಹತೇ ಲೋಕೇ ವ್ಯಗ್ರೇ ಶಸ್ತೇ ಸುರೈಃ ಸಹ ।
ವಸಿಷ್ಠಸ್ತಪಸಾ ಧೀಮಾನ್ ಜೀವಯಾಮಾಸ ವೈ ಪ್ರಜಾಃ ॥ ೮೯ ॥

ಅನೇಕಫಲಮೂಲಿನ್ಯ ಔಷಧೀಶ್ಚ ಪ್ರವರ್ತಯನ್ ।
ತಾಸ್ತೇನ ಜೀವಯಾಮಾಸ ಕಾರುಣ್ಯಾದೌಷಧೇನ ಸಃ ॥ ೯೦ ॥

ಅರುಂಧತ್ಯಾಂ ವಸಿಷ್ಠಸ್ತು ಶಕ್ತಿಮುತ್ಪಾದಯತ್ ಸುತಮ್ ।
ಸ್ವಾಗಜಂ ಜನಯಚ್ಛಕ್ತಿರದೃಶ್ಯಂತ್ಯಾಂ ಪರಾಶರಮ್ ॥ ೯೧ ॥

---

೮೭. ಇವರು ಮಾನಸ ಪುತ್ರರಾಗಿ ಜನ್ಮವೆತ್ತಿರುವರು. ಮುಂದೆ ಅರುಂಧತಿಯ ವಂಶ ವಿಸ್ತಾರವನ್ನು ಕೇಳಿರಿ; ನಾರದನು ಅರುಧಂತಿಯನ್ನು ವಸಿಷ್ಠ ಮುನಿಗೆ ಪ್ರದಾನಮಾಡಿದನು.

೮೮. ಪೂರ್ವದಲ್ಲಿ ತಾರಕಾಸುರನಿಗೆ ಮೃತ್ಯುವಾದ ದೇವಾಸುರ ಯುದ್ಧದಲ್ಲಿ ಊರ್ಧ್ವರೇತಸ್ಸು ಮಹಾತೇಜಸ್ವಿಯೂ ಆದ ನಾರದ ಮುನಿಯು ದಕ್ಷ ಪ್ರಜಾಪತಿಯಿಂದ ಶಪಿಸಲ್ಪಟ್ಟನು.

೮೯. ಆಗ ಅನಾವೃಷ್ಟಿಯು ಲೋಕಗಳನ್ನು ಪೀಡಿಸಿದುದರಿಂದ ದೇವತೆಗಳೊಂದಿಗೆ ಪ್ರಜೆಗಳು ವ್ಯಾಕುಲತೆ ಹೊಂದಲಾಗಿ ವಸಿಷ್ಠ ಮುನಿಯು ತಮ್ಮ ತಪಶ್ಶಕ್ತಿಯಿಂದ ಪ್ರಜೆಗಳನ್ನು ಬದುಕಿಸಿದನು.

೯೦. ಮತ್ತು ಆ ವಸಿಷ್ಠ ಮುನಿಯು ಅನೇಕ ಫಲಮೂಲಗಳಿಂದ ಕೂಡಿದ ಓಷಧಿಗಳನ್ನು ಕರುಣೆಯಿಂದ ಕೊಟ್ಟು, ಆ ಓಷಧಿಗಳ ರಸದಿಂದ ಪ್ರಜೆಗಳನ್ನು ಬದುಕಿಸಿದನು.

೯೧. ವಸಿಷ್ಠ ಮುನಿಯು ತಮ್ಮ ಅರುಂಧತಿಯೆಂಬ ಭಾರ್ಯೆಯಲ್ಲಿ ಶಕ್ತಿ ಎಂಬ ಪುತ್ರನನ್ನು ಹೊಂದಿದನು. ಆ ಶಕ್ತಿಯೆಂಬ ಪುತ್ರನು ಅದೃಶ್ಯಂತಿಯೆಂಬ ಭಾರ್ಯೆಯಲ್ಲಿ ಪರಾಶರ ಮುನಿಯನ್ನು ಪುತ್ರನನ್ನಾಗಿ ಹೊಂದಿದನು.

ಕಾಲ್ಯಾಂ ಪರಾಶರಾಜ್ಜಜ್ಞೇ ಕೃಷ್ಣದ್ವೈಪಾಯನಃ ಪ್ರಭುಃ ।
ದ್ವೈಪಾಯನಾದರಣ್ಯಾಂ ವೈ ಶುಕೋ ಜಜ್ಞೇ ಗುಣಾನ್ವಿತಃ ॥ ೯೨ ॥

ಉಪಪದ್ಯಂತ ಷಡಿಮೇ ಪೀವರ್ಯಾಂ ಶುಕಸೂನವಃ ।
ಭೂರಿಶ್ರವಾಃ ಪ್ರಭುಃ ಶಂಭುಃ ಕೃಷ್ಣೋ ಗೌರಶ್ಚ ಪಂಚಮಃ ॥ ೯೩ ॥

ಕನ್ಯಾ ಕೀರ್ತಿಮತೀ ಚೈವ ಯೋಗಮಾತಾ ಧೃತವ್ರತಾ ।
ಜನನೀ ಬ್ರಹ್ಮದತ್ತಸ್ಯ ಪತ್ನೀ ಸಾ ತ್ವಣುಹಸ್ಯ ಚ ॥ ೯೪ ॥

ಶ್ವೇತಾಃ ಕೃಷ್ಣಾಶ್ಚ ಪೌರಾಶ್ಚ ಶ್ಯಾಮಧೂಮ್ರಾಶ್ಚ ಚಂಡಿನಃ ।
ಊಷ್ಮಾದಾ ದಾರಿಕಾಶ್ಚೈವ ನೀಲಾಶ್ಚೈವ ಪರಾಶರಾಃ ॥ ೯೫ ॥

ಪರಾಶರಾಣಾಮಷ್ಟೌ ತೇ ಪಕ್ಷಾಃ ಪ್ರೋಕ್ತಾ ಮಹಾತ್ಮನಾಮ್ ।
ಅತ ಊರ್ಧ್ವಂ ನಿಬೋಧ ತ್ವಮಿಂದ್ರಪ್ರಮತಿಸಂಭವಮ್ ॥ ೯೬ ॥

---

೯೨. ಪರಾಶರ ಮುನಿಗೆ ಕಾಲೀ ಎಂಬುವಳಲ್ಲಿ ಕೃಷ್ಣದ್ವೈಪಾಯನನೆಂಬ ಪ್ರಭುವಾದ ಮುನಿಯು ಜನಿಸಿದನು. ಆ ದ್ವೈಪಾಯನ ಮುನಿಯಿಂದ ಅರಣಿಯಲ್ಲಿ ಸದ್ಗುಣಪೂರ್ಣನಾದ ಶುಕಮಹರ್ಷಿಯು ಪುತ್ರನಾಗಿ ಹುಟ್ಟಿದನು.

೯೩. ಆ ಶುಕಮುನಿಗೆ ಪೀವರೀ ಎಂಬಾಕೆಯಲ್ಲಿ ಭೂರಿಶ್ರವ, ಪ್ರಭು, ಶಂಭು, ಕೃಷ್ಣ, ಗೌರ ಎಂಬುವರೂ ಮತ್ತೊಬ್ಬ ಕನ್ಯೆಯೂ ಸೇರಿ ಆರು ಮಂದಿ ಪುತ್ರರು ಹುಟ್ಟಿದರು.

೯೪. ಅವರಲ್ಲಿ ಯೋಗಮಾತೆಯೂ ಅನೇಕ ವ್ರತ ನಿಯಮಗಳಿಂದ ಕೂಡಿದವಳೂ ಅಣುಹ ಎಂಬುವನ ಪತ್ನಿಯೂ ಮತ್ತು ಬ್ರಹ್ಮದತ್ತ ಎಂಬುವನ ತಾಯಿಯೂ ಆದ ಕೀರ್ತಿಮತಿ ಎಂಬುವ ಕನ್ಯೆಯು ಆರನೆಯವಳಾಗಿದ್ದಳು.

೯೫. ಮುಂದೆ ಶ್ವೇತ, ಕೃಷ್ಣ, ಪೌರ, ಶ್ಯಾಮ ಧೂಮ್ರ ಚಂಡಿ, ಊಷ್ಮಾದ ದಾರಿಕಾ ಮತ್ತು ನೀಲ ಎಂಬ ವಿಲಕ್ಷಣ ನಾಮಾಂಕಿತಗಳಾಗಿ ಪರಾಶರ ಮುನಿಯ ಪಕ್ಷಗಳು ಬೆಳೆದುವು.

೯೬. ಈ ಎಂಟು ಪಕ್ಷಗಳು ಮಹಾತ್ಮರಾದ ಪರಾಶರ ಮುನಿಯ ವಂಶಗಳೆಂದು ಹೇಳಲ್ಪಟ್ಟಿವೆ. ಇನ್ನು ಮುಂದೆ ಇಂದ್ರಪ್ರಮತಿ ಎಂಬುವನ ಜನ್ಮ ಚರಿತ್ರವನ್ನು ಶ್ರವಣಮಾಡು.

ವಸಿಷ್ಠಸ್ಯ ಕಪಿಂಜಲ್ಯಾಂ ಘೃತಾಚ್ಯಾಮುದಪದ್ಯತ ।
ಕುಣೀತಿ ಯಃ ಸಮಾಖ್ಯಾತ ಇಂದ್ರಪ್ರಮತಿರುಚ್ಯತೇ ॥ ೯೭ ॥

ಪೃಥೋಃ ಸುತಾಯಾಂ ಸಂಭೂತಃ ಪುತ್ರಸ್ತಸ್ಯಾಭವದ್ವಸುಃ ।
ಉಪಮನ್ಯುಃ ಸುತಸ್ತಸ್ಯ ಯಸ್ಯೇಮೇ ಹ್ಯೌಪಮನ್ಯವಃ ॥ ೯೮ ॥

ಮಿತ್ರಾವರುಣಯೋಶ್ಚೈವ ಕುಂಡಿನೇಯಾಃ ಪರಿಶ್ರುತಾಃ ।
ಏಕಾರ್ಷೇಯಾಸ್ತಥಾ ಚಾನ್ಯೇ ವಸಿಷ್ಠಾ ನಾಮ ವಿಶ್ರುತಾಃ ॥ ೯೯ ॥

ಏತೇ ಪಕ್ಷಾ ವಸಿಷ್ಠಾನಾಂ ಸ್ಮೃತಾ ಹ್ಯೇಕಾದಶೈವ ತು ।
ಇತ್ಯೇತೇ ಬ್ರಹ್ಮಣಃ ಪುತ್ರಾ ಮಾನಸಾ ಅಷ್ಟ ವಿಶ್ರುತಾಃ ॥ ೧೦೦ ॥

ಭ್ರಾತರಃ ಸುಮಹಾಭಾಗಾ ಯೇಷಾಂ ವಂಶಾಃ ಪ್ರತಿಷ್ಠಿತಾಃ ।
ತ್ರೀಂಲ್ಲೋಕಾನ್ ಧಾರಯಂತೀಮಾನ್ ದೇವರ್ಷಿಗಣಸಂಕುಲಾನ್ ॥ ೧೦೧ ॥

---

೯೭. ವಸಿಷ್ಠ ಮುನಿಯಿಂದ ಕಪಿಂಜಲೀ ಅಥವಾ ಘೃತಾಚೀ ಎಂಬುವಳಲ್ಲಿ ಕುಣಿ ಎಂಬು ಪ್ರಸಿದ್ಧನಾಗಿ ಹುಟ್ಟಿರುವ ಪುತ್ರನು ಇಂದ್ರಪ್ರಮತಿ ಎಂದು ಕರೆಯಲ್ಪಡುವನು.

೯೮. ಅವನಿಗೆ ಪೃಥುರಾಜನ ಮಗಳಲ್ಲಿ ವಸು ಎಂಬುವನು ಪುತ್ರನಾಗಿ ಜನಿಸಿದನು. ಅವನಿಗೆ ಉಪಮನ್ಯು ಎಂಬ ಮಗನು ಹುಟ್ಟಿದನು. ಆವರಿಂದ ಹುಟ್ಟಿದ ವಂಶ ಪ್ರಜೆಗಳು ಔಪಮನ್ಯವ ಎಂದು ಪ್ರಸಿದ್ಧರಾಗಿರುವರು.

೯೯. ಮಿತ್ರಾವರುಣರಿಗೆ ಕುಂಡಿನೇಯ ಎಂದು ಪ್ರಸಿದ್ಧರಾದ ಮುನಿಗಳು ಸಂಬಂಧಿಗಳಾದರು. ಮತ್ತು ವಸಿಷ್ಠ ಎಂದು ಪ್ರಸಿದ್ಧರಾದ ಏಕಾರ್ಷೇಯಪ್ರವರ ಉಳ್ಳ ಇತರ ಮಹರ್ಷಿಗಳೂ ಸಂಬಂಧಿಗಳಾದರು.

೧೦೦. ಹೀಗೆ ವಸಿಷ್ಠ ಗೋತ್ರಜರ ಪಕ್ಷಗಳು. ಹನ್ನೊಂದಾಗಿ ಸ್ಮರಿಸಲ್ಪಟ್ಟವೆ. ಹೀಗೆ ಈ ಪ್ರಸಿದ್ಧರಾದ ಎಂಟು ಮಂದಿಯು ಬ್ರಹ್ಮನ ಮಾನಸಪುತ್ರರಾಗಿರುವುರು.

೧೦೧. ಇವರು ಮಹಾತ್ಮರೂ ಅನ್ಯೋನ್ಯ ಭ್ರಾತೃಗಳೂ ಆಗಿ ವಂಶವನ್ನು ಪ್ರತಿಷ್ಠೆಗೊಳಿಸಿದರು. ಮತ್ತು ದೇವ, ಋಷಿ ಇವರ ಗಣದಿಂದ ಕೂಡಿದ ಈ ತ್ರಿಲೋಕಗಳನ್ನು ಧರಿಸಿರುವರು.

**ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ।**
**ವ್ಯಾಪ್ತಾ ಯೈಸ್ತು ತ್ರಯೋ ಲೋಕಾಃ ಸೂರ್ಯಸ್ಯೇವ ಗಭಸ್ತಿಭಿಃ**
**॥ ೧೦೨ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಅಷ್ಟಮೋಽಧ್ಯಾಯಃ**

---

೧೦೨. ಅವರ ಪುತ್ರ-ಪೌತ್ರ ಮುಂತಾದ ಪ್ರಜೆಗಳು ಶತಸಹಸ್ರ ಸಂಖ್ಯೆಗಿಂತ ಹೆಚ್ಚಾಗಿ ಸೂರ್ಯನ ಕಿರಣಗಳಂತೆ ಮೂರು ಲೋಕಗಳನ್ನು ವ್ಯಾಪಿಸಿರುವರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

---

# ನವಮೋಽಧ್ಯಾಯಃ

**ಋಷಯ ಊಚುಃ :—**

**ಕಥಂ ದ್ವಿವಾರಮುತ್ಪನ್ನಾ ಭವಾನೀ ಪ್ರಾಕ್ ಸತೀ ತು ಯಾ ।**
**ಆಸೀದ್ದಾಕ್ಷಾಯಣೀ ಪೂರ್ವಮುಮಾ ಕಥಮಜಾಯತ ॥ ೧ ॥**

**ಮೇನಾಯಾಂ ಪಿತೃಕನ್ಯಾಯಾಂ ಜನಯನ್ ಶೈಲರಾಟ್ ಸ್ವಯಮ್ ।**
**ಕೇ ವೈ ತೇ ಪಿತರೋ ನಾಮ ಯೇಷಾಂ ಮೇನಾ ತು ಮಾನಸೀ ॥ ೨ ॥**

**ಮೈನಾಕಶ್ಚೈವ ದೌಹಿತ್ರೋ ದೌಹಿತ್ರೀ ಚ ತಥಾ ಹ್ಯುಮಾ ।**
**ಏಕಪರ್ಣಾ ತಥಾ ಚೈವ ತಥಾ ಚೈವೈಕಪಾಟಲಾ ॥ ೩ ॥**

**ಗಂಗಾ ಚಾಪಿ ಸರಿಚ್ಛ್ರೇಷ್ಠಾ ಸರ್ವಾಸಾಂ ಪೂರ್ವಜಾ ತಥಾ ।**
**ಸರ್ವಮೇತತ್ತ್ವಯೋದ್ದಿಷ್ಟಂ ನಿರ್ದೇಶಂ ತಸ್ಯ ನೋ ವದ ॥ ೪ ॥**

**ಶ್ರೋತುಮಿಚ್ಛಾಮಿ ಭದ್ರಂ ತೇ ಶ್ರಾದ್ಧಸ್ಯ ಚ ವಿಧಿಂ ಪರಮ್ ।**
**ಪುತ್ರಾಶ್ಚ ಕೇ ಸ್ಮೃತಾಸ್ತೇಷಾಂ ಕಥಂ ಚ ಪಿತರಸ್ತು ತೇ ॥ ೫ ॥**

---

೧. ಋಷಿಗಳು ಈರೀತಿಯಾಗಿ ಹೇಳಿದರು :—ಈಶ್ವರನ ಪತ್ನಿಯು ಪೂರ್ವದಲ್ಲಿ ದಕ್ಷಬ್ರಹ್ಮನ ಮಗಳಾದ ಸತೀದೇವಿಯಾಗಿ ಅವತರಿಸಿ ಮತ್ತೆ ಪಾರ್ವತೀ ರೂಪದಿಂದ ಎರಡನೆಯಅವರ್ತಿ ಹೇಗೆ ಜನ್ಮವೆತ್ತಿದಳು ?

೨. ಪರ್ವತರಾಜನಾದ ಹಿಮವಂತನು ಪಿತೃಗಳ ಕನ್ಯೆಯಾದ ಮೇನಾ ದೇವಿಯಲ್ಲಿ ತಾನಾಗಿ ಸಂತತಿಯನ್ನು ಹೊಂದಿದನು. ಹಾಗೆ ಮಾನಸಪುತ್ರಿಯನ್ನು ಹೊಂದಿರುವ ಆ ಪಿತೃದೇವತೆಗಳು ಯಾರು ?

೩. ಮತ್ತು ಮೈನಾಕಗಿರಿ, ಪಾರ್ವತಿ, ಏಕಪರ್ಣಾ ಮತ್ತು ಏಕಪಾಟಲಾ ಎಂಬುವರು ಆ ಪಿತೃದೇವತೆಗಳ ದೌಹಿತ್ರರಾಗಿ ಜನಿಸಿರುವರಲ್ಲವೆ.

೪. ಮತ್ತು ಎಲ್ಲಾನದಿಗಳಲ್ಲಿ ಪವಿತ್ರವಾದ ಗಂಗಾನದಿಯು ಈ ಎಲ್ಲ ದೌಹಿತ್ರರಲ್ಲಿ ಅಗ್ರಜಳಾಗಿರುವಳು. ಇದೆಲ್ಲವೂ ನಿನ್ನಿಂದ ಸಂಗ್ರಹವಾಗಿ ಹೇಳಲ್ಪಟ್ಟಿರುವುದು. ಇನ್ನುಮುಂದೆ ವಿಶೇಷ ನಿರ್ದೇಶವನ್ನು ಮಾಡು.

೫. ಮತ್ತು ಮುನಿಯೇ, ಶ್ರಾದ್ಧದ ಉತ್ತಮ ವಿಧಾನವನ್ನು ಕೇಳಬೇಕೆಂದು ಕುತೂಹಲಪಡುವೆನು,–ಆ ಪಿತೃಗಳಿಗೆ ಪುತ್ರರು ಯಾರೆಂದು ಸ್ಮರಿಸಲ್ಪಟ್ಟಿರುವರು ? ಅವರು ಪಿತೃಗಳಾದುದು ಹೇಗೆ ? ಇದನ್ನು ಹೇಳುವ ನಿನಗೆ ಮಂಗಳವಾಗಲಿ

ಕಥಂ ವಾ ತೇ ಸಮುತ್ಪನ್ನಾಃ ಕಿಂನಾಮಾನಃ ಕಿಮಾತ್ಮಕಾಃ ।
ಸ್ವರ್ಗೇ ವೈ ಪಿತರೋ ಹ್ಯೇತೇ ದೇವಾನಾಮಪಿ ದೇವತಾಃ ॥ ೬ ॥

ಏವಂ ವೇದಿತು ಮಿಚ್ಛಾಮಿ ಪಿತೄಣಾಂ ಸರ್ಗಮುತ್ತಮಮ್ ।
ಯಥಾ ಚ ದತ್ತಮಸ್ಮಾಭಿಃ ಶ್ರಾದ್ಧಂ ಪ್ರೀಣಾತಿ ವೈ ಪಿತೄನ್ ॥ ೭ ॥

ಯದರ್ಥಂ ತೇ ನ ದೃಶ್ಯಂತೇ ತತ್ರ ಕಿಂ ಕಾರಣಂ ಸ್ಮೃತಮ್ ।
ಸ್ವರ್ಗೇ ತು ಕೇ ಚ ವರ್ತಂತೇ ಪಿತರೋ ನರಕೇ ಚ ಕೇ ॥ ೮ ॥

ಅಭಿಸಂಭಾಷ್ಯ ಪಿತರಂ ಪಿತುಶ್ಚ ಪಿತರಂ ತಥಾ ।
ಪ್ರಪಿತಾಮಹಂ ತಥಾ ಚೈವ ತ್ರಿಷು ಪಿಂಡೇಷು ನಾಮತಃ ॥ ೯ ॥

ನಾಮ್ನಾ ದತ್ತಾನಿ ಶ್ರಾದ್ಧಾನಿ ಕಥಂ ಗಚ್ಛಂತಿ ವೈ ಪಿತೄನ್ ।
ಕಥಂ ಚ ಶಕ್ತಾಸ್ತೇ ದಾತುಂ ನರಕಸ್ಥಾಃ ಫಲಂ ಪುನಃ ॥ ೧೦ ॥

---

೬. ಆ ಪಿತೃಗಳು ಹೇಗೆ ಯಾವಹೆಸರಿನಿಂದ ಅಂಕಿತರಾಗಿ ಮತ್ತು ಯಾವ ಸ್ವರೂಪದಿಂದ ಜನಿಸಿದರು. ಸ್ವರ್ಗದಲ್ಲಿರುವ ಪಿತೃಗಳು ದೇವತೆಗಳಿಗೂ ದೇವತೆಗಳಾಗಿರುವರಲ್ಲವೇ.

೭. ಹೀಗೆ ಪಿತೃಗಳ ಉತ್ತಮವಾದ ಸೃಷ್ಟಿಕ್ರಮವನ್ನು ತಿಳಿಯಲು ಅಪೇಕ್ಷಿಸುತ್ತೇನೆ. ನಮ್ಮಿಂದ ಕೊಡಲ್ಪಟ್ಟ ಶ್ರಾದ್ಧದ ಹವಿಸ್ಸು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುದು ಹೇಗೆ ?

೮. ಆ ಪಿತೃಗಳು ಏತಕ್ಕೆ ಪ್ರತ್ಯಕ್ಷರಾಗುವುದಿಲ್ಲ ? ಅದಕ್ಕೆ ಕಾರಣವೇನು ಸ್ಮರಿಸಲ್ಪಟ್ಟಿದೆ ? ಸ್ವರ್ಗದಲ್ಲಿ ವಾಸಮಾಡುವ ಪಿತೃಗಳು ಯಾರು? ಹಾಗು ಯಾವ ಪಿತೃಗಳು ನರಕದಲ್ಲಿ ವಾಸಿಸುವರು ?

೯. ಶ್ರಾದ್ಧದಲ್ಲಿ ದಾನಮಾಡಿದ ಮೂರು ಪಿಂಡಗಳಲ್ಲಿ ಕ್ರಮವಾಗಿ ಪಿತೃ-ಪಿತಾಮಹ ಮತ್ತು ಪ್ರಪಿತಾಮಹರನ್ನು ನಾಮಕೀರ್ತನ ಪೂರ್ವಕವಾಗಿ ಉಚ್ಚರಿಸುವರಲ್ಲವೇ.

೧೦. ನಾಮವನ್ನುಚ್ಚರಿಸಿ ಶ್ರಾದ್ಧದಲ್ಲಿ ಕೊಟ್ಟ ಹವಿಸ್ಸು ಪಿತೃಗಳನ್ನು ಸೇರುವುದು ಹೇಗೆ? ಕರ್ಮಾನುಸಾರವಾಗಿ ನರಕದಲ್ಲಿರುವ ಪಿತೃಗಳು ತೃಪ್ತರಾಗಿ ಫಲವನ್ನು ಕೊಡಲು ಹೇಗೆ ಶಕ್ತರಾಗುವರು ?

**ಕೇ ಚ ತೇ ಪಿತರೋ ನಾಮ ಕಾನ್ ಯಜಾಮೋ ವಯಂ ಪುನಃ ।**
**ದೇವಾ ಅಪಿ ಪಿತೄನ್ ಸ್ವರ್ಗೇ ಯಜಂತೀತಿ ಹಿ ನಃ ಶ್ರುತಮ್॥ ೧೧ ॥**

**ಏತದಿಚ್ಛಾಮಿ ವೈ ಶ್ರೋತುಂ ವಿಸ್ತರೇಣ ಬಹುಶ್ರುತ ।**
**ಸ್ಪಷ್ಟಾಭಿಧಾನಮಪಿ ವೈ ತದ್ಭವಾನ್ ವಕ್ತುಮರ್ಹಸಿ ॥ ೧೨ ॥**

**ಸೂತ ಉವಾಚ :—**

**ಅತ್ರ ವಃಕೀರ್ತಯಿಷ್ಯಾಮಿ ಯಥಾಪ್ರಜ್ಞಂ ಯಥಾಶ್ರುತಮ್ ।**
**ಮನ್ವಂತರೇಷು ಜಾಯಂತೇ ಪಿತರೋ ದೇವಸೂನವಃ ॥ ೧೩ ॥**

**ಅತೀತಾನಾಗತಾಃ ಶ್ರೇಷ್ಠಾಃ ಕನಿಷ್ಠಾಃ ಕ್ರಮಶಸ್ತು ವೈ ।**
**ದೇವೈಃ ಸಾರ್ಧಂ ಪುರಾತೀತಾಃ ಪಿತರೋಽನ್ಯೇಽಂತರೇಷು ವೈ ॥ ೧೪ ॥**

**ವರ್ತಂತೇ ಸಾಂಪ್ರತಂ ಯೇ ತು ತಾನ್ ವೈ ವಕ್ಷ್ಯಾಮಿ ನಿಶ್ಚಯಾತ್ ।**
**ಶ್ರಾದ್ಧಕ್ರಿಯಾಂ ಮನುಶ್ಚೈಷಾಂ ಶ್ರಾದ್ಧದೇವಃ ಪ್ರವರ್ತಯೇತ್ ॥ ೧೫ ॥**

---

೧೧. ನಾವು ಭಕ್ತಿಯಿಂದ ಪೂಜಿಸಬೇಕೆಂದಿರುವ ಆ ಪಿತೃಗಳು ಯಾರು? ಸ್ವರ್ಗಲೋಕದಲ್ಲಿ ಪಿತೃಗಳನ್ನು ದೇವತೆಗಳುಕೂಡ ಆರಾಧಿಸುವರೆಂದು ಕೇಳುತ್ತೇವೆ.

೧೨. ಸರ್ವಜ್ಞನಾದ ಮುನಿಯೆ, ಇದೆಲ್ಲವನ್ನೂ ಸ್ಪಷ್ಟವಾಗಿ ಅರಿಯುವಂತೆ ನೀನು ಮಾಡುವ ವಿಸ್ತಾರವಾದ ಉಪದೇಶವನ್ನು ನಾನು ಕೇಳಬೇಕೆಂದು ಅಪೇಕ್ಷಿಸುತ್ತೇನೆ. ಆದುದರಿಂದ ನೀನು ಹೇಳಲು ಅರ್ಹನಾಗಿರುತ್ತೀ.

೧೩. ಸೂತಮುನಿಯು ಇಂತೆಂದನು :—ಈ ವಿಷಯದಲ್ಲಿ ನನ್ನ ಮೇಧಾಶಕ್ತಿ ಮತ್ತು ಶಾಸ್ತ್ರಾರ್ಥ ಪರಿಜ್ಞಾನಗಳನ್ನು ಅನುಸರಿಸಿ ಕೀರ್ತನೆ ಮಾಡುತ್ತೇನೆ. ಮನ್ವಂತರಗಳಲ್ಲಿ ಪಿತೃಗಳು ದೇವತೆಗಳಿಗೆ ಪುತ್ರರಾಗಿ ಜನಿಸಿರುವರು.

೧೪. ಹಿಂದೆ ಕಳೆದ ಮತ್ತು ಮುಂದೆ ಬರುವವರಲ್ಲಿ ಹಿರಿಯರು ಶ್ರೇಷ್ಠರೆಂದೂ ಕಿರಿಯರು ಕನಿಷ್ಠರೆಂದೂ ಕ್ರಮವಾಗಿ ತಿಳಿಯಬೇಕು. ಹಿಂದಿನ ಮನ್ವಂತರಗಳಲ್ಲಿ ದೇವತೆಗಳ ಸಂಗಡ ಅನೇಕ ಪಿತೃಗಳು ಕಳೆದಿರುವರು.

೧೫. ಈಗ ಇರುವ ಪಿತೃದೇವತೆಗಳನ್ನು ನಿರ್ಣಯಪೂರ್ವಕವಾಗಿ ಪ್ರತಿಪಾದಿಸುವೆನು. ಇವರನ್ನು ಉದ್ದೇಶಿಸಿ ಕರ್ತವ್ಯವಾದ ಶ್ರಾದ್ಧಕ್ರಿಯೆಯನ್ನು ವೈವಸ್ವತ ಮನುವು ಪ್ರವರ್ತಿಸಿರುವನು.

ದೇವಾನ್ ಸೃಜತ ಬ್ರಹ್ಮಾ ಮಾಂ ಯಕ್ಷ್ಯಂತೀತಿ ಚ ವೈ ಪ್ರಭುಃ ।
ತಮುತ್ಸೃಜ್ಯ ತದಾತ್ಮಾನಮಯಜಂಸ್ತೇ ಫಲಾರ್ಥಿನಃ ॥ ೧೬ ॥

ತೇ ಶಪ್ತಾ ಬ್ರಹ್ಮಣಾ ಮೂಢಾ ನಷ್ಟಸಂಜ್ಞಾ ಭವಿಷ್ಯಥ ।
ತಸ್ಮಾತ್ ಕಿಂ ಚಿನ್ನ ಜಾನೀತ ತತೋ ಲೋಕೇಷು ಮುಹ್ಯತ ॥ ೧೭ ॥

ತೇ ಭೂಯಃ ಪ್ರಣತಾಃ ಸರ್ವೇ ಯಾಚಂತಿ ಸ್ಮ ಪಿತಾಮಹಮ್ ।
ಅನುಗ್ರಹಾಯ ಲೋಕಾನಾಂ ಪುನಸ್ತಾನಬ್ರವೀತ್ ಪ್ರಭುಃ ॥ ೧೮ ॥

ಪ್ರಾಯಶ್ಚಿತ್ತಂ ಚರಧ್ವಂ ವೈ ವ್ಯಭಿಚಾರೋ ಹಿ ವಃ ಕೃತಃ ।
ಪುತ್ರಾನ್ ಸ್ವಾನ್ ಪರಿಪೃಚ್ಛಧ್ವಂ ತತೋ ಜ್ಞಾನಮವಾಪ್ಸ್ಯಥ ॥ ೧೯ ॥

ತತಸ್ತೇ ಸ್ವಸುತಾಂಶ್ಚೈವ ಪ್ರಾಯಶ್ಚಿತ್ತಜಿಘೃಕ್ಷವಃ ।
ಅಪೃಚ್ಛನ್ ಸಂಯತಾತ್ಮಾನೋ ವಿಧಿವಚ್ಚ ಮಿಥೋ ಮಿಥಃ ॥ ೨೦ ॥

---

೧೬. ಪ್ರಭುವಾದ ಬ್ರಹ್ಮನು ತನ್ನನ್ನು ಪೂಜಿಸಬೇಕೆಂದು ದೇವತೆಗಳನ್ನು ಸೃಷ್ಟಿಸಿದನು. ಆದರೆ ಆ ದೇವತೆಗಳು ಫಲಾರ್ಥಿಗಳಾಗಿ ಅವನನ್ನು ಬಿಟ್ಟು ಆತ್ಮನನ್ನು ಪೂಜಿಸಿದರು.

೧೭. ಆಗ ಬ್ರಹ್ಮನಿಂದ ಆ ದೇವತೆಗಳು ಈ ರೀತಿಯಾಗಿ ಶಪಿಸಲ್ಪಟ್ಟರು. ನೀವು ಮೂಢರೂ, ನಷ್ಟವಾದ ಬುದ್ಧಿ ಯುಳ್ಳವರೂ, ಆಗಿರಿ. ಆದರಿಂದ ಲೋಕಗಳಲ್ಲಿ ಯಾವುದನ್ನೂ ಅರಿಯದಂತೆ ಮೋಹ ಹೊಂದುತ್ತೀರಿ.

೧೮. ಆಗ ಅವರೆಲ್ಲರೂ ನಮಸ್ಕಾರಮಾಡಿ ಮತ್ತೆ ಬ್ರಹ್ಮನನ್ನು ಕುರಿತು ಪ್ರಾರ್ಥಿಸಿಕೊಂಡರು. ಬ್ರಹ್ಮನು ಮತ್ತೆ ಲೋಕಾನುಗ್ರಹಕ್ಕೆ ಈ ರೀತಿಯಾಗಿ ಹೇಳಿದನು.

೧೯. ನೀವು ವ್ಯಭಿಚಾರದೋಷಕ್ಕೆ ಪಾತ್ರರಾಗಿರುವುದರಿಂದ ಪ್ರಾಯಶ್ಚಿತ್ತವನ್ನು ಆಚರಿಸಿ. ಅದಕ್ಕೋಸ್ಕರ ನಿಮ್ಮ ಪುತ್ರರನ್ನು ಕುರಿತು ಪ್ರಶ್ನೆ ಮಾಡಿರಿ. ಅದರಿಂದ ಜ್ಞಾನವನ್ನು ಹೊಂದುತ್ತೀರಿ.

೨೦. ಆಗ ಜಿತೇಂದ್ರಿಯರಾದ ಆ ದೇವತೆಗಳು ವಿಧಿಪೂರ್ವಕವಾಗಿ ಅನ್ಯೋನ್ಯವಾಗಿ ಸೇರಿ ಪ್ರಾಯಶ್ಚಿತ್ತವನ್ನು ಅರಿಯಬೇಕೆಂಬ ಆಸೆಯಿಂದ ತಮ್ಮ ಪುತ್ರರನ್ನು ಪ್ರಶ್ನೆಮಾಡಿದರು.

ತೇಭ್ಯಸ್ತೇ ನಿಯತಾತ್ಮಾನಃ ಪುತ್ರಾಃ ಶಂಸುರನೇಕಧಾ ।
ಪ್ರಾಯಶ್ಚಿತ್ತಾನಿ ಧರ್ಮಜ್ಞಾ ವಾಙ್ಮನಃಕರ್ಮಜಾನಿ ಚ ॥ ೨೦ ॥

ತೇ ಪುತ್ರಾನಬ್ರುವನ್ ಪ್ರೀತಾ ಲಬ್ಧಸಂಜ್ಞಾ ದಿವೌಕಸಃ ।
ಯೂಯಂ ವೈ ಪಿತರೋಽಸ್ಮಾಕಂ ಯೈರ್ವಯಂ ಪ್ರತಿಬೋಧಿತಾಃ ॥ ೨೧ ॥

ಧರ್ಮಂ ಜ್ಞಾನಂ ಚ ವೈರಾಗ್ಯಂ ಕೋ ವರೋ ವಃ ಪ್ರದೀಯತಾಮ್ ।
ಪುನಸ್ತಾನಬ್ರವೀದ್ಬ್ರಹ್ಮಾ ಯೂಯಂ ವೈ ಸತ್ಯವಾದಿನಃ ॥ ೨೨ ॥

ತಸ್ಮಾದ್ಯದುಕ್ತಂ ಯುಷ್ಮಾಭಿಸ್ತತ್ತಥಾ ನ ತದನ್ಯಥಾ ।
ಉಕ್ತಂ ಚ ಪಿತರೋಽಸ್ಮಾಕಂ ಚೇತಿ ವೈ ತನಯಾಃ ಸ್ವಕಾಃ ॥ ೨೩ ॥

ಪಿತರಸ್ತೇ ಭವಿಷ್ಯಂತಿ ತೇಭ್ಯೋಽಯಂ ದೀಯತಾಂ ವರಃ ।
ತೇನೈವ ವಚಸಾ ತೇ ವೈ ಬ್ರಹ್ಮಣಃ ಪರಮೇಷ್ಠಿನಃ ॥ ೨೪ ॥

---

೨೦. ಆಗ ಆ ಪುತ್ರರು ಪವಿತ್ರವಾದ ಅಂತಃಕರಣ ವುಳ್ಳವರಾಗಿ ಮತ್ತು ಧರ್ಮಜ್ಞರಾಗಿ ಆ ಪಿತೃದೇವತೆಗಳಿಗೆ ವಾಚಿಕ, ಕಾಯಿಕ ಮತ್ತು ಮಾನಸಿಕಗಳೆಂಬ ಪ್ರಾಯಶ್ಚಿತ್ತಗಳನ್ನು ಅನೇಕ ವಿಧವಾಗಿ ಹೇಳಿದರು.

೨೧. ಆಗ ಆ ದೇವತೆಗಳು ಹೊಂದಿದ ಜ್ಞಾನೋದಯ ವುಳ್ಳವರಾಗಿ ಪ್ರೀತಿಯಿಂದ ಪುತ್ರರನ್ನು ಕುರಿತು ಇಂತೆಂದರು. ನೀವು ನಮಗೆ ಜ್ಞಾನದಾನ ಮಾಡಿರುವುದರಿಂದ ಪಿತೃಗಳಾಗಿ ಇರುವಿರಿ.

೨೨. ಆದುದರಿಂದ ಧರ್ಮ, ಜ್ಞಾನ ಮತ್ತು ವೈರಾಗ್ಯಗಳಲ್ಲಿ ಯಾವ ವರವನ್ನು ಕೊಡೋಣ, ಹೀಗೆ ಹೇಳಲು ಬ್ರಹ್ಮನು ಆ ದೇವತೆಗಳನ್ನು ಕುರಿತು ಈ ರೀತಿಯಾಗಿ ಹೇಳಿದನು. ನೀವು ಸತ್ಯವಾದಿಗಳು.

೨೩. ಆದುದರಿಂದ ನಿಮ್ಮಿಂದ ಹೇಳಲ್ಪಟ್ಟ ವಚನವು ಹಾಗೆಯೇ ನಡೆಯುವುದು. ಬೇರೊಂದು ಆಗುವುದಿಲ್ಲ. ನಿಮ್ಮ ಪುತ್ರರನ್ನು ನೀವು ಪಿತೃಗಳೆಂದು ಹೇಳಿರುತ್ತೀರಿ.

೨೪. ಆದುದರಿಂದ ಅವರು ನಿಮಗೆ ಪಿತೃಗಳಾಗಿರುವರು. ಈ ವರವು ಅವರಿಗೆ ಕೊಡಲ್ಪಡಲಿ. ಹೀಗೆಂದು ಪರಮಸ್ಥಾನದಲ್ಲಿ ಪೂಜ್ಯನಾಗಿರುವ ಬ್ರಹ್ಮನು ಮಾತನಾಡಿದನು.

ಪುತ್ರಾಃ ಪಿತೃತ್ವಮಾಜಗ್ಮುಃ ಪುತ್ರತ್ವಂ ಪಿತರಃ ಪುನಃ ।
ತಸ್ಮಾತ್ತೇ ಪಿತರಃ ಪುತ್ರಾಃ ಪಿತೃತ್ವಂ ತೇಷು ತತ್ ಸ್ಮೃತಮ್॥ ೨೬ ॥

ಏವಂ ಸೃತ್ವಾ ಪಿತೄನ್ ಪುತ್ರಾಃ ಪುತ್ರಾಂಶ್ಚೈವ ಪಿತೄಂಸ್ತಥಾ ।
ವ್ಯಾಜಹಾರ ಪುನರ್ಬ್ರಹ್ಮಾ ಪಿತೄನಾತ್ಮವಿವೃದ್ಧಯೇ ॥ ೨೭ ॥

ಯೋ ಹ್ಯನಿಷ್ಟ್ವಾನ್ ಪಿತೄನ್ ಶ್ರಾದ್ಧೇ ಕ್ರಿಯಾಂ ಕಾಂಚಿತ್ಕರಿಷ್ಯತಿ ।
ರಾಕ್ಷಸಾ ದಾನವಾಶ್ಚೈವ ಫಲಂ ಪ್ರಾಪ್ಸ್ಯಂತಿ ತಸ್ಯ ತತ್ ॥ ೨೮ ॥

ಶ್ರಾದ್ಧೈರಾಪ್ಯಾಯಿತಾಶ್ಚೈವ ಪಿತರಃ ಸೋಮಮವ್ಯಯಮ್ ।
ಆಪ್ಯಾಯಮಾನಾ ಯುಷ್ಮಾಭಿರ್ವರ್ಧಯಿಷ್ಯಂತಿ ನಿತ್ಯಶಃ ॥ ೨೯ ॥

ಶ್ರಾದ್ಧೈರಾಪ್ಯಾಯಿತಃ ಸೋಮೋ ಲೋಕಾನಾಪ್ಯಾಯಯಿಷ್ಯತಿ ।
ಕೃತ್ಸ್ನಂ ಸಪರ್ವತವನಂ ಜಂಗಮಾಜಂಗಮೈರ್ವೃತಮ್ ॥ ೩೦ ॥

---

೨೬. ಆದರಿಂದ ಆ ಪುತ್ರರು ಪಿತೃತ್ವವನ್ನೂ ಪಿತೃಗಳು ಮತ್ತೆ ಪುತ್ರತ್ವವನ್ನೂ ಹೊಂದಿದರು. ಹೀಗೆ ಪಿತೃಗಳು ಪುತ್ರರಾಗಿ ಅವರಲ್ಲಿ ಪಿತೃತ್ವವು ಕೂಡ ಸ್ಮರಿಸಲ್ಪಟ್ಟಿದೆ.

೨೭. ಈ ರೀತಿಯಲ್ಲಿ ಬ್ರಹ್ಮನು ಪಿತೃಗಳನ್ನು ಪುತ್ರರೆಂದೂ ಅವರನ್ನು ಮತ್ತೆ ಪಿತೃಗಳೆಂದೂ ತನ್ನ ಸಂತತಿ ವೃದ್ಧಿಗೋಸ್ಕರ ಪಿತೃಗಳ ವಿಷಯದಲ್ಲಿ ಮಾತನಾಡಿದನು.

೨೮. ಯಾವ ಮಾನವನು ಶ್ರಾದ್ಧದಲ್ಲಿ ಪಿತೃಗಳನ್ನು ಅರ್ಚಿಸದೆ ಯಾವುದಾದರೊಂದು ಸತ್ಕರ್ಮವನ್ನು ಆಚರಿಸುವನೋ ಆ ಸತ್ಕರ್ಮದ ಫಲವನ್ನು ರಾಕ್ಷಸ ಅಥವಾ ದಾನವರು ಅಪಹರಿಸುವರು.

೨೯. ಅಂತಹ ಪಿತೃಗಳು ನಿಮ್ಮಿಂದ ಶ್ರಾದ್ಧದಿಂದ ತೃಪ್ತಿಗೊಳಿಸಲ್ಪಟ್ಟವರಾಗಿ ತಮ್ಮ ರಾಜನೂ, ಶಾಶ್ವತನೂ ಆದ ಸೋಮನನ್ನು ಆಪ್ಯಾಯನ ಮಾಡುತ್ತ ಪ್ರತಿ ದಿನವೂ ವೃದ್ಧಿಗೊಳಿಸುವರು.

೩೦. ಶ್ರಾದ್ಧಕರ್ಮಗಳಿಂದ ಆಪ್ಯಾಯನಮಾಡಲ್ಪಟ್ಟ ಚಂದ್ರನು ಲೋಕಗಳನ್ನೂ ಮತ್ತು ಅನೇಕ ಪರ್ವತ, ಅರಣ್ಯ, ಸ್ಥಾವರ, ಜಂಗಮಗಳಿಂದ ಕೂಡಿದ ಸಮಸ್ತ ಭುವನವನ್ನೂ ಆಪ್ಯಾಯನಮಾಡುವನು.

ಶ್ರಾದ್ಧಾನಿ ಪುಷ್ಟಿಕಾಮಾಶ್ಚ ಯೇ ಕರಿಷ್ಯಂತಿ ಮಾನವಾಃ ।
ತೇಭ್ಯಃ ಪುಷ್ಟಿಂ ಪ್ರಜಾಶ್ಚೈವ ದಾಸ್ಯಂತಿ ಪಿತರಃ ಸದಾ ॥ ೩೧ ॥

ಶ್ರಾದ್ಧೇ ಯೇಭ್ಯಃ ಪ್ರದಾಸ್ಯಂತಿ ತ್ರೀನ್ ಪಿಂಡಾನ್ನಾಮಗೋತ್ರತಃ ।
ಸರ್ವತ್ರ ವರ್ತಮಾನಾಸ್ತೇ ಪಿತರಃ ಪ್ರಪಿತಾಮಹಾಃ ॥ ೩೨ ॥

ತೇಷಾಮಾಪ್ಯಾಯಯಿಷ್ಯಂತಿ ಶ್ರಾದ್ಧದಾನೇನ ವೈ ಪ್ರಜಾಃ ।
ಏವಮಾಜ್ಞಾ ಕೃತಾ ಪೂರ್ವಂ ಬ್ರಹ್ಮಣಾ ಪರಮೇಷ್ಠಿನಾ ॥ ೩೩ ॥

ತೇನೈತತ್ ಸರ್ವಥಾ ಸಿದ್ಧಂ ದಾನಮಧ್ಯಯನಂ ತಪಃ ।
ತೇ ತು ಜ್ಞಾನಪ್ರದಾತಾರಃ ಪಿತರೋ ವೋ ನ ಸಂಶಯಃ ॥ ೩೪ ॥

ಇತ್ಯೇತೇ ಪಿತರೋ ದೇವಾ ದೇವಾಶ್ಚ ಪಿತರಃ ಪುನಃ ।
ಅನ್ಯೋಽನ್ಯಪಿತರೋ ಹ್ಯೇತೇ ದೇವಾಶ್ಚ ಪಿತರಶ್ಚ ಹ ॥ ೩೫ ॥

---

೩೧. ಯಾವ ಮಾನವರು ಪುಷ್ಟಿಯನ್ನು ಅಪೇಕ್ಷಿಸಿ ಶ್ರಾದ್ಧಕರ್ಮವನ್ನು ಆಚರಿಸುವರೋ ಅವರಿಗೆ ಪಿತೃಗಳು ಸಂತುಷ್ಟರಾಗಿ ಪ್ರಜಾ ಮತ್ತು ಪುಷ್ಟಿಗಳನ್ನು ಫಲವನ್ನಾಗಿ ಕೊಡುವರು.

೩೨. ಶ್ರಾದ್ಧದಲ್ಲಿ ಯಾವ ಪಿತೃಗಳಿಗೆ ನಾಮ-ಗೋತ್ರಗಳನ್ನು ಉಚ್ಚರಿಸಿ ಮೂರು ಪಿಂಡಗಳನ್ನು ದಾನಮಾಡುವರೊ ಆ ಪಿತೃಗಳು ಪ್ರಪಿತಾ ಮಹಾದಿ ವರ್ಗದಿಂದ ಕೂಡಿ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವರು.

೩೩. ಮತ್ತು ಆ ಶ್ರಾದ್ಧದಾನದಿಂದ ತೃಪ್ತರಾಗಿ ಪ್ರಜೆಗಳನ್ನು ವೃದ್ಧಿಗೊಳಿಸುವರು. ಈ ರೀತಿಯಾಗಿ ಪರಮಸ್ಥಾನದಲ್ಲಿ ಮಾನ್ಯನಾದ ಬ್ರಹ್ಮನಿಂದ ಪೂರ್ವದಲ್ಲಿ ಆಜ್ಞೆಯು ಕೊಡಲ್ಪಟ್ಟಿರುವುದು.

೩೪. ಆದುದರಿಂದ ದಾನ ಅಧ್ಯಯನ ಮತ್ತು ತಪಸ್ಸು ಕೂಡ ಇದರಿಂದ ಫಲಿಸುವುದು. ಜ್ಞಾನ ಪ್ರದಾನಮಾಡಿದ ಆ ಪುತ್ರರು ನಿಮಗೆ ಪಿತೃಗಳೆಂಬುದರಲ್ಲಿ ಸಂಶಯವಿಲ್ಲ.

೩೫. ಹೀಗೆ ಇವರು ಪಿತೃಗಳಾಗಿ ದೇವತೆಗಳೂ ದೇವತೆಗಳಾಗಿ ಪಿತೃಗಳೂ ರೂಪಾಂತರ ಹೊಂದಿರುವರು. ಹೀಗೆ ದೇವ ಮತ್ತು ಪಿತೃಗಳು ಪರಸ್ಪರವಾಗಿ ಪಿತಾ ಪುತ್ರ ಭಾವವನ್ನು ಹೊಂದಿರುವರು.

ಏತದ್ಬ್ರಹ್ಮವಚಃ ಶ್ರುತ್ವಾ ಸೂತಸ್ಯ ವಿದಿತಾತ್ಮನಃ ।
ಪಪ್ರಚ್ಛುರ್ಮುನಯೋ ಭೂಯಃ ಸೂತಂ ತಸ್ಮಾದ್ಯದುತ್ತರಮ್ ॥ ೩೬ ॥

ಋಷಯ ಊಚುಃ :—

ಕಿಯಂತೋ ವೈ ಮುನಿಗಣಾಃ ಕಸ್ಮಿನ್ ಕಾಲೇ ಚ ತೇ ಗಣಾಃ ।
ಪೂರ್ವೇ ತು ದೇವಪ್ರವರಾ ದೇವಾನಾಂ ಸೋಮವರ್ಧನಾಃ ॥ ೩೭ ॥

ಸೂತ ಉವಾಚ :—

ಏತದ್ವೋಽಹಂ ಪ್ರವಕ್ಷ್ಯಾಮಿ ಪಿತೃಸರ್ಗಮನುತ್ತಮಮ್ ।
ಶಂಯುಃ ಪಪ್ರಚ್ಛ ಯತ್ ಪೂರ್ವಂ ಪಿತರಂ ವೈ ಬೃಹಸ್ಪತಿಮ್ ॥ ೩೮ ॥

ಬೃಹಸ್ಪತಿಮುಪಾಸೀನಂ ಸರ್ವಜ್ಞಾನಾರ್ಥಕೋವಿದಮ್ ।
ಪುತ್ರಃ ಶಂಯುರಿಮಂ ಪ್ರಶ್ನಂ ಪಪ್ರಚ್ಛ ವಿನಯಾನ್ವಿತಃ ॥ ೩೯ ॥

---

೩೬. ಈ ಬ್ರಹ್ಮನ ಆದೇಶರೂಪವಾದ ವಚನವನ್ನು ಆತ್ಮಜ್ಞನಾದ ಸೂತ ಮುನಿಯಿಂದ ಕೇಳಿ ಮುನಿಗಳು ಅದರ ಮುಂದಿನ ವಿಷಯದಲ್ಲಿ ಸೂತ ಮುನಿಯನ್ನು ಕುರಿತು ಮತ್ತೆ ಪ್ರಶ್ನಿಸಿದರು.

೩೭. ಋಷಿಗಳು ಹೀಗೆ ಪ್ರಶ್ನಿಸಿದರು :—ಮುನಿಗಳ ಗಣಗಳು ಎಷ್ಟು ಮತ್ತು ಆ ಗಣಗಳು ಯಾವ ಕಾಲದಲ್ಲಿ ಇದ್ದುವು? ಸೋಮನನ್ನು ವೃದ್ಧಿಪಡಿಸುವ ದೇವತೆಗಳಲ್ಲೆಲ್ಲಾ ಉತ್ತಮರಾದ ಪೂರ್ವದೇವತೆಗಳು ಯಾರು ?

೩೮. ಸೂತಮುನಿಯು ಉತ್ತರವಿತ್ತನು :—ಪೂರ್ವದಲ್ಲಿ ತಂದೆಯಾದ ಬೃಹಸ್ಪತಿಯನ್ನು ಕುರಿತು ಶಂಯು ಎಂಬುವನು ಕೇಳಿದ ಪ್ರಶ್ನೋತ್ತರ ಸಂವಾದಗಳಿಂದ ಶ್ರೇಷ್ಠವಾದ ಈ ಪಿತೃಸೃಷ್ಟಿಯನ್ನು ನಿಮಗೆ ಹೇಳುತ್ತೇನೆ.

೩೯. ಸರ್ವಜ್ಞಾನ ಮತ್ತು ಅರ್ಥ ವೈಶಾರದ್ಯಗಳಿಂದ ಕೂಡಿ ಕುಳಿತುಕೊಂಡಿರುವ ಬೃಹಸ್ಪತಿಯನ್ನು ಕುರಿತು ಒಂದು ಸಮಯದಲ್ಲಿ ಶಂಯು ಎಂಬ ಪುತ್ರನು ವಿನಯದಿಂದ ಕೂಡಿ ಹೀಗೆ ಪ್ರಶ್ನಿಸಿದನು.

ಕ ಏತೇ ಪಿತರೋ ನಾಮ ಕಿಯಂತಃ ಕೇ ಚ ನಾಮತಃ ।
ಸಮುದ್ಭೂತಾಃ ಕಥಂ ಚೈತೇ ಪಿತೃತ್ವಂ ಸಮುಪಾಗತಾಃ ॥ ೪೦ ॥

ಕಸ್ಮಾಚ್ಚ ಪಿತರಃ ಪೂರ್ವಂ ಯಜ್ಞಂ ಪುಷ್ಣಂತಿ ನಿತ್ಯಶಃ ।
ಕ್ರಿಯಾಶ್ಚ ಸರ್ವಾ ವರ್ತಂತೇ ಶ್ರಾದ್ಧಪೂರ್ವಾ ಮಹಾತ್ಮನಾಮ್॥ ೪೧ ॥

ಕಸ್ಮೈ ಶ್ರಾದ್ಧಾನಿ ದೇಯಾನಿ ಕಿಂ ಚ ದತ್ತೇ ಮಹಾಫಲಮ್ ।
ಕೇಷು ಚಾಪ್ಯಕ್ಷಯಂ ಶ್ರಾದ್ಧಂ ತೀರ್ಥೇಷು ಚ ನದೀಷು ಚ ॥ ೪೨ ॥

ಕೇಷು ವೈ ಸರ್ವಮಾಪ್ನೋತಿ ಶ್ರಾದ್ಧಂ ಕೃತ್ವಾ ದ್ವಿಜೋತ್ತಮಃ ।
ಕಶ್ಚ ಕಾಲೋ ಭವೇಚ್ಛ್ರಾದ್ಧೇ ವಿಧಿಃ ಕಶ್ಚಾನುವರ್ತತೇ ॥ ೪೩ ॥

ಏತದಿಚ್ಛಾಮಿ ಭಗವನ್ ವಿಸ್ತರೇಣ ಯಥಾ ತಥಾ ।
ವ್ಯಾಖ್ಯಾತಮಾನುಪೂರ್ವ್ಯೇಣ ಯತ್ರ ಚೋದಾಹೃತಂ ಮಯಾ॥ ೪೪ ॥

---

೪೦. ಈ ಪಿತೃಗಳೆಂಬುವರು ಯಾರು? ಇವರು ಎಷ್ಟು ಮಂದಿ? ಇವರ ಪ್ರತ್ಯೇಕ ಹೆಸರುಗಳೇನು? ಇವರು ಹುಟ್ಟಿರುವುದು ಮತ್ತು ಪಿತೃತ್ವವನ್ನು ಹೊಂದಿರುವುದು ಹೇಗೆ?

೪೧. ಆ ಪಿತೃಗಳು ಪೂರ್ವದಲ್ಲಿ ಯಾವಾಗಲೂ ಯಜ್ಞಕರ್ಮವನ್ನು ಏತಕ್ಕೆ ಪರಿಪೋಷಿಸುತ್ತಿದ್ದರು? ಮತ್ತು ಆ ಮಹಾತ್ಮರ ಕರ್ಮಗಳು ಶ್ರಾದ್ಧಪೂರ್ವಕವಾಗಿ ಇರಲು ಕಾರಣವೇನು?

೪೨. ಯಾವ ಪಿತೃದೇವತೆಗೆ ಶ್ರಾದ್ಧದ ಹವಿಸ್ಸನ್ನು ಕೊಡಬೇಕು? ಆ ಶ್ರಾದ್ಧಾನುಷ್ಠಾನವು ಯಾವ ಮಹಾಫಲವನ್ನು ಕೊಡುವುದು? ಮತ್ತು ಯಾವ ನದಿ ಅಥವಾ ಪುಣ್ಯಕ್ಷೇತ್ರಗಳಲ್ಲಿ ಮಾಡಿದ ಶ್ರಾದ್ಧವು ಅಕ್ಷಯವಾಗುವುದು?

೪೩. ಯಾವ ಕ್ಷೇತ್ರಗಳಲ್ಲಿ ಶ್ರಾದ್ಧಮಾಡಿದ ಬ್ರಾಹ್ಮಣೋತ್ತಮನು ಸರ್ವಫಲಗಳನ್ನು ಅನುಭವಿಸುವನು? ಮತ್ತು ಶ್ರಾದ್ಧಕ್ಕೆ ವಿಹಿತವಾದ ಕಾಲ ಮತ್ತು ವಿಧಿಯು ಯಾವುದು ಅನುವರ್ತಿಸುವುದು?

೪೪. ಪೂಜ್ಯನೇ! ನಿನ್ನಿಂದ ಕ್ರಮವಾಗಿ ಮತ್ತು ವಿಸ್ತಾರವಾಗಿ ವರ್ಣಿಸಲ್ಪಟ್ಟ ನನ್ನ ಜಿಜ್ಞಾಸಿತವಾದ ಈ ವಿಷಯಗಳನ್ನು ಯಥಾವತ್ತಾಗಿ ತಿಳಿಯಲು ಅಪೇಕ್ಷಿಸುತ್ತೇನೆ.

ಬೃಹಸ್ಪತಿರಿದಂ ಸಮ್ಯಗೇವಂ ಪೃಷ್ಟೋ ಮಹಾಮತಿಃ ।
ವ್ಯಾಜಹಾರಾನುಪೂರ್ವ್ಯೇಣ ಪ್ರಶ್ನಂ ಪ್ರಶ್ನವಿದಾಂ ವರಃ ॥ ೪೫ ॥

ಬೃಹಸ್ಪತಿರುವಾಚಃ :—
ಕಥಯಿಷ್ಯಾಮಿ ತೇ ತಾತ ಯನ್ಮಾಂ ತ್ವಂ ಪರಿಪೃಚ್ಛಸಿ ।
ವಿನಯೇನ ಯಥಾನ್ಯಾಯಂ ಗಂಭೀರಂ ಪ್ರಶ್ನಮುತ್ತಮಮ್ ॥ ೪೬ ॥

ದ್ಯೌರಂತರಿಕ್ಷಂ ಪೃಥಿವೀ ನಕ್ಷತ್ರಾಣಿ ದಿಶಸ್ತಥಾ ।
ಸೂರ್ಯಾಚಂದ್ರಮಸೌ ಚೈವ ತಥಾಹೋರಾತ್ರಮೇವ ಚ ॥ ೪೭ ॥

ನ ಬಭೂವುಸ್ತದಾ ತಾತ ತಮೋಭೂತಮಭೂಜ್ಜಗತ್ ।
ಬ್ರಹ್ಮೈಕೋ ದುಶ್ಚರಂ ತತ್ರ ತತಾಪ ಪರಮಂ ತಪಃ ॥ ೪೮ ॥

ಶಂಯುಸ್ತಮಬ್ರವೀದ್ಭೂಯಃ ಪಿತರಂ ಬ್ರಹ್ಮವಿತ್ತಮಮ್ ।
ಸರ್ವವೇದವ್ರತಸ್ನಾತಃ ಸರ್ವಜ್ಞಾನವಿದಾಂ ವರಃ ॥ ೪೯ ॥

---

೪೫. ಈರೀತಿಯಾಗಿ ಚನ್ನಾಗಿ ಪ್ರಶ್ನೆಮಾಡಲ್ಪಟ್ಟ ಮಹಾ ಮೇಧಾವಿಯಾದ ಬೃಹಸ್ಪತಿಯು ಪ್ರಶ್ನಾರ್ಥಗಳನ್ನು ತಿಳಿದವರಲ್ಲಿ ಶ್ರೇಷ್ಠನಾಗಿ ಕ್ರಮವಾಗಿ ಪ್ರಶ್ನೆಗಳಿಗೆ ಉತ್ತರವೀಯಲಾರಂಭಿಸಿದನು.

೪೬. ಬೃಹಸ್ಪತಿಯು ಇಂತೆಂದನು :—ವತ್ಸನೇ, ವಿನಯದಿಂದ ನ್ಯಾಯವನ್ನನುಸರಿಸಿ ಉತ್ತಮವೂ ಗಂಭೀರವೂ ಆದ ನೀನು ಕೇಳುವ ಪ್ರಶ್ನೆಗೆ ಉತ್ತರವನ್ನು ಹೇಳುವೆನು, ಕೇಳು.

೪೭. ಸೃಷ್ಟಿಯ ಪೂರ್ವದಲ್ಲಿ ದ್ಯುಲೋಕ, ಅಂತರಿಕ್ಷಲೋಕ, ಪೃಥಿವೀ, ನಕ್ಷತ್ರ, ದಿಕ್, ಸೂರ್ಯ, ಚಂದ್ರ, ಅಹಸ್ಸು, ಮತ್ತು ರಾತ್ರಿ ಇದಾವುದೂ ಬೇರೆಯಾಗಿರಲಿಲ್ಲ.

೪೮. ಶಿಷ್ಯನೇ, ಈ ಯಾವುದೊಂದು ವಸ್ತುವೂ ಇಲ್ಲದೆ ಎಲ್ಲ ಜಗತ್ತೂ ತಮಸ್ಸಿನಿಂದ ವ್ಯಾಪಿಸಲ್ಪಟ್ಟಿತ್ತು. ಆ ಸಮಯದಲ್ಲಿ ಬ್ರಹ್ಮನು ಏಕಾಕಿಯಾಗಿ ಕಠಿಣವೂ ಶ್ರೇಷ್ಠವೂ ಆದ ತಪಸ್ಸನ್ನು ಆಚರಿಸಿದನು.

೪೯. ಆಗ ಸಕಲ ವೇದಗಳ ಅಧ್ಯಯನ ವ್ರತದಿಂದ ಸಮಾವರ್ತನ ಹೊಂದಿದ ಮತ್ತು ಸರ್ವಜ್ಞಾನಿಗಳಲ್ಲಿ ಶ್ರೇಷ್ಠನಾದ ಶಂಯುವು ಆ ಬ್ರಹ್ಮಜ್ಞಾನಿಯಾದ ತಂದೆಯನ್ನು ಕುರಿತು ಸಕಲ ಭೂತೇಶ್ವರನಾದ ಪ್ರಜಾಪತಿಯು ಯಾವ ತಪಸ್ಸನ್ನು ಮಾಡಿದನೆಂದು ಪ್ರಶ್ನಿಸಿದನು.

ಬೃಹಸ್ಪತಿರುವಾಚ :—
ಸರ್ವೇಷಾಂ ತಪಸಾಂ ಯತ್ತತ್ತಪೋಯೋಗಮನುತ್ತಮಮ್ ।
ಧ್ಯಾಯಂಸ್ತದಾ ಸ ಭಗವಾಂಸ್ತೇನ ಲೋಕಾನವಾಸೃಜತ್ ॥ ೫೦ ॥

ಜ್ಞಾನಾನಿ ಭೂತಭವ್ಯಾನಿ ಲೋಕಾ ವೇದಾಶ್ಚ ಸರ್ವಶಃ ।
ಯೋಗಾಮೃತಾಸ್ತದಾ ಸೃಷ್ಟಾ ಬ್ರಹ್ಮಣಾ ಲೋಕಚಕ್ಷುಷಾ ॥ ೫೧ ॥

ಲೋಕಾಃ ಸಂತಾನಕಾ ನಾಮ ಯತ್ರ ತಿಷ್ಠಂತಿ ಭಾಸ್ವರಾಃ ।
ವೈರಾಜಾ ಇತಿ ವಿಖ್ಯಾತಾ ದೇವಾನಾಂ ದಿವಿ ದೇವತಾಃ ॥ ೫೨ ॥

ಯೋಗೇನ ತಪಸಾ ಯುಕ್ತಃ ಪೂರ್ವಮೇವ ತದಾ ಪ್ರಭುಃ ।
ದೇವಾನಸೃಜತ ಬ್ರಹ್ಮಾ ಯೋಗಯುಕ್ತಾನ್ ಸನಾತನಾನ್ ॥ ೫೩ ॥

ಆದಿದೇವಾ ಇತಿ ಖ್ಯಾತಾ ಮಹಾಸತ್ತ್ವಾ ಮಹೌಜಸಃ ।
ಸರ್ವಕಾಮಪ್ರದಾಃ ಪೂಜ್ಯಾ ದೇವದಾನವಮಾನವೈಃ ॥ ೫೪ ॥

---

೫೦. ಆಗ ಬೃಹಸ್ಪತಿಯು ಉತ್ತರವಿತ್ತನು :—ಎಲ್ಲಾ ತಪಸ್ಸುಗಳಲ್ಲಿ ಉತ್ತಮವಾದ ಯೋಗಾಭ್ಯಾಸವೆಂಬ ತಪಸ್ಸನ್ನು ಮಾಡುತ್ತ ಆ ಪೂಜ್ಯನಾದ ಬ್ರಹ್ಮನು ತಪೋಬಲದಿಂದ ಲೋಕಗಳನ್ನು ಸೃಷ್ಟಿಸಿದನು.

೫೧. ಆಗ ಲೋಕಪ್ರಕಾಶಕನಾದ ಬ್ರಹ್ಮನಿಂದ ಭೂತಭವಿಷ್ಯಗಳ ಎಲ್ಲ ಜ್ಞಾನಗಳೂ ಲೋಕ-ವೇದ-ಯೋಗಮಾರ್ಗ ಮತ್ತು ಮುಕ್ತಿಮಾರ್ಗ ಎಂಬುವ ಎಲ್ಲ ಹಿತಸಾಧನಗಳೂ ಸೃಷ್ಟಿಸಲ್ಪಟ್ಟವು.

೫೨. ಪ್ರಕಾಶಮಾನರಾದ ಮತ್ತು ವೈರಾಜ ಎಂಬ ಪ್ರಖ್ಯಾತಿಯುಳ್ಳ ದೇವಾದಿ ದೇವತೆಗಳು ದ್ಯುಲೋಕದಲ್ಲಿ ವಾಸಮಾಡುವ ಸಂತಾನಕ ಎಂಬ ಲೋಕಗಳು ಇರುವುವು.

೫೩. ಸರ್ವಶಕ್ತನಾದ ಬ್ರಹ್ಮನು ಯೋಗವೆಂಬ ತಪೋಬಲದಿಂದ ಕೂಡಿ ಯೋಗಾಭ್ಯಾಸಪರರೂ ಅನಾದಿಗಳೂ ಆದ ದೇವತೆಗಳನ್ನು ಆಗ ಸೃಷ್ಟಿಸಿದನು.

೫೪. ಅವರು ಮಹಾ ಶಕ್ತಿಸಂಪನ್ನರೂ ಅತಿಶಯವಾದ ಕಾಂತಿಯುಕ್ತರೂ ಮತ್ತು ಆದಿದೇವ ಎಂಬ ನಾಮಾಂಕಿತರೂ ಆಗಿ ದೇವ ದಾನವ ಮತ್ತು ಮಾನವರಿಗೆ ಪೂಜ್ಯರಾಗಿ ಸರ್ವ ಕಾಮಗಳನ್ನು ಪ್ರದಾನಮಾಡಿದರು.

ತೇಷಾಂ ಸಪ್ತ ಸಮಾಖ್ಯಾತಾ ಗಣಾಸ್ತ್ರೈಲೋಕ್ಯಪೂಜಿತಾಃ ।
ಅಮೂರ್ತಯಸ್ತ್ರಯಸ್ತೇಷಾಂ ಚತ್ವಾರಸ್ತು ಸಮೂರ್ತಯಃ ॥ ೫೫ ॥

ಉಪರಿಷ್ಟಾತ್ತ್ರಯಸ್ತೇಷಾಂ ವರ್ತಂತೇ ಭಾವಮೂರ್ತಯಃ ।
ತೇಷಾಮಧಸ್ತಾದ್ವರ್ತಂತೇ ಚತ್ವಾರಃ ಸೂಕ್ಷ್ಮಮೂರ್ತಯಃ ॥ ೫೬ ॥

ತತೋ ದೇವಾಸ್ತತೋ ಭೂಮಿರೇಷಾ ಲೋಕಪರಂಪರಾ ।
ಲೋಕೇ ವರ್ಷಂತಿ ತೇ ಹ್ಯಸ್ಮಿಂಸ್ತೇಭ್ಯಃ ಪರ್ಜನ್ಯಸಂಭವಃ ॥ ೫೭ ॥

ಅನ್ನಂ ಭವತಿ ವೈ ವೃಷ್ಟ್ಯಾ ಲೋಕಾನಾಂ ಸಂಭವಸ್ತತಃ ।
ಆಪ್ಯಾಯಯಂತಿ ತೇ ಯಸ್ಮಾತ್ ಸೋಮಂ ಚಾನ್ನಂ ಚ ಯೋಗತಃ ॥ ೫೮ ॥

ಊಚುಸ್ತಾನ್ ವೈ ಪಿತೄಂಸ್ತಸ್ಮಾಲ್ಲೋಕಾನಾಂ ಲೋಕಸತ್ತಮಾಃ ।
ಮನೋಜವಾಃ ಸ್ವಧಾಭಕ್ಷ್ಯಾಃ ಸರ್ವಕಾಮಪರಿಷ್ಕೃತಾಃ ॥ ೫೯ ॥

---

೫೫. ತ್ರಿಲೋಕದಲ್ಲಿ ಪೂಜ್ಯರಾದ ಆ ದೇವತೆಗಳಲ್ಲಿ ಮೂರ್ತಿಯಿಲ್ಲದ ಮೂರು ಗಣಗಳು ಮತ್ತು ಮೂರ್ತಿಯನ್ನು ಧರಿಸಿದ ನಾಲ್ಕು ಗಣಗಳು ಸೇರಿ ಒಟ್ಟು ಏಳು ಗಣಗಳು ಪ್ರಸಿದ್ಧಿ ಹೊಂದಿವೆ.

೫೬. ಅವುಗಳಲ್ಲಿ ಮೂರ್ತಿರಹಿತವಾದ ಮೂರು ಗಣಗಳು ಮೇಲುಭಾಗದಲ್ಲಿವೆ. ಸೂಕ್ಷ್ಮವಾದ ಮೂರ್ತಿಗಳಿಂದ ಕೂಡಿದ ಉಳಿದ ನಾಲ್ಕು ಗಣಗಳು ಅವುಗಳ ಕೆಳ ಭಾಗದಲ್ಲಿವೆ.

೫೭. ಅದರಿಂದ ದೇವತೆಗಳೂ ದೇವತೆಗಳಿಂದ ಭೂಮಿಯೂ ಎಂಬ ಕ್ರಮ ದಿಂದ ಲೋಕಗಳ ಪರಂಪರೆಯು ಪ್ರವರ್ತಿಸಿ ಇರುತ್ತದೆ ಲೋಕದಲ್ಲಿ ವೃಷ್ಟಿಯನ್ನು ಕೊಡುವ ದೇವಗಣದಿಂದ ಮೇಘಮಂಡಲವೆಂಬ ಪರ್ಜನ್ಯವು ಉದಯಿಸುತ್ತದೆ.

೫೮. ಮಳೆಯಿಂದ ಅನ್ನವು ಹುಟ್ಟುವುದು. ಅದರಿಂದ ಲೋಕಗಳು ಹುಟ್ಟು ವುವು. ಆ ಲೋಕಗಳು ಸೋಮ ಮತ್ತು ಅನ್ನಗಳನ್ನು ಯೋಗಬಲದಿಂದ ಅಭಿವೃದ್ಧಿ ಮಾಡುವುವು.

೫೯. ಆದ್ದರಿಂದ ಲೋಕದಲ್ಲಿ ಶ್ರೇಷ್ಠರಾದವರು ಆ ಲೋಕಪಿತೃಗಳನ್ನು ಕುರಿತು ಹೇಳಿದರು. ಆ ಪಿತೃಗಳು ಮನೋವೇಗ ಸ್ವಧಾರೂಪವಾದ ಅನ್ನದ ಭೋಜನ ಮತ್ತು ಸರ್ವಕಾಮ ಸಂಪತ್ತಿಗಳಿಂದ ಕೂಡಿದ್ದರು.

ಲೋಭಮೋಹಭಯೋಪೇತಾ ನಿಶ್ಚಿಂತಾ ಲೋಕವರ್ಜಿತಾಃ ।
ಏತೇ ಯೋಗಂ ಪರಿತ್ಯಜ್ಯ ಪ್ರಾಪ್ತಾ ಲೋಕಾನ್ ಸುದರ್ಶನಾನ್ ॥ ೬೦ ॥

ದಿವ್ಯಾಃ ಪುಣ್ಯಾ ವಿಪಾಪ್ಮಾನೋ ಮಹಾತ್ಮಾನೋ ಭವಂತ್ಯುತ ।
ತತೋ ಯುಗಸಹಸ್ರಾಂತೇ ಜಾಯಂತೇ ಬ್ರಹ್ಮವಾದಿನಃ ॥ ೬೧ ॥

ಪ್ರತಿಲಭ್ಯ ಪುನರ್ಯೋಗಂ ಮೋಕ್ಷಂ ಗಚ್ಛಂತ್ಯಮೂರ್ತಯಃ ।
ವ್ಯಕ್ತಾವ್ಯಕ್ತಂ ಪರಿತ್ಯಜ್ಯ ಮಹಾಯೋಗಬಲೇನ ಚ ॥ ೬೨ ॥

ನಶ್ಯಂತ್ಯುಲ್ಕೇವ ಗಗನೇ ಕ್ಷಣಾದ್ವಿದ್ಯುತ್ಪ್ರಭೇವ ಚ ।
ಉತ್ಸೃಜ್ಯ ದೇಹಜಾಲಾನಿ ಮಹಾಯೋಗಬಲೇನ ಚ ॥ ೬೩ ॥

ನಿರಾಖ್ಯೋಪಾಸ್ಯತಾಂ ಯಾಂತಿ ಸರಿತಃ ಸಾಗರಂ ಯಥಾ ।
ಕ್ರಿಯಯಾ ಗುರುಪೂಜಾಭಿರ್ಯಾಗಂ ಕುರ್ವಂತಿ ಯತ್ನತಃ ॥ ೬೪ ॥

---

೬೦. ಮತ್ತು ಲೋಭ, ಮೋಹ, ಭಯ, ಚಿಂತಾ ಮತ್ತು ಶೋಕಗಳೆಂಬ ಮನೋವಿಕಾರಗಳಿಂದ ವರ್ಜಿತರಾಗಿ ಯೋಗವನ್ನು ಬಿಟ್ಟು ಉತ್ತಮವಾದ ಲೋಕಗಳನ್ನು ಹೊಂದಿದರು.

೬೧. ಅಲ್ಲಿ ದಿವ್ಯರೂ ಪವಿತ್ರರೂ ಪಾಪಸಂಪರ್ಕ ಶೂನ್ಯರೂ ಮತ್ತು ಮಹಾತ್ಮರೂ ಆಗಿರುವರು. ಅಲ್ಲಿ ಸಾವಿರಾರು ಯುಗಗಳ ಸಮಾಪ್ತಿಯಲ್ಲಿ ಬ್ರಹ್ಮವಾದಿಗಳು ಆಗುವರು.

೬೨. ಅಲ್ಲಿ ಮತ್ತೆ ಯೋಗವನ್ನು ಹೊಂದಿ, ಆ ಮಹಾ ಯೋಗಾಭ್ಯಾಸ ಬಲದಿಂದ ವ್ಯಕ್ತ ಮತ್ತು ಅವ್ಯಕ್ತವಾದ ದೇಹರಹಿತರಾಗಿ ಮೋಕ್ಷವನ್ನು ಹೊಂದುತ್ತಾರೆ

೬೩. ಮತ್ತು ಆ ಮುಕ್ತಿ ದಶೆಯಲ್ಲಿ ಆಕಾಶದಲ್ಲಿ ಬೆಂಕಿಯ ಕೊಳ್ಳಿಯಂತೆ ಅಥವಾ ಮಿಂಚಿನ ಪ್ರಭೆಯಂತೆ ಮಹಾಯೋಗ ಬಲದಿಂದ ದೇಹಜಾಲಗಳನ್ನು ಪರಿತ್ಯಜಿಸಿ ಮುಕ್ತಿಯನ್ನು ಹೊಂದುವರು.

೬೪. ಹಾಗೂ ನದಿಗಳು ಸಾಗರದಲ್ಲಿ ಐಕ್ಯವನ್ನು ಹೊಂದಿದಂತೆ ನಾಮರೂಪಗಳಿಲ್ಲದ ಪೂಜ್ಯ ಪಿತೃಭಾವವನ್ನು ಹೊಂದುತ್ತಾರೆ. ಮತ್ತು ವಿಹಿತಕರ್ಮ ಅನುಷ್ಠಾನ, ಗುರು ಶುಶ್ರೂಷಾ ಮುಂತಾದುವುಗಳಿಂದ ಕೂಡಿ ಯಾಗವನ್ನು ಮಾಡುತ್ತಾರೆ.

ಶ್ರಾದ್ಧೇ ಪ್ರೀತಾಸ್ತತಃ ಸೋಮಂ ಪಿತರೋ ಯೋಗಮಾಸ್ಥಿತಾಃ ।
ಆಪ್ಯಾಯಯಂತಿ ಯೋಗೇನ ತ್ರೈಲೋಕ್ಯಂ ಯೇನ ಜೀವತಿ ॥ ೬೫ ॥

ತಸ್ಮಾಚ್ಛ್ರಾದ್ಧಾನಿ ದೇಯಾನಿ ಯೋಗಾನಾಂ ಯತ್ನತಃ ಸದಾ ।
ಪಿತೄಣಾಂ ಹಿ ಬಲಂ ಯೋಗೋ ಯೋಗಾತ್ ಸೋಮಃ ಪ್ರವರ್ತತೇ ॥ ೬೬ ॥

ಸಹಸ್ರಶತವಿಪ್ರಾನ್ ವೈ ಭೋಜಯೇದ್ಯಾವದಾಗತಾನ್ ।
ಏಕಸ್ತಾನಪಿ ಮಂತ್ರಜ್ಞಃ ಸರ್ವಾನರ್ಹತಿ ತಚ್ಛೃಣು ॥ ೬೭ ॥

ಏತಾನೇವ ಚ ಮಂತ್ರಜ್ಞಾನ್ ಭೋಜಯೇದ್ಯಃ ಸಮಾಗತಾನ್ ।
ಏಕಸ್ತಾನ್ ಸ್ನಾತಕಃ ಪ್ರೀತಃ ಸರ್ವಾನರ್ಹತಿ ತಚ್ಛೃಣು ॥ ೬೮ ॥

ಮಂತ್ರಜ್ಞಾನಾಂ ಸಹಸ್ರೇಣ ಸ್ನಾತಕಾನಾಂ ಶತೇನ ಚ ।
ಯೋಗಾಚಾರ್ಯೇಣ ಯದ್ಭುಕ್ತಂ ತ್ರಾಯತೇ ಮಹತೋ ಭಯಾತ್ ॥ ೬೯ ॥

---

೬೫. ಯೋಗವನ್ನು ಅವಲಂಬಿಸಿದ ಪಿತೃಗಳು ಶ್ರಾದ್ಧದಲ್ಲಿ ಸುಪ್ರೀತರಾಗಿ ತ್ರೈಲೋಕ್ಯದ ಜೀವನಕ್ಕೆ ಕಾರಣವಾದ ಯೋಗವನ್ನು ವೃದ್ಧಿಪಡಿಸುವರು.

೬೬. ಆದುದರಿಂದ ಶ್ರಾದ್ಧಗಳನ್ನು ಯೋಗದಿಂದ ಕೂಡಿದ ಸತ್ಪಾತ್ರದಲ್ಲಿ ದಾನ ಮಾಡಬೇಕು. ಪಿತೃಗಳಿಗೆ ಯೋಗವು ಬಲವು. ಅಂತಹ ಯೋಗದಿಂದ ಸೋಮನು ತನ್ನ ವ್ಯಾಪಾರದಲ್ಲಿ ಪ್ರವರ್ತಿಸುತ್ತಾನೆ.

೬೭. ಮನೆಗೆ ಬಂದ ನೂರು ಸಾವಿರ ಮುಂತಾದ ಅಧಿಕ ಸಂಖ್ಯೆಯ ಜನರನ್ನು ಭೋಜನಮಾಡಿಸುವುದಕ್ಕೆ ಪ್ರತಿನಿಧಿಯಾಗಿ ಮಂತ್ರಜ್ಞನಾದ ಒಬ್ಬ ಬ್ರಾಹ್ಮಣನು ಅಂತಹ ಭೋಜನಕ್ಕೆ ಪಾತ್ರನಾಗುವುದು ಅತಿಶಯವು.

೬೮. ಇಂತಹ ಬಂದಿರುವ ಅನೇಕ ಮಂತ್ರಜ್ಞರಲ್ಲಿ ಸ್ನಾತಕನೊಬ್ಬನು ಸಂತುಷ್ಟನಾಗಿ ಅನೇಕ ಮಂತ್ರಜ್ಞರಂತೆ ಭೋಜನಮಾಡಿಸಲು ಅರ್ಹನಾಗುವನು.

೬೯. ಒಂದು ಸಹಸ್ರ ಮಂತ್ರಜ್ಞರ ಅಥವಾ ಒಂದುನೂರು ಸ್ನಾತಕರ ಭೋಜನಕ್ಕಿಂತ ಯೋಗಾಚಾರ್ಯನಿಗೆ ಮಾಡಿಸಿದ ಭೋಜನವು ಮಹಾ ಭಯದಿಂದ ಪರಿತ್ರಾಣ ಮಾಡುವುದು.

ಗೃಹಸ್ಥಾನಾಂ ಸಹಸ್ರೇಣ ವಾನಪ್ರಸ್ಥ ಶತೇನ ಚ ।
ಬ್ರಹ್ಮಚಾರಿಸಹಸ್ರೇಣ ಯೋಗ ಏವ ವಿಶಿಷ್ಯತೇ ॥ ೭೦ ॥

ನಾಸ್ತಿಕೋ ವಾಪ್ಯಧರ್ಮೋ ವಾ ಸಂಕೀರ್ಣಸ್ತಸ್ಕರೋಽಪಿ ವಾ ।
ನಾನ್ಯತ್ರ ಕಾರಣಂ ದಾನಂ ಯೋಗೇಷ್ವಾಹ ಪ್ರಜಾಪತಿಃ ॥ ೭೧ ॥

ಪಿತರಸ್ತಸ್ಯ ತುಷ್ಯಂತಿ ಸುವೃಷ್ಟೇನೇವ ಕರ್ಷಕಾಃ ।
ಪುತ್ರೋ ವಾಪ್ಯಥವಾ ಪೌತ್ರೋ ಧ್ಯಾನಿನಂ ಭೋಜಯಿಷ್ಯತಿ ॥ ೭೨ ॥

ಅಲಾಭೇ ಧ್ಯಾನನಿಷ್ಠಾನಾಂ ಭೋಜಯೇದ್ಬ್ರಹ್ಮಚಾರಿಣಮ್ ।
ತದಲಾಭೇ ಉದಾಸೀನಂ ಗೃಹಸ್ಥಮಪಿ ಭೋಜಯೇತ್ ॥ ೭೩ ॥

ಯಸ್ತಿಷ್ಠೇದೇಕಪಾದೇನ ವಾಯುಭಕ್ಷಃ ಶತಂ ಸಮಾಃ ।
ಧ್ಯಾನಯೋಗೀ ಪರಸ್ತಸ್ಮಾದಿತಿ ಬ್ರಹ್ಮಾನುಶಾಸನಮ್ ॥ ೭೪ ॥

---

೭೦. ಒಂದು ಸಹಸ್ರ ಗ್ರಹಸ್ಥರು, ಒಂದುನೂರು ವಾನಪ್ರಸ್ಥರು, ಅಥವಾ ಒಂದು ಸಹಸ್ರ ಬ್ರಹ್ಮಚಾರಿಗಳು ಇವರೆಲ್ಲರಿಗಿಂತ ಯೋಗಿಯು ಅತಿಶಯ ಮಹಿಮೆ ಯುಳ್ಳವನಾಗಿರುತ್ತಾನೆ.

೭೧. ನಾಸ್ತಿಕ, ಅಧಾರ್ಮಿಕ, ಸಂಕೀರ್ಣ, ಅಥವಾ ಚೋರ ಮುಂತಾದ ನಾನಾವಿಧ ಪಾತಕಗಳಲ್ಲಿ ಯೋಗಕ್ಕಿಂತ ಮಿಗಿಲಾದ ತಾರಣೋಪಾಯವು ಇಲ್ಲ ವೆಂದು ಪ್ರಜಾಪತಿಯು ಹೇಳಿರುವನು.

೭೨. ಪುತ್ರ ಅಥವಾ ಪೌತ್ರನು ಪಿತೃಗಳ ಉದ್ದೇಶದಿಂದ ಧ್ಯಾನಪರನಾದ ವಿಪ್ರನನ್ನು ಭೋಜನಮಾಡಿಸಿದಲ್ಲಿ ಸುವೃಷ್ಟಿಯಿಂದ ರೈತರು ಸಂತೋಷಪಡುವಂತೆ ಅವನ ಪಿತೃಗಳು ಸಂತೋಷ ಹೊಂದುವರು.

೭೩. ಅಂತಹ ಧ್ಯಾನನಿಷ್ಠರು ಲಭಿಸದಿದ್ದರೆ ಒಬ್ಬ ಬ್ರಹ್ಮಚಾರಿಯನ್ನು ಭೋಜನ ಮಾಡಿಸಬೇಕು. ಬ್ರಹ್ಮಚಾರಿಯು ಲಭಿಸದಲ್ಲಿ ಉದಾಸೀನನಾದ ಒಬ್ಬ ಗೃಹಸ್ಥನನ್ನು ಭೋಜನಮಾಡಿಸಬೇಕು.

೭೪. ವಾಯು ಭಕ್ಷಣಮಾಡುತ್ತ ಒಂದು ಕಾಲಿನಿಂದ ಭೂಮಿಯಲ್ಲಿ ನಿಂತು ಅನೇಕ ವರ್ಷಕಾಲ ತಪಸ್ಸನ್ನು ಮಾಡುವ ತಪಸ್ವಿಗಿಂತಲೂ ಧ್ಯಾನ ಯೋಗಪರನು ಮಹಾತ್ಮನೆಂದು ಬ್ರಹ್ಮನ ಆದೇಶವಿರುವುದು.

ಆದ್ಯ ಏಷ ಗಣಃ ಪ್ರೋಕ್ತಃ ಪಿತ್ರ್ಯಾಣಾಮಮಿತೌಜಸಾಮ್ ।
ಭಾವಯನ್ ಸರ್ವಲೋಕಾನ್ ವೈ ಸ್ಥಿತ ಏಷ ಗಣಃ ಸದಾ ॥ ೭೫ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಸರ್ವಾನಪಿ ಗಣಾನ್ ಪುನಃ ।
ಸಂತತಿಂ ಸಂಸ್ಥಿತಿಂ ಚೈವ ಭಾವನಾಂ ಚ ಯಥಾಕ್ರಮಮ್ ॥ ೭೬ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ನವಮೋಽಧ್ಯಾಯಃ

---

೭೫. ಹೆಚ್ಚಾದ ಕಾಂತಿಯಿಂದ ಕೂಡಿದ ಪಿತೃದೇವತೆಗಳ ಈ ಮೊದಲನೆಯ ಗಣವು ಹೇಳಲ್ಪಟ್ಟಿದೆ. ಈ ಪಿತೃಗಣವು ಸರ್ವಲೋಕಗಳನ್ನು ಮನಸ್ಸಿನಲ್ಲಿ ಭಾವಿಸುತ್ತ ಇಶುವುದು.

೭೬. ಇನ್ನು ಮುಂದೆ ಎಲ್ಲಾ ಪಿತೃಗಳನ್ನೂ ಅವರ ಸಂತತಿ, ಅವರ ಸ್ಥಿತಿ ಮತ್ತು ಭಾವನೆಗಳನ್ನೂ ಯಥಾಕ್ರಮವಾಗಿ ಮತ್ತೆ ಹೇಳುತ್ತೇನೆ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಒಂಭತ್ತನೆಯ ಅಧ್ಯಾಯವು ಮುಗಿದುದು.

---

## ದಶಮೋಽಧ್ಯಾಯಃ

**ಬೃಹಸ್ಪತಿರುವಾಚ :—**

**ಸಪ್ತೈತೇ ಜಯತಾಂ ಶ್ರೇಷ್ಠಾ ಸ್ವರ್ಗೇ ಪಿತೃಗಣಾಃ ಸ್ಮೃತಾಃ ।**
**ಚತ್ವಾರೋ ಮೂರ್ತಿಮಂತಶ್ಚ ತ್ರಯಸ್ತೇಷಾಮಮೂರ್ತಯಃ ॥ ೧ ॥**

**ತೇಷಾಂ ಲೋಕಾನ್ ವಿಸರ್ಗಂ ಚ ಕೀರ್ತಯಿಷ್ಯೇ ನಿಬೋಧತ ।**
**ಯಾ ವೈ ದುಹಿತರಸ್ತೇಷಾಂ ದೌಹಿತ್ರಾಶ್ಚೈವ ಯೇ ಸ್ಮೃತಾಃ ॥ ೨ ॥**

**ಲೋಕಾಃ ಸಂತಾನಕಾ ನಾಮ ಯತ್ರ ತಿಷ್ಠಂತಿ ಭಾಸ್ವರಾಃ ।**
**ಅಮೂರ್ತಯಃ ಪಿತೃಗಣಾಸ್ತೇ ವೈ ಪುತ್ರಾಃ ಪ್ರಜಾಪತೇಃ ॥ ೩ ॥**

**ವಿರಾಜಸ್ಯ ದ್ವಿಜಶ್ರೇಷ್ಠಾ ವೈರಾಜಾ ಇತಿ ವಿಶ್ರುತಾಃ ।**
**ಏತೇ ವೈ ಪಿತರಸ್ತಾತ ಯೋಗಾನಾಂ ಯೋಗವರ್ಧನಾಃ ॥ ೪ ॥**

---

೧. ಬೃಹಸ್ಪತಿಯು ಮುಂದುವರಿಸಿದನು :—ಸ್ವರ್ಗದಲ್ಲಿ ಜಯಶೀಲರಾದ ದೇವತೆಗಳಲ್ಲಿ ಶ್ರೇಷ್ಠರಾದ ಈ ಏಳು ಗಣಗಳು ಸ್ಮರಿಸಲ್ಪಟ್ಟಿವೆ. ಅವುಗಳಲ್ಲಿ ನಾಲ್ಕು ಗಣಗಳು ಮೂರ್ತಿ ಸಹಿತವಾಗಿಯೂ ಮತ್ತೆ ಮೂರು ಮೂರ್ತಿ ರಹಿತವಾಗಿಯೂ ಇರುವುವು.

೨. ಅವರ ಲೋಕಸೃಷ್ಟಿ ಮುಂತಾದುದನ್ನು ಹೇಳುವೆನು. ಶ್ರವಣಮಾಡಿರಿ, ಅವರ ಕನ್ಯೆಯರು ಮತ್ತು ದೌಹಿತ್ರರು ಮುಂತಾದವರ ಸಂತತಿಯು ಅನೇಕವಾಗಿ ಸ್ಮರಿಸಲ್ಪಟ್ಟಿರುವುದು.

೩. ಪ್ರಕಾಶಶೀಲರೂ ಮೂರ್ತಿರಹಿತರೂ ಮತ್ತು ಪ್ರಜಾಪತಿಯ ಪುತ್ರರೂ ಆದ ಪಿತೃಗಣಗಳಿಗೆ ಸಂತಾನಕ ಎಂಬ ಲೋಕಗಳು ಆಧಾರವಾಗಿರುವುವು.

೪. ಬ್ರಾಹ್ಮಣೋತ್ತಮರೇ, ವಿರಾಜ ಪ್ರಜಾಪತಿಯ ಪುತ್ರರಾದ ಪಿತೃಗಳು ವೈರಾಜ ಎಂದು ಪ್ರಸಿದ್ಧಿ ಹೊಂದಿರುವರು. ಪುತ್ರನೇ, ಈ ಪಿತೃಗಳು ಯೋಗಿಗಳಲ್ಲೆಲ್ಲಾ ಅತಿಶಯವಾದ ಯೋಗವೃದ್ಧಿಯನ್ನುಂಟುಮಾಡುವವರು.

ಆಪ್ಯಾಯಯಂತಿ ಯೇ ನಿತ್ಯಂ ಯೋಗಾಯೋಗಬಲೇನ ತು ।
ಶ್ರಾದ್ಧೈರಾಪ್ಯಾಯಿತಾಸ್ತೇ ವೈ ಸೋಮಮಾಪ್ಯಾಯಯಂತಿ ಚ ॥ ೫ ॥

ಆಪ್ಯಾಯಿತಸ್ತತಃ ಸೋಮೋ ಲೋಕಾನಾಪ್ಯಾಯಯತ್ಯುತ ।
ಏತೇಷಾಂ ಮಾನಸೀ ಕನ್ಯಾ ಮೇನಾ ನಾಮ ಮಹಾಗಿರೇಃ ॥ ೬ ॥

ಪತ್ನೀ ಹಿಮವತಃ ಪುತ್ರೋ ಯಸ್ಯಾ ಮೈನಾಕ ಉಚ್ಯತೇ ।
ಪರ್ವತಪ್ರವರಃ ಸೋಽಥ ಕ್ರೌಂಚಶ್ಚಾಸ್ಯ ಗಿರೇಃ ಸುತಃ ॥ ೭ ॥

ತಿಸ್ರಃ ಕನ್ಯಾಸ್ತು ಮೇನಾಯಾಂ ಜನಯಾಮಾಸ ಶೈಲರಾಟ್ ।
ಅಪರ್ಣಾಮೇಕಪರ್ಣಾಂ ಚ ತೃತೀಯಾಮೇಕಪಾಟಲಾಮ್ ॥ ೮ ॥

ನ್ಯಗ್ರೋಧಮೇಕಪರ್ಣಾ ತು ಪಾಟಲಂ ತ್ವೇಕಪಾಟಲಾ ।
ಆಶ್ರಿತೇ ದ್ವೇ ಅಪರ್ಣಾ ತು ಹ್ಯನಿಕೇತಾ ತಪೋಽಚರತ್ ॥ ೯ ॥

---

೫. ಯಾವ ಪಿತೃಗಳು ಯೋಗ ಮತ್ತು ಕರ್ಮಬಲದಿಂದ ಯಾವಾಗಲೂ ವೃದ್ಧಿಹೊಂದುವರೋ ಅವರು ಶ್ರಾದ್ಧಗಳಿಂದ ತೃಪ್ತಿಹೊಂದಿ ಸೋಮರಾಜನನ್ನು ವೃದ್ಧಿಮಾಡುತ್ತಿರುವರು.

೬. ಹೀಗೆ ಪಿತೃಗಳಿಂದ ತೃಪ್ತಿಪಡಿಸಲ್ಪಟ್ಟ ಚಂದ್ರನು ಲೋಕಗಳನ್ನು ಪರಿಪೋಷಿಸುವನು. ಇಂತಹ ಪಿತೃದೇವತೆಗಳಿಗೆ ಮಾನಸಪುತ್ರಿಯಾಗಿ ಮೇನಾ ಎಂಬುವಳು ಜನಿಸಿರುವಳು.

೭. ಅವಳು ಗಿರಿರಾಜನಾದ ಹಿಮವಂತನ ಪತ್ನಿಯಾದಳು. ಅವಳಲ್ಲಿ ಪರ್ವತೋತ್ತಮಗಳಾದ ಮೈನಾಕ ಪರ್ವತ ಮತ್ತು ಕ್ರೌಂಚಗಿರಿ ಎಂಬ ಎರಡು ಪರ್ವತಗಳು ಹಿಮವಂತನಿಂದ ಹುಟ್ಟಿದುವು.

೮. ಆ ಹಿಮವಂತನಿಗೆ ಮೇನಾ ಎಂಬ ಭಾರ್ಯೆಯಲ್ಲಿ ಅಪರ್ಣಾ, ಏಕಪರ್ಣಾ ಮತ್ತು ಏಕಪಾಟಲಾ ಎಂಬ ಮೂರು ಮಂದಿ ಕನ್ಯೆಯರು ಜನಿಸಿದರು.

೯. ಆ ಮೂರು ಮಂದಿಯಲ್ಲಿ ಏಕಪರ್ಣಾ ಎಂಬುವಳು ಆಲದ ಮರವನ್ನು, ಏಕಪಟಲಾ ಎಂಬುವಳು ಪಾಟಲವೃಕ್ಷವನ್ನು ಆಶ್ರಯಿಸಿದರು. ಆದರೆ ಅಪರ್ಣಾ ಎಂಬುವಳು ಮಾತ್ರ ವಿಶೇಷವಾದ ಒಂದು ವಾಸಗೃಹವನ್ನು ಆಶ್ರಯಿಸದೆ ತಪಸ್ಸನ್ನು ಆಚರಿಸಿದಳು.

ಶತಂ ವರ್ಷಸಹಸ್ರಾಣಾಂ ದುಶ್ಚರಂ ದೇವದಾನವೈಃ ।
ಆಹಾರಮೇಕಪರ್ಣೇನ ಹ್ಯೇಕಪರ್ಣಾ ಸಮಾಚರತ್ ॥ ೧೦ ॥

ಪಾಟಲೇನೈವ ಚೈಕೇನ ವ್ಯದಧಾದೇಕಪಾಟಲಾ ।
ಪೂರ್ಣೇ ವರ್ಷಸಹಸ್ರೇ ದ್ವೇ ಚಾಹಾರಂ ವೈ ಪ್ರಚಕ್ರತುಃ ॥ ೧೧ ॥

ಏಕಾ ತತ್ರ ನಿರಾಹಾರಾ ತಾಂ ಮಾತಾ ಪ್ರತ್ಯಭಾಷತ ।
ನಿಷೇಧಯಂತೀ ಸೋಮೇತಿ ಮಾತೃಸ್ನೇಹೇನ ದುಃಖಿತಾ ॥ ೧೨ ॥

ಸಾ ತಥೋಕ್ತಾ ತದಾಽಪರ್ಣಾ ದೇವೀ ದುಶ್ಚರಚಾರಿಣೀ ।
ಉಮೇತಿ ಹಿ ಮಹಾಭಾಗಾ ತ್ರಿಷು ಲೋಕೇಷು ವಿಶ್ರುತಾ ॥ ೧೩ ॥

ತಥೈವ ನಾಮ್ನಾ ತೇನಾಸೌ ನಿರುಕ್ತೋಕ್ತೇನ ಕರ್ಮಣಾ ।
ಏತತ್ತು ತ್ರಿಕುಮಾರೀಕಂ ಜಗತ್ ಸ್ಥಾವರಜಂಗಮಮ್ ॥ ೧೪ ॥

---

೧೦. ಏಕಪರ್ಣೆಯು ದೇವದಾನವರು ಮಾಡಲು ಸಾಧ್ಯವಿಲ್ಲದಂತಹ ತೀವ್ರವಾದ ತಪಸ್ಸನ್ನು ಆಚರಿಸುತ್ತ ಅನೇಕ ಸಹಸ್ರ ವರ್ಷ ಪರ್ಯಂತವಾಗಿ ಆ ವೃಕ್ಷದ ಪತ್ರ ಮಾತ್ರದಿಂದ ಆಹಾರವನ್ನು ಸೇವಿಸಿದಳು.

೧೧. ಏಕಪಾಟಲಾ ಎಂಬುವಳು ಒಂದು ಪಾಟಲವೃಕ್ಷದ ಪತ್ರಮಾತ್ರದಿಂದ ಆಹಾರವನ್ನು ಸೇವಿಸಿದಳು. ಹೀಗೆ ಏಕಪರ್ಣಾ, ಏಕಪಾಟಲಾ ಎಂಬೀರ್ವರು ಎರಡು ಸಹಸ್ರ ವರ್ಷಗಳನ್ನು ಪೂರ್ಣವಾಗಿ ಕಳೆದು ಆಹಾರವನ್ನು ಭುಂಜಿಸಿದರು.

೧೨. ಅಪರ್ಣಾ ಎಂಬುವಳೊಬ್ಬಳು ಮಾತ್ರ ನಿರಾಹಾರಳಾಗಿದ್ದಳು. ಆಗ ಅವಳನ್ನು ಕುರಿತು ಜನನಿಯು ಜನನಿಯರಿಗಿರುವ ಕನ್ಯಾ ಸ್ನೇಹದಿಂದ ದುಃಖಿತಳಾಗಿ ಅಂತಹ ತೀವ್ರವ್ರತವನ್ನು ನಿಷೇಧಿಸಿದಳು.

೧೩. ಕಠಿನ ತಪಸ್ಸನ್ನು ಆಚರಿಸುತ್ತಿದ್ದ ಅಪರ್ಣಾ ದೇವಿಯು ತಾಯಿಯಿಂದ "ಉ= ಎಲೈ, ಮಾ=ಬೇಡ," ಎಂದು ನಿಷೇಧಿಸಲ್ಪಟ್ಟವಳಾಗಿ ತ್ರಿಲೋಕಗಳಲ್ಲಿ ಉಮಾ ಎಂದು ಪ್ರಸಿದ್ಧಳಾದ ಮಹಾ ಭಾಗ್ಯವತಿಯಾದಳು.

೧೪. ಉಮಾ ಎಂಬ ನಾಮದ ಅವಯವಾರ್ಥ ನಿರ್ವಚನದಿಂದ ಲಭ್ಯವಾದ ಕರ್ಮವು ಅವಳಲ್ಲಿ ಇರುವುದರಿಂದ ಆ ನಾಮ ಪ್ರಸಿದ್ಧಿಯುಂಟಾಯಿತು. ಈ ರೀತಿಯಾಗಿ ಚರ-ಅಚರಗಳಿಂದ ಪೂರ್ಣವಾದ ಜಗತ್ತು ಆದಿಯಲ್ಲಿ ಮೂರು ಮಂದಿ ಕುಮಾರಿಯರಿಂದ ಕೂಡಿತ್ತು.

ಏತಾಸಾಂ ತಪಸಾ ಸೃಷ್ಟಂ ಯಾವದ್ಭೂಮಿರ್ಧರಿಷ್ಯತಿ ।
ತಪಃಶರೀರಾಸ್ತಾಃ ಸರ್ವಾಸ್ತಿಸ್ರೋ ಯೋಗಬಲಾನ್ವಿತಾಃ ॥ ೧೫ ॥

ಸರ್ವಾಸ್ತಾಃ ಸುಮಹಾಭಾಗಾಃ ಸರ್ವಾಶ್ಚ ಸ್ಥಿರಯೌವನಾಃ ।
ಸರ್ವಾಶ್ಚ ಬ್ರಹ್ಮವಾದಿನ್ಯಃ ಸರ್ವಾಶ್ಚೈವೋರ್ಧ್ವರೇತಸಃ ॥ ೧೬ ॥

ಉಮಾ ತಾಸಾಂ ವರಿಷ್ಠಾ ಚ ಶ್ರೇಷ್ಠಾ ಚ ವರವರ್ಣಿನೀ ।
ಮಹಾಯೋಗಬಲೋಪೇತಾ ಮಹಾದೇವಮುಪಸ್ಥಿತಾ ॥ ೧೭ ॥

ದತ್ತಕಶ್ಚೋಶನಸ್ತಸ್ಯಾಃ ಪುತ್ರೋ ವೈ ಭೃಗುನಂದನಃ ।
ಅಸಿತಸ್ಯೈಕಪರ್ಣಾ ತು ಪತ್ನೀ ಸಾಧ್ವೀ ಪತಿವ್ರತಾ ॥ ೧೮ ॥

ದತ್ತಾ ಹಿಮವತಾ ತಸ್ಮೈ ಯೋಗಾಚಾರ್ಯಾಯ ಧೀಮತೇ ।
ದೇವಲಂ ಸುಷುವೇ ಸಾ ತು ಬ್ರಹ್ಮಿಷ್ಠಂ ಜ್ಞಾನಸಂಯುತಾ ॥ ೧೯ ॥

---

೧೫. ಈ ಮೂರು ಮಂದಿ ಕುಮಾರಿಯರು ಭೂಮಿಯು ಸ್ಥಿತಿಯನ್ನು ಹೊಂದಿರುವವರೆಗೆ ತಪೋಮಹಿಮೆಯ ಸೃಷ್ಟಿಯುಳ್ಳವರಾಗಿರುವರು. ಮತ್ತು ಇವರು ಯೋಗಬಲದಿಂದ ಕೂಡಿದವರೂ ತಪೋಮಯವಾದ ಮೂರ್ತಿಯುಳ್ಳವರೂ ಆಗಿರುವರು.

೧೬. ಮತ್ತು ಎಲ್ಲರೂ ಮಹಾ ಭಾಗ್ಯವತಿಯರೂ, ಶಾಶ್ವತವಾದ ತಾರುಣ್ಯಪೂರ್ಣರೂ, ಬ್ರಹ್ಮವಾದಿನಿಯರೂ ಮತ್ತು ಊರ್ಧ್ವರೇತಸ್ಸುಗಳೂ ಆಗಿರುವರು.

೧೭. ಅವರಲ್ಲಿ ಉಮಾ ಎಂಬ ವನಿತಾಮಣಿಯು ಪ್ರಶಸ್ತಳೂ ಗುಣಪೂರ್ಣಳೂ ಮತ್ತು ಅತಿಶಯವಾದ ಯೋಗಬಲದಿಂದ ಕೂಡಿರುವವಳೂ ಆಗಿರುವಳು. ಅವಳು ಮಹಾದೇವನನ್ನು ಪತಿಯನ್ನಾಗಿ ಹೊಂದಿದಳು.

೧೮. ಭೃಗುಮುನಿಯ ಪುತ್ರನಾದ ಉಶನಾ ಎಂಬುವನು ಆ ಉಮಾ ದೇವಿಗೆ ದತ್ತಕ ಪುತ್ರನಾಗಿರುವನು. ಏಕಪರ್ಣಾ ಎಂಬುವಳು ಅಸಿತ ಎಂಬ ಮುನಿಯ ಪತ್ನಿಯೂ ಒಳ್ಳೆಯ ಶೀಲವತಿಯಾದ ಪತಿವ್ರತೆಯೂ ಆಗಿದ್ದಳು.

೧೯. ಹಿಮವಂತನೆಂಬ ತಂದೆಯಿಂದ ಜ್ಞಾನವತಿಯಾದ ಆಕೆಯು ಜ್ಞಾನಿಯೂ, ಯೋಗಾಚಾರ್ಯನೂ ಆದ ಆ ಅಸಿತ ಮುನಿಗೆ ಕೊಡಲ್ಪಟ್ಟವಳಾಗಿ ಬ್ರಹ್ಮಿಷ್ಠನಾದ ದೇವಲ ಎಂಬ ಪುತ್ರನನ್ನು ಪ್ರಸವಿಸಿದಳು.

ಯಾ ವೈ ತಾಸಾಂ ಕುಮಾರೀಣಾಂ ತೃತೀಯಾ ಚೈಕಪಾಟಲಾ ।
ಪುತ್ರಂ ಶತಶಲಾಕಸ್ಯ ಜೈಗೀಷವ್ಯಮುಪಸ್ಥಿತಾ ॥ ೨೦ ॥

ತಸ್ಯಾಪಿ ಶಂಖಲಿಖಿತೌ ಸ್ಮೃತೌ ಪುತ್ರಾವಯೋನಿಜೌ ।
ಇತ್ಯೇತಾ ವೈ ಮಹಾಭಾಗಾಃ ಕನ್ಯಾ ಹಿಮವತಃ ಶುಭಾಃ ॥ ೨೧ ॥

ರುದ್ರಾಣೀ ಸಾ ತು ಪ್ರವರಾ ಸ್ವೈರ್ಗುಣೈರತಿರಿಚ್ಯತೇ ।
ಅನ್ಯೋನ್ಯಪ್ರೀತಮನಸೋರುಮಾಶಂಕರಯೋರಥ ॥ ೨೨ ॥

ಶ್ಲೇಷಂ ಸಂಸಕ್ತಯೋರ್ಜ್ಞಾತ್ವಾ ಶಂಕಿತಃ ಕಿಲ ವೃತ್ರಹಾ ।
ತಾಭ್ಯಾಂ ಮೈಥುನಶಕ್ತಾಭ್ಯಾಮುಪತ್ಯೋದ್ಭವಭೀರುಣಾ ॥ ೨೩ ॥

ತಯೋಃ ಸಕಾಶಮಿಂದ್ರೇಣ ಪ್ರೇಷಿತೋ ಹವ್ಯವಾಹನಃ ।
ಅನಯೋ ರತಿವಿಘ್ನಂ ಚ ತ್ವಮಾಚರ ಹುತಾಶನ ॥ ೨೪ ॥

---

೨೦. ಆ ಮೂರು ಮಂದಿ ಕುಮಾರಿಯರಲ್ಲಿ ಒಬ್ಬಳಾದ ಏಕಪಾಟಲಾ ಎಂಬುವಳು. ಶತಶಲಾಕ ಎಂಬುವನ ಕುಮಾರನಾದ ಜೈಗೀಷವ್ಯ ಎಂಬ ಪತಿಯನ್ನು ಸೇರಿದಳು.

೨೧. ಅವಳ ಪತಿಯಾದ ಜೈಗೀಷವ್ಯನಿಗೆ ಶಂಖ-ಲಿಖಿತರೆಂಬ ಈರ್ವರು ಅಯೋನಿಜರಾದ ಪುತ್ರರು ಹುಟ್ಟಿದರೆಂದು ಸ್ಮರಿಸಲ್ಪಟ್ಟಿರುವರು. ಈ ರೀತಿಯಾಗಿ ಹಿಮವಂತನಿಗೆ ಮಹಾಭಾಗರೂ ಮತ್ತು ಮಂಗಳಕರರೂ ಆದ ಕನ್ಯೆಯರು ಇದ್ದರು.

೨೨. ರುದ್ರಪತ್ನಿಯಾದ ಉಮಾದೇವಿಯು ತನ್ನ ಉತ್ತಮ ಗುಣಗಳಿಂದ ಎಲ್ಲರಲ್ಲಿಯೂ ಪ್ರಶಸ್ತಳಾಗಿರುವಳು. ಅನಂತರದಲ್ಲಿ ಉಮಾ-ಶಂಕರರು ಅನ್ಯೋನ್ಯವಾಗಿ ಅತಿಶಯವಾದ ದಾಂಪತ್ಯ ಪ್ರೇಮವುಳ್ಳವರಾದರು.

೨೩. ಆಗ ಪಾರ್ವತೀ ಶಂಕರರು ಲೋಕೋತ್ತರ ಪುತ್ರನನ್ನು ಹೊಂದುವ ಶಕ್ತಿಯುಳ್ಳವರಾಗಿದ್ದರೂ ಅವರ ಈ ಅವಿಚ್ಛಿನ್ನ ಸಂಗದಿಂದ ಅಂತಹ ಪುತ್ರನು ಜನಿಸಲಾರನೆಂದು ದೇವರಾಜನಾದ ಇಂದ್ರನು ಭಯದಿಂದ ಶಂಕಿತನಾದನು.

೨೪. ಆಗ ರತಿಸುಖವನ್ನು ಅನುಭವಿಸುತ್ತಿದ್ದ ಪಾರ್ವತೀ-ಶಂಕರರ ಬಳಿಗೆ ಇಂದ್ರನು ಅವರ ರತಿ ವಿಘ್ನವನ್ನು ಆಚರಿಸಬೇಕೆಂದು ಬೋಧಿಸಿ ಅಗ್ನಿಯನ್ನು ಕಳುಹಿಸಿದನು.

ಸರ್ವತ್ರ ಗತ ಏವ ತ್ವಂ ನ ದೋಷೋ ವಿದ್ಯತೇ ತವ ।
ಇತ್ಯೇವಮುಕ್ತೋ ತು ತದಾ ವಹ್ನಿನಾ ಚ ತಥಾ ಕೃತಮ್ ॥ ೨೫ ॥

ಉಮಾಂ ದೇವಃ ಸಮುತ್ಸೃಜ್ಯ ಶುಕ್ರಂ ಭೂಮೌ ವ್ಯಸರ್ಜಯತ್ ।
ತತೋ ರುಷಿತಯಾ ಸದ್ಯಃ ಶಪ್ತೋಽಗ್ನಿರುಮಯಾ ತಯಾ ॥ ೨೬ ॥

ಇದಂ ಚೋಕ್ತವತೀ ವಹ್ನಿಂ ರೋಷಗದ್ಗದಯಾ ಗಿರಾ ।
ಯಸ್ಮಾನ್ನಾವತಿತಪ್ತಾಭ್ಯಾಂ ರತಿವಿಘ್ನಂ ಹುತಾಶನ ॥ ೨೭ ॥

ಕೃತವಾನಸ್ಯಕರ್ತವ್ಯಂ ತಸ್ಮಾತ್ತ್ವಮಸಿ ದುರ್ಮತಿಃ ।
ಯದೇವಂ ವಿಗತಂ ಗರ್ಭಂ ರೌದ್ರಂ ಶುಕ್ರಂ ಮಹಾಪ್ರಭಮ್ ॥ ೨೮ ॥

ಗರ್ಭೇ ತ್ವಂ ಧಾರಯಸ್ವೈವಮೇಷಾ ತೇ ದಂಡಧಾರಣಾ ।
ಸ ಶಾಪದೋಷಾದ್ರುದ್ರಾಣ್ಯಾ ಅಂತರ್ಗರ್ಭೋ ಹುತಾಶನಃ ॥ ೨೯ ॥

---

೨೫. ಅಗ್ನಿಯೇ, ನೀನು ಸರ್ವವ್ಯಾಪಿಯಾಗಿರುವುದರಿಂದ ಸ್ತ್ರೀಪುರುಷರ ರತಿ ಕ್ರೀಡಾ ಪ್ರದೇಶಕ್ಕೆ ಹೋಗುವುದರಲ್ಲಿ ದೋಷವಿಲ್ಲ. ಹೀಗೆಂದು ಬೋಧಿಸಲ್ಪಟ್ಟ ಅಗ್ನಿಯು ಹಾಗೆಯೇ ಅವರ ರತಿಗೆ ವಿಘ್ನವನ್ನು ತಂದನು.

೨೬. ಆಗ ಮಹೇಶ್ವರನು ಪಾರ್ವತಿಯನ್ನು ಬಿಟ್ಟು ತನ್ನ ಉದ್ರಿಕ್ತವಾದ ವೀರ್ಯವನ್ನು ಭೂಮಿಯಲ್ಲಿ ಹಾಕಿದನು. ಆಗ ಪಾರ್ವತಿಯು ಕೋಪಗೊಂಡವಳಾಗಿ ಅಗ್ನಿಯನ್ನು ಶಪಿಸಿದಳು.

೨೭. ಕೋಪಪೂರ್ಣಳಾಗಿ ಗದ್ಗದ ಧ್ವನಿಯಿಂದ ಪಾರ್ವತಿಯು ಅಗ್ನಿಯನ್ನು ಕುರಿತು ಈ ವಿಧವಾದ ಶಾಪವಚನವನ್ನು ಆಡಿದಳು. ಅಗ್ನಿಯೆ! ನೀನು ಕಾಮ ಸಂತಪ್ತರಾಗಿರುವ ನಮಗೆ ರತಿವಿಘ್ನವನ್ನು ಮಾಡಿರುವೆಯಲ್ಲವೆ.

೨೮. ಅವಿವೇಕಿಯಾದ ನೀನು ನಿನಗೆ ತೋರಿದಂತೆ ಕರ್ತವ್ಯವಾದ ಈ ರತಿ ವಿಘ್ನವನ್ನು ಮಾಡಿರುತ್ತೀ. ಆದುದರಿಂದ ಮಹಾ ಪ್ರಭೆಯಿಂದ ಕೂಡಿದ ಈ ರುದ್ರನ ವೀರ್ಯದಿಂದ ಸಂಭವಿಸುವ ಗರ್ಭವು ಚ್ಯುತವಾಗಿರುವುದು.

೨೯. ಧರಿಸಲು ಅಶಕ್ಯವಾದ ಈ ಗರ್ಭವನ್ನು ನೀನು ಧರಿಸು. ಇದು ನೀನು ಮಾಡಿರುವ ಅಪರಾಧಕ್ಕೆ ಶಿಕ್ಷೆಯು, ಹೀಗೆ ಪಾರ್ವತಿಯು ಶಪಿಸಿದ್ದರಿಂದ ಅಗ್ನಿಯು ಸಹಿಸಲಾಗದ ರುದ್ರನ ಆ ಗರ್ಭವನ್ನು ಧರಿಸಿದನು.

ಬಹೂನ್ ವರ್ಷಗಣಾನ್ ಗರ್ಭಂ ಧಾರಯಾಮಾಸ ವೈ ದ್ವಿಜ ।
ಸ ಗಂಗಾಮುಭಿಗಮ್ಯಾಹ ಶ್ರೂಯತಾಂ ಸರಿದುತ್ತಮೇ ॥ ೩೦ ॥

ಸುಮಹಾನ್ ಪರಿಖೇದೋ ಮೇ ಜಾಯತೇ ಗರ್ಭಧಾರಣಾತ್ ।
ಮದ್ಧಿತಾರ್ಥಮಥೋ ಗರ್ಭಮಿಮಂ ಧಾರಯ ನಿಮ್ನಗೇ ॥ ೩೧ ॥

ಮತ್ಪ್ರಸಾದಾಚ್ಚ ತನಯೋ ವರದಸ್ತೇ ಭವಿಷ್ಯತಿ ।
ತಥೇತ್ಯುಕ್ತ್ವಾ ತದಾ ಸಾ ತು ಸಂಪ್ರಹೃಷ್ಟಾ ಮಹಾನದೀ ॥ ೩೨ ॥

ತಂ ಗರ್ಭಂ ಧಾರಯಾಮಾಸ ದಹ್ಯಮಾನೇನ ಚೇತಸಾ ।
ಸಾಪಿ ಕೃಚ್ಛ್ರೇಣ ಮಹತಾ ಖಿದ್ಯಮಾನಾ ಮಹಾನದೀ ॥ ೩೩ ॥

ಪ್ರಕೃಷ್ಟಂ ವ್ಯಸೃಜದ್ಗರ್ಭಂ ದೀಪ್ಯಮಾನಮಿವಾನಲಮ್ ।
ರುದ್ರಾಗ್ನಿಗಂಗಾತನಯಸ್ತತ್ರ ಜಾತೋಽರುಣಪ್ರಭಃ ॥ ೩೪ ॥

---

೩೦. ದ್ವಿಜನೆ! ಶಾಪಗ್ರಸ್ತನಾದ ಅಗ್ನಿಯು ಆ ಗರ್ಭವನ್ನು ಬಹು ವರ್ಷಗಳ ವರೆಗೆ ಧರಿಸಿದನು. ಅನಂತರ ಆ ಅಗ್ನಿಯು ಗಂಗಾ ನದಿಯ ಸಮೀಪಕ್ಕೆ ಹೋಗಿ ಈ ರೀತಿಯಾಗಿ ಹೇಳಿದನು. ಉತ್ತಮ ನದೀರೂಪಿಣಿಯಾದ ಗಂಗೆಯೇ, ನನ್ನ ವಚನ ವನ್ನು ಕೇಳು.

೩೧. ರುದ್ರನ ಈ ಗರ್ಭವನ್ನು ಬಹುಕಾಲದಿಂದ ಧರಿಸಿದುದರಿಂದ ಹೆಚ್ಚಾದ ಖೇದವು ನನಗೆ ಉಂಟಾಗಿರುವುದು. ನದೀರೂಪಳೆ, ನನ್ನ ಹಿತಕ್ಕೋಸ್ಕರ ಸಮರ್ಥಳಾದ ನೀನು ಈ ಗರ್ಭವನ್ನು ಧಾರಣಮಾಡು.

೩೨. ನನ್ನ ಅನುಗ್ರಹದಿಂದ ನಿನಗೆ ಈ ಗರ್ಭದಿಂದ ಕಾಮಿತಾರ್ಥಗಳನ್ನು ಕೊಡುವ ಪುತ್ರನು ಜನಿಸುವನು. ಎಂದು ಅಗ್ನಿಯು ಹೇಳಲಾಗಿ ಮಹಾ ನದೀರೂಪ ಳಾದ ಗಂಗೆಯು ಬಹು ಸಂತೋಷವುಳ್ಳವಳಾದಳು.

೩೩. ಆದರೆ ಮಹಾ ನದಿಯಾದ ಗಂಗೆಯು ತಪಿಸುತ್ತಿದ್ದ ಹೃದಯದಿಂದ ಬಹು ಕ್ಲೇಶವನ್ನು ಅನುಭವಿಸಿ ಬಹಳ ಕಷ್ಟದಿಂದ ಆ ಗರ್ಭವನ್ನು ಧರಿಸಿದಳು.

೩೪. ತರುವಾಯ ಅಗ್ನಿಯಂತೆ ಕಾಂತಿಪುಂಜದಿಂದ ಜ್ವಲಿಸುತ್ತಿದ್ದ ಶ್ರೇಷ್ಠವಾದ ಗರ್ಭವನ್ನು ವಿಸರ್ಜಿಸಿದಳು. ಆಗ ಅದರಿಂದ ಕೆಂಪಾದ ಪ್ರಭೆಯಿಂದ ಕೂಡಿದ ರುದ್ರ-ಅಗ್ನಿ ಮತ್ತು ಗಂಗಾ ಮೂವರಿಗೂ ಪುತ್ರನಾದ ಕುಮಾರನು ಜನಿಸಿದನು

16

ಆದಿತ್ಯಶತಸಂಕಾಶೋ ಮಹಾತೇಜಾಃ ಪ್ರತಾಪವಾನ್ ।
ತಸ್ಮಿನ್ ಜಾತೇ ಮಹಾಭಾಗೇ ಕುಮಾರೇ ಜಾಹ್ನವೀಸುತೇ ॥ ೩೫ ॥

ವಿಮಾನಯಾನೈರಾಕಾಶಂ ಪತತ್ರಿಭಿರಿವಾವೃತಮ್ ।
ದೇವದುಂದುಭಯೋ ನೇದುರಾಕಾಶೇ ಮಧುರಸ್ವನಾಃ ॥ ೩೬ ॥

ಮುಮುಚುಃ ಪುಷ್ಪವರ್ಷಂ ಚ ಖೇಚರಾಃ ಸಿದ್ಧಚಾರಣಾಃ ।
ಜಗುರ್ಗಂಧರ್ವಮುಖ್ಯಾಶ್ಚ ಸರ್ವಶಸ್ತತ್ರ ತತ್ರ ಹ ॥ ೩೭ ॥

ಯಕ್ಷಾ ವಿದ್ಯಾಧರಾಃ ಸಿದ್ಧಾಃ ಕಿನ್ನರಾಶ್ಚೈವ ಸರ್ವಶಃ ।
ಮಹಾನಾಗಸಹಸ್ರಾಣಿ ಪ್ರವರಾಶ್ಚ ಪತತ್ರಿಣಃ ॥ ೩೮ ॥

ಉಪತಸ್ಥುರ್ಮಹಾಭಾಗಮಾಗ್ನೇಯಂ ಶಂಕರಾತ್ಮಜಮ್ ।
ಪ್ರಭಾವೇಣ ಹತಾಸ್ತೇನ ದೈತ್ಯದಾನವರಾಕ್ಷಸಾಃ ॥ ೩೯ ॥

---

೩೫. ಆ ಕುಮಾರನು ಒಂದುನೂರು ಆದಿತ್ಯರ ಸಮೂಹದಂತೆ ಮಹಾ ತೇಜಸ್ಸುಳ್ಳವನೂ ಮಹಾವಿಕ್ರಮಶಾಲಿಯೂ ಆಗಿದ್ದನು. ಹೀಗೆ ಮಹಾ ಭಾಗ್ಯನಾದ ಮತ್ತು ಗಂಗಾ ಪುತ್ರನಾದ ಕುಮಾರಸ್ವಾಮಿಯ ಶುಭೋದಯವು ಉಂಟಾಯಿತು.

೩೬. ಆ ಶುಭಸಮಯದಲ್ಲಿ ಪಕ್ಷಿಗಳು ಹಾರಾಡುತ್ತಿರುವಂತೆ ಗಣನಾ ತೀತವಾದ ವಿಮಾನಗಳಿಂದ ಆಕಾಶವು ವ್ಯಾಪಿಸಲ್ಪಟ್ಟಿತು. ಮತ್ತು ದೇವದುಂದುಭಿಗಳು ಮಧುರ ವಾಗಿ ಧ್ವನಿಗೈದವು.

೩೭. ಗಗನ ಸಂಚಾರಿಗಳಾದ ಸಿದ್ಧ-ಚಾರಣ ಮುಂತಾದ ದೇವಯೋನಿ ವಿಶೇಷರು ಪುಷ್ಪವೃಷ್ಟಿಯನ್ನು ಕರೆದರು. ಗಾಯಕೋತ್ತಮರಾದ ಗಂಧರ್ವರು ಆಯಾಯ ರಮ್ಯ ಸ್ಥಳಗಳಲ್ಲಿ ದಿವ್ಯವಾದ ಗೀತಗಳನ್ನು ಹಾಡಿದರು.

೩೮ ಮತ್ತು ಆ ಶುಭಸಮಯದಲ್ಲಿ ಯಕ್ಷ, ವಿದ್ಯಾಧರ, ಸಿದ್ಧ, ಕಿನ್ನರ, ಮಹಾನಾಗ ಮತ್ತು ಗಣ್ಯರಾದ ಪಕ್ಷಿಗಣ ಮುಂತಾದವರು ತಮ್ಮ ತಮ್ಮ ಅಸಾಧಾರಣ ವಾದ ಕಲಾ ವ್ಯಾಪಾರಗಳಿಂದ ಆ ಶುಭಸಮಯವನ್ನು ಸಾರ್ಥಕಗೊಳಿಸಿದರು.

೩೯. ಮೇಲೆ ಹೇಳಿದ ಸಮಸ್ತ ದೇವತೆಗಳು ಮಹಾತ್ಮನೂ ಶಂಕರನ ಮತ್ತು ಅಗ್ನಿಯ ಪುತ್ರನೂ ಆದ ಕುಮಾರಸ್ವಾಮಿಯನ್ನು ಸ್ತುತಿಸಿದರು. ಅಂತಹ ಕುಮಾರಸ್ವಾಮಿಯ ಪ್ರಭಾವದಿಂದ ದೈತ್ಯ-ದಾನವ-ಮತ್ತು ರಾಕ್ಷಸರು ತೇಜೋ ಹೀನರಾದರು.

ಸ ಹಿ ಸಪ್ತರ್ಷಿಭಾರ್ಯಾಭಿರಾರಾದೇವಾಗ್ನಿಸಂಭವಃ ।
ಅಭಿಷೇಕಪ್ರಯಾತಾಭಿರ್ದೃಷ್ಟೋ ವರ್ಜ್ಯ ತ್ವರುಂಧತೀಮ್ ॥ ೪೦ ॥

ತಾಭಿಃ ಸ ಬಾಲಾರ್ಕನಿಭೋ ರೌದ್ರಃ ಪರಿವೃತಃ ಪ್ರಭುಃ ।
ಸ್ನಿಹ್ಯಮಾನಾಭಿರತ್ಯರ್ಥಂ ಸ್ವಕಾಭಿರಿವ ಮಾತೃಭಿಃ ॥ ೪೧ ॥

ಯುಗಪತ್ಸರ್ವದೈವೀಭಿರ್ದಿಧಿತ್ಸುರ್ಜಾಹ್ನವೀಸುತಃ ।
ಷಣ್ಮುಖಾನ್ಯಸೃಜಚ್ಛ್ರೀಮಾನ್ ತೇನಾಯಂ ಷಣ್ಮುಖಃ ಸ್ಮೃತಃ ॥ ೪೨ ॥

ತೇನ ಜಾತೇನ ಮಹತಾ ದೇವಾನಾಮುಸಹಿಷ್ಣವಃ ।
ಸ್ಕಂದಿತಾ ದಾನವಗಣಾಸ್ತಸ್ಮಾತ್ ಸ್ಕಂದಃ ಪ್ರತಾಪವಾನ್ ॥ ೪೩ ॥

ಕೃತ್ತಿಕಾಭಿಸ್ತು ಯಸ್ಮಾತ್ಸ ವರ್ಧಿತೋ ಹಿ ಪುರಾತನಃ ।
ಕಾರ್ತಿಕೇಯ ಇತಿ ಖ್ಯಾತಸ್ತಸ್ಮಾದಸುರಸೂದನಃ ॥ ೪೪ ॥

---

೪೦. ಅರುಂಧತಿಯನ್ನು ಹೊರತಾಗಿ ಸ್ನಾನಾರ್ಥವಾಗಿ ಬಂದಿರುವ ಸಪ್ತರ್ಷಿ ಪತ್ನಿಯರು ಸಮೀಪದಲ್ಲಿ ಪ್ರಕಾಶಿಸುತ್ತಿದ್ದ ಅಗ್ನಿ ಪುತ್ರನನ್ನು ಕಂಡರು.

೪೧. ಮತ್ತು ಉದಯಿಸುತ್ತಿರುವ ಬಾಲಸೂರ್ಯನಂತೆ ಕಂಗೊಳಿಸುತ್ತಿರುವವನೂ, ರುದ್ರಪುತ್ರನೂ ಮತ್ತು ಪ್ರಭುವೂ ಆದ ಆ ಕುಮಾರನು ತನ್ನ ಜನನಿಯರಂತಿರುವ ಪ್ರೇಮಪೂರ್ಣರಾದ ಆ ಸಪ್ತರ್ಷಿ ಪತ್ನಿಯರಿಂದ ಸುತ್ತುವರಿಯಲ್ಪಟ್ಟನು.

೪೨. ತನ್ನ ರಕ್ಷಕರಾದ ದೇವಾಂಗನೆಯರ ಸ್ತನ್ಯವನ್ನು ಏಕಕಾಲದಲ್ಲಿ ಪಾನ ಮಾಡಲು ಕಾಂತಿಯಿಂದ ಶೋಭಿಸುತ್ತಿರುವ ಆ ಗಂಗಾ ಪುತ್ರನು ಆರು ಮುಖಗಳನ್ನು ಹೊಂದಿದನು. ಆದುದರಿಂದ ಅವನು ಷಣ್ಮುಖನೆಂದು ಸ್ಮರಿಸಲ್ಪಟ್ಟಿರುವನು.

೪೩. ದೇವತೆಗಳ ಸಮೃದ್ಧಿಯನ್ನು ಸಹಿಸದಿರುವ ದಾನವರಗಣವು ಆ ಮಹಾತ್ಮನಾದ ಕುಮಾರಸ್ವಾಮಿಯ ಜನ್ಮಮಾತ್ರದಿಂದ ಚಲಿಸಿದುದರಿಂದ ಆ ಪ್ರತಾಪವಂತನಾದ ಕುಮಾರನು ಚಲನವೆಂಬ ಅರ್ಥವನ್ನು ಸೂಚಿಸುವ "ಸ್ಕದಿ" ಧಾತುವಿನಿಂದ ರೂಪಗೊಂಡಿರುವ ನಾಮದಿಂದ ಅಂಕಿತನಾಗಿರುವನು.

೪೪. ಅಸುರರನ್ನು ಮರ್ದಿಸುವ ಆ ಪುರಾತನ ಕುಮಾರನು ಕೃತ್ತಿಕಾ ಎಂಬುವ ದೇವಾಂಗನೆಯರಿಂದ ಪೋಷಿಸಲ್ಪಟ್ಟಿರುವುದರಿಂದ ಕೃತ್ತಿಕೆಯರ ಪುತ್ರನೆಂಬ ಅಭಿಪ್ರಾಯವನ್ನು ಅನುಸರಿಸಿ ಕಾರ್ತಿಕೇಯನೆಂದು ಪ್ರಸಿದ್ಧನಾಗಿರುವನು.

ಜೃಂಭತಸ್ತಸ್ಯ ದೈತ್ಯಾರೇರ್ಜ್ವಾಲಾಮಾಲಾಕುಲಾ ತದಾ ।
ಮುಖಾದ್ವಿನಿರ್ಗತಾ ತಸ್ಯ ಸ್ವಶಕ್ತಿರಪರಾಜಿತಾ ॥ ೪೫ ॥

ಕ್ರೀಡಾರ್ಥಂ ಚೈವ ಸ್ಕಂದಸ್ಯ ವಿಷ್ಣುನಾ ಪ್ರಭವಿಷ್ಣುನಾ ।
ಗರುಡಾದತಿಸ್ಸೃಷ್ಟೌ ಹಿ ಪಕ್ಷಿಣೌ ದ್ವೌ ಪ್ರಭದ್ರಕೌ ॥ ೪೬ ॥

ಮಯೂರಃ ಕುಕ್ಕುಟಶ್ಚೈವ ಪತಾಕಾ ಚೈವ ವಾಯುನಾ ।
ಯಸ್ಯ ದತ್ತಾ ಸರಸ್ವತ್ಯಾ ಮಹಾವೀಣಾ ಮಹಾಸ್ವನಾ ॥ ೪೭ ॥

ಅಜಃ ಸ್ವಯಂಭುವಾ ದತ್ತೋ ಮೇಷೋ ದತ್ತಶ್ಚ ಶಂಭುನಾ ।
ಮಾಯಾವಿಹರಣೇ ವಿಪ್ರ ಗಿರೌ ಕ್ರೌಂಚೇ ನಿಪಾತಿತೇ ॥ ೪೮ ॥

ತಾರಕೇ ಚಾಸುರವರೇ ಸಮುದೀರ್ಣೇ ನಿಪಾತಿತೇ ।
ಸೇಂದ್ರೋಪೇಂದ್ರೈರ್ಮಹಾಭಾಗೈರ್ದೇವೈರಗ್ನಿಸುತಃ ಪ್ರಭುಃ ॥ ೪೯ ॥

---

೪೫. ದೈತ್ಯ ಶತ್ರುವಾದ ಆ ಕುಮಾರನು ಆವಳಿಸುತ್ತಿರಲು ಅವನ ಮುಖದಿಂದ ಜ್ವಾಲಾಮಾಲೆಗಳಿಂದ ವ್ಯಾಪ್ತವಾದ ಮತ್ತು ಅಪಜಯವನ್ನು ಹೊಂದದಿರುವ ತನ್ನ ಶಕ್ತಿಯು ಪ್ರಾದುರ್ಭವಿಸಿತು.

೪೬. ಸರ್ವೇಶ್ವರನಾದ ಮಹಾ ವಿಷ್ಣುವು ಆ ಸ್ಕಂದಸ್ವಾಮಿಯ ಕ್ರೀಡಾ ವಿನೋದಾರ್ಥವಾಗಿ ಗರುಡನೆಂಬ ಮೂಲಕಾರಣದಿಂದ ಸೃಷ್ಟಿಯನ್ನು ಹೊಂದಿರುವ ಮಂಗಳಕರಗಳಾದ ಎರಡು ಪಕ್ಷಿಗಳನ್ನು ಕಲ್ಪಿಸಿದನು.

೪೭. ನವಿಲು ಮತ್ತು ಕೋಳಿ ಎಂಬ ಎರಡು ಪಕ್ಷಿಗಳು ಕ್ರೀಡಾಸಾಧನಗಳಾಗಿದ್ದುವು. ಹಾಗೆಯೇ ವಾಯುದೇವನಿಂದ ಪತಾಕೆಯು ಕೊಡಲ್ಪಟ್ಟಿತು. ಮತ್ತು ಸರಸ್ವತೀದೇವಿಯಿಂದ ಆ ಕುಮಾರನಿಗೆ ಧ್ವನಿ ಗಂಭೀರವಾದ ಮಹಾ ವೀಣೆಯು ಕೊಡಲ್ಪಟ್ಟಿರುವುದು.

೪೮. ಮತ್ತು ಬ್ರಹ್ಮದೇವನಿಂದ ಆಡು, ಶಂಕರನಿಂದ ಟಗರು ಮುಂತಾದ ಕ್ರೀಡಾಸಾಧನಗಳು ಕೊಡಲ್ಪಟ್ಟಿರುವುವು. ದ್ವಿಜನೆ, ಅಂತಹ ಕುಮಾರನು ಕೃತ್ರಿಮವಾದ ಕ್ರೀಡಾಯುದ್ಧದಲ್ಲಿ ಕ್ರೌಂಚಗಿರಿಯನ್ನು ಭೇದಿಸಿದನು.

೪೯. ರಾಕ್ಷಸೇಶ್ವರನಾದ ತಾರಕಾಸುರನು ಮದೋನ್ಮತ್ತನಾಗಿ ಲೋಕಕಂಟಕನಾಗಿರಲು ಅವನ ವಧಾರ್ಥವಾಗಿ ಇಂದ್ರ—ಉಪೇಂದ್ರ ಮುಂತಾದ ನಿಖಿಲ ದೇವತೆಗಳು ಅಗ್ನಿಪುತ್ರನಾದ ಕುಮಾರನನ್ನು ಆಶ್ರಯಿಸಿದರು.

ಸೇನಾಪತ್ಯೇನ ದೈತ್ಯಾರಿರಭಿಷಿಕ್ತಃ ಪ್ರತಾಪವಾನ್ ।
ದೇವಸೇನಾಪತಿಸ್ತ್ವೇಷ ಪಠ್ಯತೇ ಸುರನಾಯಕಃ ॥ ೫೦ ॥

ದೇವಾರಿಸ್ಕಂದನಃ ಸ್ಕಂದಃ ಸರ್ವಲೋಕೇಶ್ವರಃ ಪ್ರಭುಃ ।
ಪ್ರಮಥೈರ್ವಿವಿಧೈರ್ದೇವಸ್ತಥಾಭೂತಗಣೈರಪಿ ॥ ೫೧ ॥

ಮಾತೃಭಿರ್ವಿವಿಧಾಭಿಶ್ಚ ವಿನಾಯಕಗಣೈಸ್ತತಃ ।
ಲೋಕಾಃ ಸೋಮಪದಾ ನಾಮ ಮರೀಚೇರ್ಯತ್ರ ವೈ ಸುತಾಃ॥ ೫೨ ॥

ತತ್ರ ತೇ ದಿವಿ ವರ್ತಂತೇ ದೇವಾಸ್ತಾನ್ ಪೂಜಯಂತ್ಯುತ ।
ಶ್ರುತಾ ಬರ್ಹಿಷದೋ ನಾಮ ಪಿತರಃ ಸೋಮಪಾಸ್ತು ತೇ ॥ ೫೩ ॥

ಏತೇಷಾಂ ಮಾನಸೀ ಕನ್ಯಾ ಅಚ್ಛೋದಾ ನಾಮ ನಿಮ್ನಗಾ ।
ಅಚ್ಛೋದಂ ನಾಮ ತದ್ದಿವ್ಯಂ ಸರೋ ಯಸ್ಮಾತ್ ಸಮುತ್ಥಿತಾ ॥ ೫೪ ॥

---

೫೦. ದೈತ್ಯರ ಶತ್ರುವೂ ಮತ್ತು ಪ್ರತಾಪವಂತನೂ ಆದ ಕುಮಾರನು ದೇವ ಸೇನಾಪತಿ ಪದವಿಯಲ್ಲಿ ಪಟ್ಟಾಭಿಷಿಕ್ತನಾದನು. ಆದುದರಿಂದ ದೇವನಾಯಕನಾದ ಕುಮಾರನು ದೇವ ಸೇನಾಪತಿಯೆಂದು ಕರೆಯಲ್ಪಡುತ್ತಿರುವನು.

೫೧. ಸಕಲ ಲೋಕಾಧಿಪತಿಯೂ ಪ್ರಭುವೂ ಆದ ಕುಮಾರನು ದೇವಶತ್ರುಗಳನ್ನು ಸೋರಿಹೋಗುವಂತೆ ಮಾಡಿರುವುದರಿಂದ ಸ್ಕಂದನೆಂದು ಪ್ರಖ್ಯಾತನಾಗಿ ಅನೇಕ ಪ್ರಮಥ–ಭೂತಗಣಗಳಿಂದ ಸೇವಿಸಲ್ಪಟ್ಟನು.

೫೨. ಹಾಗೆಯೇ ವಿವಿಧವಾದ ಮಾತೃಗಣದಿಂದಲೂ ವಿನಾಯಕ ಗಣದಿಂದಲೂ ಸೇವಿಸಲ್ಪಡುತ್ತಿರುವನು. ಮರೀಚಿ ಮುನಿಯ ಪುತ್ರರು ವಾಸಿಸುವಂತಹ ಸೋಮಪದವೆಂಬ ಲೋಕಗಳು ದ್ಯುಲೋಕದಲ್ಲಿ ಪ್ರಸಿದ್ಧವಾಗಿರುವುವು.

೫೩. ದ್ಯುಲೋಕದಲ್ಲಿರುವ ಆ ಸ್ಥಳದಲ್ಲಿ ಆ ದೇವತೆಗಳು ವಾಸವಾಗಿರುವರು. ಅಂತಹ ದೇವತೆಗಳನ್ನು ಸಕಲರೂ ಪೂಜಿಸುತ್ತಾರೆ. ಅವರು ಸೋಮಪಾನ ಮಾಡಿದ ಬರ್ಹಿಷದರೆಂಬ ಪಿತೃಗಳೆಂದು ಪ್ರಸಿದ್ಧರಾಗಿರುವರು.

೫೪. ಆ ಪಿತೃಗಳಿಗೆ ಅಚ್ಛೋದಾ ಎಂಬ ನದಿಯು ಮಾನಸಕನ್ಯೆಯಾಗಿ ಜನಿಸಿರುವಳು. ಅಚ್ಛೋದವೆಂಬ ಹೆಸರಿನ ದಿವ್ಯ ಸರೋವರದಿಂದ ಆ ನದಿಯು ಪ್ರಾದುರ್ಭವಿಸಿರುವುದು.

ತಯಾ ನ ದೃಷ್ಟಪೂರ್ವಾಸ್ತು ಪಿತರಸ್ತೇ ಕದಾಚನ ।
ಸಂಭೂತಾ ಮಾನಸೀ ತೇಷಾಂ ಪಿತೄನ್ ಸ್ವಾನ್ನಾಭಿಜಾನತೀ ॥ ೫೫ ॥

ಸಾ ಹ್ಯನ್ಯಂ ಪಿತರಂ ವವ್ರೇ ತಾನತಿಕ್ರಮ್ಯ ವೈ ಪಿತೄನ್ ।
ಅಮಾವಸುಮಿತಿ ಖ್ಯಾತಮೈಲಪುತ್ರಂ ನಭಶ್ಚರಮ್ ॥ ೫೬ ॥

ಅದ್ರಿಕಾಪ್ಸರಸಾ ಯುಕ್ತಂ ವಿಮಾನಾಧಿಷ್ಠಿತಂ ದಿವಿ ।
ಸಾ ತೇನ ವ್ಯಭಿಚಾರೇಣ ಗಗನೇನಾಪ್ರಚಾರಿಣೀ ॥ ೫೭ ॥

ಪಿತರಂ ಪ್ರಾರ್ಥಯಿತ್ವಾನ್ಯಂ ಯೋಗಭ್ರಷ್ಟಾ ಪಪಾತ ಹ ।
ತ್ರೀಣ್ಯಪಶ್ಯದ್ವಿಮಾನಾನಿ ಪತಂತೀ ಸಾ ದಿವಶ್ಚ್ಯುತಾ ॥ ೫೮ ॥

ತ್ರಸರೇಣುಪ್ರಮಾಣಾನಿ ತೇಷು ಚಾವಸ್ಥಿತಾನ್ ಪಿತೄನ್ ।
ಸುಸೂಕ್ಷ್ಮಾನಪರಿವ್ಯಕ್ತಾನಗ್ನೀನಗ್ನಿಷ್ವಿವಾಹಿತಾನ್ ॥ ೫೯ ॥

---

೫೫. ಆ ನದಿಯಿಂದ ತನ್ನ ಆ ಪಿತೃಗಳು ಯಾವಾಗಲೂ ನೋಡಲ್ಪಟ್ಟಿರುವುದಿಲ್ಲ. ಆದ್ದರಿಂದ ಆ ಪಿತೃಗಳ ಮಾನಸ ಕನ್ಯೆಯಾದ ಆ ಅಚ್ಛೋದ ನದಿಗೆ ತನ್ನ ಪಿತೃಗಳು ಯಾರೆಂಬ ಜ್ಞಾನವು ಇರಲಿಲ್ಲ.

೫೬. ಆದ್ದರಿಂದ ಆ ನದಿಯು ತನ್ನ ಪಿತೃಗಳನ್ನು ಉಲ್ಲಂಘಿಸಿ ಇಲಾಪುತ್ರನೂ ಗಗನ ಸಂಚಾರಿಯೂ ಆದ ಅಮಾವಸು ಎಂಬ ಪ್ರಸಿದ್ಧನಾದವನನ್ನು ಪಿತೃವನ್ನಾಗಿ ಭಾವಿಸಿದಳು.

೫೭. ಆ ಅಮಾವಸು ಎಂಬುವನು ಅದ್ರಿಕಾ ಎಂಬ ಅಪ್ಸರಾಂಗನೆಯೊಡನೆ ದ್ಯುಲೋಕದಲ್ಲಿ ವಿಮಾನಾರೂಢನಾಗಿ ವಿಹರಿಸುತ್ತಿದ್ದನು. ಅಂತಹವನನ್ನು ಪಿತನನ್ನಾಗಿವರಿಸಿದ ವ್ಯಭಿಚಾರ ದೋಷದಿಂದ ಆ ನದಿಯು ದಿವ್ಯಸ್ಥಾನದ ವಾಸಕ್ಕೆ ಅನರ್ಹಳಾದಳು.

೫೮. ನಿಜ ಪಿತೃಗಳನ್ನು ಬಿಟ್ಟು ಮತ್ತೊಬ್ಬನನ್ನು ಪಿತೃವೆಂದು ಭಾವಿಸಿ ಯೋಗಭ್ರಷ್ಟಳಾದ ಆ ಸತಿಯು ದ್ಯುಲೋಕದಿಂದ ಚ್ಯುತಳಾಗಿ ಬೀಳುತ್ತಿರುವಾಗ ಮೂರು ವಿಮಾನಗಳನ್ನು ಕಂಡಳು.

೫೯. ತ್ರ್ಯಣುಕಗಳ ಪ್ರಮಾಣದಿಂದ ಕೂಡಿದ ಆ ವಿಮಾನಗಳನ್ನೂ ಅವುಗಳಲ್ಲಿ ಅಗ್ನಿಯಲ್ಲಿ ಆಧಾನಮಾಡಿದ ಅಗ್ನಿಗಳಂತೆ ಸೂಕ್ಷ್ಮ ಮತ್ತು ಅಭಿವ್ಯಕ್ತಿಯಿಲ್ಲದಂತೆ ನೆಲೆಸಿರುವ ಪಿತೃಗಳನ್ನೂ ನೋಡಿದಳು.

ತ್ರಾಯಧ್ವಮಿತ್ಯುವಾಚಾರ್ತಾ ಪತಂತೀ ಚಾಪ್ಯವಾಕ್‌ಶಿರಾಃ ।
ತೈರುಕ್ತಾ ಸಾ ತು ಮಾ ಭೈಷೀರಿತ್ಯತೋಽಧಿಷ್ಠಿತಾಭವತ್ ॥ ೬೦ ॥

ತತಃ ಪ್ರಾಸಾದಯತ್ ಸಾ ವೈ ಸೀದಂತೀ ತ್ವನಯಾ ಗಿರಾ ।
ಊಚುಸ್ತೇ ಪಿತರಂ ಕನ್ಯಾಂ ಭ್ರಷ್ಟೈಶ್ವರ್ಯಾಂ ಪ್ರತಿಕ್ರಮಾತ್ ॥ ೬೧ ॥

ಭ್ರಷ್ಟೈಶ್ವರ್ಯಾ ಸ್ವದೋಷೇಣ ಪತಸಿ ತ್ವಂ ಶುಚಿಸ್ಮಿತೇ ।
ಯೈರಾಚರಂತಿ ಕರ್ಮಾಣಿ ಶರೀರೈರಿಹ ದೇವತಾಃ ॥ ೬೨ ॥

ತೈರೇವ ತತ್ ಕರ್ಮಫಲಂ ಪ್ರಾಪ್ನುವಂತಿ ಸದಾ ಸ್ಮ ಹ ।
ಸದ್ಯಃ ಫಲಂತಿ ಕರ್ಮಾಣಿ ದೇವತ್ವೇ ಪ್ರೇತ್ಯ ಮಾನುಷೇ ॥ ೬೩ ॥

ತಸ್ಮಾತ್ ಸ್ವತಪಸಃ ಪುತ್ರಿ ಪ್ರೇತ್ಯ ಸಂಪ್ರಾಪ್ಸ್ಯಸೇ ಫಲಮ್ ।
ಇತ್ಯುಕ್ತಯಾ ತು ಪಿತರಃ ಪುನಸ್ತೇ ತು ಪ್ರಸಾದಿತಾಃ ॥ ೬೪ ॥

---

೬೦. ಅಧೋಮುಖಳಾಗಿ ಆಕಾಶದಿಂದ ಬೀಳುತ್ತ ಪೀಡಾರ್ತಳಾಗಿರುವ ಆ ನದಿಯು ಆ ಪಿತೃಗಳನ್ನು ಉದ್ದೇಶಿಸಿ ರಕ್ಷಿಸಿರಿ ಎಂದು ಕೇಳಿಕೊಂಡಳು. ಆಗ ಆ ಪಿತೃಗಳ ಹೆದರಬೇಡ ಎಂಬ ಅಭಯವಚನವನ್ನು ಕೇಳಿ ಅಲ್ಲಿಯೇ ನೆಲೆಸಿದಳು.

೬೧. ಬಹು ದುಃಖಿತಳಾದ ಆಕೆಯು ಈ ಅಭಯವಚನದಿಂದ ಪ್ರಸನ್ನಳಾದಳು. ಆಗ ವ್ಯತಿಕ್ರಮದೋಷದಿಂದ ಐಶ್ವರ್ಯವನ್ನು ಕಳೆದುಕೊಂಡಿರುವ ಆ ಕನ್ಯೆಯನ್ನು ಕುರಿತು ಪಿತೃದೇವತೆಗಳು ಈ ರೀತಿಯಾಗಿ ಹೇಳಿದರು.

೬೨. ಪವಿತ್ರಮಂದಹಾಸ ಶೋಭಿತಳೇ ! ನೀನು ನಿನ್ನ ಪಾಪದೋಷದಿಂದ ಐಶ್ವರ್ಯಭ್ರಷ್ಟಳಾಗಿ ಬೀಳುತ್ತಲಿರುವಿ. ದೇವತೆಗಳು ಮಾಡಿರುವ ವ್ಯತಿಕ್ರಮದೋಷದ ಫಲವನ್ನು ಆ ಶರೀರದಿಂದಲೇ ಅನುಭವಿಸುವರು.

೬೩. ದೇವತಾಭಾವದಲ್ಲಿ ಮಾಡಿದ ಕರ್ಮಗಳು ತತ್ಕ್ಷಣದಲ್ಲಿಯೇ ಫಲಿಸುವುವಾದ್ದರಿಂದ ಪಾಪಮಾಡಿದ ಶರೀರದಿಂದಲೇ ಆ ಫಲವನ್ನು ಅನುಭವಿಸಬೇಕಾಗುವುದು. ಮನುಷ್ಯರಿಗೆ ಮರಣಾನಂತರದಲ್ಲಿ ಬೇರೆ ದೇಹಗಳಲ್ಲಿ ಕರ್ಮ ಫಲಗಳು ಪ್ರಾಪ್ತವಾಗುವುವು.

೬೪. ಪುತ್ರಿಯೆ ! ಆದ್ದರಿಂದ ನಿನ್ನ ತಪಸ್ಸಿನ ಪುಣ್ಯಫಲವನ್ನು ಮರಣಾನಂತರದಲ್ಲಿ ಅನುಭವಿಸುತ್ತೀ, ಹೀಗೆಂದು ಪಿತೃಗಳಿಂದ ಬೋಧಿಸಲ್ಪಟ್ಟ ಆ ನದಿಯು ಮತ್ತೆ ಪಿತೃಗಳನ್ನು ಪ್ರಸನ್ನಗೊಳಿಸಿದಳು.

ಧ್ಯಾತ್ವಾ ಪ್ರಸಾದಂ ತೇ ಚಕ್ರುಸ್ತಸ್ಯಾಸ್ತದನುಕಂಪಯಾ ।
ಅವಶ್ಯಂಭಾವಿನಂ ದೃಷ್ಟ್ವಾ ಹ್ಯರ್ಥಮೂಚುಸ್ತದಾ ತು ತಾಮ್ ॥ ೬೫ ॥

ಸೋಮಪಾಃ ಪಿತರಃ ಕನ್ಯಾಂ ರಾಜ್ಞೋಽಸ್ಯೈವ ತ್ವಮಾವಸೋಃ ।
ಉತ್ಪನ್ನಸ್ಯ ಪೃಥಿವ್ಯಾಂ ತು ಮಾನುಷೇಷು ಮಹಾತ್ಮನಃ ॥ ೬೬ ॥

ಕನ್ಯಾ ಭೂತ್ವಾ ತ್ವಿಮಾಂಲ್ಲೋಕಾನ್ ಪುನಃ ಪ್ರಾಪ್ಸ್ಯಸಿ ಭಾಮಿನಿ ।
ಅಷ್ಟಾವಿಂಶೇ ಭವಿತ್ರೀ ತ್ವಂ ದ್ವಾಪರೇ ಮತ್ಸ್ಯಯೋನಿಜಾ ॥ ೬೭ ॥

ಅಸ್ಯೈವ ರಾಜ್ಞೋ ದುಹಿತಾ ಹ್ಯದ್ರಿಕಾಯಾಮಮಾವಸೋಃ ।
ಪರಾಶರಸ್ಯ ದಾಯಾದಮೃಷಿಂ ತ್ವಂ ಜನಯಿಷ್ಯಸಿ ॥ ೬೮ ॥

ಸ ವೇದಮೇಕಂ ಬ್ರಹ್ಮರ್ಷಿಶ್ಚತುರ್ಧಾ ವಿಭಜಿಷ್ಯತಿ ।
ಮಹಾಭಿಷಸ್ಯ ಪುತ್ರೌ ದ್ವೌ ಶಂತನೋಃ ಕೀರ್ತಿವರ್ಧನೌ ॥ ೬೯ ॥

---

೬೫. ಆಗ ಪಿತೃಗಳು ಆಕೆಯ ವಿಷಯದಲ್ಲಿ ದಯೆಯಿಂದ ಧ್ಯಾನಾಸಕ್ತರಾಗಿ ಅನುಗ್ರಹವನ್ನು ತೋರಿಸಿದರು. ಮತ್ತು ಮುಂದೆ ಅವಶ್ಯಭಾವಿಯಾದ ಅರ್ಥವನ್ನು ತಿಳಿದು ಅದಕ್ಕೆ ಅನುಗುಣವಾಗಿ ಅವಳನ್ನು ಕುರಿತು ಹೇಳಿದರು.

೬೬. ಸೋಮಪರಾದ ಪಿತೃಗಳು ಆ ಕನ್ಯೆಯನ್ನು ಕುರಿತು ಈ ರೀತಿಯಾಗಿ ಹೇಳಿದರು:- ಅಮಾವಸು ಎಂಬ ಮಹಾತ್ಮನಾದ ಈ ರಾಜನು ಪೃಥಿವಿಯಲ್ಲಿ ಮನುಷ್ಯವಂಶದಲ್ಲಿ ಜನ್ಮವನ್ನೆತ್ತಿರುವನು.

೬೭. ಉತ್ತಮನಾರಿಯೆ ! ಆ ರಾಜನಿಗೆ ನೀನು ಕನ್ಯೆಯಾಗಿ ಹುಟ್ಟಿ ಮತ್ತೆ ಈ ಲೋಕಗಳನ್ನು ಸೇರುತ್ತೀ, ಮತ್ತೆ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಮತ್ಸ್ಯ ಯೋನಿಯಲ್ಲಿ ಜನ್ಮವನ್ನು ಹೊಂದುತ್ತೀ.

೬೮. ಆಗ ಅಮಾವಸು ಎಂಬುವ ಈ ರಾಜನಿಗೆ ಅದ್ರಿಕಾ ಎಂಬ ಅಪ್ಸರಸ್ತ್ರೀಯಲ್ಲಿ ಕನ್ಯೆಯಾಗಿ ಜನಿಸುತ್ತೀ. ಮತ್ತು ಪರಾಶರ ಮುನಿಯ ಪುತ್ರನಾದ ಮುನಿಯನ್ನು ಪ್ರಸವಿಸುತ್ತೀ.

೬೯. ಆ ಬ್ರಹ್ಮರ್ಷಿಯಾದ ಮುನಿಯು ಏಕರೂಪವಾಗಿದ್ದ ವೇದವನ್ನು ನಾಲ್ಕಾಗಿ ವಿಭಜಿಸುವನು. ಮಹಾಭಿಷ ಅಥವಾ ಶಂತನು ಎಂಬ ರಾಜನಿಗೆ ಕೀರ್ತಿಯನ್ನು ವಿಸ್ತರಗೊಳಿಸುವ ಇಬ್ಬರು ಪುತ್ರರಿದ್ದರು.

ವಿಚಿತ್ರವೀರ್ಯಂ ಧರ್ಮಜ್ಞಂ ತ್ವಮೇವೋತ್ಪಾದಯಿಷ್ಯಸಿ ।
ಚಿತ್ರಾಂಗದಂ ಚ ರಾಜಾನಂ ಸರ್ವಸತ್ತ್ವಬಲಾನ್ವಿತಮ್ ॥ ೨೦ ॥

ಏತಾನುತ್ಪಾದಯಿತ್ವಾಥ ಪುನರ್ಲೋಕಾನವಾಪ್ಸ್ಯಸಿ ।
ವ್ಯಭಿಚಾರಾತ್ ಪಿತೄಣಾಂ ತ್ವಂ ಪ್ರಾಪ್ಸ್ಯಸೇ ಜನ್ಮ ಕುತ್ಸಿತಮ್ ॥ ೨೧ ॥

ತಸ್ಯೈವ ರಾಜ್ಞಸ್ತ್ವಂ ಕನ್ಯಾ ಅದ್ರಿಕಾಯಾಂ ಭವಿಷ್ಯಸಿ ।
ಕನ್ಯಾ ಭೂತ್ವಾ ತತಶ್ಚ ತ್ವಮಿಮಾನ್ ಲೋಕಾನವಾಪ್ಸ್ಯಸಿ ॥ ೨೨ ॥

ಏವಮುಕ್ತಾ ತು ದಾಶೇಯೀ ಜಾತಾ ಸತ್ಯವತೀ ತು ಸಾ ।
ಅದ್ರಿಕಾಯಾಃ ಸುತಾ ಮತ್ಸ್ಯಾಃ ಸುತಾ ಜಾತಾ ಹ್ಯಮಾವಸೋಃ॥ ೨೩ ॥

ಅದ್ರಿಕಾ ಮತ್ಸ್ಯಸಂಭೂತಾ ಗಂಗಾಯಮುನಸಂಗಮೇ ।
ತಸ್ಯ ರಾಜ್ಞೋ ಹಿ ಸಾ ಕನ್ಯಾ ರಾಜ್ಞೋ ವೀರ್ಯೇಣ ಚೈವ ಹಿ॥ ೨೪ ॥

---

೨೦. ಧರ್ಮಸೇತುವನ್ನು ಬಲ್ಲ ವಿಚಿತ್ರವೀರ್ಯ ಮತ್ತು ಸಕಲ ಶಕ್ತಿ ಧೈರ್ಯಗಳಿಂದ ಕೂಡಿದ ಚಿತ್ರಾಂಗದನೆಂಬ ರಾಜ ಎಂಬ ಆ ಇಬ್ಬರು ಪುತ್ರರನ್ನು ನೀನು ಪ್ರಸವಿಸುತ್ತೀ.

೨೧. ಇಷ್ಟು ಮಂದಿ ಪುತ್ರರನ್ನು ನೀನು ಪ್ರಸವಿಸಿ ಮತ್ತೆ ಈ ಪುಣ್ಯಲೋಕಗಳನ್ನು ಹೊಂದುತ್ತೀ. ನಿನ್ನ ಪೂಜ್ಯ ಪಿತೃಗಳನ್ನು ಅತಿಕ್ರಮಿಸಿದ ವ್ಯಭಿಚಾರ ದೋಷದಿಂದ ನಿಂದ್ಯವಾದ ಜನ್ಮವನ್ನು ನೀನು ಪಡೆಯುತ್ತೀ.

೨೨. ಆ ರಾಜನಿಗೆ ಅದ್ರಿಕಾ ಎಂಬ ಅಪ್ಸರಾಂಗನೆಯಲ್ಲಿ ಕನ್ಯೆಯಾಗಿ ಹುಟ್ಟುತ್ತೀ. ಕನ್ಯಾಜನ್ಮವನ್ನು ಪರಿಗ್ರಹಿಸಿದ ತರುವಾಯ ಈ ಲೋಕಗಳನ್ನು ಹೊಂದುತ್ತೀ. ಎಂದು ಪಿತೃದೇವತೆಗಳು ನುಡಿದರು.

೨೩. ಈ ರೀತಿಯಾಗಿ ಪಿತೃಗಳಿಂದ ಬೋಧಿಸಲ್ಪಟ್ಟ ಅಚ್ಛೋದಾ ಎಂಬಾಕೆಯು ಅಮಾವಸು ಎಂಬುವ ದಾಶರಾಜನ ಪತ್ನಿಯಾದ ಅದ್ರಿಕಾ ಎಂಬ ಮತ್ಸ್ಯಸ್ತ್ರೀಯಲ್ಲಿ ಸತ್ಯವತಿಯೆಂಬ ನಾಮಾಂಕಿತಳಾದ ಪುತ್ರಿಯಾಗಿ ಜನಿಸಿದಳು.

೨೪. ಗಂಗಾ ಮತ್ತು ಯಮುನಾ ನದಿಗಳ ಸಂಗಮ ಸ್ಥಳಗಳಲ್ಲಿ ಅಮಾವಸು ರಾಜನ ವೀರ್ಯನಿಂದ ಅದ್ರಿಕಾ ಎಂಬ ಮತ್ಸ್ಯಾಂಗನೆಯಲ್ಲಿ ಕನ್ಯೆಯಾಗಿ ಹುಟ್ಟಿರುವಳು.

ವಿರಜಾ ನಾಮ ತೇ ಲೋಕಾ ದಿವಿ ರೋಚಂತಿ ತೇ ಗಣಾಃ ।
ಅಗ್ನಿಷ್ವಾತ್ತಾಃ ಸ್ಮೃತಾಸ್ತತ್ರ ಪಿತರೋ ಭಾಸ್ಕರಪ್ರಭಾಃ ॥ ೭೫ ॥

ತಾನ್ ದಾನವಗಣಾ ಯಕ್ಷಾ ರಕ್ಷೋಗಂಧರ್ವಕಿನ್ನರಾಃ ।
ಭೂತಸರ್ಪಪಿಶಾಚಾಶ್ಚ ಭಾವಯಂತಿ ಫಲಾರ್ಥಿನಃ ॥ ೭೬ ॥

ಏತೇ ಪುತ್ರಾಃ ಸಮಾಖ್ಯಾತಾಃ ಪುಲಹಸ್ಯ ಪ್ರಜಾಪತೇಃ ।
ಏತೇಷಾಂ ಮಾನಸೀ ಕನ್ಯಾ ಪೀವರೀ ನಾಮ ವಿಶ್ರುತಾ ॥ ೭೭ ॥

ಯೋಗಿನೀ ಯೋಗಪತ್ನೀ ಚ ಯೋಗಮಾತಾ ತಥೈವ ಚ ।
ಭವಿತಾ ದ್ವಾಪರಂ ಪ್ರಾಪ್ಯ ಅಷ್ಟಾವಿಂಶತಿಮೇವ ತು ॥ ೭೮ ॥

ಶ್ರೀಮಾನ್ ವ್ಯಾಸೋ ಮಹಾಯೋಗೀ ಯೋಗಸ್ತಸ್ಮಿನ್ ದ್ವಿಜೋತ್ತಮಾಃ ॥
ವ್ಯಾಸಾದರಣ್ಯಾಂ ಸಂಭೂತೋ ವಿಧೂಮ ಇವ ಪಾವಕಃ ॥ ೭೯ ॥

---

೭೫. ಮತ್ತು ದ್ಯುಲೋಕದಲ್ಲಿ ವಿರಜಾ ಎಂಬ ಕೆಲವು ದೇಶಗಳು ಪ್ರಕಾಶಿಸುತ್ತಲಿವೆ. ಅಲ್ಲಿ ಸೂರ್ಯನಿಗೆ ಸಮಾನವಾದ ಪ್ರಭಾಪುಂಜವುಳ್ಳ ಅಗ್ನಿಷ್ವಾತ್ತರೆಂಬ ಪಿತೃ ದೇವತೆಗಳು ಇರುವರೆಂದು ಸ್ಮರಿಸಲ್ಪಟ್ಟಿರುವರು.

೭೬. ಆ ದೇತೆಗಳನ್ನು ಫಲಾಕಾಂಕ್ಷಿಗಳಾದ ದಾನವ, ಯಕ್ಷ, ಗಂಧರ್ವ, ಕಿನ್ನರ, ಭೂತ, ಸರ್ಪ, ಪಿಶಾಚ ಮುಂತಾದ ಪ್ರಜೆಗಳ ಗುಂಪು ಉಪಾಸನ ಮಾಡುತ್ತಿದೆ.

೭೭. ಇವರು ಪುಲಹ ಪ್ರಜಾಪತಿಯ ಪುತ್ರರೆಂದು ಸ್ಮರಿಸಲ್ಪಟ್ಟಿರುವರು. ಇವರಿಗೆ ಪೀವರೀ ಎಂಬ ನಾಮದಿಂದ ಪ್ರಸಿದ್ಧಳಾದ ಕನ್ಯೆಯು ಮಾನಸ ಪುತ್ರಿಯಾಗಿ ಜನಿಸಿರುವಳು.

೭೮. ಅವಳು ಇಪ್ಪತ್ತೆಂಟನೆಯ ದ್ವಾಪರಯುಗ ಸಮಯವನ್ನು ಹೊಂದಿ ಯೋಗಿನಿ, ಯೋಗಪತ್ನಿ ಮತ್ತು ಯೋಗ ಜನನಿಯೂ ಆಗುವಳು.

೭೯. ದ್ವಿಜೋತ್ತಮರೇ! ಶ್ರೀಮಂತನೂ ಮಹಾ ಯೋಗಿಯೂ ಆದ ವ್ಯಾಸಮುನಿಯು ಸಾಕ್ಷಾತ್ ಯೋಗಸ್ವರೂಪನು. ಅಂತಹ ವ್ಯಾಸಮುನಿಯಿಂದ ಹೊಗೆಯಿಲ್ಲದಂತೆ ಜ್ವಲಿಸುತ್ತಲಿದ್ದ ಅಗ್ನಿಯು ಅರಣಿಯಲ್ಲಿ ಹುಟ್ಟಿದಂತೆ ಒಬ್ಬ ಪುತ್ರನು ಜನಿಸಿದನು.

**ಪರಾಶರಕುಲೋದ್ಭೂತಃ ಶುಕೋ ನಾಮ ಮಹಾತಪಾಃ ।**
**ಸ ತಸ್ಯಾಂ ಪಿತೃಕನ್ಯಾಯಾಂ ಪೀವರ್ಯಾಂ ಜನಯದ್ವಿಭುಃ ॥ ೮೦ ॥**

**ಪುತ್ರಾನ್ ಪಂಚ ಯೋಗಚರ್ಯಾಪರಿಪೂರ್ಣಾನ್ ಪರಿಶ್ರುತಾನ್ ।**
**ಕೃಷ್ಣಂ ಗೌರಂ ಪ್ರಭುಂ ಶಂಭುಂ ತಥಾ ಭೂರಿಶ್ರುತಂ ಚ ವೈ ॥ ೮೧ ॥**

**ಕನ್ಯಾಂ ಕೀರ್ತಿಮತೀಂ ಚೈವ ಯೋಗಿನೀಂ ಯೋಗಮಾತರಮ್ ।**
**ಬ್ರಹ್ಮದತ್ತಸ್ಯ ಜನನೀ ಮಹಿಷೀ ತ್ವಣುಹಸ್ಯ ಸಾ ॥ ೮೨ ॥**

**ಆದಿತ್ಯಕಿರಣೋಪೇತಮಪುನರ್ಮಾರ್ಗಮಾಸ್ಥಿತಃ ।**
**ಸರ್ವವ್ಯಾಪೀ ವಿನಿರ್ಮುಕ್ತೋ ಭವಿಷ್ಯತಿ ಮಹಾಮುನಿಃ ॥ ೮೩ ॥**

**ತ್ರಯ ಏತೇ ಗಣಾಃ ಪ್ರೋಕ್ತಾಶ್ಚತುಃಶೇಷಾನ್ನಿಬೋಧತ ।**
**ತಾನ್ ವಕ್ಷ್ಯಾಮಿ ದ್ವಿಜಶ್ರೇಷ್ಠಾಃ ಪ್ರಭಾಮೂರ್ತಿಮತೋ ಗಣಾನ್ ॥ ೮೪ ॥**

---

೮೦. ಆ ಪುತ್ರನು ಪರಾಶರಮುನಿಯ ವಂಶದಲ್ಲಿ ಹುಟ್ಟಿದ ಮಹಾ ತಪಸ್ವಿಯಾದ ಶುಕಾಚಾರ್ಯನೆಂದು ಪ್ರಸಿದ್ಧನಾಗಿರುವನು, ಆ ಮುನಿಯು ಪಿತೃ ಕನ್ಯೆಯಾದ ಆ ಪೀವರಿಯಲ್ಲಿ ಮುಂದೆ ಹೇಳುವ ಪ್ರಜೆಯನ್ನು ಸೃಷ್ಟಿಸಿದನು.

೮೧. ಆ ಪುತ್ರರು ಐದುಮಂದಿಯಾಗಿ ಕೃಷ್ಣ, ಗೌರ, ಪ್ರಭು, ಶಂಭು ಮತ್ತು ಭೂರಿಶ್ರುತ ಎಂಬ ನಾಮಾಂಕಿತರಾಗಿಯೂ ಯೋಗಚರ್ಯಾನಿಷ್ಣಾತರಾಗಿಯೂ ಮತ್ತು ಬಹು ಪ್ರಸಿದ್ಧಿಯುಳ್ಳವರಾಗಿಯೂ ಇದ್ದರು.

೮೨. ಮತ್ತು ಆ ಪೀವರೀದೇವಿಯು ಅಣುಹ ಎಂಬುವನ ಭಾರ್ಯೆಯಾಗಿಯೂ ಬ್ರಹ್ಮದತ್ತನ ಜನನಿಯಾಗಿಯೂ ಸ್ವಯಂಯೋಗಿನಿಯಾಗಿಯೂ ಮತ್ತು ಯೋಗಮಾತೆಯಾಗಿಯೂ ಇರುವ ಕೀರ್ತಿಮತೀ ಎಂಬ ಕನ್ಯೆಯನ್ನು ಹೊಂದಿದಳು.

೮೩. ಆ ಶುಕ ಮಹಾಮುನಿಯು ಸೂರ್ಯಕಿರಣಗಳ ಸಂಪರ್ಕವುಳ್ಳ ಪುನರಾವೃತ್ತಿರಹಿತವಾದ ಯೋಗಮಾರ್ಗವನ್ನು ಅವಲಂಬಿಸಿ ಸರ್ವವ್ಯಾಪಿಯೂ ಸರ್ವಸಂಗವಿನಿರ್ಮುಕ್ತನೂ ಆಗುವನು.

೮೪. ಈ ರೀತಿಯಾಗಿ ಮೂರು ಗಣಗಳು ಉಪದೇಶಿಸಲ್ಪಟ್ಟಿವೆ. ಮಿಕ್ಕ ನಾಲ್ಕು ಗಣಗಳನ್ನು ಕೇಳಿರಿ, ದ್ವಿಜಶ್ರೇಷ್ಠರೆ! ಆ ನಾಲ್ಕು ಗಣಗಳು ಪ್ರಭಾಮಯವಾದ ಮೂರ್ತಿಯನ್ನು ಧರಿಸಿರುವುವು. ಅವುಗಳನ್ನು ವರ್ಣಿಸುತ್ತೇನೆ.

ಉತ್ಪನ್ನಾಸ್ತು ಸ್ವಧಾಯಾಂ ತೇ ಕಾವ್ಯಾ ಹ್ಯಗ್ನೇಃ ಕವೇಃ ಸುತಾಃ ।
ಪಿತರೋ ದೇವಲೋಕೇಷು ಜ್ಯೋತಿರ್ಭಾಸಿಷು ಭಾಸ್ವರಾಃ ॥ ೮೫ ॥

ಸರ್ವಕಾಮಸಮೃದ್ಧೇಷು ದ್ವಿಜಾಸ್ತಾನ್ ಭಾವಯಂತ್ಯುತ ।
ಏತೇಷಾಂ ಮಾನಸೀ ಕನ್ಯಾ ಯೋಗೋತ್ಪತ್ತಿರಿತಿ ಶ್ರುತಾ ॥ ೮೬ ॥

ದತ್ತಾ ಸನತ್ಕುಮಾರೇಣ ಶುಕ್ರಸ್ಯ ಮಹಿಷೀ ತು ಯಾ ।
ಏಕಶೃಂಗೇತಿ ವಿಖ್ಯಾತಾ ಭೃಗೂಣಾಂ ಕೀರ್ತಿವರ್ಧನೀ ॥ ೮೭ ॥

ಮರೀಚಿಗರ್ಭಾಸ್ತೇ ಲೋಕಾಃ ಸಮಾವೃತ್ಯ ದಿವಿ ಸ್ಥಿತಾಃ ।
ಏತೇ ಹ್ಯಂಗಿರಸಃ ಪುತ್ರಾಃ ಸಾಧ್ಯೈಃ ಸಂವರ್ಧಿತಾಃ ಪುರಾ ॥ ೮೮ ॥

ಉಪಹೂತಾಃ ಸ್ಮೃತಾಸ್ತೇ ವೈ ಪಿತರೋ ಭಾಸ್ವರಾ ದಿವಿ ।
ತಾನ್ ಕ್ಷತ್ರಿಯಗಣಾಃ ಸಪ್ತ ಭಾವಯಂತಿ ಫಲಾರ್ಥಿನಃ ॥ ೮೯ ॥

---

೮೫. ಅವರು ಕವಿ ಎಂಬ ಅಗ್ನಿಯಿಂದ ಸ್ವಧಾದೇವಿಯಲ್ಲಿ ಉತ್ಪನ್ನರಾಗಿ ಕಾವ್ಯ ಎಂದು ಪ್ರಸಿದ್ಧರಾಗಿರುವರು. ಜ್ಯೋತಿರ್ಮಂಡಲ ರೂಪದಿಂದ ಪ್ರಕಾಶಿಸುವ ದೇವಲೋಕಗಳಲ್ಲ ಆ ಪಿತೃದೇವತೆಗಳು ಪ್ರಕಾಶಿಸುವರು.

೮೬. ಸರ್ವಕಾಮಗಳ ಸಮೃದ್ಧಿಯುಳ್ಳ ಆ ದೇಶಗಳಲ್ಲಿ ದ್ವಿಜರು ಆ ಪಿತೃ ದೇವತೆಗಳನ್ನು ಸೇವಿಸುವರು. ಇವರಿಗೆ ಯೋಗೋತ್ಪತ್ತಿ ಎಂಬ ಹೆಸರಿನ ಕನ್ಯೆಯು ಮಾನಸಪುತ್ರಿಯಾಗಿ ಜನಿಸಿರುವಳು.

೮೭. ಆ ಯೋಗೋತ್ಪತ್ತಿಯೆಂಬ ಕನ್ಯೆಯು ಸನತ್ಕುಮಾರ ಮುನಿಯಿಂದ ಶುಕ್ರಾಚಾರ್ಯನಿಗೆ ಪಟ್ಟದ ರಾಣಿಯಾಗಿ ಕೊಡಲ್ಪಟ್ಟು ಏಕಶೃಂಗಾ ಎಂಬ ನಾಮಾಂತರದಿಂದ ಪ್ರಸಿದ್ಧಳಾಗಿ ಭೃಗು ವಂಶದ ಮುನಿಗಳ ಕೀರ್ತಿಯನ್ನು ಹೆಚ್ಚಿಸಿದಳು.

೮೮. ಸೂರ್ಯಕಿರಣಗಳಿಂದ ಗರ್ಭಿತಗಳಾದ ಆ ಲೋಕಗಳು ದ್ಯುಲೋಕವನ್ನೆಲ್ಲ ಆವರಿಸಿಕೊಂಡು ಇವೆ. ಇಲ್ಲಿರುವ ಪಿತೃದೇವತೆಗಳು ಪೂರ್ವದಲ್ಲಿ ಸಾಧ್ಯ ಎಂಬ ದೇವಯೋನಿ ವಿಶೇಷರಿಂದ ವೃದ್ಧಿಗೊಳಿಸಲ್ಪಟ್ಟಿರುವ ಅಂಗಿರೋಮುನಿಯ ಪುತ್ರರಾಗಿರುವರು.

೮೯. ಆ ಪಿತೃಗಳು ಉಪಹೂತ ಎಂಬ ಪವಿತ್ರನಾಮ ಪ್ರಸಿದ್ಧಿಯುಳ್ಳವರಾಗಿ ದ್ಯುಲೋಕದಲ್ಲಿ ಪ್ರಕಾಶಿಸುತ್ತಿರುವರು. ಆ ಪಿತೃಗಣವನ್ನು ಏಳು ಕ್ಷತ್ರಿಯ ಗಣಗಳು ಫಲಾಕಾಂಕ್ಷೆಯಿಂದ ಸೇವಿಸುತ್ತಿವೆ

ಏತೇಷಾಂ ಮಾನಸೀ ಕನ್ಯಾ ಯಶೋದಾ ನಾಮ ವಿಶ್ರುತಾ ।
ಮಾತಾ ಯಾ ಜನನೀ ದೇವೀ ಖಟ್ವಾಂಗಸ್ಯ ಮಹಾತ್ಮನಃ ॥ ೯೦ ॥

ಯಜ್ಞೇ ಯಸ್ಯ ಪುರಾ ಗೀತಾ ಗಾಥಾಗೀತೈರ್ಮಹರ್ಷಿಭಿಃ ।
ಅಗ್ನೇರ್ಜನ್ಮ ತದಾ ದೃಷ್ಟ್ವಾ ಶಾಂಡಿಲ್ಯಸ್ಯ ಮಹಾತ್ಮನಃ ॥ ೯೧ ॥

ಯಜಮಾನಂ ದಿಲೀಪಂ ಯೇ ಪಶ್ಯಂತ್ಯತ್ರ ಸಮಾಹಿತಾಃ ।
ಸತ್ಯವ್ರತಂ ಮಹಾತ್ಮಾನಂ ತೇಽಪಿ ಸ್ವರ್ಗಜಿತೋ ನರಾಃ ॥ ೯೨ ॥

ಆಜ್ಯಪಾ ನಾಮ ಪಿತರಃ ಕರ್ದಮಸ್ಯ ಪ್ರಜಾಪತೇಃ ।
ಸಮುತ್ಪನ್ನಸ್ಯ ಪುಲಹಾದುತ್ಪನ್ನಾಸ್ತಸ್ಯ ತೇ ಸುತಾಃ ॥ ೯೩ ॥

ಲೋಕೇಷು ತೇಷು ವರ್ತಂತೇ ಕಾಮಗೇಷು ವಿಹಂಗಮಾಃ ।
ಏತಾನ್ ವೈಶ್ಯಗಣಾಃ ಶ್ರಾದ್ಧೇ ಭಾವಯಂತಿ ಫಲಾರ್ಥಿನಃ ॥ ೯೪ ॥

---

೯೦. ಆ ಪಿತೃಗಳಿಗೆ ಯಶೋದಾ ಎಂಬ ಪ್ರಸಿದ್ಧಿಯನ್ನು ಹೊಂದಿರುವ ಮಾನಸ ಕನ್ಯೆಯು ಪುತ್ರಿಯಾಗಿದ್ದಳು. ಅವಳು ಮಹಾತ್ಮನಾದ ಖಟ್ವಾಂಗನಿಗೆ ಜನನಿಯಾಗಿರುವಳೆಂದು ಮುನಿಗಳು ಸ್ಮರಿಸುವರು.

೯೧. ಆ ಖಟ್ವಾಂಗನ ವಿಷಯದಲ್ಲಿ ನಾನಾವಿಧವಾದ ಗಾಥೆಗಳನ್ನು ಗಾನ ಮಾಡುವ ಶೀಲವುಳ್ಳ ಮುನಿಗಳು ಒಂದು ಗಾಥೆಯನ್ನು ಹೇಳಿರುವರು. ಅಗ್ನಿಯಿಂದ ಶಾಂಡಿಲ್ಯನೆಂಬ ಮುನಿವರನ ಜನ್ಮವನ್ನು ಸಾಕ್ಷಾತ್ಕರಿಸಬೇಕು.

೯೨. ಮತ್ತು ಈ ಯಜ್ಞಶಾಲೆಯಲ್ಲಿ ಯಜಮಾನನಾಗಿದ್ದ ಮತ್ತು ಸತ್ಯವ್ರತ, ಮಹಾತ್ಮ ಮುಂತಾದ ಕೀರ್ತಿಯನ್ನು ಹೊಂದಿರುವ ದಿಲೀಪನನ್ನು ಸಮಾಧಾನ ಚಿತ್ತದಿಂದ ಸಂದರ್ಶಿಸಿದ ಮಾನವರು ಕೂಡ ಸ್ವರ್ಗವನ್ನು ಗೆಲ್ಲುವರು ಎಂಬುದು ಆ ಗಾಥೆಯ ಅರ್ಥವು.

೯೩. ಪುಲಹನಿಂದ ಹುಟ್ಟಿರುವ ಕರ್ದಮ ಪ್ರಜಾಪತಿಗೆ ಪುತ್ರರಾಗಿ ಜನಿಸಿರುವ ಪಿತೃದೇವತೆಗಳು ಆಜ್ಯಪ ಪಿತೃಗಣವೆಂದು ಪ್ರಸಿದ್ಧರಾಗಿರುವರು.

೯೪. ಅವರು ಸ್ವಚ್ಛಂದ ಸಂಚಾರಕ್ಕೆ ಅರ್ಹವಾದ ಲೋಕಗಳಲ್ಲಿ ವಿವಿಧ ರೂಪಧರರಾದ ಗಗನಚರರಾಗಿರುವರು. ಅವರನ್ನು ವೈಶ್ಯರು ಸತ್ಫಲಾಕಾಂಕ್ಷಿಗಳಾಗಿ ಶ್ರಾದ್ಧಯಜ್ಞದಲ್ಲಿ ಪೂಜಿಸುವರು.

ಏತೇಷಾಂ ಮಾನಸೀ ಕನ್ಯಾ ವಿರಜಾ ನಾಮ ವಿಶ್ರುತಾ ।
ಯಯಾತೇರ್ಜನನೀ ಸಾಧ್ವೀ ಪತ್ನೀ ಸಾ ನಹುಷಸ್ಯ ಚ ॥ ೯೫ ॥

ಸುಕಾಲಾ ನಾಮ ಪಿತರೋ ವಸಿಷ್ಠಸ್ಯ ಮಹಾತ್ಮನಃ ।
ಹೈರಣ್ಯಗರ್ಭಸ್ಯ ಸುತಾಃ ಶೂದ್ರಾಸ್ತಾಂ ಭಾವಯಂತ್ಯುತ ॥ ೯೬ ॥

ಮಾನಸಾ ನಾಮ ತೇ ಲೋಕಾ ವರ್ತಂತೇ ಯತ್ರ ತೇ ದಿವಿ ।
ಏತೇಷಾಂ ಮಾನಸೀ ಕನ್ಯಾ ನರ್ಮದಾ ಸರಿತಾಂ ವರಾ ॥ ೯೭ ॥

ಸಾ ಭಾವಯತಿ ಭೂತಾನಿ ದಕ್ಷಿಣಾಪಥಗಾಮಿನೀ ।
ಜನನೀ ಸಾ ತ್ರಸದ್ದಸ್ಯೋಃ ಪುರುಕುತ್ಸಪರಿಗ್ರಹಃ । ॥ ೯೮ ॥

ಏತೇಷಾಮಭ್ಯುಪಗಮಾನ್ಮನುರ್ಮನ್ವಂತರೇಶ್ವರಃ ।
ಮನ್ವಂತರಾದೌ ಶ್ರಾದ್ಧಾನಿ ಪ್ರವರ್ತಯತಿ ಸರ್ವಶಃ । ॥ ೯೯ ॥

---

೯೫. ಇವರಿಗೆ ಹುಟ್ಟಿದ ಮಾನಸ ಕನ್ಯೆಯು ವಿರಜಾ ಎಂಬ ನಾಮದಿಂದ ಪ್ರಸಿದ್ಧಳಾಗಿರುವಳು. ಅವಳು ನಹುಷ ಮಹಾರಾಜನ ಪತ್ನಿಯೂ ಮತ್ತು ಯಯಾತಿ ರಾಜನ ಜನನಿಯೂ ಆಗಿರುವಳು.

೯೬. ಬ್ರಹ್ಮನ ಮಾನಸಪುತ್ರನಾದ ಮಹಾತ್ಮನಾದ ವಸಿಷ್ಠಮುನಿಯ ಪುತ್ರರು ಸುಕಾಲ ಎಂಬ ಹೆಸರುಳ್ಳ ಪಿತೃಗಣರೂಪರಾದರು. ಆ ಪಿತೃಗಣವನ್ನು ಶೂದ್ರರು ಫಲಾಭಿಸಂಧಿಯಿಂದ ಪೂಜಿಸುವರು.

೯೭. ಆ ಪಿತೃಗಳು ದ್ಯುಲೋಕದ ಮಾನಸ ಎಂಬ ಪ್ರಖ್ಯಾತಸ್ಥಳಗಳಲ್ಲಿ ವಾಸ ಮಾಡುವರು. ಇವರಿಗೆ ನದಿಗಳಲ್ಲಿ ಶ್ರೇಷ್ಠವಾದ ನರ್ಮದಾ ಎಂಬುವಳು ಮಾನಸ ಪುತ್ರಿಯಾಗಿ ಸಂಭವಿಸಿದಳು.

೯೮. ಅವಳು ದಕ್ಷಿಣಾಪಥದಲ್ಲಿ ವಾಸಮಾಡುತ್ತ ಸಿಖಿಲಭೂತಗಳನ್ನು ರಕ್ಷಿಸುತ್ತಿರುವಳು. ಅವಳು ಪುರುಕುತ್ಸನೆಂಬ ಮುನಿಯ ಪತ್ನಿಯೂ ತ್ರಸದಸ್ಯು ಎಂಬುವನ ಜನನಿಯೂ ಆಗಿರುವಳು.

೯೯. ಮನ್ವಂತರಾಧಿಪತಿಯಾದ ಮನುರಾಜನು ಮೇಲೆ ಹೇಳಿರುವ ವಿವಿಧ ಪಿತೃದೇವತೆಗಳ ಸಂಬಂಧದಿಂದ ಮನ್ವಂತರದ ಆದಿ ಸಮಯದಲ್ಲಿ ಸರ್ವ ಪ್ರಕಾರಗಳಿಂದ ಶ್ರಾದ್ಧ ವಿಧಾನಗಳನ್ನು ಏರ್ಪಡಿಸಿದನು.

ಪಿತ್ರ್ಯಾಣಾ ಮಾನುಪೂರ್ವ್ಯೇಣ ಸರ್ವೇಷಾಂ ದ್ವಿಜಸತ್ತಮಾಃ ।
ತಸ್ಮಾದೇತತ್ ಸ್ವಧರ್ಮೇಣ ದೇಯಂ ಶ್ರಾದ್ಧಂ ಚ ಶ್ರದ್ಧಯಾ
|| ೧೦೦ ||

ಸರ್ವೇಷಾಂ ರಾಜತೈಃ ಪಾತ್ರೈರಪಿ ವಾ ರಜತಾನ್ವಿತೈಃ ।
ದತ್ತಂ ಸ್ವಧಾಂ ಪುರೋಧಾಯ ಶ್ರಾದ್ಧಂ ಪ್ರೀಣಾತಿ ವೈ ಪಿತೄನ್
|| ೧೦೧ ||

ಸೌಮ್ಯಾಯನೇ ವಾಗ್ರಯಣೇ ಹ್ಯಶ್ವಮೇಧಂ ತದಾಪ್ನುಯಾತ್ ।
ಸೋಮಸ್ಯಾಪ್ಯಾಯನಂ ಕೃತ್ವಾ ಹ್ಯಗ್ನೇರ್ವೈವಸ್ವತಸ್ಯ ಚ || ೧೦೨ ||

ಪಿತೄನ್ ಪ್ರೀಣಾತಿ ಯೋ ವಂಶ್ಯಃ ಪಿತರಃ ಪ್ರೀಣಯಂತಿ ತಮ್ ।
ಪಿತರಃ ಪುಷ್ಟಿಕಾಮಸ್ಯ ಪ್ರಜಾಕಾಮಸ್ಯ ವಾ ಪುನಃ || ೧೦೩ ||

ಪುಷ್ಟಿಂ ಪ್ರಜಾಸ್ತಥಾ ಸ್ವರ್ಗಂ ಪ್ರಯಚ್ಛಂತಿ ನ ಸಂಶಯಃ ।
ದೇವಕಾರ್ಯಾದಪಿ ಸದಾ ಪಿತೃಕಾರ್ಯಂ ವಿಶಿಷ್ಯತೇ || ೧೦೪ ||

---

೧೦೦. ದ್ವಿಜಶ್ರೇಷ್ಠರೆ! ಈ ಎಲ್ಲ ಪಿತೃಗಳನ್ನುದ್ದೇಶಿಸಿ ಮೇಲೆ ಹೇಳಿರುವ ಆನುಪೂರ್ವಿಯಿಂದ ಶ್ರಾದ್ಧ ವಿಧಾನವು ಕ್ಲೃಪ್ತವಾಗಿರುವುದು. ಆದುದರಿಂದ ಸ್ವಧರ್ಮದಿಂದ ಶ್ರದ್ಧಾಪೂರ್ವಕವಾಗಿ ಶ್ರಾದ್ಧಾನ್ನವು ದಾನಮಾಡಲ್ಪಡಬೇಕು.

೧೦೧. ಸಮಸ್ತ ಪಿತೃಗಳಿಗೂ ಬೆಳ್ಳಿಯ ನಾಣ್ಯಗಳಿಂದ ಕೂಡಿದ ಬೆಳ್ಳಿಯ ಪಾತ್ರೆಗಳಲ್ಲಿ ಸ್ವಧಾಮಂತ್ರಪೂರ್ವಕವಾಗಿ ಕೊಡಲ್ಪಟ್ಟಿರುವ ಶ್ರಾದ್ಧಾನ್ನವು ಪಿತೃಗಳನ್ನು ತೃಪ್ತಿಪಡಿಸುತ್ತದೆ.

೧೦೨. ವಿಶೇಷವಾಗಿ ಈ ಶ್ರಾದ್ಧಾನ್ನದಾನವನ್ನು ಸೋಮ ಮತ್ತು ಸೂರ್ಯಪುತ್ರನಾದ ಅಗ್ನಿಗಳಿಗೆ ಆಪ್ಯಾಯನ (ತೃಪ್ತಿ) ವಾಗುವಂತೆ ಸೌಮ್ಯಾಯನ-ಆಗ್ರಯಣವೆಂಬ ಅಯನದ್ವಯದಲ್ಲಿ ಆಚರಿಸಿದರೆ ಅಶ್ವಮೇಧ ಮಹಾಯಾಗದ ಪುಣ್ಯವನ್ನು ಹೊಂದುತ್ತಾನೆ.

೧೦೩. ಪಿತೃಗಳು ತಮ್ಮ ವಂಶದಲ್ಲಿ ಜನಿಸಿರುವ ಪುತ್ರನು ಕೊಟ್ಟಿರುವ ಶ್ರಾದ್ಧಾನ್ನದಿಂದ ತೃಪ್ತರಾಗಿ ಆ ಪುತ್ರನನ್ನು ಇಷ್ಟಾರ್ಥಗಳನ್ನು ಕೊಟ್ಟು ತೃಪ್ತಿಪಡಿಸುವರು. ಪ್ರಜಾ ಅಥವಾ ಪುಷ್ಟಿಫಲ ಕಾಮನೆಯುಳ್ಳವನು ಪಿತೃಸಮಾರಾಧನೆಯಿಂದ ಆ ಫಲಗಳನ್ನು ಹೊಂದುವನು.

೧೦೪. ಹೀಗೆ ತೃಪ್ತರಾದ ಪಿತೃದೇವತೆಗಳು ಪುಷ್ಟಿ, ಪ್ರಜಾ ಮತ್ತು ಸ್ವರ್ಗಮುಂತಾದ ಅನೇಕ ಫಲಗಳನ್ನು ನಿಸ್ಸಂಶಯವಾಗಿ ಉಂಟುಮಾಡುವರು. ಆದುದರಿಂದ ದೇವತಾರಾಧನರೂಪವಾದ ಕರ್ಮಕ್ಕಿಂತಲೂ ಪಿತೃಸಮಾರಾಧನವು ಅತ್ಯುತ್ತಮವಾದುದು.

ದೇವತಾಭ್ಯಃ ಪಿತೄಣಾಂ ಹಿ ಪೂರ್ವಮಾಪ್ಯಾಯನಂ ಸ್ಮೃತಮ್ ।
ನ ಹಿ ಯೋಗಗತಿಃ ಸೂಕ್ಷ್ಮಾ ಪಿತೄಣಾಂ ನ ಪಿತೃಕ್ಷಯಃ ॥ ೧೦೫ ॥

ತಪಸಾ ವಿಪ್ರಸಿದ್ಧೇನ ದೃಶ್ಯತೇ ಮಾಂಸಚಕ್ಷುಷಾ ।
ಇತ್ಯೇತೇ ಪಿತರಶ್ಚೈವ ಲೋಕಾ ದುಹಿತರಶ್ಚ ವೈ ॥ ೧೦೬ ॥

ದೌಹಿತ್ರಾ ಯಜಮಾನಾಶ್ಚ ಪ್ರೋಕ್ತಾ ಯೇ ಭಾವಯಂತಿ ಯಾನ್ ।
ಚತ್ವಾರೋ ಮೂರ್ತಿಮಂತಸ್ತು ತ್ರಯಸ್ತೇಷಾಮಮೂರ್ತಯಃ
॥ ೧೦೭ ॥

ತೇಭ್ಯಃ ಶ್ರಾದ್ಧಾನಿ ಸತ್ಕೃತ್ಯ ದೇವಾಃ ಕುರ್ವಂತಿ ಯತ್ನತಃ ।
ಭಕ್ತ್ಯಾ ಪ್ರಾಂಜಲಯಃ ಸರ್ವೇ ಸೇಂದ್ರಾಸ್ತದ್ಗತಮಾನಸಾಃ ॥ ೧೦೮ ॥

ವಿಶ್ವೇ ಚ ಸಿಕತಾಶ್ಚೈವ ಪೃಶ್ನಿಜಾಃ ಶೃಂಗಿಣಸ್ತಥಾ ।
ಕೃಷ್ಣಾಃ ಶ್ವೇತಾಂಬುಜಾಶ್ಚೈವ ವಿಧಿವತ್ಪೂಜಯಂತ್ಯುತ ॥ ೧೦೯ ॥

---

೧೦೫. ದೇವತೆಗಳಿಗಿಂತಲೂ ಪಿತೃದೇವತೆಗಳ ಸಮಾರಾಧನೆಯು ಮೊದಲು ನಡೆಯಬೇಕಾದುದೆಂದು ಸ್ಮರಿಸಲ್ಪಟ್ಟಿರುವುದು. ಪಿತೃದೇವತೆಗಳ ಯೋಗಾಧೀನವಾದ ಗತಿಯು ಮತ್ತು ಅವರ ವಾಸಭೂಮಿಯು ಅತಿ ಸೂಕ್ಷ್ಮವಾಗಿರುವುದರಿಂದ ಸರ್ವರಿಂದಲೂ ಅರಿಯಲಾಗುವುದಿಲ್ಲ.

೧೦೬. ಅತಿ ಕಠಿನವಾದ ತಪೋಬಲದಿಂದ ಅವುಗಳನ್ನು ತಿಳಿಯಲು ಯತ್ನಿಸಬೇಕೇ ಹೊರತು ಮಾಂಸಮಯವಾದ ಕಣ್ಣಿಗೆ ಅವು ಗೋಚರವಾಗಲಾರವು. ಈ ರೀತಿಯಾಗಿ ಪಿತೃಗಣ, ಅವರ ವಾಸಲೋಕ, ಮತ್ತು ಮಾನಸಕನ್ಯೆಯರನ್ನು ಉಪದೇಶಿಸಿರುತ್ತೇನೆ.

೧೦೭. ಆ ಪಿತೃಗಳ ದೌಹಿತ್ರ, ಯಜಮಾನ ಮತ್ತು ಅವರನ್ನು ಫಲಕಾಂಕ್ಷೆಯಿಂದ ಸೇವಿಸುವ ಜನಾಂಗ ಮುಂತಾದುವನ್ನು ಪ್ರತಿಪಾದಿಸಿರುತ್ತೇನೆ. ಈ ಏಳು ಪಿತೃಗಣಗಳಲ್ಲಿ ನಾಲ್ಕು ಗಣಗಳು ಜ್ಯೋತಿರ್ಮಯಮೂರ್ತಿಯುಳ್ಳವುಗಳೂ, ಮತ್ತೆ ಮೂರು ಗಣಗಳು ಮೂರ್ತಿಶೂನ್ಯಗಳೂ ಆಗಿವೆ.

೧೦೮. ಇಂದ್ರನೇ ಮೊದಲಾದ ಸಕಲ ದೇವತೆಗಳು ಭಕ್ತಿಯಿಂದ ನಮಸ್ಕಾರಾಂಜಲಿಯನ್ನು ಕಟ್ಟಿಕೊಂಡು ಆ ಪಿತೃಗಳಿಗೆ ಸತ್ಕಾರಪೂರ್ವಕವಾಗಿ ಶ್ರಾದ್ಧಕರ್ಮಗಳನ್ನು ಆದರವುಳ್ಳ ಮನಸ್ಸಿನಿಂದ ಮಾಡುತ್ತಾರೆ.

೧೦೯. ವಿಶ್ವ, ಸಿಕತ, ಪೃಶ್ನಿಜ, ಶೃಂಗಿ, ಕೃಷ್ಣ, ಶ್ವೇತ, ಮತ್ತು ಅಂಬುಜ ಎಂಬ ಪ್ರಜಾವರ್ಗದವರು ಈ ಪಿತೃದೇವತೆಗಳನ್ನು ಶಾಸ್ತ್ರವಿಧಿಯನ್ನು ಅನುಸರಿಸಿ ಪೂಜಿಸುವರು.

ಪ್ರಶಸ್ತಾ ವಾತರಸನಾ ದಿವಾಕೃತ್ಯಾಸ್ತಥೈವ ಚ ।
ಮೇಘಾಶ್ಚ ಮರುತಶ್ಚೈವ ಬ್ರಹ್ಮಾದ್ಯಾಶ್ಚ ದಿವೌಕಸಃ ॥ ೧೧೦ ॥

ಅತ್ರಿಭೃಗ್ವಂಗಿರಾದ್ಯಾಶ್ಚ ಋಷಯಃ ಸರ್ವ ಏವ ತೇ ।
ಯಕ್ಷಾ ನಾಗಾಃ ಸುಪರ್ಣಾಶ್ಚ ಕಿನ್ನರಾ ರಾಕ್ಷಸೈಃ ಸಹ ॥ ೧೧೧ ॥

ಪಿತೄಂಸ್ತೇಽಪೂಜಯನ್ ಸರ್ವೇ ನಿತ್ಯಮೇವ ಫಲಾರ್ಥಿನಃ ।
ಏವಮೇತೇ ಮಹಾತ್ಮಾನಃ ಶ್ರಾದ್ಧೇ ಸತ್ಕೃತ್ಯ ಪೂಜಿತಾಃ ॥ ೧೧೨ ॥

ಸರ್ವಾನ್ ಕಾಮಾನ್ ಪ್ರಯಚ್ಛಂತಿ ಶತಶೋಽಥ ಸಹಸ್ರಶಃ ।
ಹಿತ್ವಾ ತ್ರೈಲೋಕ್ಯಸಂಸಾರಂ ಜರಾಮೃತ್ಯುಮಯಂ ತಥಾ ॥ ೧೧೩ ॥

ಮೋಕ್ಷಂ ಯೋಗಮಥೈಶ್ವರ್ಯಂ ಸೂಕ್ಷ್ಮದೇಹಮದೇಹಿತಾಮ್ ।
ಕೃತ್ಸ್ನಂ ವೈರಾಗ್ಯಮಾನಂತ್ಯಂ ಪ್ರಯಚ್ಛಂತಿ ಪಿತಾಮಹಾಃ ॥ ೧೧೪ ॥

---

೧೧೦. ಮತ್ತು ಪ್ರಶಸ್ತ, ವಾತರಸನ, ದಿವಾಕೃತ್ಯ, ಮೇಘ, ಮರುತ್ ಹಾಗೂ ಬ್ರಹ್ಮಾದಿ ಸಕಲ ದೇವತೆಗಳು ಶಾಸ್ತ್ರವಿಧಿಯನ್ನರಿತು ಪಿತೃಗಳನ್ನು ಸತ್ಕರಿಸುತ್ತಾರೆ.

೧೧೧. ಅತ್ರಿ, ಭೃಗು, ಅಂಗಿರ, ಮುಂತಾದ ಸಕಲ ಮಹರ್ಷಿಗಳು, ಯಕ್ಷ, ನಾಗ, ಸುಪರ್ಣ, ಕಿನ್ನರ, ಮತ್ತು ರಾಕ್ಷಸ ಮುಂತಾದ ಸಮಸ್ತ ಪ್ರಜೆಗಳು ಪಿತೃದೇವತೆಗಳನ್ನು ಯಥಾ ವಿಧಿಯಾಗಿ ಅರ್ಚಿಸುತ್ತಾರೆ.

೧೧೨. ಮೇಲೆ ಹೇಳಿದ ಸಕಲ ಪ್ರಜೆಗಳು ಫಲಾಭಿ ಸಂಧಿಯಿಂದ ಪ್ರತಿನಿತ್ಯವೂ ಪಿತೃದೇವತಾಗಣವನ್ನು ಪೂಜಿಸಿದರು. ಈ ರೀತಿಯಾಗಿ ಮಹಾತ್ಮರಾದ ಈ ಪಿತೃದೇವತೆಗಳು ಶ್ರಾದ್ಧದಲ್ಲಿ ಸತ್ಕರಿಸಿ ಪೂಜಿಸಲ್ಪಟ್ಟರು.

೧೧೩. ಆರಾಧನೆಯಿಂದ ಸತ್ಕರಿಸಲ್ಪಟ್ಟ ಪಿತೃಗಳು ಗಣನಾತೀತವಾಗಿ ಭಕ್ತರ ಸಕಲೇಷ್ಟಾರ್ಥಗಳನ್ನು ಕೊಡುತ್ತಾರೆ. ಮತ್ತು ಜರಾ-ಮರಣಗಳಿಂದ ಕೂಡಿದ ತ್ರೈಗುಣ್ಯಮಯವಾದ ಸಂಸಾರದುಃಖವನ್ನು ದೂರಮಾಡುವರು.

೧೧೪. ಮತ್ತು ಸಂತುಷ್ಟರಾದ ಪಿತೃಗಳು ಮೋಕ್ಷ, ಯೋಗ, ಐಶ್ವರ್ಯ, ಸೂಕ್ಷ್ಮದೇಹ,ವಿದೇಹಕೈವಲ್ಯ, ತೀವ್ರವೈರಾಗ್ಯ. ಸ್ಥಿರ ಪದಗಳನ್ನು ಅನುಗ್ರಹಿಸುವರು.

ಐಶ್ವರ್ಯಂ ವಿಹಿತಂ ಯೋಗಮೈಶ್ವರ್ಯಂ ಯೋಗ ಉಚ್ಯತೇ ।
ಯೋಗೈಶ್ವರ್ಯಮೃತೇ ಮೋಕ್ಷಃ ಕಥಂ ಚಿನ್ನೋಪಪದ್ಯತೇ ॥ ೧೧೫ ॥

ಅಪಕ್ಷಸ್ಯೇವ ಗಮನಂ ಗಗನೇ ಪಕ್ಷಿಣೋ ಯಥಾ ।
ವರಿಷ್ಠಃ ಸರ್ವಧರ್ಮಾಣಾಂ ಮೋಕ್ಷಧರ್ಮಃ ಸನಾತನಃ ॥ ೧೧೬ ॥

ಪಿತೄಣಾಂ ಹಿ ಪ್ರಸಾದೇನ ಪ್ರಾಪ್ಯತೇ ಸ ಮಹಾತ್ಮನಾಮ್ ।
ಮುಕ್ತಾವೈಡೂರ್ಯವಾಸಾಂಸಿ ವಾಜಿನಾಗಾಯುತಾನಿ ಚ ॥ ೧೧೭ ॥

ಕೋಟಿಶಶ್ಚಾಪಿ ರತ್ನಾನಿ ಪ್ರಯಚ್ಛಂತಿ ಪಿತಾಮಹಾಃ ।
ಹಂಸಬರ್ಹಿಣಯುಕ್ತಾನಿ ಮುಕ್ತಾವೈಡೂರ್ಯವಂತಿ ಚ ॥ ೧೧೮ ॥

ಕಿಂಕಿಣೀಜಾಲನದ್ಧಾನಿ ಸದಾಪುಷ್ಪಫಲಾನಿ ಚ ।
ವಿಮಾನಾನಾಂ ಸಹಸ್ರಾಣಿ ಯುಕ್ತಾನ್ಯಪ್ಸರಸಾಂ ಗಣೈಃ ॥ ೧೧೯ ॥

---

೧೧೫. ಯೋಗ ಮತ್ತು ಐಶ್ವರ್ಯಗಳು ಮೋಕ್ಷಕ್ಕೆ ಪರಮ ಸಾಧನಗಳಾಗಿ ವಿಧಿಸಲ್ಪಟ್ಟಿರುತ್ತವೆ. ಆ ದ್ವಂದ್ವವು ಪರಸ್ಪರ ಐಕ್ಯವನ್ನು ಹೊಂದಿರುವುದು. ಅಂತಹ ಯೋಗೈಶ್ವರ್ಯವೆಂಬ ಸಾಧನವಿಲ್ಲದೇ ಮುಕ್ತಿಯು ಸರ್ವಥಾ ಲಭಿಸುವುದಿಲ್ಲ.

೧೧೬. ರೆಕ್ಕೆಗಳಿಲ್ಲದ ಪಕ್ಷಿಯು ಆಕಾಶದಲ್ಲಿ ಹಾರಲಾರದು. ಅದರಂತೆ ಯೋಗೈಶ್ವರ್ಯ ಸಾಧನಶೂನ್ಯನಿಗೆ ಮುಕ್ತಿಯು ದುರ್ಲಭವಾದುದು. ಸಕಲಧರ್ಮಗಳಲ್ಲಿ ಶ್ರೇಷ್ಠವೂ ಅನಾದಿಯೂ ಆದ ಮೋಕ್ಷಧರ್ಮವು ಪಿತೃಪ್ರಸಾದದಿಂದ ಲಭಿಸುವುದು.

೧೧೭. ಪಿತೃ ಅನುಗ್ರಹಕ್ಕೆ ಭಾಗಿಗಳಾದ ಮಹಾತ್ಮರಿಗೆ ಪಿತೃಗಳ ಅನುಗ್ರಹ ಬಲದಿಂದ ಮುತ್ತು, ವೈಡೂರ್ಯ, ವಸ್ತ್ರ, ಅಶ್ವ, ಗಜ, ಮುಂತಾದ ಅಮೂಲ್ಯವಸ್ತುಗಳು ಅಸಂಖ್ಯಾತವಾಗಿ ದೊರೆಯುವುವು.

೧೧೮. ಮತ್ತು ಪ್ರಸನ್ನರಾದ ಪಿತೃಗಳು ಕೋಟಿಗಟ್ಟಲೆಯಾಗಿ ರತ್ನಗಳನ್ನು ಅನುಗ್ರಹಿಸುವರು. ಹಾಗು ಹಂಸ, ನವಿಲುಗಳಿಂದಲೂ, ಮುತ್ತು ವೈಡೂರ್ಯಗಳಿಂದಲೂ, ಶೃಂಗರಿಸಲ್ಪಟ್ಟ ವಿಮಾನಗಳನ್ನು ಕೊಡುವರು.

೧೧೯. ಗೆಜ್ಜೆಗಳ ಸಾಲುಗಳನ್ನು ಕಟ್ಟಿರುವ, ಫಲಪುಷ್ಪ ಸಮೃದ್ಧಿಯಿಂದ ಕೂಡಿದ, ಮತ್ತು ಅಪ್ಸರಸ್ತ್ರೀಗಣದಿಂದ ಕೂಡಿರುವ ಸಾವಿರಾರು ವಿಮಾನಗಳನ್ನು ಕೊಡುವರು.

**ಸರ್ವಕಾಮಸಮೃದ್ಧಾನಿ ಪ್ರಯಚ್ಛಂತಿ ಪಿತಾಮಹಾಃ ।**
**ಪ್ರಜಾಂ ಪುಷ್ಟಿಂ ಸ್ಮೃತಿಂ ಮೇಧಾಂ ರಾಜ್ಯಮಾರೋಗ್ಯಮೇವ ಚ ।**
**ಪ್ರೀತಾ ನಿತ್ಯಂ ಪ್ರಯಚ್ಛಂತಿ ಮಾನುಷಾಣಾಂ ಪಿತಾಮಹಾಃ ॥ ೧೨೦ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದಶಮೋಽಧ್ಯಾಯಃ**

---

೧೨೦. ಪಿತೃಗಳಿಂದ ಕೊಡಲ್ಪಟ್ಟ ಆ ವಿಮಾನಗಳು ಸರ್ವಕಾಮ ಸಮೃದ್ಧಿಯಿಂದ ಪೂರ್ಣವಾಗಿರುವುವು. ಪಿತೃ ದೇವತೆಗಳು ಸುಪ್ರೀತರಾಗಿ ಮಾನವರಿಗೆ ಪ್ರಜಾ, ಪುಷ್ಟಿ, ಸ್ಮೃತಿ, ಮೇಧಾ, ರಾಜ್ಯ, ಆರೋಗ್ಯ, ಎಂಬ ವಿವಿಧ ಫಲಗಳನ್ನು ಸರ್ವ ಕಾಲದಲ್ಲಿಯೂ ಅನುಗ್ರಹಿಸುತ್ತಿರುವರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹತ್ತನೆಯ ಅಧ್ಯಾಯವು ಸಮಾಪ್ತವು

# ಏಕಾದಶೋಽಧ್ಯಾಯಃ

ಬೃಹಸ್ಪತಿರುವಾಚ :—

ರಾಜತಂ ರಾಜತಾಕ್ತಂ ವಾ ಪಿತೃಣಾಂ ಪಾತ್ರಮುಚ್ಯತೇ ।
ರಾಜತಸ್ಯ ಕಥಾ ವಾಪಿ ದರ್ಶನಂ ದಾನಮೇವ ವಾ ॥ ೧ ॥

ಅನಂತಮಕ್ಷಯಂ ಸ್ವರ್ಗೇ ರಾಜತೇ ದಾನಮುಚ್ಯತೇ ।
ಪಿತೄನೇತೇನ ದಾನೇನ ಸತ್ಪುತ್ರಾಸ್ತಾರಯಂತ್ಯುತ ॥ ೨ ॥

ರಾಜತೇ ಹಿ ಸ್ವಧಾ ದುಗ್ಧಾ ಪಾತ್ರೇ ತೈಃ ಪೃಥಿವೀ ಪುರಾ ।
ಸ್ವಧಾಂ ವಾ ಪಾರ್ಥಿಭಿಸ್ತಾತ ತಸ್ಮಿನ್ ದತ್ತಂ ತದಕ್ಷಯಮ್ ॥ ೩ ॥

ಕೃಷ್ಣಾಜಿನಸ್ಯ ಸಾನ್ನಿಧ್ಯಂ ದರ್ಶನಂ ದಾನಮೇವ ವಾ ।
ರಕ್ಷೋಘ್ನಂ ಬ್ರಹ್ಮವರ್ಚಸ್ಯಂ ಪಶೂನ್ ಪುತ್ರಾಂಶ್ಚ ತಾರಯೇತ್ ॥ ೪ ॥

---

೧. ಬೃಹಸ್ಪತಿಯು ಈ ರೀತಿಯಾಗಿ ಹೇಳಿದನು :—ಪಿತೃಗಳನ್ನುದ್ದೇಶಿಸಿ ಮಾಡುವ ಶ್ರಾದ್ಧಕರ್ಮದಲ್ಲಿ ರಜತಮಯವಾದ ಅಥವಾ ರಜತ ಸಂಪರ್ಕವುಳ್ಳ ಪಾತ್ರವು ಪ್ರಶಸ್ತವಾದುದು. ರಜತದ ಶಬ್ದೋಚ್ಚಾರ, ರಜತದರ್ಶನ ಮತ್ತು ರಜತ ದಾನಗಳು ಶಾದ್ಧಪ್ರಸಂಗದಲ್ಲಿ ಅವಶ್ಯ ಆಚರಿಸಬೇಕಾಗಿರುವುವು.

೨. ಆಗ ಮಾಡುವ ರಜತದಾನವು ನಿರಂತರವಾದ ಶಾಶ್ವತ ಸ್ವರ್ಗಸುಖವನ್ನು ಕೊಡುವುದೆಂದು ಪ್ರಾಜ್ಞರಿಂದ ಹೇಳಲಟ್ಟಿದೆ. ಸತ್ಪುತ್ರರು ರಜತದಾನದಿಂದ ಪಿತೃಗಳನ್ನು ಉತ್ತಾರಣಮಾಡುವರು.

೩. ಪೂರ್ವಕಾಲದಲ್ಲಿ ಪಿತೃದೇವತೆಗಳಿಂದ ರಜತಮಯವಾದ ಪಾತ್ರೆಯಲ್ಲಿ ಗೋರೂಪಳಾದ ಪೃಥಿವಿಯಿಂದ ಸ್ವಧಾರೂಪವಾದ ಅನ್ನವು ಕರೆಯಲ್ಪಟ್ಟಿರುವುದು. ಆದ್ದರಿಂದ ರಜತಪಾತ್ರದಲ್ಲಿ ದಾನಮಾಡುವುದು ಪಿತೃಗಳಿಗೆ ಅಕ್ಷಯಪ್ರೀತಿಯನ್ನು ಕೊಡುವುದು.

೪. ಮತ್ತು ಕೃಷ್ಣಾಜಿನದ ಸಾನ್ನಿಧ್ಯ ದರ್ಶನ ಮತ್ತು ದಾನಗಳನ್ನು ಪಿತೃಕರ್ಮ ಪ್ರಸಂಗದಲ್ಲಿ ಆಚರಿಸುವುದು ರಾಕ್ಷಸರ ಸಂಹಾರ, ಬ್ರಹ್ಮವರ್ಚಸ್ಸು, ಪಶು, ಪುತ್ರ ಮುಂತಾದ ಫಲಗಳನ್ನು ಕೊಟ್ಟು ಪಿತೃಗಳನ್ನು ತಾರಣಮಾಡುವುದು.

ಕನಕಂ ರಾಜತಂ ಪಾತ್ರಂ ದೌಹಿತ್ರಂ ಕುತುಪಸ್ತಿಲಾಃ ।
ವಸ್ತ್ರಾನಿ ಪಾವನೀಯಾನಿ ತ್ರಿದಂಡೀಯೋಗ ಏವ ವಾ ॥ ೫ ॥

ಶ್ರಾದ್ಧ ಕರ್ಮಣ್ಯಯಂ ಶ್ರೇಷ್ಠೋ ವಿಧಿರ್ಬ್ರಾಹ್ಮಃ ಸನಾತನಃ ।
ಆಯುಃಕೀರ್ತಿಪ್ರಜೈಶ್ವರ್ಯಪ್ರಜ್ಞಾ ಸಂತತಿವರ್ಧನಃ ॥ ೬ ॥

ದಿಶಿ ದಕ್ಷಿಣಪೂರ್ವಸ್ಯಾಂ ವೇದಿಸ್ಥಾನಂ ನಿವೇದಯೇತ್ ।
ಸರ್ವತೋಽರತ್ನಿಮಾತ್ರಂ ಚ ಚತುರಸ್ರಂ ಸುಸಂಸ್ಥಿತಮ್ ॥ ೭ ॥

ವಕ್ಷ್ಯಾಮಿ ವಿಧಿವತ್ ಸ್ಥಾನಂ ಪಿತೄಣಾಮನುಶಾಸಿತಮ್ ।
ಧನ್ಯಮಾಯುಷ್ಯಮಾರೋಗ್ಯಂ ಬಲವರ್ಣವಿವರ್ಧನಮ್ ॥ ೮ ॥

ತತ್ರ ಗರ್ತಾಸ್ತ್ರಯಃ ಕಾರ್ಯಾಸ್ತ್ರಯೋ ದಂಡಾಶ್ಚ ಖಾದಿರಾಃ ।
ಅರತ್ನಿಮಾತ್ರಾಸ್ತೇ ಕಾರ್ಯಾ ರಜತೈಃ ಪ್ರವಿಭೂಷಿತಾಃ ॥ ೯ ॥

---

೫. ಪಿತೃಕರ್ಮದಲ್ಲಿ ಸುವರ್ಣ, ರಜತಪಾತ್ರ, ದೌಹಿತ್ರ, ಕುತುಪಕಾಲ, ಮತ್ತು ತಿಲಧಾನ್ಯ ಇವುಗಳ ಸಂಪರ್ಕವೂ ಮೂರುದಂಡಗಳ ಸಾನ್ನಿಧ್ಯವೂ ಅತಿಶಯವಾಗಿ ಪವಿತ್ರವಾದುವುಗಳು.

೬. ಶ್ರಾದ್ಧಕರ್ಮದಲ್ಲಿ ಸನಾತನವೂ ಬ್ರಹ್ಮನಿರ್ಮಿತವೂ ಆದ ಈ ಶ್ರೇಷ್ಠ ವಿಧಾನವು ಆಯುಷ್ಯ, ಕೀರ್ತಿ, ಪ್ರಜಾ, ಐಶ್ವರ್ಯ, ಪ್ರಜ್ಞಾ ಎಂಬ ಫಲಗಳ ರಾಶಿಯನ್ನು ಪ್ರದಾನಮಾಡುವುದು.

೭. ದಕ್ಷಿಣ ಮತ್ತು ಪೂರ್ವದಿಕ್ಕುಗಳ ಮಧ್ಯಭಾಗವಾದ ಆಗ್ನೇಯ ದಿಕ್ಕಿನಲ್ಲಿ ಪಿತೃಗಳನ್ನು ಆರಾಧಿಸುವ ವೇದಿಸ್ಥಾನವನ್ನು ಕಲ್ಪಿಸಬೇಕು. ಆ ವೇದಿಕೆಯು ನಾಲ್ಕು ಮೂಲೆಗಳಿಂದ ಕೂಡಿ ಅರತ್ನಿ ಪರಿಮಾಣವುಳ್ಳದ್ದಾಗಿ ಕಲ್ಪಿತವಾಗಿರಬೇಕು.

೮. ಪಿತೃಗಳ ಕರ್ಮದಲ್ಲಿ ವಿಧಿಸಲ್ಪಟ್ಟಿರುವ ಸ್ಥಾನವಿಶೇಷವನ್ನು ಯಥಾವಿಧಿಯಾಗಿ ಪ್ರತಿಪಾದಿಸುತ್ತೇನೆ. ಅಂತಹ ಸ್ಥಾನವು ಧನ, ಆಯುಷ್ಯ, ಆರೋಗ್ಯ, ಬಲ, ಮತ್ತು ದೇಹಕಾಂತಿಗಳನ್ನು ಅತಿಶಯವಾಗಿ ವೃದ್ಧಿಮಾಡುವುದು.

೯. ಅಂತಹ ವೇದಿಕೆಯಲ್ಲಿ ಅರತ್ನಿಪರಿಮಾಣದ ಮೂರು ಹಳ್ಳಗಳನ್ನು ನಿರ್ಮಿಸಬೇಕು. ಅವುಗಳಲ್ಲಿ ಅರತ್ನಿ ಪರಿಮಾಣದಿಂದ ಕೂಡಿದ ಮತ್ತು ರಜತದಿಂದ ಶೃಂಗರಿಸಲ್ಪಟ್ಟ ಮೂರು ಖಾದಿರ ದಂಡಗಳನ್ನು ಸ್ಥಾಪಿಸಬೇಕು.

ತೇ ವಿತಸ್ತ್ಯಾಯತಾ ಗರ್ತಾಃ ಸರ್ವತಶ್ಚತುರಂಗುಲಾಃ ।
ಪ್ರಾಗ್ದಕ್ಷಿಣಮುಖಾನ್ ಕುರ್ಯಾತ್ ಸ್ಥಿರಾನಸುಷಿರಾಂಸ್ತಥಾ ॥ ೧೦ ॥

ಅದ್ಭಿಃ ಪವಿತ್ರಯುಕ್ತಾಭಿಃ ಪಾವಯೇತ್ ಸತತಂ ಶುಚಿಃ ।
ಪಯಸಾ ಹ್ಯಾಜಗವ್ಯೇನ ಶೋಧನಂ ಚಾದ್ಭಿರೇವ ಚ ॥ ೧೧ ॥

ಸತತಂ ತರ್ಪಣಂ ಹ್ಯೇತತ್ತೃಪ್ತಿರ್ಭವತಿ ಶಾಶ್ವತೀ ।
ಇಹ ವಾಮುತ್ರ ಚ ವಶೀ ಸರ್ವಕಾಮಸಮನ್ವಿತಃ ॥ ೧೨ ॥

ಏವಂ ತ್ರಿಷವಣಸ್ನಾತೋ ಯೋಽರ್ಚಯೇತ್ ಪ್ರಯತಃ ಪಿತೄನ್ ।
ಮಂತ್ರೇಣ ವಿಧಿವತ್ ಸಮ್ಯಗಶ್ವಮೇಧಫಲಂ ಲಭೇತ್ ॥ ೧೩ ॥

ತಾನ್ ಸ್ಥಾಪಯೇದಮಾವಾಸ್ಯಾಂ ಗರ್ತಾನ್ ವೈ ಚತುರಂಗುಲಾನ್ ।
ತ್ರಿಃ ಸಪ್ತಸಂಸ್ಥಾಸ್ತೇ ಯಜ್ಞಾಸ್ತ್ರೈಲೋಕ್ಯಂ ಧಾರ್ಯತೇ ತು ಯೈಃ
॥ ೧೪ ॥

---

೧೦. ಹನ್ನೆರಡು ಅಂಗುಲಗಳಷ್ಟು ದೀರ್ಘವಾಗಿಯೂ ಸುತ್ತಲೂ ನಾಲ್ಕು ಅಂಗುಲಗಳಷ್ಟು ವಿಸ್ತಾರವಾಗಿಯೂ ಆಗ್ನೇಯ ದಿಕ್ಕಿಗೆ ಅಭಿಮುಖವಾಗಿಯೂ ಮತ್ತು ಸ್ಥಿರ ರಂಧ್ರರಹಿತವಾಗಿಯೂ ಇರುವಂತೆ ಗರ್ತಗಳನ್ನು ನಿರ್ಮಿಸಬೇಕು.

೧೧. ಪವಿತ್ರನಾದ ಯಜಮಾನನು ಅವುಗಳನ್ನು ಪವಿತ್ರಗಳಿಂದ ಕೂಡಿದ ಜಲಗಳಿಂದಲೂ ಆಡು ಮತ್ತು ಗೋವಿನ ಕ್ಷೀರದಿಂದಲೂ ಶೋಧನಮಾಡಬೇಕು.

೧೨. ಈ ವಿಧಾನವು ನಿರಂತರವಾಗಿ ಪಿತೃಗಳಿಗೆ ತೃಪ್ತಿಯನ್ನು ಕೊಡುವುದು. ಈ ತೃಪ್ತಿಯು ಶಾಶ್ವತವಾಗಿರುವುದು, ಆರಾಧಕನು ಇಹ ಪರಲೋಕಗಳಲ್ಲಿ ಜಿತೇಂದ್ರಿಯನೂ ಸರ್ವಕಾಮ ಸಮೃದ್ಧಿಯನ್ನು ಹೊಂದಿದವನೂ ಆಗುವನು.

೧೩. ಮೂರು ಸಮಯಗಳಲ್ಲಿ ಸ್ನಾನಮಾಡಿ ಪವಿತ್ರನಾಗಿ ವಿಧ್ಯುಕ್ತವಾದ ಮಂತ್ರಪಠನಪೂರ್ವಕವಾಗಿ ಪಿತೃಗಳನ್ನು ಆರಾಧಿಸಿದವನು ಅಶ್ವಮೇಧಯಾಗದಿಂದ ಉಂಟಾಗುವ ಫಲವನ್ನು ಹೊಂದುವನು.

೧೪. ಅಮಾವಾಸ್ಯೆಯಲ್ಲಿ ವೇದಿಕೆಯಲ್ಲಿ ನಿರ್ಮಿಸಿದ ಆ ಚತುರಂಗುಲಗರ್ತಗಳನ್ನು ತರ್ಪಣದಿಂದ ಪರಿಪೂರ್ಣವನ್ನಾಗಿ ಮಾಡಬೇಕು. ತ್ರೈಲೋಕ್ಯವನ್ನು ಧಾರಣ ಮಾಡುವ ಈ ಪಿತೃಯಜ್ಞಗಳಿಂದ ಸಪ್ತಸಂಸ್ಥೆಗಳಿಂದ ಕೂಡಿದ ಯಜ್ಞಸಮಾರಂಭವನ್ನು ಮೂರು ಆವೃತ್ತಿಯಿಂದ ಆಚರಿಸಿದಂತಾಗುವುದು.

ತಸ್ಯ ಪುಷ್ಟಿಸ್ತಥೈಶ್ವರ್ಯಮಾಯುಃ ಸಂತತಿರೇವ ಚ ।
ದಿವಿ ಚ ಭ್ರಾಜತೇ ಲಕ್ಷ್ಮ್ಯಾ ಮೋಕ್ಷಂ ಚ ಲಭತೇ ಕ್ರಮಾತ್ ॥ ೧೫ ॥

ಪಾಪ್ಮಾಪಹಂ ಪಾವನೀಯಂ ಹ್ಯಶ್ವಮೇಧ ಫಲಂ ಲಭೇತ್ ।
ಅಶ್ವಮೇಧಫಲಂ ಹ್ಯೇತದ್ದ್ವಿಜೈಃ ಸಂಸ್ಕೃತ್ಯ ಪೂಜಿತಮ್ ॥ ೧೬ ॥

ಮಂತ್ರಂ ವಕ್ಷ್ಯಾಮ್ಯಹಂ ತಸ್ಮಾದಮೃತಂ ಬ್ರಹ್ಮನಿರ್ಮಿತಮ್ ।
ದೈವತೇಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ॥ ೧೭ ॥

ನಮಃ ಸ್ವಾಹಾಯೈ ಸ್ವಧಾಯೈ ನಿತ್ಯಮೇವ ಭವತ್ಯುತ ।
ಆದ್ಯೇಽವಸಾನೇ ಶ್ರಾದ್ಧಸ್ಯ ತ್ರಿರಾವೃತ್ತಂ ಜಪೇತ್ ಸದಾ ॥ ೧೮ ॥

ಪಿಂಡನಿರ್ವಪಣೇ ವಾಪಿ ಜಪೇದೇತಂ ಸಮಾಹಿತಃ ।
ಕ್ಷಿಪ್ರಮಾಯಾಂತಿ ಪಿತರೋ ರಕ್ಷಾಂಸಿ ಪ್ರದ್ರವಂತಿ ಚ ॥ ೧೯ ॥

---

೧೫. ಪಿತೃಯಜ್ಞವನ್ನು ಆಚರಿಸಿದ ಮಾನವನು ಪುಷ್ಟಿ, ಐಶ್ವರ್ಯ, ಆಯುಷ್ಯ, ಸಂತತಿ ಮುಂತಾದುವುಗಳನ್ನು ಇಹಲೋಕದಲ್ಲಿ ಅನುಭವಿಸಿ ಸ್ವರ್ಗಲೋಕದಲ್ಲಿ ಸೌಖ್ಯ ಸಂಪತ್ತಿಯನ್ನೂ ಕ್ರಮವಾಗಿ ಮುಕ್ತಿಯನ್ನೂ ಹೊಂದುವನು.

೧೬. ಮತ್ತು ಪಿತೃ ಯಜ್ಞವು ಸಕಲ ಪಾಪಗಳನ್ನು ಕಳೆಯುವುದೂ ಪವಿತ್ರತೆಯನ್ನು ಉಂಟುಮಾಡುವುದೂ ಅಶ್ವಮೇಧಫಲವನ್ನು ಕೊಡುವುದೂ ಆಗಿದೆ. ದ್ವಿಜರಿಂದ ಶ್ರಾದ್ಧಯಜ್ಞವು ಅಶ್ವಮೇಧ ಫಲಪ್ರದವೆಂದು ಸತ್ಕರಿಸಲ್ಪಟ್ಟಿದೆ.

೧೭. ಶ್ರಾದ್ಧಯಜ್ಞ ವಿಧಾನದಲ್ಲಿ ಬ್ರಹ್ಮನಿಂದ ಉಚ್ಚರಿಸಲ್ಪಟ್ಟ ಅಮೃತತವನ್ನು ಉಂಟುಮಾಡುವ ಮಂತ್ರವನ್ನು ಪಠಿಸುತ್ತೇನೆ. "ದೈವತೇಭ್ಯಃ" ಮೊದಲುಗೊಂಡು "ಭವತ್ಯುತ" ಎಂಬುವವರೆಗೆ ಇರುವ ಶ್ಲೋಕವು ಮಂತ್ರಾತ್ಮಕವಾದುದು.

೧೮. ದೇವತೆ, ಪಿತೃ, ಮಹಾಯೋಗಿ, ಸ್ವಾಹಾ, ಸ್ವಧಾ ಎಂಬ ದೇವತೆಗಳಿಗೆ ಸದಾಕಾಲದಲ್ಲಿ ನಮಸ್ಕಾರವನ್ನು ಅರ್ಪಿಸುವೆನು ಎಂದು ಮಂತ್ರಾರ್ಥವು. ಈ ಮಂತ್ರವನ್ನು ಶ್ರಾದ್ಧದ ಆದಿ ಮಧ್ಯ, ಅವಸಾನಗಳಲ್ಲಿ ಯಾವಾಗಲೂ ಮೂರು ಆವೃತ್ತಿಯಾಗಿ ಜಪಿಸಬೇಕು.

೧೯. ಮತ್ತು ಪಿಂಡಗಳನ್ನು ಪ್ರದಾನಮಾಡುವಾಗ ಈ ಮಂತ್ರವನ್ನು ಸಮಾಧಾನಯುಕ್ತವಾದ ಮನಸ್ಸಿನಿಂದ ಜಪಿಸಬೇಕು. ಈ ಮಂತ್ರಬಲದಿಂದ ಪಿತೃಗಳು ಶೀಘ್ರವಾಗಿ ಸನ್ನಿಧಿಗೆ ಬರುವರು. ಮತ್ತು ರಾಕ್ಷಸರು ದೂರವಾಗಿ ಓಡುವರು.

ಪಿತ್ರ್ಯಂ ತು ತ್ರಿಷು ಕಾಲೇಷು ಮಂತ್ರೋऽಯಂ ತಾರಯತ್ಯುತ ।
ಪಠ್ಯಮಾನಃ ಸದಾ ಶ್ರಾದ್ಧೇ ನಿಯತೈರ್ಬ್ರಹ್ಮವಾದಿಭಿಃ ॥ ೨೦ ॥

ರಾಜ್ಯಕಾಮೋ ಜಪೇದೇತಂ ಸದಾ ಮಂತ್ರಮತಂದ್ರಿತಃ ।
ವೀರ್ಯಶೌರ್ಯಾರ್ಥಸತ್ತ್ವಶ್ರೀರಾಯುರ್ಬುದ್ಧಿವಿವರ್ಧನಮ್ ॥೨೧॥

ಪ್ರೀಯಂತೇ ಪಿತರೋ ಯೇನ ಜಪೇನ ನಿಯಮೇನ ಚ ।
ಸಪ್ತಾರ್ಚಿಷಂ ಪ್ರವಕ್ಷ್ಯಾಮಿ ಸರ್ವಕಾಮಪ್ರದಂ ಶುಭಮ್ ॥ ೨೨ ॥

ಅಮೂರ್ತಿನಾಂ ಸಮೂರ್ತಿನಾಂ ಪಿತೄಣಾಂ ದೀಪ್ತತೇಜಸಾಮ್ ।
ನಮಸ್ಯಾಮಿ ಸದಾ ತೇಷಾಂ ಧ್ಯಾನಿನಾಂ ಯೋಗಚಕ್ಷುಷಾಮ್॥ ೨೩ ॥

ಇಂದ್ರಾದೀನಾಂ ಚ ನೇತಾರೋ ದಕ್ಷಮಾರೀಚಯೋಸ್ತಥಾ ।
ಸಪ್ತರ್ಷೀಣಾಂ ಪಿತೄಣಾಂ ಚ ತಾನ್ನಮಸ್ಯಾಮಿ ಕಾಮದಾನ್ ॥ ೨೪ ॥

---

೨೦. ಪವಿತ್ರರಾದ ಬ್ರಹ್ಮವಾದಿಗಳಿಂದ ಪಿತೃಗಳನ್ನುದ್ದೇಶಿಸಿ ಮಾಡುವ ಶ್ರಾದ್ಧ ಯಜ್ಞದಲ್ಲಿ ಯಾವಾಗಲೂ ಮೂರುಸಲ ಪಠಿಸಲ್ಪಡುವ ಈ ಮಂತ್ರವು ಪಿತೃಗಳನ್ನು ಉದ್ಧಾರಮಾಡುವುದು.

೨೧. ರಾಜ್ಯಕಾಮನೆಯುಳ್ಳ ಮಾನವನು ಈ ಮಂತ್ರವನ್ನು ಆಲಸ್ಯವಿಲ್ಲದಂತೆ ಅವಶ್ಯವಾಗಿ ಜಪಿಸಬೇಕು. ಇದು ವೀರ್ಯ, ಶೌರ್ಯ, ಧನ, ಸತ್ತ್ವ, ಆಯುಷ್ಯ, ಬುದ್ಧಿ ಮೊದಲಾದ ಇಷ್ಟಾರ್ಥಗಳನ್ನು ಅಭಿವೃದ್ಧಿಮಾಡುವುದು.

೨೨. ಯಾವ ಮಂತ್ರಗಳ ನಿಯಮ, ಜಪಗಳಿಂದ ಪಿತೃದೇವತೆಗಳು ಸುಪ್ರೀತರಾಗುವರೋ ಅಂತಹ ಮಂಗಳಕರವೂ ಸರ್ವಕಾಮಗಳನ್ನು ಪೂರ್ತಿಗೊಳಿಸುವುದೂ ಆದ ಸಪ್ತಾರ್ಚಿ ಎಂಬ ಮಂತ್ರಜಾಲವನ್ನು ಹೇಳುತ್ತೇನೆ

೨೩. ಧ್ಯಾನಯೋಗಾಸಕ್ತರೂ ಯೋಗವೆಂಬ ನೇತ್ರವುಳ್ಳವರೂ ಮತ್ತು ಜ್ವಲಿಸುತ್ತಿದ್ದ ತೇಜಸ್ಸುಳ್ಳವರೂ ಆದ ಅಮೂರ್ತ, ಮೂರ್ತ ಎಂಬ ಎರಡು ಬಗೆಯ ಪಿತೃಗಳನ್ನು ನಿರಂತರವಾಗಿ ನಮಸ್ಕರಿಸುವೆನು.

೨೪. ಇಂದ್ರಾದಿ ದೇವತೆ, ದಕ್ಷ, ಮರೀಚಿ ಪ್ರಜಾಪತಿ, ಸಪ್ತರ್ಷಿ, ಮತ್ತು ಪಿತೃಗಳ ಗಣದಲ್ಲಿ ನಾಯಕರಾದ ಸರ್ವಕಾಮಗಳನ್ನು ಪೂರಣಮಾಡುವ ದೇವತೆಗಳನ್ನು ನಮಸ್ಕರಿಸುವೆನು.

ಮನ್ವಾದೀನಾಂ ಚ ನೇತಾರಃ ಸೂರ್ಯಾಚಂದ್ರಮಸೋಸ್ತಥಾ ।
ತಾನ್ನಮಸ್ಕೃತ್ಯ ಸರ್ವಾನ್ ವೈ ಪಿತೃಮತ್ಸು ವಿಧಿಷ್ವಪಿ ॥ ೨೫ ॥

ನಕ್ಷತ್ರಾಣಾಂ ಗ್ರಹಾಣಾಂ ಚ ವಾಯ್ವಗ್ನ್ಯೋಶ್ಚ ಪಿತ್ರ್ಯಾನಥ ।
ದ್ಯಾವಾಪೃಥಿವ್ಯೋಶ್ಚ ಸದಾ ನಮಸ್ಯಾಮಿ ಕೃತಾಂಜಲಿಃ ॥ ೨೬ ॥

ದೇವರ್ಷೀಣಾಂ ಚ ನೇತಾರಃ ಸರ್ವಲೋಕನಮಸ್ಕೃತಾಃ ।
ತ್ರಾತಾರಃ ಸರ್ವಭೂತಾನಾಂ ನಮಸ್ಯಾಮಿ ಪಿತಾಮಹಾನ್ ॥ ೨೭ ॥

ಪ್ರಜಾಪತೇರ್ಗವಾಂ ವಹ್ನೇಃ ಸೋಮಾಯ ಚ ಯಮಾಯ ಚ ।
ಯೋಗೇಶ್ವರೇಭ್ಯಶ್ಚ ಸದಾ ನಮಸ್ಯಾಮಿ ಕೃತಾಂಜಲಿಃ ॥ ೨೮ ॥

ಪಿತೃಗಣೇಭ್ಯಃ ಸಪ್ತಭ್ಯೋ ನಮೋ ಲೋಕೇಷು ಸಪ್ತಸು ।
ಸ್ವಯಂಭುವೇ ನಮಶ್ಚೈವ ಬ್ರಹ್ಮಣೇ ಯೋಗಚಕ್ಷುಷೇ ॥ ೨೯ ॥

---

೨೫. ಮತ್ತು ಮನ್ವಾದಿಗಳಿಗೂ, ಸೂರ್ಯಚಂದ್ರರಿಗೂ ನಾಯಕರಾದ ಎಲ್ಲ ದೇವತೆಗಳನ್ನೂ ಪಿತೃಗಳನ್ನೂ ಪಿತೃಗಳಿಗೆ ಮಾಡುವ ಶ್ರಾದ್ಧ ವಿಧಾನಗಳಲ್ಲಿ ನಮಸ್ಕರಿಸಿ ಪೂಜಿಸುವೆನು.

೨೬. ನಕ್ಷತ್ರ, ಗ್ರಹ, ವಾಯು, ಅಗ್ನಿ, ದ್ಯಾವಾಪೃಥಿವೀ ಮುಂತಾದ ದೇವಗಣದಲ್ಲಿ ವಾಸಮಾಡುವ ಪಿತೃದೇವರನ್ನು ಅಂಜಲಿಯನ್ನು ಕಟ್ಟಿಕೊಂಡು ನಮಸ್ಕಾರ ಮಾಡುವೆನು.

೨೭. ದೇವರ್ಷಿಗಳಿಗೆ ನಾಯಕರೂ ಸಮಸ್ತ ಲೋಕಗಳಿಗೆ ವಂದ್ಯರೂ, ಸರ್ವಭೂತ ಪರಿಪಾಲಕರೂ ಆದ ಪಿತೃದೇವತೆಗಳನ್ನು ಭಕ್ತಿಯಿಂದ ವಂದಿಸುವೆನು.

೨೮. ಹಾಗು ಪ್ರಜಾಪತಿ, ಗೋವು, ಅಗ್ನಿ, ಸೋಮ, ಯಮ ಮತ್ತು ಯೋಗೇಶ್ವರರಿಗೆ ಭಕ್ತಿಯಿಂದ ಅಂಜಲಿಬದ್ಧನಾಗಿ ಯಾವಾಗಲೂ ನಮಸ್ಕಾರಮಾಡುವೆನು.

೨೯. ಏಳು ಲೋಕಗಳಲ್ಲಿ ವಾಸಮಾಡುವ ಏಳು ಸಂಖ್ಯೆಯ ಪಿತೃಗಣ, ಸ್ವಯಂಭು ಸ್ವರೂಪನೂ ಯೋಗವೇ ನೇತ್ರವಾಗಿ ಉಳ್ಳವನೂ ಆದ ಬ್ರಹ್ಮದೇವ— ಇವರಿಗೆ ನಮಸ್ಕಾರವು.

ಏತದುಕ್ತಂ ಚ ಸಪ್ತಾರ್ಚಿರ್ಬ್ರಹ್ಮರ್ಷಿಗಣಸೇವಿತಮ್ ।
ಪವಿತ್ರಂ ಪರಮಂ ಹ್ಯೇತಚ್ಛ್ರೀಮದ್ರೋಗವಿನಾಶನಮ್ ॥ ೩೦ ॥

ಏತೇನ ವಿಧಿನಾ ಯುಕ್ತಸ್ತ್ರೀನ್ ವರಾನ್ ಲಭತೇ ನರಃ ।
ಅನ್ನಮಾಯುಃ ಸುತಾಶ್ಚೈವ ದದತೇ ಪಿತರೋ ಭುವಿ ॥ ೩೧ ॥

ಭಕ್ತ್ಯಾ ಪರಮಯಾ ಯುಕ್ತಃ ಶ್ರದ್ದಧಾನೋ ಜಿತೇಂದ್ರಿಯಃ ।
ಸಪ್ತಾರ್ಚಿಷಂ ಜಪೇದ್ಯಸ್ತು ನಿತ್ಯಮೇವ ಸಮಾಹಿತಃ ॥ ೩೨ ॥

ಸಪ್ತದ್ವೀಪಸಮುದ್ರಾಯಾಂ ಪೃಥಿವ್ಯಾಮೇಕರಾಡ್ ಭವೇತ್ ।
ಯತ್ಕಿಂಚಿತ್ ಪಚ್ಯತೇ ಗೇಹೇ ಭಕ್ಷ್ಯಂ ವಾ ಭೋಜ್ಯಮೇವ ವಾ ॥ ೩೩ ॥

ಅನಿವೇದ್ಯ ನ ಭೋಕ್ತವ್ಯಂ ತಸ್ಮಿನ್ನಾಯತನೇ ಸದಾ ।
ಕ್ರಮಶಃ ಕೀರ್ತಯಿಷ್ಯಾಮಿ ಬಲಿಪಾತ್ರಾಣ್ಯತಃ ಪರಮ್ ॥ ೩೪ ॥

---

೩೦. "ಅಮೂರ್ತಾನಾಂ" ಎಂಬಲ್ಲಿಂದ ಉಪಕ್ರಮವಾಗಿರುವ ಈ ಮಂತ್ರ ಗಣವು ಸಪ್ತಾರ್ಚಿ ಎಂದು ಸಂಕೇತಿತವಾಗಿರುವುದು. ಇದು ಬ್ರಹ್ಮರ್ಷಿಗಳಿಂದ ಸೇವಿಸಲ್ಪಟ್ಟಿರುವುದೂ ಪರಮಪವಿತ್ರವೂ ಸಂಪತ್ತಿಯನ್ನು ಕೊಡುವುದೂ ರೋಗ ಗಳನ್ನು ನಿವಾರಿಸುವುದೂ ಆಗಿದೆ.

೩೧. ಈ ಮಂತ್ರ ಪ್ರಯೋಗವಿಧಾನವನ್ನು ಆಚರಿಸಿದ ಮನುಜನು ಮೂರು ಇಷ್ಟಾರ್ಥಗಳನ್ನು ಹೊಂದುವನು, ಅಂತಹ ಮನುಜನಿಗೆ ಭೂಮಿಯಲ್ಲಿ ಪಿತೃಗಳು ಅನ್ನ, ಆಯುಷ್ಯ, ಪ್ರಜೆಗಳನ್ನು ಅನುಗ್ರಹಿಸುವರು.

೩೨. ಅತಿಶಯವಾದ ಭಕ್ತಿಯಿಂದ ಕೂಡಿದವನೂ, ಶ್ರದ್ಧಾಳುವೂ, ಜಿತೇಂದ್ರಿಯನೂ ಮತ್ತು ಸಮಾಧಾನವುಳ್ಳ ಚಿತ್ತವುಳ್ಳವನೂ ಆದ ಮಾನವನು ಈ ಸಪ್ತಾರ್ಚಿ ಮಂತ್ರವನ್ನು ನಿತ್ಯವೂ ಜಪಿಸಬೇಕು.

೩೩. ಸಪ್ತದ್ವೀಪ ಪರಿಪೂರ್ಣವಾದ ಪೃಥಿವಿಯಲ್ಲಿ ಅಂತಹ ಮಾನವನು ಏಕ ರಾಜನಾಗುವನು. ಮನೆಯಲ್ಲಿ ಪಾಕ ಮಾಡುವ ಭಕ್ಷ್ಯ ಭೋಜ್ಯಗಳೆಲ್ಲವನ್ನೂ ಪಿತೃ ಗಳಿಗೆ ನಿವೇದಿಸಬೇಕು.

೩೪. ಅವುಗಳನ್ನು ಪಿತೃಗಳಿಗೆ ನಿವೇದನಮಾಡದೇ ಆ ಮನೆಯಲ್ಲಿ ಯಾವಾ ಗಲೂ ಭುಂಜಿಸಬಾರದು. ಇನ್ನು ಮುಂದೆ ಪೂಜೆಗೆ ಏಹಿತವಾದ ಪಾತ್ರಗಳನ್ನು ಕ್ರಮವಾಗಿ ಹೇಳುತ್ತೇನೆ.

ಯೇಷು ಯಜ್ಞ ಫಲಂ ಪ್ರೋಕ್ತಂ ತನ್ಮೇ ನಿಗದತಃ ಶೃಣು ।
ಪಲಾಶೇ ಬ್ರಹ್ಮವರ್ಚಸ್ತ್ವಮಶ್ವತ್ಥೇ ವಸುಭಾವನಾ ॥ ೩೫ ॥

ಸರ್ವಭೂತಾಧಿಪತ್ಯಂ ಚ ಪ್ಲಕ್ಷೇ ನಿತ್ಯಮುದಾಹೃತಮ್ ।
ಪುಷ್ಟಿಂಶ್ಚಪ್ರಜಾಶ್ಚ ನ್ಯಗ್ರೋಧೇ ಬುದ್ಧಿಃ ಪ್ರಜ್ಞಾ ಧೃತಿಃ ಸ್ಮೃತಿಃ ॥ ೩೬ ॥

ರಕ್ಷೋಘ್ನಂ ಚ ಯಶಸ್ಯಂ ಚ ಕಾಶ್ಮರೀಪಾತ್ರಮುಚ್ಯತೇ ।
ಸೌಭಾಗ್ಯಮುತ್ತಮಂ ಲೋಕೇ ಮಾಧೂಕೇ ಸಮುದಾಹೃತಮ್ ॥ ೩೭ ॥

ಫಲ್ಗುಪಾತ್ರೇಷು ಕುರ್ವಾಣಃ ಸರ್ವಾನ್ ಕಾಮಾನವಾಪ್ನುಯಾತ್ ।
ಪರಾಂ ದ್ಯುತಿಮಥಾರ್ಕೇ ತು ಪ್ರಾಕಾಶ್ಯಂ ಚ ವಿಶೇಷತಃ ॥ ೩೮ ॥

ಬೈಲ್ವೇ ಲಕ್ಷ್ಮೀಂ ತಥಾ ಮೇಧಾಂ ನಿತ್ಯಮಾಯುಸ್ತಥೈವ ಚ ।
ಕ್ಷೇತ್ರಾರಾಮತಟಾಕೇಷು ಸರ್ವಸಸ್ಯೇಷು ಚೈವ ಹ ॥ ೩೯ ॥

---

೩೫. ಯಾವ ಪಾತ್ರವನ್ನು ವಿನಿಯೋಗಿಸುವುದರಿಂದ ಯಾವ ಫಲವು ದೊರೆಯುವುದೆಂಬುದನ್ನು ವಿವರಿಸುವ ನನ್ನ ವಚನವನ್ನು ಕೇಳು, ಪಲಾಶಪಾತ್ರದ ಉಪಯೋಗದಿಂದ ಬ್ರಹ್ಮವರ್ಚಸ್ಸು ಅಶ್ವತ್ಥಪಾತ್ರದಿಂದ ಐಶ್ವರ್ಯವು ಉಂಟಾಗುವುವು.

೩೬. ಪ್ಲಕ್ಷಪಾತ್ರದಿಂದ ಸರ್ವಭೂತಗಳ ಆಧಿಪತ್ಯವು ಲಭಿಸುವುದು. ಪುಷ್ಟಿ, ಪ್ರಜಾ, ಬುದ್ಧಿ, ಪ್ರಜ್ಞಾ, ಧೃತಿ, ಸ್ಮೃತಿ ಮುಂತಾದ ಫಲಗಳು ನ್ಯಗ್ರೋಧಪಾತ್ರ ಪ್ರಯೋಗದಿಂದ ಲಭಿಸುವುವು.

೩೭. ಕಾಶ್ಮರೀ ಪಾತ್ರಪ್ರಯೋಗದಿಂದ ರಾಕ್ಷಸ ಸಂಹಾರ, ಕೀರ್ತಿಲಾಭಗಳು ಉಂಟಾಗುವುವು. ಮಾಧೂಕ ಪಾತ್ರದಿಂದ ಲೋಕದಲ್ಲಿ ಉತ್ತಮ ಸೌಭಾಗ್ಯವು ಪ್ರಾಪ್ತವಾಗುವುದೆಂದು ಹೇಳಲ್ಪಟ್ಟಿದೆ.

೩೮. ವಿಹಿತವಾದ ಫಲ್ಗುವೃಕ್ಷ ಪಾತ್ರಗಳಲ್ಲಿ ಪ್ರಯೋಗಿಸುವವನು ಸರ್ವಕಾಮಗಳನ್ನು ಹೊಂದುವನು. ಅರ್ಕಪಾತ್ರ ಪ್ರಯೋಗದಿಂದ ಹೆಚ್ಚಾದ ಕಾಂತಿಯನ್ನೂ ವಿಶೇಷವಾದ ಪ್ರಕಾಶ ಗುಣವನ್ನೂ ಹೊಂದುವನು.

೩೯. ಬಿಲ್ವಪಾತ್ರದಿಂದ ಲಕ್ಷ್ಮೀ, ಮೇಧಾ, ದೀರ್ಘಾಯುಷ್ಯ ಮುಂತಾದ ಫಲಗಳನ್ನು ನಿರಂತರವಾಗಿ ಹೊಂದುತ್ತಾನೆ. ಮತ್ತು ವೇಣುಪಾತ್ರದ ವಿನಿಯೋಗದಿಂದ ಕ್ಷೇತ್ರ, ಆರಾಮ, ತಟಾಕ, ಸರ್ವಸಸ್ಯ ಪೂರ್ಣಪ್ರದೇಶಗಳಲ್ಲಿ ವೃಷ್ಟಿಯು ಬೀಳುವುದು.

ವರ್ಷತ್ಯಜಸ್ರಂ ಪರ್ಜನ್ಯೋ ವೇಣುಪಾತ್ರೇಷು ಕುರ್ವತಃ |
ಏತೇಷ್ವೇವ ಸುಪಾತ್ರೇಷು ಭೋಜನಾಗ್ರಮಶೇಷತಃ || ೪೦ ||

ಸದಾ ದದ್ಯಾತ್ ಸ ಯಜ್ಞಾನಾಂ ಸರ್ವೇಷಾಂ ಫಲಮಾಪ್ನುಯಾತ್ |
ಪಿತೃಭ್ಯಃ ಪುಷ್ಪಮಾಲ್ಯಾನಿ ಸುಗಂಧಾನಿ ಚ ತತ್ಪರಃ || ೪೧ ||

ಸದಾ ದದ್ಯಾತ್ ಕ್ರಿಯಾಯುಕ್ತಃ ಸ ವಿಭಾತಿ ದಿವಾಕರಃ |
ಗುಗ್ಗುಲಾದೀಂಸ್ತಥಾ ಧೂಪಾನ್ ಪಿತೃಭ್ಯೋ ಯಃ ಪ್ರಯಚ್ಛತಿ || ೪೨||

ಸಂಯುಕ್ತಾನ್ ಮಧುಸರ್ಪಿಭ್ಯಾಂ ಸಾಗ್ನಿಷ್ಟೋಮಫಲಂ ಲಭೇತ್ |
ಧೂಪಂ ಗಂಧಗುಣೋಪೇತಂ ಕೃತ್ವಾ ಪಿತೃಪರಾಯಣಃ || ೪೩ ||

ಲಭತೇ ಚ ಸುಶರ್ಮಾಣಿ ಇಹ ಚಾಮುತ್ರ ಚೋಭಯೋಃ |
ದದ್ಯಾದೇವಂ ಪಿತೃಭ್ಯಸ್ತು ನಿತ್ಯಮೇವ ಹ್ಯತಂದ್ರಿತಃ || ೪೪ ||

---

೪೦. ವೇಣುಪಾತ್ರ ಪ್ರಯೋಗ ಮಹಿಮೆಯಿಂದ ಆವಶ್ಯಕ ಸ್ಥಳಗಳಲ್ಲಿ ವೃಷ್ಟಿಯು ಸರಿಯಾಗಿ ಬೀಳುವುದು. ಇಂತಹ ಉತ್ತಮಪಾತ್ರಗಳಲ್ಲಿ ಸಂಪೂರ್ಣವಾಗಿ ಭೋಜನಾದಿ ಉಪಚಾರ ನಿವೇದನವನ್ನು ಮಾಡಬೇಕು.

೪೧. ಈ ರೀತಿಯಾಗಿ ವಿಹಿತ ಪಾತ್ರಗಳಲ್ಲಿ ಯಾವಾಗಲೂ ಉಪಚಾರಗಳನ್ನು ದಾನಮಾಡುವವನು ಸಮಸ್ತ ಯಜ್ಞಗಳ ಫಲಗಳನ್ನು ಅನುಭವಿಸುತ್ತಾನೆ. ಪಿತೃಗಳ ತೃಪ್ತಿಗೆ ಪುಷ್ಪ, ಮಾಲ್ಯ, ಸುಗಂಧ ಮುಂತಾದುವುಗಳನ್ನು ಭಕ್ತಿಯಿಂದ ಅರ್ಪಿಸಬೇಕು.

೪೨. ಆ ಮಾನವನು ಭಕ್ತಿಯಿಂದ ಕರ್ಮವನ್ನಾಚರಿಸಿದುದರಿಂದ ಸೂರ್ಯನಂತೆ ತೇಜಸ್ವಿಯಾಗಿ ಪ್ರಕಾಶಿಸುವನು, ಗುಗ್ಗುಲು ಕೃಷ್ಣಾಗರು ಮುಂತಾದ ಧೂಪಗಳನ್ನು ಪಿತೃಗಳಿಗೆ ಅರ್ಪಿಸಬೇಕು.

೪೩. ಮಧು, ಆಜ್ಯಗಳ ವಿತರಣೆಯಿಂದ ಕೂಡಿ ಅಂತಹ ಧೂಪೋಪಚಾರ ಅರ್ಪಣೆಯಿಂದ ಅಗ್ನಿಷ್ಟೋಮಯಾಗದ ಫಲವು ದೊರಕುವುದು, ಪಿತೃಭಕ್ತನಾದ ಮಾನವನು ಸುಗಂಧಗುಣದಿಂದ ಕೂಡಿದ ಧೂಪವನ್ನು ನಿವೇದಿಸಬೇಕು.

೪೪. ಅದರಿಂದ ಇಹಪರಲೋಕಗಳಲ್ಲಿ ಸರ್ವ ಸೌಖ್ಯಗಳನ್ನು ಅನುಭವಿಸುತ್ತಾನೆ, ಹೀಗೆ ಪಿತೃಗಳಿಗೆ ಸಮಸ್ತೋಪಚಾರಗಳನ್ನು ಪ್ರಮಾದವಿಲ್ಲದಂತೆ ದಾನ ಮಾಡಬೇಕು.

ದೀಪಂ ಪಿತೃಭ್ಯಃ ಪ್ರಯತಃ ಸದಾ ಯಸ್ತು ಪ್ರಯಚ್ಛತಿ ।
ಗತಿಂ ಚಾಪ್ರತಿಮಾಂ ಚಕ್ಷುಸ್ತಸ್ಮಾತ್ ಸ ಲಭತೇ ಶುಭಮ್ ॥ ೪೫ ॥

ತೇಜಸಾ ಯಶಸಾ ಚೈವ ಕಾಂತ್ಯಾ ಚಾಪಿ ಬಲೇನ ಚ ।
ಭುವಿ ಪ್ರಕಾಶೋ ಭವತಿ ಭ್ರಾಜತೇ ಚ ತ್ರಿವಿಷ್ಟಪೇ ॥ ೪೬ ॥

ಅಪ್ಸರೋಭಿಃ ಪರಿವೃತೋ ವಿಮಾನಾಗ್ರೇ ಚ ನೋದತೇ ।
ಗಂಧಪುಷ್ಪೈಶ್ಚ ಧೂಪೈಶ್ಚ ಜಪಾಹುತಿಭಿರೇವ ಚ ॥ ೪೭ ॥

ಫಲಮೂಲನಮಸ್ಕಾರೈಃ ಪಿತ್ರ್ಯಾಣಾಂ ಪ್ರಯತಃ ಶುಚಿಃ ।
ಪೂಜಾಂ ಕೃತ್ವಾ ದ್ವಿಜಾನ್ ಪಶ್ಚಾತ್ಪೂಜಯೇದನ್ನಸಂಪದಾ ॥ ೪೮ ॥

ಶ್ರಾದ್ಧಕಾಲೇಷು ನಿಯತಂ ವಾಯುಭೂತಾಃ ಪಿತಾಮಹಾಃ ।
ಆವಿಶಂತಿ ದ್ವಿಜಾನ್ ಶ್ರೇಷ್ಠಾಂಸ್ತಸ್ಮಾದೇತದ್ಬ್ರವೀಮಿ ತೇ ॥ ೪೯ ॥

---

೪೫. ಸರ್ವ ಕಾಲಗಳಲ್ಲಿಯೂ ಪವಿತ್ರನಾದ ಮಾನವನು ಪಿತೃಗಳಿಗೆ ದೀಪವನ್ನು ಅರ್ಪಿಸಿ ನಿರುಪಮವಾದ ಸದ್ಗತಿಯನ್ನೂ ಮಂಗಳಕರವಾದ ದೃಷ್ಟಿ ಪಾಟವವನ್ನೂ ಹೊಂದುತ್ತಾನೆ.

೪೬. ಮತ್ತು ತೇಜಸ್ಸು, ಕೀರ್ತಿ, ಕಾಂತಿ, ಬಲ' ಇವುಗಳ ಅತಿಶಯದಿಂದ ಭೂಮಿಯಲ್ಲಿ ಪ್ರಕಾಶಿಸುವನು. ಮರಣಾನಂತರದಲ್ಲಿ ಸ್ವರ್ಗಲೋಕದಲ್ಲಿ ಹೋಗಿ ಪ್ರಕಾಶಮಾನನಾಗುವನು.

೪೭. ಮತ್ತು ವಿಮಾನಾರೂಢನಾಗಿ ಅಪ್ಸರಾಂಗನೆಯರಿಂದ ಕೂಡಿ ಆನಂದವನ್ನು ಅನುಭವಿಸುವನು. ಪಿತೃ ಯಜ್ಞದಲ್ಲಿ ಗಂಧ, ಪುಷ್ಪ, ಧೂಪ, ಮಂತ್ರ ಜಪ ಮತ್ತು ಆಹುತಿಗಳನ್ನು ಪಿತೃಗಳಿಗೆ ಅರ್ಪಿಸಬೇಕು.

೪೮. ಮಾನವನು ಬಹು ಪವಿತ್ರನಾಗಿ ಪಿತೃಗಳಿಗೆ ಫಲ, ಮೂಲ ನಮಸ್ಕಾರಗಳಿಂದ ಪೂಜೆಮಾಡಿ ಅನಂತರದಲ್ಲಿ ಸಮೃದ್ಧಿಯಿಂದ ವಿಧಿಪೂರ್ವಕವಾಗಿ ಯತ್ನದಿಂದ ದ್ವಿಜರಿಗೆ ಭೋಜನಮಾಡಿಸಬೇಕು.

೪೯. ಶ್ರಾದ್ಧಯಜ್ಞಾನುಷ್ಠಾನ ಕಾಲದಲ್ಲಿ ಪಿತೃಗಳು ವಾಯುಸ್ವರೂಪದಿಂದ ಶ್ರೇಷ್ಠ ಬ್ರಾಹ್ಮಣರಲ್ಲಿ ಪ್ರವೇಶಮಾಡಿರುವರು, ಆದುದರಿಂದ ಬ್ರಾಹ್ಮಣ ಸಮಾರಾಧನೆಯನ್ನು ಮಾಡಬೇಕೆಂದು ಹೇಳುತ್ತೇನೆ.

ವಸ್ತ್ರೈ ರತ್ನಪ್ರದಾನೈಶ್ಚ ಭಕ್ಷ್ಯೈಃ ಪೇಯೈಸ್ತಥೈವ ಚ ।
ಗೋಭಿರಶ್ವೈಸ್ತಥಾ ಗ್ರಾಮೈಃ ಪೂಜಯೇದ್ದ್ವಿಜಸತ್ತಮಾನ್ ॥ ೫೦ ॥

ಭವಂತಿ ಪಿತರಃ ಪ್ರೀತಾಃ ಪೂಜಿತೇಷು ದ್ವಿಜಾತಿಷು ।
ತಸ್ಮಾದ್ಯತ್ನೇನ ವಿಧಿವತ್ ಪೂಜಯೇತ ದ್ವಿಜಾನ್ ಸದಾ ॥ ೫೧ ॥

ಸವ್ಯೋತ್ತರಾಭ್ಯಾಂ ಪಾಣಿಭ್ಯಾಂ ಕುರ್ಯಾದುಲ್ಲೇಖನಂ ದ್ವಿಜಃ ।
ಪ್ರೋಕ್ಷಣಂ ಚ ತತಃ ಕುರ್ಯಾಚ್ಛ್ರಾದ್ಧಕರ್ಮಣ್ಯತಂದ್ರಿತಃ ॥ ೫೨ ॥

ದರ್ಭಾನ್ ಪಿಂಡಾಂಸ್ತಥಾ ಭಕ್ಷ್ಯಾನ್ ಪುಷ್ಪಾಣಿ ವಿವಿಧಾನಿ ಚ ।
ಗಂಧದಾನಮಲಂಕಾರಮೇಕೈಕಂ ನಿರ್ವಪೇದ್ಬುಧಃ ॥ ೫೩ ॥

ಪೇಷಯಿತ್ವಾಂಜನಂ ಸಮ್ಯಗ್ವಿಶ್ವೇಷಾಮುತ್ತರೋತ್ತರಮ್ ।
ಅಭ್ಯಂಗಂ ದರ್ಭಪಿಂಜೂಲೈಸ್ತ್ರಿಭಿಃ ಕುರ್ಯಾದ್ಯಥಾವಿಧಿ ॥ ೫೪ ॥

---

೫೦. ಅಂತಹ ಬ್ರಾಹ್ಮಣಶ್ರೇಷ್ಠರನ್ನು ವಸ್ತ್ರ, ರತ್ನ, ಭಕ್ಷ್ಯ, ಪಾನೀಯ, ಗೋವು, ಅಶ್ವ ಮತ್ತು ಗ್ರಾಮಗಳನ್ನು ದಾನಮಾಡಿ ಪೂಜಿಸಬೇಕು.

೫೧. ಬ್ರಾಹ್ಮಣರು ಪೂಜಿಸಲ್ಪಡಲಾಗಿ ಪಿತೃಗಳು ಸುಪ್ರೀತರಾಗುವರು. ಆದುದರಿಂದ ಪ್ರಯತ್ನದಿಂದ ಯಥಾವಿಧಿಯಾಗಿ ಬ್ರಾಹ್ಮಣರನ್ನು ಯಾವಾಗಲೂ ಪೂಜಿಸಬೇಕು.

೫೨. ಮಾನವನು ಶ್ರಾದ್ಧಕರ್ಮದಲ್ಲಿ ಆಲಸ್ಯವಿಲ್ಲದೆ ವಾಮ ದಕ್ಷಿಣ ಹಸ್ತಗಳಿಂದ ಭೂಮಿಯಲ್ಲಿ ಉಲ್ಲೇಖನವನ್ನು ಮಾಡಿ ಪ್ರೋಕ್ಷಣವನ್ನು ಆಚರಿಸಬೇಕು.

೫೩. ಜ್ಞಾನಿಯಾದ ಯಜಮಾನನು ದರ್ಭ ಪಿಂಡ ಭಕ್ಷ್ಯ ಪುಷ್ಪ ಗಂಧ ಅಲಂಕಾರ ಮುಂತಾದ ವಿವಿಧ ಉಪಚಾರಗಳನ್ನು ಪ್ರತ್ಯೇಕವಾಗಿ ಭಕ್ತಿಯಿಂದ ಅರ್ಪಿಸಬೇಕು.

೫೪. ಸಮಸ್ತ ಪಿತೃಗಳಿಗೂ ಉತ್ತರೋತ್ತರಕ್ರಮದಿಂದ ಚೆನ್ನಾಗಿ ಅಂಜನ ದ್ರವ್ಯವನ್ನು ಲೇಪಿಸಿ ಮೂರು ದರ್ಭಾಂಕುರಗಳಿಂದ ಯಥಾ ವಿಧಿಯಾಗಿ ಅಭ್ಯಂಗವನ್ನು ಆಚರಿಸಬೇಕು.

ಅಪಸವ್ಯಂ ಪಿತೃಭ್ಯಶ್ಚ ದದ್ಯಾದಂಜನಮುತ್ತಮಮ್ ।
ನಿಪಾತ್ಯ ಜಾನು ಸರ್ವೇಷಾಂ ವಸ್ತ್ರಾರ್ಥಂ ಸೂತ್ರಮೇವ ವಾ ॥ ೫೫ ॥

ಖಂಡನಂ ಪ್ರೋಕ್ಷಣಂ ಚೈವ ತಥೈವೋಲ್ಲೇಖನಂ ದ್ವಿಜಃ ।
ಸಕೃದ್ದೇವಪಿತೄಣಾಂ ಸ್ಯಾತ್ ಪಿತೄಣಾಂ ತ್ರಿಭಿರುಚ್ಯತೇ ॥ ೫೬ ॥

ಏಕಂ ಪವಿತ್ರಂ ಹಸ್ತೇನ ಪಿತೄನ್ ಸರ್ವಾನ್ ಸಕೃತ್ ಸಕೃತ್ ।
ಚೈಲಮಂತ್ರೇಣ ಪಿಂಡೇಭ್ಯೋ ದತ್ವಾ ದರ್ಭಾಜಿನೇ ಹಿ ತಮ್ ॥ ೫೭ ॥

ಸದಾ ಸರ್ಪಿಸ್ತಿಲೈರ್ಯುಕ್ತಾಂ ಸ್ತ್ರೀನ್ ಪಿಂಡಾನ್ನಿರ್ವಪೇದ್ಭುವಿ ।
ಜಾನು ಕೃತ್ವಾ ತಥಾ ಸವ್ಯಂ ಭೂಮೌ ಪಿತೃಪರಾಯಣಃ ॥ ೫೮ ॥

ಪಿತೄನ್ ಪಿತಾಮಹಾಂಶ್ಚೈವ ತಥೈವ ಪ್ರಪಿತಾಮಹಾನ್ ।
ಆಹೂಯ ಚ ಪಿತೄಂನ್ ಪ್ರಾಂಚಃ ಪಿತೃತೀರ್ಥೇನ ಯತ್ನತಃ ॥ ೫೯ ॥

---

೫೫. ಮತ್ತು ಪಿತೃಗಳಿಗೆ ಉತ್ತಮವಾದ ಅಂಜನವನ್ನು ಎಡಭಾಗದ ಮಂಡಿಯನ್ನು ನೆಲದಲ್ಲಿ ಊರಿ ಅಪಸವ್ಯವನ್ನು ಧರಿಸಿ ಅರ್ಪಿಸಬೇಕು. ಹಾಗೂ ವಸ್ತ್ರಕ್ಕೋಸ್ಕರ ಸೂತ್ರವನ್ನು ಅರ್ಪಿಸಬೇಕು.

೫೬. ಖಂಡನ ಪ್ರೋಕ್ಷಣ ಮತ್ತು ಉಲ್ಲೇಖನಗಳನ್ನು ದ್ವಿಜನು ದೇವಸ್ವರೂಪರಾದ ಪಿತೃಗಳಿಗೆ ಒಂದು ಸಲ, ಪಿತೃಗಳಿಗೆ ಮೂರು ಸಲ ಆಚರಿಸಬೇಕು.

೫೭. ಹಸ್ತದಲ್ಲಿ ಒಂದು ಪವಿತ್ರವನ್ನು ಧರಿಸಿ ಎಲ್ಲಾ ಪಿತೃಗಳನ್ನೂ ಉದ್ದೇಶ ಮಾಡಿ ಒಂದೊಂದು ಸಲ ಪ್ರತಿಯೊಂದು ಪಿಂಡಗಳಲ್ಲಿ ವಸ್ತ್ರ ಮಂತ್ರದಿಂದ ದರ್ಭ ಅಜಿನಗಳನ್ನು ಸಮರ್ಪಿಸಬೇಕು.

೫೮. ಯಾವಾಗಲೂ ತುಪ್ಪ ತಿಲಗಳಿಂದ ಕೂಡಿದ ಮೂರು ಪಿಂಡಗಳನ್ನು ಭೂಮಿಯಲ್ಲಿ ಎಡ ಮಂಡಿಯನ್ನು ಊರಿಕೊಂಡು ಪಿತೃಭಕ್ತಿಯುಳ್ಳವನಾಗಿ ಕೊಡಬೇಕು.

೫೯. ಪಿತೃ ಪಿತಾಮಹ ಪ್ರಪಿತಾಮಹ ಎಂಬ ಕ್ರಮದಿಂದ ಸಮಸ್ತ ಪ್ರಾಚೀನ ಪಿತೃಗಳನ್ನೂ ಆಹ್ವಾನಮಾಡಿ ಪಿತೃತೀರ್ಥದಿಂದ ಪ್ರಯತ್ನದಿಂದ ಪಿಂಡಗಳನ್ನು ಇರಿಸಬೇಕು.

ಪಿಂಡಾನ್ ಪರಿಕ್ಷಿಪೇತ್ ಸಮ್ಯಗಪಸವ್ಯಮತಂದ್ರಿತಃ ।
ಅನ್ನಾದ್ಯೈರೇವ ಮುಖ್ಯೈಶ್ಚ ಭಕ್ಷ್ಯೈಶ್ಚೈವ ಪೃಥಗ್ವಿಧೈಃ ॥ ೬೦ ॥

ಪೃಥಜ್ಮಾತಾಮಹಾನಾಂ ತು ಕೇಚಿದಿಚ್ಛಂತಿ ಮಾನವಾಃ ॥
ತ್ರೀನ್ ಪಿಂಡಾನಾನುಪೂರ್ವ್ಯೇಣ ಸಾಂಗುಷ್ಠಾನ್ ಪುಷ್ಟಿವರ್ಧನಾನ್ ॥

ಜಾನ್ವಂತರಾಭ್ಯಾಂ ಯತ್ನೇನ ಪಿಂಡಾನ್ ದದ್ಯಾದ್ಯಥಾಕ್ರಮಮ್ ।
ಸವ್ಯೋತ್ತರಾಭ್ಯಾಂ ಪಾಣಿಭ್ಯಾಂ ಧಾರಾರ್ಥಂ ಮಂತ್ರಮುಚ್ಚರನ್ ॥

ನಮೋ ವಃ ಪಿತರಃ ಶೋಷಾಯೇತಿ ಸರ್ವಮತಂದ್ರಿತಃ ।
ದಕ್ಷಿಣಸ್ಯಾಂ ತು ಪಾಣಿಭ್ಯಾಂ ಪ್ರಥಮಂ ಪಿಂಡಮುತ್ಸೃಜೇತ್ ॥ ೬೩ ॥

ನಮೋ ವಃ ಪಿತರಃ ಸೌಮ್ಯಾಃ ಪಠನ್ನೇವಮತಂದ್ರಿತಃ ।
ಸವ್ಯೋತ್ತರಾಭ್ಯಾಂ ಪಾಣಿಭ್ಯಾಂ ಧರ್ಮೋಽರ್ಥಂ ಸಮುತಂದ್ರಿತಃ ॥ ೬೪॥

---

೬೦. ಯಜಮಾನನು ಆಲಸ್ಯಶೂನ್ಯನಾಗಿ ಅನ್ನ ಆದ್ಯ ಭಕ್ಷ್ಯ ಮುಂತಾದ ಬಗೆಬಗೆಯ ಆಹಾರವಸ್ತುಗಳೊಡನೆ ಪಿಂಡಗಳನ್ನು ದಾನಮಾಡಬೇಕು.

೬೧. ಕೆಲವರು ಮಾತಾಮಹಾದಿ ಪಿತೃವರ್ಗಕ್ಕೆ ಪ್ರತ್ಯೇಕವಾಗಿ ಪುಷ್ಟಿಯನ್ನು ಕೊಡುವ ಅಂಗುಷ್ಠತೀರ್ಥದಿಂದ ಅರ್ಪಿಸುವ ಮೂರು ಪಿಂಡಗಳನ್ನು ಕ್ರಮವಾಗಿ ಕೊಡಬೇಕೆಂದು ಸಮ್ಮತಿಸುವರು.

೬೨. ಎರಡು ಮಂಡಿಗಳ ನಡುವೆ ಇರುವ ಎಡ ಬಲಭಾಗಗಳ ಕೈಗಳಿಂದ ಪ್ರಯತ್ನಪಟ್ಟು ಯಥಾಕ್ರಮವಾಗಿ ಧಾರಾಮಂತ್ರವನ್ನು ಉಚ್ಚರಿಸಿ ಪಿಂಡಗಳನ್ನು ಇರಿಸಬೇಕು.

೬೩. ಯಜಮಾನನು ಅಪ್ರಮಾದಿಯಾಗಿ ನಮೋವಃ ಪಿತರಃ ಶೋಷಾಯ ಎಂಬ ಮಂತ್ರವನ್ನು ಉಚ್ಚರಿಸಿ ದಕ್ಷಿಣದಿಕ್ಕಿನಲ್ಲಿ ಎರಡು ಕೈಗಳಿಂದ ಪ್ರಥಮ ಪಿಂಡವನ್ನು ದಾನಮಾಡಬೇಕು.

೬೪. ಹಾಗೆಯೇ ನಮೋವಃ ಪಿತರಃ ಸೌಮ್ಯಾಃ ಎಂಬ ಮಂತ್ರವನ್ನು ಪಠಿಸುತ್ತಾ ಪ್ರಮಾದವನ್ನು ಹೊಂದದೆ ವಾಮದಕ್ಷಿಣಹಸ್ತಗಳಿಂದ ಮಿಕ್ಕ ಪಿಂಡಗಳನ್ನು ವನ್ನು ಅರ್ಪಿಸಬೇಕು.

ಉಲೂಖಲಸ್ಯ ಲೇಖಾಯಾಮುದಪಾತ್ರಾವಸೇಚನಮ್ ।
ಕ್ಷೌಮಂ ಸೂತ್ರಂ ನವಂ ದದ್ಯಾಚ್ಛಾಣಂ ಕಾರ್ಪಾಸಕಂ ತಥಾ ॥ ೬೫ ॥

ಪತ್ರೋರ್ಣಂ ಪಟ್ಟಸೂತ್ರಂ ಚ ಕೌಶೇಯಂ ಪರಿವರ್ಜಯೇತ್ ।
ವರ್ಜಯೇದ್ದ್ಯಕ್ಷಣಂ ಯಜ್ಞೇ ಯದ್ಯಪ್ಯಹತ ವಸ್ತ್ರಜಾಮ್ ॥ ೬೬ ॥

ನ ಪ್ರೀಣಂತಿ ತಥ್ಯೈತಾನಿ ದಾತುಶ್ಚಾಪ್ಯಹಿತಂ ಭವೇತ್ ।
ಶ್ರೇಷ್ಠಮಾಹುಸ್ತ್ರಿಕಕುದಮಂಜನಂ ನಿತ್ಯಮೇವ ಚ ॥ ೬೭ ॥

ಕೃಷ್ಣೇಭ್ಯಶ್ಚ ತಿಲೈಸ್ತೈಲಂ ಯತ್ನಾತ್ ಸುಪರಿರಕ್ಷಿತಮ್ ।
ಚಂದನಾಗುರುಣೀ ಚೋಭೇ ತಮಾಲೋಶೀರಪದ್ಮಕಮ್ ॥ ೬೮ ॥

ಧೂಪಶ್ಚ ಗುಗ್ಗುಲಃ ಶ್ರೇಷ್ಠಸ್ತುರುಷ್ಕಃ ಶ್ವೇತ ಏವ ಚ ।
ಶುಕ್ಲಾಃ ಸುಮನಸಃ ಶ್ರೇಷ್ಠಾಸ್ತಥಾ ಪದ್ಮೋತ್ಪಲಾನಿ ಚ ॥ ೬೯ ॥

---

೬೫. ಉಲೂಖಲದ ರೇಖೆಯಲ್ಲಿ ಜಲಪಾತದಿಂದ ಸೇಚನಮಾಡಿ ಕ್ಷುಮಾ ಎಂಬ ವೃಕ್ಷದ ಸೂತ್ರವನ್ನು, ಶಣ ಎಂಬ ತೃಣದ ಸೂತ್ರವನ್ನು ಅಥವಾ ಕಾರ್ಪಾಸ ಸೂತ್ರವನ್ನು ಅರ್ಪಿಸಬೇಕು.

೬೬. ನಿರ್ಮಲವಾದ ರೇಷ್ಮೆಯ ಸೂತ್ರವನ್ನು ಪಿತೃಗಳಿಗೆ ಅರ್ಪಿಸಬಾರದು. ಛಿನ್ನ ದಗ್ಧ ಮುಂತಾದ ದೋಷ ಶೂನ್ಯವಾದರೂ ಅಂತಹ ಪಟ್ಟ ವಸ್ತ್ರಾದಿ ಸಮರ್ಪಣವನ್ನು ವರ್ಜಿಸಬೇಕು.

೬೭. ಅದರಿಂದ ಪಿತೃಗಳು ಸಂತುಷ್ಟರಾಗುವುದಿಲ್ಲ. ಮತ್ತು ದಾತೃವಿಗೆ ಅಹಿತವೂ ಉಂಟಾಗುವುದು. ತ್ರಿಕಕುದ ಎಂಬ ಅಂಜನವು ಯಾವಾಗಲೂ ಪಿತೃಗಳಿಗೆ ಶ್ರೇಷ್ಠವಾದುದು.

೬೮. ಮತ್ತು ಕೃಷ್ಣತಿಲಗಳಿಂದ ಉಂಟಾದ ತೈಲವನ್ನು ಯತ್ನಪೂರ್ವಕವಾಗಿ ಸಂಗ್ರಹಿಸಬೇಕು ಚಂದನ-ಕೃಷ್ಣಾಗುರು ಧೂಪಗಳೂ, ತಮಾಲ-ಲಾವಂಚ-ಪದ್ಮ ಪತ್ರ ಮುಂತಾದುವೂ ಶ್ರೇಷ್ಠವಾದುವು.

೬೯. ಮತ್ತು ಗುಗ್ಗುಲುಧೂಪ ಅಥವಾ ಶ್ವೇತ-ತುರುಷ್ಕಧೂಪಗಳೂ ಬಿಳಿಯ ಹೂವುಗಳೂ ತಾವರೆ ನೈದಿಲೆ ಮುಂತಾದ ಪುಷ್ಪಗಳೂ ಪಿತೃಗಳಿಗೆ ಪ್ರಿಯವಾದುವುಗಳು.

ಗಂಧರೂಪೋಪಪನ್ನಾನಿ ಚಾರಣ್ಯಾನಿ ಚ ಕೃತ್ಸ್ನಶಃ ।
ತಥಾ ಹಿ ಸುಮನಾನಾಡೀರೂಪಿಕಾಸ್ಕುರಂಡಿಕಾ ॥ ೭೦ ॥

ಪುಷ್ಪಾಣಿ ವರ್ಜನೀಯಾನಿ ಶ್ರಾದ್ಧಕರ್ಮಣಿ ನಿತ್ಯಶಃ ।
ಯಾನಿ ಗಂಧಾದಪೇತಾನಿ ಚೋಗ್ರಗಂಧಾನಿ ಯಾನಿ ಚ ॥ ೭೧ ॥

ವರ್ಜನೀಯಾನಿ ಪುಷ್ಪಾಣಿ ಪುಷ್ಟಿಮನ್ವಿಚ್ಛತಾ ಸದಾ ।
ದ್ವಿಜಾತಯೋ ಯಥೋದ್ದಿಷ್ಟಾ ನಿಯತಾಃ ಸ್ಯುರುದಙ್ಮುಖಾಃ ॥ ೭೨ ॥

ಪೂಜಯೇದ್ಯಜಮಾನಸ್ತು ವಿಧಿವದ್ದಕ್ಷಿಣಾಮುಖಃ ।
ತೇಷಾಮಭಿಮುಖೋ ದದ್ಯಾದ್ದರ್ಭಾನ್ ಪಿಂಡಾಂಶ್ಚ ಯತ್ನತಃ ॥ ೭೩ ॥

ಅನೇನ ವಿಧಿನಾ ಸಾಕ್ಷಾದರ್ಚಿತಾಃ ಸ್ಯುಃ ಪಿತಾಮಹಾಃ ।
ಹರಿತಾ ವೈ ಸಪಿಂಜಾಲಾಃ ಪುಷ್ಟಾಃ ಸ್ನಿಗ್ಧಾಃ ಸಮಾಹಿತಾಃ ॥ ೭೪ ॥

---

೭೦. ಮತ್ತು ಸುಗಂಧದಿಂದ ಕೂಡಿದ ಸಮಸ್ತ ಅರಣ್ಯಪುಷ್ಪಗಳೂ ನಾಡೀ ಸುಮನ ರೂಪಿಕ ಕುರಂಡಿಕ ಮುಂತಾದ ವಿವಿಧ ಪುಷ್ಪಗಳೂ ಪ್ರಿಯವಾದುವುಗಳು.

೭೧. ಮತ್ತು ಗಂಧ ಶೂನ್ಯವಾದ ಅಥವಾ ಉಗ್ರವಾದ ವಾಸನೆಯುಳ್ಳ ಹೂಗಳನ್ನು ಯಾವಾಗಲೂ ಶ್ರಾದ್ಧಯಜ್ಞದಲ್ಲಿ ಉಪಯೋಗಿಸಬಾರದು.

೭೨. ಪುಷ್ಟಿಯನ್ನು ಇಚ್ಛಿಸುವ ಮಾನವನಿಂದ ನಿಷಿದ್ಧವಾದ ಪುಷ್ಪಗಳು ತ್ಯಜಿಸಲ್ಪಡಬೇಕು. ಮತ್ತು ಉದ್ದಿಷ್ಟರಾದ ದ್ವಿಜರು ನಿಯತವಾಗಿ ಉತ್ತರದಿಕ್ಕಿಗೆ ಅಭಿಮುಖರಾಗಿರಬೇಕು.

೭೩. ಯಜಮಾನನು ಯಥಾವಿಧಿಯಾಗಿ ದಕ್ಷಿಣಕ್ಕೆ ತಿರುಗಿ ಆ ಬ್ರಾಹ್ಮಣರಿಗೆ ಅಭಿಮುಖನಾಗಿ ಕುಳಿತುಕೊಂಡು ದರ್ಭ ಮತ್ತು ಪಿಂಡಗಳನ್ನು ಯತ್ನದಿಂದ ದಾನಮಾಡಬೇಕು.

೭೪. ಈ ವಿಧಾನದಿಂದ ಹರಿತವರ್ಣದ ಪುಷ್ಪವಾದ ನಯವಾದ ಮತ್ತು ಸಮರೂಪವಾದ ದರ್ಭಾಂಕುರಗಳ ಅರ್ಪಣದಿಂದ ಪಿತೃಗಳು ಪ್ರತ್ಯಕ್ಷವಾಗಿ ಅರ್ಚಿಸಲ್ಪಟ್ಟಂತಾಗುವರು.

ರತ್ನಿಮಾತ್ರಾಃ ಪ್ರಮಾಣೇನ ಪಿತೃತೀರ್ಥೇನ ಸಂಸ್ಕೃತಾಃ ।
ಉಪಮೂಲೇ ತಥಾ ನೀಲಾ ವಿಷ್ಟರಾರ್ಥಂ ಕುಶೋತ್ತಮಾಃ ॥ ೭೫ ॥

ತಥಾ ಶ್ಯಾಮಾಕನೀವಾರಾ ದೂರ್ವಾ ಚ ಸಮುದಾಹೃತಾ ।
ಪೂರ್ವಂ ಕೀರ್ತಿಮತಾಂ ಶ್ರೇಷ್ಠೋ ಬಭೂವಾಶ್ವಃ ಪ್ರಜಾಪತಿಃ ॥ ೭೬ ॥

ತಸ್ಯ ಬಾಲಾ ನಿಪತಿತಾ ಭೂಮೌ ಕಾಶತ್ವಮಾಗತಾಃ ।
ತಸ್ಮಾದ್ಧ್ಯೇಯಾಃ ಸದಾ ಕಾಶಾಃ ಶ್ರಾದ್ಧಕರ್ಮಸು ಪೂಜಿತಾಃ ॥ ೭೭ ॥

ಪಿಂಡನಿರ್ವಪಣಂ ತೇಷು ಕರ್ತವ್ಯಂ ಭೂತಿಮಿಚ್ಛತಾ ।
ಪ್ರಜಾಃ ಪುಷ್ಟಿದ್ಯುತಿಪ್ರಜ್ಞಾಕೀರ್ತಿಕಾಂತಿಸಮನ್ವಿತಾಃ ॥ ೭೮ ॥

ಭವಂತಿ ರುಚಿರಾ ನಿತ್ಯಂ ವಿಪಾಪ್ಮಾನೋಽಘವರ್ಜಿತಾಃ ।
ಸಕೃದೇವಾಸ್ತರೇದ್ದರ್ಭಾನ್ ಪಿಂಡಾರ್ಥೇ ದಕ್ಷಿಣಾಮುಖಃ ॥ ೭೯ ॥

---

೭೫. ಒಂದು ಮುಷ್ಟಿಪರಿಮಾಣವುಳ್ಳ ಮತ್ತು ನೀಲವರ್ಣದ ಉತ್ತಮ ದರ್ಭೆಗಳನ್ನು ಪಿತೃಗಳ ಆಸನಾರ್ಥವಾಗಿ ಬ್ರಾಹ್ಮಣರ ಪೀಠಮೂಲದಲ್ಲಿ ಪಿತೃತೀರ್ಥದಿಂದ ಅರ್ಪಿಸಬೇಕು.

೭೬. ಶ್ಯಾಮಾಕ, ನೀವಾರ ಎಂಬ ಧಾನ್ಯವಿಶೇಷಗಳೂ ಮತ್ತು ದೂರ್ವಾಂಕುರಗಳೂ ಆಸನಾರ್ಥವಾಗಿ ಅರ್ಪಿಸಲು ಉತ್ತಮವಾದ ವಸ್ತುಗಳು, ಪೂರ್ವದಲ್ಲಿ ಪ್ರಜಾಪತಿಯು ಉತ್ತಮವಾದ ಕೀರ್ತಿಯನ್ನುಗಳಿಸಿರುವ ಅಶ್ವಗಳಲ್ಲಿ ಉತ್ತಮವಾದ ಅಶ್ವರೂಪನಾಗಿದ್ದನು.

೭೭. ಭೂಮಿಯಲ್ಲಿ ಆ ಪ್ರಜಾಪತಿಯ ರೂಪಾಂತರವಾದ ಅಶ್ವದ ಬಾಲದ ಕೂದಲುಗಳು ಬಿದ್ದು ಕಾಶತೃಣ ರೂಪದಿಂದ ಜನಿಸಿದುವು. ಆದ್ದರಿಂದ ಪವಿತ್ರವಾದ ಕಾಶತೃಣಗಳು ಶ್ರಾದ್ಧಕರ್ಮದಲ್ಲಿ ಕೊಡಲ್ಪಡಬೇಕು.

೭೮. ಏಳಿಗೆಯನ್ನು ಆಕಾಂಕ್ಷಿಸುವ ಮಾನವನು ಆ ಕಾಶತೃಣಗಳ ರಾಶಿಯಲ್ಲಿ ಪಿಂಡಪ್ರದಾನವನ್ನು ಆಚರಿಸಬೇಕು. ಅದರಿಂದ ಅವನ ಪ್ರಜೆಗಳು ಪುಷ್ಟಿ, ತೇಜಸ್ಸು, ಪ್ರಜ್ಞಾ, ಕೀರ್ತಿ, ಕಾಂತಿ ಎಂಬ ಗುಣಗಳಿಂದ ಕೂಡಿರುವರು.

೭೯. ಮತ್ತು ಆ ಪ್ರಜೆಗಳು ಪಾಪ, ಕಳಂಕಗಳಿಂದ ರಹಿತರೂ ಬಹು ಸುಂದರಮೂರ್ತಿಯುಳ್ಳವರೂ ಆಗುತ್ತಾರೆ. ಪಿಂಡದಾನಕ್ಕೋಸ್ಕರ ದಕ್ಷಿಣದಿಕ್ಕಿಗೆ ಅಭಿಮುಖನಾದ ಯಜಮಾನನು ಭೂಮಿಯಲ್ಲಿ ದರ್ಭೆಗಳನ್ನು ಒಂದುಸಲವೇ ಹಾಸಬೇಕು.

ಪ್ರಾಗ್ದಕ್ಷಿಣಾಗ್ರಾನ್ನಿಯತೋ ವಿಧಿಂ ಚಾಪ್ಯತ್ರ ವಕ್ಷ್ಯತಿ ।
ನ ದೀನೋ ನಾಪಿ ವಾ ಕ್ರುದ್ಧೋ ನ ಚೈವಾನ್ಯಮನಾ ನರಃ ॥ ೮೦ ॥

ಏಕತ್ರ ಚಾಪ್ಯಾಯ ಮನಃ ಶ್ರಾದ್ಧಂ ಕುರ್ಯಾತ್ ಸಮಾಹಿತಃ ॥ ೮೧ ॥

ನಿಹನ್ಮಿ ಸರ್ವಂ ಯದಮೇಧ್ಯವದ್ಭವೇ—
ದ್ಧತಾಶ್ಚ ಸರ್ವೇಽಸುರದಾನವಾ ಮಯಾ ।
ರಕ್ಷಾಂಸಿ ಯಕ್ಷಾಃ ಸಪಿಶಾಚಸಂಘಾ
ಹತಾ ಮ ಯಾ ಯಾತುಧಾನಾಶ್ಚ ಸರ್ವೇ ॥ ೮೨ ॥

ಏತೇನ ಮಂತ್ರೇಣ ತು ಸಂಯತಾತ್ಮಾ
ತಾಂ ವೈ ವೇದಿಂ ಸಕೃದುಲ್ಲಿಖ್ಯ ಧೀರಃ ।
ಶಿವಾಂ ಹಿ ಬುದ್ಧಿಂ ಧ್ರುವಮಿಚ್ಛಮಾನಃ
ಕ್ಷಿಪೇದ್ದ್ವಿಜಾತಿರ್ದಿಶಮುತ್ತರಾಂ ಗತಃ ॥ ೮೩ ॥

---

೮೦. ಅವುಗಳನ್ನು ಪೂರ್ವ, ದಕ್ಷಿಣದಿಕ್ಕುಗಳ ನಡುಭಾಗವಾದ ಆಗ್ನೇಯ ದಿಕ್ಕಿಗೆ ಅಗ್ರಗಳು ಬರುವಂತೆ ನಿಯಮವಾಗಿ ಹಾಸಬೇಕೆಂದು ವಿಧಿಯು ಇರುವುದು. ಶ್ರಾದ್ಧಮಾಡುವ ಯಜಮಾನನು ದೈನ್ಯ, ಕ್ರೋಧ, ವಿಷಯಾಂತರಗಳಲ್ಲಿ ಚಿತ್ತ ಮುಂತಾದ ಚಿತ್ತದೋಷ ಸಂಪರ್ಕರಹಿತನಾಗಿರಬೇಕು.

೮೧. ಮತ್ತು ಆ ಯಜಮಾನನು ಉಪಕ್ರಮಿಸಿದ ಶಾದ್ಧ ಕರ್ಮದಲ್ಲಿಯೇ ಆಸಕ್ತಿಯುಳ್ಳ, ಸಮಾಧಾನವುಳ್ಳ ಚಿತ್ತದಿಂದ ಶ್ರಾದ್ಧ ಯಜ್ಞವನ್ನು ಆಚರಿಸಬೇಕು.

೮೨. ಮತ್ತು ಶ್ರಾದ್ಧವೇದಿಯನ್ನು ಉಲ್ಲೇಖನ ಮಾಡುವ ಸಮಯದಲ್ಲಿ ನಿಹನ್ಮಿ ಎಂಬ ಪದ್ಯರೂಪವಾದ ಮಂತ್ರವನ್ನು ಪಠಿಸಬೇಕು. ಅಪವಿತ್ರತೆಯನ್ನುಂಟುಮಾಡುವ ಸಮಸ್ತ ವಸ್ತುವನ್ನು ನಾಶಮಾಡುತ್ತೇನೆ, ಮತ್ತು ಶ್ರಾದ್ಧ ಯಜ್ಞಕ್ಕೆ ವಿಘ್ನವನ್ನು ಮಾಡುವ ಅಸುರ, ದಾನವ, ರಕ್ಷಸ್ಸು, ಯಕ್ಷ, ಪಿಶಾಚ ಮತ್ತು ಯಾತುಧಾನ ಎಂಬುವರ ಗುಂಪನ್ನು ನಾಶಮಾಡುತ್ತೇನೆ ಎಂದು ಆ ಮಂತ್ರದ ಅರ್ಥವು.

೮೩. ಧೀರನಾದ ಮತ್ತು ಜಿತೇಂದ್ರಿಯನಾದ ಕರ್ಮಠ ದ್ವಿಜನು ಈ ಮಂತ್ರದಿಂದ ಆ ವೇದಿಕೆಯನ್ನು ಒಂದುಸಲ ಗೀರಿ ಸ್ವಲ್ಪ ಉತ್ತರ ದಿಗ್ಭಾಗದ ಕಡೆಗೆ ಚಲಿಸಿ ಸ್ಥಿರವಾದ ಶೋಭನಬುದ್ಧಿಯನ್ನು ಪ್ರಾರ್ಥಿಸಿ ತಿಲಾದಿಧಾನ್ಯ ದರ್ಭಗಳನ್ನು ಚಲ್ಲಬೇಕು.

ಏವಂ ಪಿತ್ರ್ಯಂ ದೃಷ್ಟಮಂತ್ರಂ ಹಿ ಯಸ್ಯ
ತಸ್ಯಾಸುರಾ ವರ್ಜಯಂತೀಹ ಸರ್ವೇ
ಯಸ್ಮಿನ್ ದೇಶೇ ಪಠ್ಯತೇ ಮಂತ್ರ ಏಷ
ತಂ ವೈ ದೇಶಂ ರಾಕ್ಷಸಾ ವರ್ಜಯಂತಿ ॥ ೮೪ ॥

ಅನ್ನಪ್ರಕಾರಾನಶುಚೀನಸಾಧೂನ್
ಸಂವೀಕ್ಷತೇ ನೋ ಸ್ಪೃಶಂಶ್ಚಾಪಿ ದದ್ಯಾತ್ ।
ಪವಿತ್ರಪಾಣಿಶ್ಚ ಭವೇನ್ನ ವಾ ಹಿ ಯಃ
ಪುಮಾನ್ನ ಕಾರ್ಯಸ್ಯ ಫಲಂ ಸಮಶ್ನುತೇ ॥ ೮೫ ॥

ಅನೇನ ವಿಧಿನಾ ನಿತ್ಯಂ ಶ್ರಾದ್ಧಂ ಕುರ್ಯಾದ್ಧಿ ಯಃ ಸದಾ ।
ಮನಸಾ ಕಾಂಕ್ಷತೇ ಯದ್ಯತ್ತತ್ತದ್ದದ್ಯುಃ ಪಿತಾಮಹಾಃ ॥ ೮೬ ॥

ಪಿತರೋ ಹೃಷ್ಟಮನಸೋ ರಕ್ಷಾಂಸಿ ವಿಮನಾಂಸಿ ಚ ।
ಭವಂತ್ಯೇವಂ ಕೃತೇ ಶ್ರಾದ್ಧೇ ನಿತ್ಯಮೇವ ಪ್ರಯತ್ನತಃ ॥ ೮೭ ॥

---

೮೪. ಈ ರೀತಿಯಾದ ಪಿತ್ರ್ಯಮಂತ್ರವನ್ನು ಯಾವ ಯಜಮಾನನ ಕರ್ಮ ಪ್ರಸಂಗದಲ್ಲಿ ನೋಡುವರೋ ಅಲ್ಲಿಂದ ಅಸುರರು ದೂರಹೋಗುವರು. ಮತ್ತು ಯಾವ ಸ್ಥಳದಲ್ಲಿ ಈ ಮಂತ್ರವು ಪಠಿಸಲ್ಪಡುವುದೋ ಆ ದಿಕ್ಕನ್ನು ರಾಕ್ಷಸರು ತ್ಯಜಿಸುವರು.

೮೫. ಯಾವ ಕರ್ಮಿಯು ಅಶುಚಿ ಮತ್ತು ದುಷ್ಟವಾದ ಅನ್ನಪ್ರಕಾರಗಳನ್ನು ಸಂದರ್ಶಿಸುವನೋ, ಸ್ಪರ್ಶಮಾಡದೇ ಅನ್ನವನ್ನು ನಿವೇದಿಸುವನೋ ಮತ್ತು ಪಾಣಿಯಲ್ಲಿ ಪವಿತ್ರವನ್ನು ಧಾರಣಮಾಡದಿರುವನೋ ಅವನು ಆ ಶ್ರಾದ್ಧಕರ್ಮದ ಫಲವನ್ನು ಹೊಂದುವುದಿಲ್ಲ.

೮೬. ಈ ರೀತಿಯಾಗಿ ವಿಧಿಯಿಂದ ಯಾವ ಪುರುಷನು ಶ್ರಾದ್ಧವನ್ನು ಆಚರಿಸುತ್ತಾನೆಯೋ ಅವನಿಗೆ ಮನಸ್ಸಿನಿಂದ ಕೋರಿದ ಆಯಾಯ ಸಮಸ್ತ ಫಲಗಳನ್ನು ಸುಪ್ರೀತರಾದ ಪಿತೃಗಳು ಅನುಗ್ರಹಿಸುವರು.

೮೭, ಪ್ರತಿ ನಿತ್ಯವೂ ಪ್ರಯತ್ನಪೂರ್ವಕವಾಗಿ ಈ ವಿಧಾನದಿಂದ ಶ್ರಾದ್ಧವನ್ನು ಆಚರಿಸಲು ಯಜಮಾನನ ಪಿತೃಗಳು ಸಂತುಷ್ಟಚಿತ್ತವುಳ್ಳವರೂ ರಾಕ್ಷಸರು ವಿಮುಖರೂ ಆಗುತ್ತಾರೆ.

ಶೂದ್ರಾಃ ಶ್ರಾದ್ಧೇಷ್ವವಿಕ್ಷೀರಂ ವಲ್ವಜಾ ಉಲಪಾಸ್ತಥಾ ।
ವೀರಣಾಶ್ಚೋತುವಾಲಾಶ್ಚ ಲಡ್ವಾ ವರ್ಜ್ಯಾಶ್ಚ ನಿತ್ಯಶಃ ॥ ೮೮ ॥

ಏವಮಾದೀನ್ಯಯಜ್ಞಾನಿ ತೃಣಾನಿ ಪರಿವರ್ಜಯೇತ್ ।
ಅಂಜನಾಭ್ಯಂಜನಂ ಗಂಧಾನ್ ಸೂತ್ರಪ್ರಣಯನಂ ತಥಾ ॥ ೮೯ ॥

ಕಾಶೈಃ ಪುನರ್ಭವೈಃ ಕಾರ್ಯಮಶ್ವಮೇಧಫಲಂ ಲಭೇತ್ ।
ಕಾಶಾಃ ಪುನರ್ಭವಾ ಯೇ ಚ ಬರ್ಹಿಣೋ ಹ್ಯುಪಬರ್ಹಿಣಃ ॥ ೯೦ ॥

ಇತ್ಯೇತೇ ಪಿತರೋ ದೇವಾ ದೇವಾಶ್ಚ ಪಿತರಃ ಪುನಃ ।
ಪುಷ್ಪಗಂಧವಿಭೂಷಾಣಾಮೇಷ ಮಂತ್ರ ಉದಾಹೃತಃ ॥ ೯೧ ॥

ಆಹೃತ್ಯ ದಕ್ಷಿಣಾಗ್ನಿಂ ತು ಹೋಮಾರ್ಥಂ ವೈ ಪ್ರಯತ್ನತಃ ।
ಅನ್ಯಾರ್ಥೇ ಲೌಕಿಕಂ ವಾಪಿ ಜುಹುಯಾತ್ ಕರ್ಮಸಿದ್ಧಯೇ ॥ ೯೨ ॥

---

೮೮. ಶ್ರಾದ್ಧದಲ್ಲಿ ಶೂದ್ರಸಂಪರ್ಕ, ಕುರಿಯಹಾಲು, ಬಲ್ವಲ ಉಲಪ ವೀರಣ ಚೋತುವಾಲ ಲಡ್ವ – ಮುಂತಾದ ಹುಲ್ಲುಜಾತಿಯ ದರ್ಭೆ ಇವುಗಳನ್ನು ಯಾವಾಗಲೂ ವರ್ಜಿಸಬೇಕು.

೮೯. ಹಿಂದೆ ಹೇಳಿದ ಯಜ್ಞಾನರ್ಹಗಳಾದ ತೃಣಗಳನ್ನು ವರ್ಜಿಸಬೇಕು. ಅಂಜನ, ಅಭ್ಯಂಜನ, ಗಂಧಪ್ರದಾನ ಮತ್ತು ಸೂತ್ರಾರ್ಪಣ ವಿಧಾನಗಳನ್ನು ಕಾಶ ತೃಣಗಳಿಂದ ಆಚರಿಸಬೇಕು.

೯೦. ಮತ್ತೆ ಹುಟ್ಟಿದ ಕೋಮಲ ಕಾಶತೃಣಗಳಿಂದ ಅಂಜನಾದಿಗಳನ್ನು ಆಚರಿಸಿದ್ದರಿಂದ ಅಶ್ವಮೇಧ ಮಹಾಯಾಗದ ಫಲವು ದೊರೆಯುವುದು. ಅಂತಹ ಪುನರ್ಭವವಾದ ಕಾಶತೃಣ, ಅಂತರ್ಗರ್ಭವಾದ ಬರ್ಹಿತೃಣವೆಂಬುವು ಅತ್ಯುತ್ತಮ ವಾದವುಗಳಾಗಿವೆ.

೯೧. ಕಾಶ–ಬರ್ಹಿ ಎಂಬ ತೃಣಗಳು ದೇವಸ್ವರೂಪರಾದ ಪಿತೃಗಳೂ ಪಿತೃಸ್ವರೂಪರಾದ ದೇವತೆಗಳೂ ಇದ್ದಂತೆ ಇರುವುವು ಎಂಬ ಅರ್ಥಗರ್ಭಿತವಾದ "ಕಾಶಾಃ ಪುನರ್ಭವಾಃ" ಎಂಬ ಶ್ಲೋಕರೂಪವಾದ ಮಂತ್ರವನ್ನು ಪುಷ್ಪ-ಗಂಧ-ಆಭರಣಗಳನ್ನು ಅರ್ಪಿಸುವಾಗ ಪಠಿಸಬೇಕು.

೯೨. ಮತ್ತು ಕರ್ಮವು ಸಿದ್ಧಿಸುವಸಲುವಾಗಿ ಹೋಮಕ್ಕೋಸ್ಕರ ದಕ್ಷಿಣಾಗ್ನಿಯನ್ನು ಸಂಪಾದಿಸಿ ಇತರ ಪಾಕಾದಿ ಪ್ರಯೋಜನಕ್ಕೆ ಲೌಕಿಕಾಗ್ನಿಯನ್ನು ಸಂಪಾದಿಸಿ ವಿಹಿತವಾದ ಹೋಮವನ್ನು ಮಾಡಬೇಕು.

ಅಂತರ್ವಿಧಾಯ ಸಮಿಧಸ್ತತೋ ದೀಪ್ತೋ ವಿಧೀಯತೇ ।
ಸಮಾಹಿತೇನ ಮನಸಾ ಪ್ರಣೀಯಾಗ್ನಿಂ ಸಮಂತತಃ　　॥ ೯೩ ॥

ಅಗ್ನಯೇ ಕವ್ಯವಾಹಾಯ ಸ್ವಧಾ ಅಂಗಿರಸೇ ನಮಃ ।
ಸೋಮಾಯ ವೈ ಪಿತೃಮತೇ ಸ್ವಧಾ ಅಂಗಿರಸೇ ನಮಃ　　॥ ೯೪ ॥

ಯಮಾಯ ವೈವಸ್ವತಯೇ ಸ್ವಧಾ ನಮ ಇತಿ ಧ್ರುವಮ್ ।
ಇತ್ಯೇತೇ ಹೋಮಮಂತ್ರಾಸ್ತು ತ್ರಯಾಣಾಮನುಪೂರ್ವಶಃ　　॥ ೯೫ ॥

ದಕ್ಷಿಣೇನಾಗ್ನಯೇ ನಿತ್ಯಂ ಸೋಮಾಯೋತ್ತರತಸ್ತಥಾ ।
ಏತಯೋರಂತರೇ ನಿತ್ಯಂ ಜುಹುಯಾದ್ವೈ ವಿವಸ್ವತೇ　　॥ ೯೬ ॥

ಉಪಹ್ವಾರಃ ಸ್ವಧಾಕಾರಸ್ತಥೈವೋಲ್ಲೇಖನಂ ಚ ಯತ್ ।
ಹೋಮಜಪ್ಯೇ ನಮಸ್ಕಾರಃ ಪ್ರೋಕ್ಷಣಂ ಚ ವಿಶೇಷತಃ　　॥ ೯೭ ॥

---

೯೩. ಅಂತಹ ಅಗ್ನಿಯಲ್ಲಿ ಮಧ್ಯದಲ್ಲಿ ಸಮಿತ್ತನ್ನು ಹೋಮಮಾಡಿ ಅಗ್ನಿಯನ್ನು ಪ್ರಜ್ವಲನಮಾಡಬೇಕು, ಸಮಾಧಾನದಿಂದ ಶುದ್ಧವಾದ ಮನಸ್ಸಿನಿಂದ ಸುತ್ತಲು ಅಗ್ನಿಯನ್ನು ಪ್ರಣಯನ ಮಾಡಬೇಕು.

೯೪. ಅನಂತರದಲ್ಲಿ ಮೂರು ಆಹುತಿಗಳನ್ನು ಕ್ರಮವಾಗಿ ಮಂತ್ರಪಾಠ ಪೂರ್ವಕವಾಗಿ ಹೋಮ ಮಾಡಬೇಕು. ಆ ಮೂರು ಮಂತ್ರಗಳಲ್ಲಿ ಅಗ್ನಯೇಕವ್ಯ ವಾಹಾಯ ಎಂಬುದು ಮೊದಲನೆಯ ಮಂತ್ರವು, ಕವ್ಯಾಹುತಿಯನ್ನು ವಹನಮಾಡುವ ಅಂಗಿರ ಎಂಬ ಅಗ್ನಿಗೆ ಈಹವಿಸ್ಸು ಹುತವಾಗಲಿ. ಎಂದು ಮಂತ್ರಾರ್ಥವು, "ಸೋಮಾಯ" ಎಂಬುದು ಎರಡನೆಯ ಮಂತ್ರವು. ಪಿತೃಮಾನ್ ಮತ್ತು ಅಂಗಿರೋರೂಪನಾದ ಸೋಮನಿಗೆ ಹುತವಾಗಲಿ ಎಂದು ಆ ಮಂತ್ರದ ಅರ್ಥವು.

೯೫. "ಯಮಾಯ" ಎಂಬುದು ಮೂರನೆಯ ಮಂತ್ರವು, ಸೂರ್ಯನ ಪುತ್ರನಾದ ಯಮನಿಗೆ ಅರ್ಪಿತವಾಗಲೆಂದು ಆ ಮಂತ್ರದ ಅರ್ಥವು. ಹೀಗೆ ಮೂರು ಆಹುತಿಗಳ ಹೋಮಕ್ಕೆ ಈ ಮೂರು ಮಂತ್ರಗಳು ಕ್ರಮವಾಗಿ ವಿಹಿತವಾಗಿವೆ.

೯೬. ಈ ಮೂರು ಆಹುತಿಗಳನ್ನು ಅಗ್ನಿಯಲ್ಲಿ ಹಾಕುವಾಗ ಅಗ್ನಿಯ ಮೊದಲನೆಯ ಆಹುತಿಯನ್ನು ಅಗ್ನಿಯ ದಕ್ಷಿಣಭಾಗದಲ್ಲಿಯೂ ಸೋಮದೇವತೆಯ ಎರಡನೆಯ ಆಹುತಿಯನ್ನು ಉತ್ತರಭಾಗದಲ್ಲಿಯೂ ಯಮದೇವತೆಯ ಮತ್ತೊಂದು ಆಹುತಿಯನ್ನು ಮಧ್ಯದಲ್ಲಿಯೂ ಅರ್ಪಿಸಬೇಕು.

೯೭. ಶ್ರಾದ್ಧಯಜ್ಞದಲ್ಲಿ ಪಿತೃಗಳ ಆಹ್ವಾನವೆಂಬ ಉಪಹ್ವಾರ, ಸ್ವಧಾ

ಬಹುಹವ್ಯೇಂಧನೇ ಚಾಗ್ನೌ ಸುಸಮಿದ್ಧೇ ತಥೈವ ಚ ।
ಅಂಜನಾಭ್ಯಂಜನಂ ಚೈವ ಪಿಂಡನಿರ್ವಪಣಂ ತಥಾ ॥ ೯೮ ॥

ಅಶ್ವಮೇಧಫಲಂ ಚೈತತ್ಸಮಿದ್ಧೇ ಯತ್ಕೃತಂ ದ್ವಿಜೈಃ ।
ಕ್ರಿಯಾಃ ಸರ್ವಾ ಯಥೋದ್ದಿಷ್ಟಾಃ ಪ್ರಯತ್ನೇನ ಸಮಾಚರೇತ್ ॥ ೯೯ ॥

ಬಹುಹವ್ಯೇಂಧನೇ ಚಾಗ್ನೌ ಸುಸಮಿದ್ಧೇ ವಿಶೇಷತಃ ।
ವಿಧೂಮೇ ಲೇಲಿಹಾನೇ ಚ ಹೋತವ್ಯಂ ಕರ್ಮಸಿದ್ಧಯೇ ॥ ೧೦೦ ॥

ಅಪ್ರಬುದ್ಧೇ ಸಮಿದ್ಧೇ ವಾ ಜುಹುಯಾದ್ಯೋ ಹುತಾಶನೇ
ಯಜಮಾನೋ ಭವೇದಂಧಃ ಸೋಽಮುತ್ರೇತಿ ಹಿ ನಃ ಶ್ರುತಮ್ ॥ ೧೦೧ ॥

ಅಲ್ಪೇಂಧನೋ ವಾ ರೂಕ್ಷೋಽಗ್ನಿರ್ವಿಸ್ಫುಲಿಂಗಶ್ಚ ಸರ್ವಶಃ ।
ಜ್ವಾಲಾಧೂಮಾಪಸವ್ಯಶ್ಚ ಸ ತು ವಹ್ನಿರಸಿದ್ಧಯೇ ॥ ೧೦೨ ॥

---

ಶಬ್ದೋಚ್ಚಾರಣ, ಉಲ್ಲೇಖನ, ಹೋಮ. ಜಪ, ನಮಸ್ಕಾರ ಮತ್ತು ಪ್ರೋಕ್ಷಣಗಳೆಂಬ ಕರ್ಮಗಳು ವಿಶೇಷರೂಪವಾಗಿವೆಯೆಂದು ತಿಳಿಯಬೇಕು.

೯೮. ಅತಿಶಯವಾಗಿ ಹವಿಸ್ಸನ್ನು ಅರ್ಪಿಸಿ, ಬಹು ಕಾಷ್ಠಗಳಿಂದ ಹೆಚ್ಚಾಗಿ ಉರಿಯುತ್ತಲಿದ್ದ ಅಗ್ನಿ ಸಮೀಪದಲ್ಲಿ ಅಂಜನ, ಅಭ್ಯಂಜನ, ಪಿಂಡ ನಿರ್ವಪಣವೆಂಬ ಕರ್ಮಗಳನ್ನು ಆಚರಿಸಬೇಕು.

೯೯. ದ್ವಿಜರಿಂದ ಅಗ್ನಿಯನ್ನು ಚನ್ನಾಗಿ ಪ್ರಜ್ವಲಿಸಿ ಮಾಡಿದ ಈ ಕರ್ಮವು ಸಾಕ್ಷಾತ್ತಾಗಿ ಅಶ್ವಮೇಧಫಲವನ್ನು ಕೊಡುವುದು. ಮತ್ತು ವಿಧಿಸಲ್ಪಟ್ಟ ಸಮಸ್ತ ಕ್ರಿಯೆಗಳನ್ನು ಪ್ರಯತ್ನಪೂರ್ವಕವಾಗಿ ಆಚರಿಸಬೇಕು.

೧೦೦. ಮತ್ತು ಹೆಚ್ಚು ಹವಿಸ್ಸು ಮತ್ತು ಕಾಷ್ಠಗಳಿಂದ ಕೂಡಿದ ವಿಶೇಷವಾಗಿ ಜ್ವಲಿಸುತ್ತಿದ್ದ ಮತ್ತು ಧೂಮವಿಲ್ಲದೇ ಜ್ವಾಲಾಮಾಲೆಗಳಿಂದ ಅಲಂಕರಿಸಲ್ಪಟ್ಟ ಅಗ್ನಿಯಲ್ಲಿ ಕರ್ಮಸಾದ್ಗುಣ್ಯಸಿದ್ಧಿಗೋಸ್ಕರ ಹೋಮಮಾಡಬೇಕು.

೧೦೧. ಅಭಿವ್ಯಕ್ತಿ ಹೊಂದದಿರುವ ಅಥವಾ ಜ್ವಲಿಸದೇ ಇರುವ ಅಗ್ನಿಯಲ್ಲಿ ಹೋಮಮಾಡಿದ ಯಜಮಾನನು ಇಹ-ಪರವೆಂಬ ಎರಡು ಲೋಕಗಳಲ್ಲಿಯೂ ಅಂಧನಾಗುವನು.

೧೦೨. ಅತ್ಯಲ್ಪವಾದ ಕಾಷ್ಠಗಳುಳ್ಳ, ಉಗ್ರವಾದ, ಸುತ್ತಲೂ ಕಿಡಿಗಳನ್ನು ಎರಚುವ, ಮತ್ತು ಅಪ್ರದಕ್ಷಿಣಾಕಾರವಾಗಿ ಜ್ವಾಲೆ ಧೂಮಗಳಾಡುತ್ತಿರುವ ಅಗ್ನಿಯಲ್ಲಿ ಹೋಮಮಾಡುವುದು ಕರ್ಮಸಿದ್ಧಿಯನ್ನು ಉಂಟುಮಾಡುವುದಿಲ್ಲ.

**ದುರ್ಗಂಧಶ್ಚೈವ ನೀಲಶ್ಚ ಕೃಷ್ಣಶ್ಚೈವ ವಿಶೇಷತಃ ।**
**ಭೂಮಿಂ ವಗಾಹತೇ ಯತ್ರ ತತ್ರ ವಿದ್ಯಾತ್ ಪರಾಭವಮ್ ॥ ೧೦೩ ॥**

**ಅರ್ಚಿಷ್ಮಾನ್ ಪಿಂಡಿತಶಿಖಃ ಸರ್ಪಿಕಾಂಜನಸನ್ನಿಭಃ ।**
**ಸ್ನಿಗ್ಧಃ ಪ್ರದಕ್ಷಿಣಶ್ಚೈವ ವಹ್ನಿಃ ಸ್ಯಾತ್ ಕಾರ್ಯಸಿದ್ಧಯೇ ॥ ೧೦೪ ॥**

**ನರನಾರೀಗಣೇಭ್ಯಶ್ಚ ಪೂಜಾಂ ಪ್ರಾಪ್ನೋತಿ ಶಾಶ್ವತೀಮ್ ।**
**ಅಕ್ಷಯಂ ಪೂಜಿತಾಸ್ತೇನ ಭವಂತಿ ಪಿತರೋಽಗ್ನಯಃ ॥ ೧೦೫ ॥**

**ಬಿಲ್ವೋದುಂಬರಪಾತ್ರಾಣಿ ಫಲಾನಿ ಸಮಿಧಸ್ತಥಾ ।**
**ಶ್ರಾದ್ಧೇ ಮಹಾಪವಿತ್ರಾಣಿ ಮೇಧ್ಯಾನಿ ಚ ವಿಶೇಷತಃ ॥ ೧೦೬ ॥**

**ಪವಿತ್ರಂ ಚ ದ್ವಿಜಶ್ರೇಷ್ಠಾಃ ಶುದ್ಧಯೇ ಜನ್ಮಕರ್ಮಣಾಮ್ ।**
**ಪಾತ್ರೇಷು ಫಲಮುದ್ದಿಷ್ಟಂ ಯನ್ಮಯಾ ಶ್ರಾದ್ಧಕರ್ಮಣಿ ॥ ೧೦೭ ॥**

---

೧೦೩. ದುರ್ಗಂಧ, ನೀಲವರ್ಣ, ಮತ್ತು ಕೃಷ್ಣವರ್ಣಗಳಿಂದ ಹೆಚ್ಚಾಗಿ ಕೂಡಿರುವ ಮತ್ತು ಭೂಮಿಯಲ್ಲಿ ಅಂಟಿಕೊಳ್ಳುವಂತೆ ಇರುವ ಅಗ್ನಿಯಿಂದ ಅಪಜಯವಾಗುವುದೆಂದು ತಿಳಿಯಬೇಕು.

೧೦೪. ಜ್ವಾಲೆಗಳಿಂದ ಕೂಡಿದ, ಜ್ವಲಿಸುವ, ಒಟ್ಟುಗೂಡಿದ ಶಿಖೆಯುಳ್ಳ, ತುಪ್ಪದ ಕಾಡಿಗೆಯಂತೆ ಪ್ರಕಾಶಿಸುವ, ಸುಂದರವಾದ ಮತ್ತು ಪ್ರದಕ್ಷಿಣಾಕಾರವಾಗಿ ಜ್ವಲಿಸುವ ಅಗ್ನಿಯು ಕಾರ್ಯಸಿದ್ಧಿಯನ್ನು ಕೊಡುವುದು.

೧೦೫. ಮತ್ತು ಅಂತಹ ಕರ್ಮಾನುಷ್ಠಾನಬಲದಿಂದ ಯಜಮಾನನು ಪುರುಷ ಸ್ತ್ರೀಸಮಾಜದಿಂದ ಪೂಜಿಸಲ್ಪಡುವನು, ಮತ್ತು ಅವನು ಆಚರಿಸಿದ ಶ್ರಾದ್ಧದಿಂದ ಪಿತೃಗಳು ಮತ್ತು ಅಗ್ನಿಗಳು ಅಕ್ಷಯವಾಗಿ ಪೂಜಿಸಲ್ಪಡುವರು.

೧೦೬. ಬಿಲ್ವ, ಉದುಂಬರವೃಕ್ಷಗಳ ಪತ್ರಗಳು,ಫಲಗಳು, ಮತ್ತು ಸಮಿತ್ತುಗಳು, ಶ್ರಾದ್ಧದಲ್ಲಿ ಮಹಾಪವಿತ್ರಗಳೂ ವಿಶೇಷವಾಗಿ ಶ್ರಾದ್ಧ ಯಜ್ಞಾರ್ಹಗಳೂ ಆಗಿರುವುವು.

೧೦೭. ದ್ವಿಜಶ್ರೇಷ್ಠರೇ ! ಪವಿತ್ರವೆಂಬುದು ಜನ್ಮಕರ್ಮಗಳನ್ನು ಶೋಧನ ಮಾಡುವುದು, ಶ್ರಾದ್ಧಕರ್ಮದಲ್ಲಿ ಉಪಯೋಗಿಸುವ ಪಾತ್ರಗಳಿಗೆ ಅನುಗುಣವಾಗಿ ಅನೇಕ ಫಲಗಳು ಕೀರ್ತಿಸಲ್ಪಟ್ಟಿವೆ.

ತದೇವ ಕೃತ್ಸ್ನಂ ವಿಜ್ಞೇಯಂ ಸಮಿತ್ಸು ಚ ಯಥಾಕ್ರಮಮ್ ।
ಕೃತ್ವಾ ಸಮಾಹಿತಂ ಚಿತ್ತಂ ಆಗ್ನೇಯಂ ವೈ ಕರೋಮ್ಯಹಮ್ ॥ ೧೦೮ ॥

ಅನುಜ್ಞಾತಃ ಕುರುಷ್ವೇತಿ ತಥೈವ ದ್ವಿಜಸತ್ತಮೈಃ ।
ಘೃತಮಾದಾಯ ಪಾತ್ರೇ ಚ ಜುಹುಯಾದ್ಧವ್ಯವಾಹನೇ ॥ ೧೦೯ ॥

ಪಲಾಶಪ್ಲಕ್ಷನ್ಯಗ್ರೋಧಪ್ಲಕ್ಷಾಶ್ವತ್ಥವಿಕಂಕತಾಃ ।
ಉದುಂಬರಸ್ತಥಾ ಬಿಲ್ವಶ್ಚಂದನೋ ಯಜ್ಞಿಯಾಶ್ಚ ಯೇ ॥ ೧೧೦ ॥

ಸರಲೋ ದೇವದಾರುಶ್ಚ ಶಾಲಶ್ಚ ಖದಿರಸ್ತಥಾ ।
ಸಮಿದರ್ಥೇ ಪ್ರಶಸ್ತಾಃ ಸ್ಯುರೇತೇ ವೃಕ್ಷಾ ವಿಶೇಷತಃ ॥ ೧೧೧ ॥

ಗ್ರಾಮ್ಯಾಃ ಕಂಟಕಿನಶ್ಚೈವ ಯಜ್ಞಿಯಾ ಯೇ ಚ ಕೇಚನ ।
ಪೂಜಿತಾಃ ಸಮಿದರ್ಥಂ ತೇ ಪಿತೄಣಾಂ ವಚನಂ ಯಥಾ ॥ ೧೧೨ ॥

---

೧೦೮. ಬೇರೆ ಬೇರೆ ಜಾತಿಯ ಸಮಿತ್ತುಗಳಿಂದಲೂ ಆ ಫಲಗಳು ಯಥಾಕ್ರಮವಾಗಿ ಸಂಪೂರ್ಣವಾಗಿ ಉಂಟಾಗುವುವು. ಸಮಾಧಾನದಿಂದ ಕೂಡಿದ ಚಿತ್ತದಿಂದ ಅಗ್ನೌಕರಣಹೋಮವನ್ನು ಮಾಡುತ್ತೇನೆಂದು ಅನುಜ್ಞೆಯನ್ನು ಕೇಳಬೇಕು.

೧೦೯. ಆಗ ಬ್ರಾಹ್ಮಣಶ್ರೇಷ್ಠರಿಂದ ಮಾಡು ಎಂದು ಅನುಜ್ಞೆಯನ್ನು ತೆಗೆದುಕೊಂಡು ಆಜ್ಯವನ್ನು ತೆಗೆದುಕೊಂಡು ಪಾತ್ರದಲ್ಲಿಯೂ ಅಗ್ನಿಯಲ್ಲಿಯೂ ಹೋಮ ಮಾಡಬೇಕು.

೧೧೦. ಪಲಾಶ, ಪ್ಲಕ್ಷ, ನ್ಯಗ್ರೋಧ, ಅಶ್ವತ್ಥ, ವಿಕಂಕತ, ಉದುಂಬರ, ಚಂದನ, ಬಿಲ್ವ, ಮುಂತಾದ ಯಜ್ಞಾರ್ಹವಾದ ವೃಕ್ಷಗಳ ಸಮಿತ್ತುಗಳು ಶ್ರಾದ್ಧಯಜ್ಞದಲ್ಲಿ ಪ್ರಶಸ್ತವಾದುವುಗಳು.

೧೧೧. ಸರಲ, ದೇವದಾರು, ಶಾಲ, ಖದಿರ ಎಂಬ ವೃಕ್ಷಗಳು ಸಮಿತ್ತುಗಳನ್ನು ಸಂಪಾದಿಸಲು ವಿಶೇಷವಾಗಿ ಪ್ರಶಸ್ತವಾಗಿವೆ.

೧೧೨. ಗ್ರಾಮಗಳಲ್ಲಿ ಹುಟ್ಟಿದ, ಕಂಟಕಗಳುಳ್ಳ, ಮತ್ತು ಯಜ್ಞಕ್ಕೆ ಅರ್ಹ

ಸಮಿದ್ಭಿಃ ಷಟ್ಫಲೀಯಾಭಿರ್ಜುಹುಯಾದ್ಯೋ ಹುತಾಶನಮ್ ।
ಫಲಂ ಯತ್ ಕರ್ಮಣಸ್ತಸ್ಯ ತನ್ಮೇ ನಿಗದತಃ ಶೃಣು ॥ ೧೧೩ ॥

ಅಕ್ಷಯಂ ಸರ್ವಕಾಮೀಯಮಶ್ವಮೇಧಫಲಂ ಹಿ ತತ್ ।
ಶ್ಲೇಷ್ಮಾತಕೋ ನಕ್ತಮಾಲಃ ಕಪಿತ್ಥಃ ಶಾಲ್ಮಲಿಸ್ತಥಾ ॥ ೧೧೪ ॥

ನೀಪೋ ವಿಭೀತಕಶ್ಚೈವ ಶ್ರಾದ್ಧ ಕರ್ಮಣಿ ಗರ್ಹಿತಾಃ ।
ಚಿರಬಿಲ್ವಸ್ತಥಾ ಕೋಲಸ್ತಿಂದುಕಃ ಶ್ರಾದ್ಧಕರ್ಮಣಿ ॥ ೧೧೫ ॥

ಬಲ್ವಜಃ ಕೋವಿದಾರಾಶ್ಚ ವರ್ಜನೀಯಾಃ ಸಮಂತತಃ ।
ಶಕುನಾನಾಂ ನಿವಾಸಾಂಶ್ಚ ವರ್ಜಯೇತ ಮಹೀರುಹಾನ್ ॥ ೧೧೬ ॥

---

ವಾದ ಯಾವುದಾದರೊಂದು ಜಾತಿಯ ವೃಕ್ಷಗಳು ಪಿತೃದೇವತೆಗಳ ಆಜ್ಞೆಯಂತೆ ಶ್ರೇಷ್ಠವಾದುವುಗಳು.

೧೧೩. ಷಟ್ಫಲಾ ಎಂಬ ವೃಕ್ಷಜಾತಿಯ ಸಮಿತ್ತುಗಳನ್ನು ಅಗ್ನಿಯಲ್ಲಿ ಹೋಮ ಮಾಡುವ ಮಾನವನಿಗೆ ಆ ಕರ್ಮಾನುಷ್ಠಾನದಿಂದ ಯಾವ ಫಲಗಳು ಉಂಟಾಗುವುವೋ ಅದನ್ನು ಪ್ರತಿಪಾದಿಸುವ ನನ್ನ ವಚನವನ್ನು ಕೇಳು.

೧೧೪. ಕ್ಷಯವಿಲ್ಲದ, ಸರ್ವಕಾಮ್ಯಗಳ ಸಿದ್ಧಿಯನ್ನು ಉಂಟುಮಾಡುವ ಅಶ್ವಮೇಧಯಾಗದ ಫಲವನ್ನು ಆ ಕರ್ಮವು ಕೊಡುವುದು, ಶ್ಲೇಷ್ಮಾತಕ, ನಕ್ತಮಾಲ, ಕಪಿತ್ಥ, ಶಾಲ್ಮಲಿ ಮುಂತಾದ ವೃಕ್ಷಜಾತಿಯು ಶ್ರಾದ್ಧದಲ್ಲಿ ನಿಷಿದ್ಧವಾದುದು.

೧೧೫. ಹಾಗೆ ನೀಪ, ವಿಭೀತಕ, ಚಿರಬಿಲ್ವ, ಕೋಲ, ತಿಂದುಕ, ಎಂಬ ವೃಕ್ಷಗಳು ಶ್ರಾದ್ಧಕರ್ಮಗಳಲ್ಲಿ ನಿಂದಿಸಲ್ಪಟ್ಟಿರುವುದರಿಂದ ಅವುಗಳನ್ನು ವರ್ಜಿಸಬೇಕು.

೧೧೬. ಮತ್ತು ಬಲ್ವಜ, ಕೋವಿದಾರ ಎಂಬ ವೃಕ್ಷ ಜಾತಿಯನ್ನೂ ಅನೇಕ ಪಕ್ಷಿಗಳಿಗೆ ಆಶ್ರಯವನ್ನು ಕೊಟ್ಟ ವೃಕ್ಷಗಳನ್ನೂ ಯಾವಾಗಲೂ ಸಮಿತ್ತುಗಳಿಗಾಗಿ ಉಪಯೋಗಿಸುವುದನ್ನು ವರ್ಜಿಸಬೇಕು.

**ಅನ್ಯಾಂಶ್ಚೈವಂವಿಧಾನ್ ಸರ್ವಾನ್ ಅಯಜ್ಞೀಯಾಂಶ್ಚ ವರ್ಜಯೇತ್।**
**ಸ್ವಧೇತಿ ಚೈವ ಮಂತ್ರಾಣಾಂ ಪಿತ್ಯಾಣಾಂ ವಚನಂ ಯಥಾ ॥**
**ಸ್ವಾಹೇತಿ ಚೈವ ದೇವಾನಾಂ ಯಜ್ಞಕರ್ಮಣ್ಯುದಾಹೃತಮ್ ॥ ೧೧೭ ॥**

**ಇತಿ ಶ್ರೀ ಬ್ರಹಾಂಡಪುರಾಣೇ ಉತ್ತರಾರ್ಧೇ ಏಕಾದಶೋಽಧ್ಯಾಯಃ**

---

೧೧೭. ಮತ್ತು ಈ ವಿಧವಾದ, ಯಜ್ಞಕ್ಕೆ ಅರ್ಹವಲ್ಲದ ವೃಕ್ಷಗಳನ್ನು ತ್ಯಜಿಸಬೇಕು, ಮತ್ತು ಪಿತೃಗಳ ಆದೇಶದಂತೆ ಸ್ವಧಾ ಎಂಬ ಮಂತ್ರಪಾಠವನ್ನು ಪಿತೃಯಜ್ಞಗಳಲ್ಲಿಯೂ ಸ್ವಾಹಾ ಎಂಬ ಮಂತ್ರಪಾಠವನ್ನು ದೇವ ಯಜ್ಞಗಳಲ್ಲಿಯೂ ಮಾಡಬೇಕು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹನ್ನೊಂದನೆಯ
ಅಧ್ಯಾಯವು ಮುಗಿದುದು

---

## ದ್ವಾದಶೋಽಧ್ಯಾಯಃ

**ಸೂತ ಉವಾಚ :—**

**ದೇವಾಶ್ಚ ಪಿತರಶ್ಚೈವ ಅನ್ಯೋನ್ಯಂ ನಿಯತಾಃ ಸ್ಮೃತಾಃ ।**
**ಆಥರ್ವಣಸ್ತ್ವೇಷ ವಿಧಿರಿತ್ಯುವಾಚ ಬೃಹಸ್ಪತಿಃ ॥ ೧ ॥**

**ಪೂಜಯೇತ ಪಿತೄನ್ ಪೂರ್ವಂ ದೇವಾಂಶ್ಚ ತದನಂತರಮ್ ।**
**ದೇವಾ ಅಪಿ ಪಿತೄನ್ ಪೂರ್ವಮರ್ಚಯಂತಿ ಹಿ ಯತ್ನತಃ ॥ ೨ ॥**

**ದಕ್ಷಸ್ಯ ದುಹಿತಾ ನಾಮ್ನಾ ವಿಶ್ವಾ ನಾಮೇತಿ ವಿಶ್ರುತಾ ।**
**ವಿಶ್ವಾಖ್ಯಾಸ್ತು ಸುತಾಸ್ತಸ್ಯಾಂ ಧರ್ಮಾತೋ ಜಜ್ಞಿರೇ ದಶ ॥ ೩ ॥**

**ಪ್ರಖ್ಯಾತಾಸ್ತ್ರಿಷು ಲೋಕೇಷು ಸರ್ವಲೋಕನಮಸ್ಕೃತಾಃ ।**
**ಸಮುಸ್ತಾಸ್ತೇ ಮಹಾತ್ಮಾನಶ್ಚೇರುರುಗ್ರಂ ಮಹತ್ತಪಃ ॥ ೪ ॥**

---

೧. ಸೂತಮುನಿಯು ಇಂತೆಂದನು :—ದೇವತೆ, ಪಿತೃ ಇವರಿಬ್ಬರು ಪರಸ್ಪರವಾಗಿ ನಿಯತವಾದ ಸಂಬಂಧವನ್ನು ಹೊಂದಿರುವರೆಂದು ಸ್ಮರಿಸಲ್ಪಟ್ಟಿರುವರು. ಇದನ್ನು ಬೃಹಸ್ಪತಿಯು ಅಥರ್ವವೇದೋಕ್ತವಾದ ವಿಧಾನವೆಂದು ಹೇಳಿರುವನು.

೨. ಮೊದಲು ಪಿತೃಗಳನ್ನು ಪೂಜಿಸಬೇಕು. ತರುವಾಯ ದೇವತೆಗಳನ್ನು ಪೂಜಿಸಬೇಕು. ದೇವತೆಗಳು ಕೂಡ ಯತ್ನಪೂರ್ವಕವಾಗಿ ಪಿತೃಗಳನ್ನು ಮೊದಲು ಅರ್ಚಿಸುವರು.

೩. ದಕ್ಷ ಪ್ರಜಾಪತಿಗೆ ವಿಶ್ವಾ ಎಂಬ ನಾಮದಿಂದ ಪ್ರಸಿದ್ಧಳಾದ ಒಬ್ಬಳು ಪುತ್ರಿಯು ಇದ್ದಳು. ಆ ವಿಶ್ವಾ ಎಂಬಾಕೆಯಲ್ಲಿ ಧರ್ಮ ಪ್ರಜಾಪತಿಯಿಂದ ಹತ್ತು ಮಂದಿ ಪುತ್ರರು ಜನಿಸಿದರು.

೪. ಮೂರು ಲೋಕಗಳಲ್ಲಿ ಪ್ರಖ್ಯಾತರಾದ ಮತ್ತು ಮೂರು ಲೋಕದ ಪ್ರಜೆಗಳಿಂದ ವಂದ್ಯರಾದ ಆ ಮಹಾತ್ಮರೆಲ್ಲರೂ ಉಗ್ರವಾದ ಮಹಾ ತಪಸ್ಸನ್ನು ಆಚರಿಸಿದರು.

ಹಿಮವಚ್ಛಿಖರೇ ರಮ್ಯೇ ದೇವರ್ಷಿಗಣಸೇವಿತೇ ।
ಶುದ್ಧೇನ ಮನಸಾ ಪ್ರೀತಾ ಊಚುಸ್ತಾನ್ ಪಿತರಸ್ತದಾ ॥ ೫ ॥

ವರಂ ವೃಣೀಧ್ವಂ ಪ್ರೀತಾಃ ಸ್ಮಃ ಕಂ ಕಾಮಂ ಕರವಾಮಹೇ ।
ಏವಮುಕ್ತೇ ತು ಪಿತೃಭಿಸ್ತದಾ ತ್ರೈಲೋಕ್ಯಭಾವನಃ ॥ ೬ ॥

ಬ್ರಹ್ಮೋವಾಚ ಮಹಾತೇಜಾಸ್ತಪಸಾ ತೈಸ್ತು ತೋಷಿತಃ ।
ಪ್ರೀತೋಽಸ್ಮಿ ತಪಸಾನೇನ ಕಂ ಕಾಮಂ ಕರವಾಣಿ ವಃ ॥ ೭ ॥

ಏವಮುಕ್ತಾಸ್ತದಾ ವಿಶ್ವೇ ಬ್ರಹ್ಮಣಾ ವಿಶ್ವಕರ್ಮಣಾ ।
ಊಚುಸ್ತೇ ಸಹಿತಾಃ ಸರ್ವೇ ಬ್ರಹ್ಮಾಣಂ ಲೋಕಭಾವನಮ್ ॥ ೮ ॥

ಶ್ರಾದ್ಧೇಽಸ್ಮಾಕಂ ಭವೇದಂಶೋ ಹ್ಯೇಷ ನಃ ಕಾಂಕ್ಷಿತೋ ವರಃ ।
ಪ್ರತ್ಯುವಾಚ ತತೋ ಬ್ರಹ್ಮಾ ತಾನ್ ವೈ ತ್ರಿದಶಪೂಜಿತಃ ॥ ೯ ॥

---

೫. ದೇವ, ಋಷಿಗಳ ಸಂಘದಿಂದ ಸೇವಿಸಲ್ಪಟ್ಟ, ರಮ್ಯವಾದ, ಹಿಮವತ್ಪರ್ವತದ ಶಿಖರದಲ್ಲಿ ಸುಪ್ರೀತರಾದ ಪಿತೃಗಳು ಶುದ್ಧವಾದ ಮನಸ್ಸಿನಿಂದ ಆಗ ಆ ವಿಶ್ವಾದೇವಿಯ ಪುತ್ರರನ್ನು ಕುರಿತು ಸಂಭಾಷಿಸಿದರು.

೬. ನೀವು ವರವನ್ನು ಪ್ರಾರ್ಥಿಸಿರಿ, ನಾವು ತೃಪ್ತರಾಗಿದ್ದೇವೆ. ನಿಮಗೆ ಯಾವ ಇಷ್ಟವನ್ನು ಕೊಡೋಣ, ಎಂದು ಪಿತೃಗಳಿಂದ ಹೇಳಲ್ಪಡಲಾಗಿ ಲೋಕತ್ರಯಕ್ಕೆ ಜನಕನಾದ ಬ್ರಹ್ಮದೇವನು ಈ ರೀತಿಯಾಗಿ ಹೇಳಿದನು.

೭. ಅವರ ತಪಸ್ಸಿನಿಂದ ಪ್ರಸನ್ನನೂ ಸಂತುಷ್ಟನೂ ಆದ ಮಹಾತೇಜಸ್ವಿಯಾದ ಬ್ರಹ್ಮನು ನಿಮ್ಮ ಈ ತಪಸ್ಸಿನಿಂದ ಸುಪ್ರೀತನಾಗಿರುವೆನು. ನಿಮಗೆ ಯಾವ ಇಷ್ಟಾರ್ಥವನ್ನು ಉಂಟುಮಾಡಲಿ ಎಂದು ಕೇಳಿದನು.

೮. ಆಗ ವಿಶ್ವೆದೇವರು ವಿಶ್ವ ನಿರ್ಮಾಣ ಮಾಡಿದ ಬ್ರಹ್ಮದೇವನಿಂದ ಈ ರೀತಿಯಾಗಿ ಹೇಳಲ್ಪಟ್ಟವರಾಗಿ ಅವರೆಲ್ಲರೂ ಸೇರಿ ಲೋಕಕಾರಣನಾದ ಬ್ರಹ್ಮನನ್ನು ಕುರಿತು ಪ್ರತಿವಚನವನ್ನು ಆಡಿದರು.

೯. ನಮಗೆ ಶ್ರಾದ್ಧವೆಂಬ ಪಿತೃಯಜ್ಞದಲ್ಲಿ ಹವಿಸ್ಸಿನ ಒಂದು ಅಂಶವು ಬರಬೇಕು. ಇದು ನಮಗೆ ಇಷ್ಟವಾದ ವರವು, ದೇವತೆಗಳಿಂದ ಪೂಜಿಸಲ್ಪಟ್ಟ ಬ್ರಹ್ಮನು ಆಗ ಅವರನ್ನು ಕುರಿತು ಹೇಳಿದನು.

ಭವಿಷ್ಯತ್ಯೇವಮೇವಂ ತು ಕಾಂಕ್ಷಿತೋ ವ್ರೋ ವರಸ್ತು ಯಃ ।
ಪಿತೃಭಿಶ್ಚ ತಥೇತ್ಯುಕ್ತಮೇವಮೇತನ್ನ ಸಂಶಯಃ ॥ ೧೦ ॥

ಸಹಾಸ್ಮಾಭಿಸ್ತು ಭೋಕ್ತವ್ಯಂ ಯತ್ಕಿಂಚಿದ್ದೃಶ್ಯತೇ ತ್ವಿಹ ।
ಅಸ್ಮಾಕಂ ಕಲ್ಪಿತೇ ಶ್ರಾದ್ಧೇ ಯುಷ್ಮಾನಪ್ರಾಶನಂ ಹಿ ವೈ ॥ ೧೧ ॥

ಭವಿಷ್ಯತಿ ಮನುಷ್ಯೇಷು ಸತ್ಯಮೇತದ್ಬ್ರವಾಮಹೇ ।
ಮಾಲ್ಯೈರ್ಗಂಧೈಸ್ತಥಾನ್ನೇನ ಯುಷ್ಮಾನಗ್ರೇಽರ್ಚಯಿಷ್ಯತಿ ॥ ೧೨ ॥

ಅಗ್ರೇ ದತ್ತ್ವಾ ತು ಯುಷ್ಮಾಕಮಸ್ಮಾಕಂ ದಾಸ್ಯತೇ ತತಃ ।
ವಿಸರ್ಜನಮಥಾಸ್ಮಾಕಂ ಪೂರ್ವಂ ಪಶ್ಚಾತ್ತು ದೈವತಮ್ ॥ ೧೩ ॥

ರಕ್ಷಣಂ ಚೈವ ಶ್ರಾದ್ಧಸ್ಯ ಆತಿಥ್ಯಸ್ಯ ವಿಧಿದ್ವಯಮ್ ।
ಭೂತಾನಾಂ ದೇವತಾನಾಂ ಚ ಪಿತೄಣಾಂ ಚೈವ ಕರ್ಮಣಿ ॥ ೧೪ ॥

---

೧೦. ಯಾವ ವರವನ್ನು ನೀವು ಇಚ್ಛಿಸುವಿರೋ ಆ ಇಷ್ಟಾರ್ಥವು ಹಾಗೆಯೇ ನಿಮಗೆ ದೊರಕುವುದು. ಎಂದು ಬ್ರಹ್ಮನು ಹೇಳಿದ ಆದೇಶವನ್ನು ಹಾಗೆಯೇ ಆಗಲೆಂದು ನಿಸ್ಸಂಶಯವಾಗಿ ಪಿತೃದೇವತೆಗಳೂ ಒಪ್ಪಿಕೊಂಡರು.

೧೧. ಇಲ್ಲಿ ಕಾಣಿಸುತ್ತಿರುವ ಪ್ರತಿಯೊಂದು ಭೋಜ್ಯವಸ್ತು ನಮ್ಮೊಡನೆ ಭುಂಜಿಸಲ್ಪಡಬೇಕು. ನವ.ಗೋಸ್ಕರ ಸಿದ್ಧಪಡಿಸಿರುವ ಶ್ರಾದ್ಧಹವಿಸ್ಸಿನಲ್ಲಿ ನಿಮಗೆ ಕೂಡ ಭಾಗದ ಅಶನವು ಸಂಭವಿಸುವುದು.

೧೨. ಮನುಷ್ಯರಲ್ಲಿ ಈ ವಿಧಾನವು ಆಚರಣೆಯಲ್ಲಿರುವುದು. ನಾವು ಸತ್ಯವಾದ ಅಂಶವನ್ನು ಹೇಳುತ್ತೇವೆ. ಮತ್ತು ಮಾಲ್ಯ, ಗಂಧ, ಅನ್ನಗಳಿಂದ ನಿಮ್ಮನ್ನು ಮೊದಲು ಪೂಜಿಸುವನು.

೧೩. ನಿಮಗೆ ಸಮಸ್ತೋಪಚಾರಗಳನ್ನು ಮೊದಲು ಕೊಟ್ಟು ಅನಂತರ ನಮಗೆ ಕೊಡುವನು. ಆದರೆ ವಿಸರ್ಜನವನ್ನು ಮಾಡುವಾಗ ಪಿತೃವಿಸರ್ಜನವನ್ನು ಮಾಡಿದ ತರುವಾಯ ದೇವತಾವಿಸರ್ಜನವನ್ನು ಆಚರಿಸುವನು.

೧೪. ಶ್ರಾದ್ಧಯಜ್ಞರಕ್ಷಣ, ಆತಿಥ್ಯಸ್ವೀಕಾರವೆಂಬ ಎರಡು ವಿಧಾನಗಳು ದೇವತೆಗಳಿಂದ ಆಗಬೇಕಾಗಿರುವುವು. ಭೂತ, ದೇವ ಮತ್ತು ಪಿತೃಗಳಿಗೆ ಸಂಬಂಧವಾದ ಕಾರ್ಯಗಳಲ್ಲಿ ಕರ್ಮರಕ್ಷಣವನ್ನು ಈ ರೀತಿಯಾಗಿ ಸಂಪಾದಿಸಬೇಕು.

ಏವಂ ಕೃತೇ ಸಮ್ಯಗೇತತ್ ಸರ್ವಮೇವ ಭವಿಷ್ಯತಿ ।
ಏವಂ ದತ್ತ್ವಾ ವರಂ ತೇಷಾಂ ಬ್ರಹ್ಮಾ ಪಿತೃಗಣೈಃ ಸಹ ॥ ೧೫ ॥

ಕ್ಷಯಾನುಗ್ರಹಕೃದ್ದೇವಃ ಸಂಚಕಾರ ಯಥೋದಿತಮ್ ।
ವೇದೇ ಪಂಚ ಮಹಾಯಜ್ಞಾ ನರಾಣಾಂ ಸಮುದಾಹೃತಾಃ ॥ ೧೬ ॥

ಏತಾನ್ ಪಂಚ ಮಹಾಯಜ್ಞಾನ್ನಿರ್ವಪೇತ್ಸತತಂ ನರಃ ।
ಯತ್ರ ಸ್ಥಾಸ್ಯಂತಿ ದಾತಾರಸ್ತತ್ಸ್ಥಾನಂ ವೈ ನಿಬೋಧತ ॥ ೧೭ ॥

ನಿರ್ಭಯಂ ವಿರಜಸ್ಕಂ ಚ ನಿಶ್ಶೋಕಂ ನಿರ್ವ್ಯಥಕ್ಲಮಮ್ ।
ಬ್ರಾಹ್ಮಂ ಸ್ಥಾನಮವಾಪ್ನೋತಿ ಸರ್ವಲೋಕಪುರಸ್ಕೃತಮ್ ॥ ೧೮ ॥

ಶೂದ್ರೇಣಾಪಿ ಚ ಕರ್ತವ್ಯಾಃ ಪಂಚೈತೇ ಮಂತ್ರವರ್ಜಿತಾಃ ।
ಅತೋಽನ್ಯಥಾ ತು ಯೋ ಭುಂಕ್ತೇ ಸ ಋಣಂ ನಿತ್ಯಮಶ್ನುತೇ॥ ೧೯ ॥

---

೧೫. ಈ ರೀತಿ ಮಾಡಲಾಗಿ ಎಲ್ಲವೂ ಸಮಗ್ರವಾಗಿಯೂ ನಡೆಯುವುದು. ಬ್ರಹ್ಮದೇವನು ವಿಶ್ವದೇವರಿಗೆ ಪಿತೃಗಣಗಳ ಸಂಗಡ ಈ ವಿಧವಾದ ವರಗಳನ್ನು ಕೊಟ್ಟನು.

೧೬. ಪ್ರಜಾಸೃಷ್ಟಿಯಲ್ಲಿ ಕ್ಷಯ–ಅನುಗ್ರಹಗಳನ್ನು ತೋರಿಸುವ ಶಕ್ತಿಯುಳ್ಳ ಬ್ರಹ್ಮನು ಹಿಂದೆ ಹೇಳಿದ ಕ್ರಮವನ್ನು ನೆರವೇರಿಸಿದನು, ವೇದದಲ್ಲಿ ಮಾನವರಿಗೆ ಪಂಚ ಮಹಾ ಯಜ್ಞಗಳು ಕರ್ತವ್ಯಗಳಾಗಿ ಬೋಧಿಸಲ್ಪಟ್ಟಿವೆ.

೧೭. ಮಾನವನು ಯಾವಾಗಲೂ ಈ ಪಂಚ ಮಹಾ ಯಜ್ಞಗಳನ್ನು ಆಚರಿಸಬೇಕು. ಪಂಚ ಮಹಾ ಯಜ್ಞಗಳ ಮೂಲಕ ಭೂತಾದಿಗಳಿಗೆ ತೃಪ್ತಿಯನ್ನು ಕೊಟ್ಟ ಮಾನವರು ವಾಸಮಾಡುವ ಉತ್ತಮಲೋಕಗಳನ್ನು ಶ್ರವಣಮಾಡಿರಿ.

೧೮. ಭಯ, ರಜೋಗುಣಸಂಪರ್ಕ, ಶೋಕ, ವ್ಯಥೆ ಆಯಾಸಗಳಿಂದ ಶೂನ್ಯವಾದ ಮತ್ತು ಸಮಸ್ತ ಲೋಕಗಳಿಂದ ಪುರಸ್ಕರಿಸಲ್ಪಟ್ಟ ಬ್ರಹ್ಮಲೋಕಸ್ಥಾನವನ್ನು ಈ ಸುಕೃತ ಬಲದಿಂದ ಹೊಂದುತ್ತಾನೆ.

೧೯. ಶೂದ್ರನುಕೂಡ ಈ ಪಂಚ ಮಹಾ ಯಜ್ಞಗಳನ್ನು ಮಂತ್ರಪಾಠವಿಲ್ಲದೇ ಆಚರಿಸಬೇಕು. ಮಹಾ ಯಜ್ಞಗಳನ್ನು ಆಚರಿಸದೇ ಯಾವನು ಅನ್ನಾದಿ ಆಹಾರವನ್ನು ಭುಂಜಿಸುವನೋ ಅವನು ಋಣಿಯಾಗುವನು.

ಋಣಂ ಭುಂಕ್ತೇ ಸ ಪಾಪಾತ್ಮಾ ಯಃ ಪಚೇದಾತ್ಮಕಾರಣಾತ್ ।
ತಸ್ಮಾನ್ನಿರ್ವರ್ತಯೇತ್ಪಂಚ ಮಹಾಯಜ್ಞಾನ್ ಸದಾ ಬುಧಃ ॥ ೨೦ ॥

ಉದಕ್ಪೂರ್ವೇ ಬಲಿಂ ಕುರ್ಯಾದುದಕಾಂತೇ ತಥೈವ ಚ ।
ಬಲಿಂ ಸುವಿಹಿತಂ ಕುರ್ಯಾದುಚ್ಚೈರುಚ್ಚತರಂ ಕ್ಷಿಪೇತ್ ॥ ೨೧ ॥

ಪರಶೃಗಂ ಗವಾಂ ಮೂತ್ರಂ ಬಲಿಂ ಸೂತ್ರಂ ಸಮುತ್ಕ್ಷಿಪೇತ್ ।
ತನ್ನಿವೇದ್ಯೋ ಭವೇತ್ಪಿಂಡಃ ಪಿತೄಣಾಂ ಯಸ್ತು ಜೀವತಿ ॥ ೨೨ ॥

ಇಷ್ಟೇನಾನ್ನೇನ ಭಕ್ಷ್ಯೈಶ್ಚ ಭೋಜಯೇಚ್ಚ ಯಥಾವಿಧಿ ।
ನಿವೇದ್ಯಂ ಕೇಚಿದಿಚ್ಛಂತಿ ಜೀವಂತ್ಯಪಿ ಹಿ ಯತ್ನತಃ ॥ ೨೩ ॥

ದೇವದೇವಾ ಮಹಾತ್ಮಾನೋ ಹ್ಯೇತೇ ಪಿತರ ಇತ್ಯುತ ।
ಇಚ್ಛಂತಿ ಕೇಚಿದಾಚಾರ್ಯಾಃ ಪಶ್ಚಾತ್ ಪಿಂಡನಿವೇದನಮ್ ॥ ೨೪ ॥

---

೨೦. ಯಾವನು ತನ್ನ ಆಹಾರವನ್ನು ಮಾತ್ರ ಲಕ್ಷ್ಯದಲ್ಲಿಟ್ಟು ಮಹಾ ಯಜ್ಞಗಳ ಆಚರಣದ ಉದ್ದೇಶವಿಲ್ಲದೇ ಅನ್ನ ಪಚನಮಾಡುವನೋ ಅವನು ಋಣವನ್ನು ಹೊರುತ್ತಾನೆ, ಆದುದರಿಂದ ಜ್ಞಾನಿಯಾದವನು ಈ ಮಹಾ ಯಜ್ಞಗಳನ್ನು ಮಾಡಬೇಕು.

೨೧. ಬಲಿಯನ್ನು ಈಶಾನ್ಯದಿಕ್ಕಿನ ಭಾಗದಲ್ಲಿಯೂ ಜಲಾಶಯದ ಸಮೀಪಲ್ಲಿಯೂ ಪ್ರದಾನಮಾಡಬೇಕು. ಹೀಗೆ ಉತ್ತಮ ವಿಧಾನದಿಂದ ಬಲಿದಾನವನ್ನು ಆಚರಿಸಬೇಕು. ಮತ್ತು ಅಧಿಕಾಧಿಕ ಪ್ರಮಾಣದಿಂದ ಬಲಿಯನ್ನು ಚೆಲ್ಲಬೇಕು.

೨೨. ಶೃಂಗ, ಗೋಮೂತ್ರ, ಬಲಿ ಮತ್ತು ಸೂತ್ರಗಳನ್ನು ಮೇಲಕ್ಕೆ ಎತ್ತಿ ಎಸೆಯುವುದು, ಪಿತೃ ಪ್ರೀತಿಕರವು, ಮಾನವನು ಜೀವಿಸಿರುವವರೆಗೆ ಪಿತೃಗಳಿಗೆ ಪಿಂಡ ನಿವೇದನವನ್ನು ಮಾಡಬೇಕು.

೨೩. ಇಷ್ಟವಾದ ಅನ್ನ, ಭಕ್ಷ್ಯ, ಭೋಜ್ಯ ಮುಂತಾದುವುಗಳಿಂದ ಯಥಾವಿಧಿಯಾಗಿ ದ್ವಿಜರನ್ನು ಭೋಜನಮಾಡಿಸಬೇಕು. ಪಿತೃಗಳು ಜೀವಸಹಿತವಾಗಿರುವಾಗಲೂ ಭಕ್ಷ್ಯಭೋಜ್ಯಾದಿಗಳನ್ನು ನಿವೇದನಮಾಡಬೇಕೆಂದು ಕೆಲವರ ಮತವು.

೨೪. ಈ ಪಿತೃಗಳು ಮಹಾತ್ಮರಾದ ದೇವಾದಿದೇವತೆಗಳಾಗಿರುವರು. ಕೆಲವರು ಆಚಾರ್ಯರು ಪಿಂಡನಿವೇದನ ವಿಧಿಯನ್ನು ಅನಂತರದಲ್ಲಿ ಆಚರಿಸಬೇಕಾದುದನ್ನಾಗಿ ಹೇಳುತ್ತಾರೆ.

ಪೂಜನಂ ಚೈವ ವಿಪ್ರಾಣಾಂ ಪೂರ್ವಮೇವೇಹ ನಿತ್ಯಶಃ ।
ತದ್ಧಿ ಧರ್ಮಾರ್ಥಕುಶಲೋ ನೇತ್ಯುವಾಚ ಬೃಹಸ್ಪತಿಃ ॥ ೨೫ ॥

ಪೂರ್ವಂ ನಿವೇದಯೇತ್ ಪಿಂಡಾನ್ ಪಶ್ಚಾದ್ವಿಪ್ರಾಂಶ್ಚ ಭೋಜಯೇತ್।
ಯೋಗಾತ್ಮಾನೋ ಮಹಾತ್ಮಾನಃ ಪಿತರೋ ಯೋಗಸಂಭವಾಃ॥ ೨೬ ॥

ಸೋಮಮಾಪ್ಯಾಯಯಂತ್ಯೇತೇ ಪಿತರೋ ಯೋಗಸಂಸ್ಥಿತಾಃ ।
ತಸ್ಮಾದ್ದದ್ಯಾಚ್ಛುಚಿಃ ಪಿಂಡಾನ್ ಯೋಗೇಭ್ಯಸ್ತತ್ಪರಾಯಣಃ ॥ ೨೭ ॥

ಪಿತ್ರ್ಯಾಣಾಂ ಹಿ ಭವೇದೇತತ್ ಸಾಕ್ಷಾದಿವ ಹುತಂ ಹವಿಃ ।
ಬ್ರಾಹ್ಮಣಾನಾಂ ಸಹಸ್ರಸ್ಯ ಯೋಗಸ್ಥಂ ಗ್ರಾಸಯೇದ್ಯದಿ ॥ ೨೮ ॥

ಯಜಮಾನಂ ಚ ಭೋಕ್ತ್ರ್ಯಾಂಶ್ಚ ನೌರಿವಾಂಭಸಿ ತಾರಯೇತ್ ।
ಅಸತಾಂ ಪ್ರಗ್ರಹೋ ಯತ್ರ ಸತಾಂ ಚೈವ ವಿಮಾನನಾ ॥ ೨೯ ॥

---

೨೫. ಯಾವಾಗಲೂ ದ್ವಿಜರ ಪೂಜನವನ್ನು ಮೊದಲು ಮಾಡಬೇಕೆಂಬುದು ಅವರ ಅಭಿಪ್ರಾಯವು. ಆದರೆ ಧರ್ಮ ಅರ್ಥಗಳಲ್ಲಿ ಕುಶಲನಾದ ಬೃಹಸ್ಪತಿಯು ಅದನ್ನು ನಿಷೇಧಮಾಡಿರುವನು.

೨೬. ಮೊದಲು ಪಿಂಡಗಳನ್ನು ನಿವೇದನಮಾಡಿ ತರುವಾಯ ವಿಪ್ರರಿಗೆ ಭೋಜನಮಾಡಿಸಬೇಕಾದುದು ಉತ್ತಮವಾದ ವಿಧಾನವು, ಪಿತೃಗಳು ಯೋಗ ಮಯವಾದ ಆತ್ಮವುಳ್ಳವರೂ, ಮಹಾತ್ಮರೂ, ಮತ್ತು ಯೋಗಬಲದಿಂದ ಉತ್ಪನ್ನ ರಾದವರೂ ಆಗಿರುವರು.

೨೭. ಯೋಗಾನುಷ್ಠಾನದಲ್ಲಿ ನಿಷ್ಠೆಯುಳ್ಳ ಪಿತೃಗಳು ಸೋಮರಾಜನನ್ನು ಆಪ್ಯಾಯನಮಾಡುವರು, ಆದ್ದರಿಂದ ಕರ್ಮಿಯು ಕರ್ಮದಲ್ಲಿ ಆಸಕ್ತಿಯುಳ್ಳವನಾ ಗಿಯೂ ಪವಿತ್ರನಾಗಿಯೂ ಯೋಗಾತ್ಮಕರಾದ ಪಿತೃಗಳಿಗೆ ಪಿಂಡಗಳನ್ನು ಕೊಡಬೇಕು.

೨೮. ಸಾವಿರಾರು ಬ್ರಾಹ್ಮಣರ ಗುಂಪಿನಲ್ಲಿ ಯೋಗಾಭ್ಯಾಸ ಶೀಲನಾದ ಬ್ರಾಹ್ಮಣನನ್ನು ಭೋಜನಮಾಡಿಸಿದಲ್ಲಿ ಪಿತೃಗಳಿಗೆ ಪ್ರತ್ಯಕ್ಷವಾಗಿ ಹವಿಸ್ಸನ್ನು ಹೋಮಮಾಡಿ ಅರ್ಪಿಸಿದಂತೆ ಆಗುವುದು.

೨೯. ಮತ್ತು ಆ ಯೋಗಿಯು ಯಜಮಾನನನ್ನೂ ಭೋಕ್ತೃ ಜನರನ್ನೂ ದೋಣಿಯು ನೀರಿನಿಂದ ಬದುಕಿಸಿದಂತೆ ದುಃಖದಿಂಡ ತಾರಣಮಾಡಿಸುವನು, ಇಂತಹ ಉತ್ತಮ ಕರ್ಮವಿಧಿಗಳಲ್ಲಿ ದುಷ್ಟರನ್ನು ಸ್ವೀಕರಿಸುವುದು ಮತ್ತು ಸತ್ಪುರು ಷರನ್ನು ತಿರಸ್ಕರಿಸುವುದು ಅನ್ಯಾಯವು.

**ದಂಡೋ ದೈವಕೃತಸ್ತತ್ರ ಸದ್ಯಃ ಪತತಿ ದಾರುಣಃ ।**
**ಹಿತ್ವಾ ಮಮ ಸಧರ್ಮಾಣಂ ಬಾಲಿಶಂ ಯಸ್ತು ಭೋಜಯೇತ್॥ ೩೦ ॥**

**ಆದಿಕರ್ಮ ಸಮುತ್ಸೃಜ್ಯ ದಾತಾ ತತ್ರ ವಿನಶ್ಯತಿ ।**
**ಪಿಂಡಮಗ್ನೌ ಸದಾ ದದ್ಯಾದ್ಭೋಗಾರ್ಥೀ ಪ್ರಥಮಂ ನರಃ ॥ ೩೧ ॥**

**ದದ್ಯಾತ್ ಪ್ರಜಾರ್ಥೀ ಯತ್ನೇನ ಮಧ್ಯಮಂ ಮಂತ್ರಪೂರ್ವಕಮ್ ।**
**ಉತ್ತಮಾಂ ಕಾಂತಿಮನ್ವಿಚ್ಛನ್ ಗೋಷು ನಿತ್ಯಂ ಪ್ರಯಚ್ಛತಿ ॥ ೩೨ ॥**

**ಪ್ರಜ್ಞಾಂ ಚೈವ ಯಶಃ ಕೀರ್ತಿಮಪ್ಸು ವೈ ಸಂಪ್ರಯಚ್ಛತಿ ।**
**ಪ್ರಾರ್ಥಯನ್ ದೀರ್ಘಮಾಯುಶ್ಚ ವಾಯಸೇಭ್ಯಃ ಪ್ರಯಚ್ಛತಿ ॥೩೩॥**

**ಸೌಕುಮಾರ್ಯಮಥಾನ್ವಿಚ್ಛನ್ ಕುಕ್ಕುಟೇಭ್ಯಃ ಪ್ರಯಚ್ಛತಿ ।**
**ಏವಮೇತತ್ ಸಮುದ್ದಿಷ್ಟಂ ಪಿಂಡನಿರ್ವಪಣೇ ಫಲಮ್ ॥ ೩೪ ॥**

---

೩೦. ಹಾಗೆ ಅನ್ಯಾಯವನ್ನು ಮಾಡಿದಲ್ಲಿ ದೈವನಿರ್ಮಿತವಾದ ಕ್ರೂರವಾದ ದಂಡವು ಸಂಭವಿಸುವುದು, ಬ್ರಹ್ಮಸಮಾನನಾದ ಯೋಗ್ಯದ್ವಿಜನನ್ನು ಬಿಟ್ಟು ಮೂರ್ಖನನ್ನು ಭೋಜನಮಾಡಿಸುವುದು ಅನುಚಿತವು.

೩೧. ಅವಿವೇಕಿಯನ್ನು ಭೋಜನಮಾಡಿಸುವುದರಿಂದ ಆದಿಯಿಂದ ಮಾಡಿರುವ ಸತ್ಕರ್ಮವನ್ನು ಕಳೆದುಕೊಂಡು ದಾತೃಪುರುಷನು ನಾಶವನ್ನು ಹೊಂದುತ್ತಾನೆ. ಭೋಗಾಪೇಕ್ಷಿಯಾದ ಮಾನವನು ಪ್ರಥಮ ಪಿಂಡವನ್ನು ಯಾವಾಗಲೂ ಅಗ್ನಿಯಲ್ಲಿ ಹಾಕಬೇಕು.

೩೨. ಮಧ್ಯಮ ಪಿಂಡವನ್ನು ಮಂತ್ರ ಪಠನಪೂರ್ವಕವಾಗಿ ಪ್ರಯತ್ನದಿಂದ ಪ್ರಜಾಪೇಕ್ಷಿಯಾದ ಮಾನವನು ಅಗ್ನಿಯಲ್ಲಿ ಹಾಕಬೇಕು. ಉತ್ತಮವಾದ ಕಾಂತಿಯನ್ನು ಇಚ್ಛಿಸುವ ಯಜಮಾನನು ಪಿಂಡಗಳನ್ನು ಗೋವಿಗೆ ಗ್ರಾಸವಾಗಿ ಕೊಡಬೇಕು.

೩೩. ಪಿಂಡಗಳನ್ನು ನೀರಿನಲ್ಲಿ ಬಿಡುವುದರಿಂದ ಪ್ರಜ್ಞಾ, ಯಶಸ್ಸು ಮತ್ತು ಖ್ಯಾತಿಗಳು ಉಂಟಾಗುವುವು. ದೀರ್ಘಾಯುಷ್ಯವನ್ನು ಪ್ರಾರ್ಥಿಸುವವನು ಕಾಗೆಗಳಿಗೆ ಪಿಂಡಗಳನ್ನು ಕೊಡಬೇಕು.

೩೪. ಮೃದುತ್ವವೆಂಬ ಗುಣವನ್ನು ಬಯಸುವವನು ಅವುಗಳನ್ನು ಕೋಳಿಗಳಿಗೆ ಆಹಾರವಾಗಿ ಇಡಬೇಕು. ಪಿಂಡಗಳನ್ನು ವಿಸರ್ಜನಮಾಡುವುದರಿಂದ ಉಂಟಾಗುವ ಫಲತಾರತಮ್ಯವು ಈ ರೀತಿಯಾಗಿ ಹೇಳಲ್ಪಟ್ಟಿದೆ.

ಆಕಾಶೇ ಗಮಯೇದ್ವಾಪಿ ಅಪ್ಸು ವಾ ದಕ್ಷಿಣಾಮುಖಃ ।
ಪಿತೄಣಾಂ ಸ್ಥಾನಮಾಕಾಶಂ ದಕ್ಷಿಣಾ ಚೈವ ದಿಗ್ಭವೇತ್ ॥ ೩೫ ॥

ಏಕೇ ವಿಪ್ರಾಃ ಪುನಃ ಪ್ರಾಹುಃ ಪಿಂಡೋದ್ಧರಣಮಗ್ರತಃ ।
ಅನುಜ್ಞಾತಸ್ತು ತೈರ್ವಿಪ್ರೈಃ ಕಾಮಮುದ್ಧ್ರಿಯತಾಮಿತಿ ॥ ೩೬ ॥

ಪುಷ್ಪಾಣಾಂ ಚ ಫಲಾನಾಂ ಚ ಭಕ್ಷ್ಯಾಣಾಮನ್ನತಸ್ತಥಾ ।
ಅಗ್ರಮುದ್ಧೃತ್ಯ ಸರ್ವೇಷಾಂ ಜುಹುಯಾದ್ಧವ್ಯವಾಹನೇ ॥ ೩೭ ॥

ಭಕ್ಷ್ಯಮನ್ನಂ ತಥಾ ಪೇಯಂ ಮೂಲಾನಿ ಚ ಫಲಾನಿ ಚ ।
ಹುತ್ವಾಗ್ನೌ ಚ ತತಃ ಪಿಂಡಾನ್ನಿರ್ವಪೇದ್ದಕ್ಷಿಣಾಮುಖಃ ॥ ೩೮ ॥

ವೈವಸ್ವತಾಯ ಸೋಮಾಯ ಹುತ್ವಾ ಪಿಂಡಾನ್ನಿವೇದ್ಯ ಚ ।
ಉದಕಾನ್ನಯನಂ ಕೃತ್ವಾ ಪಶ್ಚಾದ್ವಿಪ್ರಾಂಶ್ಚ ಭೋಜಯೇತ್ ॥ ೩೯ ॥

---

೩೫. ಅಥವಾ ಯಜಮಾನನು ದಕ್ಷಿಣದಿಕ್ಕಿಗೆ ಅಭಿಮುಖನಾಗಿ ನಿಂತು ಆಕಾಶಕ್ಕೆ ಅಥವಾ ನೀರಿಗೆ ಎಸೆಯಬೇಕು. ಆಕಾಶ ಮತ್ತು ದಕ್ಷಿಣ ದಿಕ್ಕುಗಳು ಪಿತೃಗಳ ವಾಸಸ್ಥಾನವಾಗಿರುವುವು.

೩೬. ದ್ವಿಜರಿಂದ "ಕಾಮಮುದ್ಧ್ರಿಯತಾಂ" (ಪಿಂಡಗಳು ಉದ್ಧರಿಸಲ್ಪಡಲಿ) ಎಂದು ಮೊದಲು ಸಮ್ಮತಿಸಲ್ಪಟ್ಟವನಾಗಿ ಪಿಂಡೋದ್ಧಾರವನ್ನು ಮಾಡಬೇಕೆಂದು ಕೆಲವು ಆಚಾರ್ಯರು ಹೇಳುತ್ತಾರೆ.

೩೭. ಶ್ರಾದ್ಧಯಜ್ಞಕ್ಕೆ ಸಿದ್ಧಮಾಡಿರುವ ಪುಷ್ಪ, ಫಲ ಮತ್ತು ಭಕ್ಷ್ಯಗಳ ಅಗ್ರದಲ್ಲಿರುವ ಕೊಂಚ ಭಾಗವನ್ನು ಎತ್ತಿ ಅಗ್ನಿಯಲ್ಲಿ ಹೋಮಮಾಡಬೇಕು.

೩೮. ಮೊದಲು ಭಕ್ಷ್ಯ, ಅನ್ನ, ಮೂಲ, ಫಲ ಮುಂತಾದುವುಗಳನ್ನು ಅಗ್ನಿಯಲ್ಲಿ ಹೋಮಮಾಡಿ ಅನಂತರದಲ್ಲಿ ದಕ್ಷಿಣ ದಿಕ್ಕಿಗೆ ಅಭಿಮುಖನಾಗಿ ಪಿಂಡಗಳನ್ನು ಇರಿಸಬೇಕು.

೩೯. ವೈವಸ್ವತ, ಸೋಮ ದೇವತೆಗಳನ್ನುದ್ದೇಶಿಸಿ ಹೋಮಮಾಡಿ ಮತ್ತು ಪಿಂಡಗಳನ್ನು ನಿವೇದನಮಾಡಿ ಅವುಗಳಲ್ಲಿ ಜಲ ನಿನಯನವನ್ನು ಮಾಡಿ ವಿಪ್ರರಿಗೆ ಭೋಜನವನ್ನು ಮಾಡಿಸಬೇಕು.

ಅನುಪೂರ್ವಂ ತತೋ ವಿಪ್ರಾನ್ ಭಕ್ಷ್ಯೈರನ್ನೈಶ್ಚ ಶಕ್ತಿತಃ ।
ಸ್ನಿಗ್ಧೈರುಷ್ಣೈಃ ಸುಗಂಧೈಶ್ಚ ತರ್ಪಯೇತ್ತಾನ್ ರಸೈರಪಿ ॥ ೪೦ ॥

ಏಕಾಗ್ರಃ ಪರ್ಯುಪಾಸೀನಃ ಪ್ರಯತಃ ಪ್ರಾಂಜಲಿಃ ಸ್ಥಿತಃ ।
ತತ್ಪರಃ ಶ್ರದ್ಧಧಾನಶ್ಚ ಕಾಮಾನಾಪ್ನೋತಿ ಮಾನವಃ ॥ ೪೧ ॥

ಅಕ್ಷುದ್ರತ್ವಂ ಕೃತಜ್ಞತ್ವಂ ದಾಕ್ಷಿಣ್ಯಂ ಸಂಸ್ಕೃತಂ ವಚಃ ।
ತಪೋ ಯಜ್ಞಾಂಶ್ಚ ದಾನಂ ಚ ಪ್ರಯಚ್ಛಂತಿ ಪಿತಾಮಹಾಃ ॥ ೪೨ ॥

ಅತಃ ಪರಂ ವಿಧಿಂ ಸೌಮ್ಯಂ ಭುಕ್ತವತ್ಸು ದ್ವಿಜಾತಿಷು ।
ಆನುಪೂರ್ವ್ಯೇಣ ವಿಹಿತಂ ತನ್ಮೇ ನಿಗದತಃ ಶೃಣು ॥ ೪೩ ॥

ಪ್ರೋಕ್ಷ್ಯ ಭೂಮಿಮಥೋದ್ಧೃತ್ಯ ಪೂರ್ವಂ ಪಿತೃಪರಾಯಣಃ ।
ತತೋಽನ್ನವಿಕಿರಂ ಕುರ್ಯಾದ್ವಿಧಿದೃಷ್ಟೇನ ಕರ್ಮಣಾ ॥ ೪೪ ॥

---

೪೦. ಈ ಕ್ರಮದಿಂದ ಮಾಡಿಸುವ ವಿಪ್ರಭೋಜನದಲ್ಲಿ ಸ್ನೇಹಗುಣ, ಉಷ್ಣತೆ, ಸುಗಂಧ, ರಸಗಳಿಂದ ಕೂಡಿದ ಭಕ್ಷ್ಯ ಮತ್ತು ಅನ್ನಗಳಿಂದ ವಿಪ್ರರನ್ನು ತೃಪ್ತಿ ಪಡಿಸಬೇಕು.

೪೧. ಕರ್ಮಶೀಲನಾದ ಯಜಮಾನನು ಏಕಾಗ್ರತೆಯಿಂದ ಕೂಡಿದವನೂ, ಶುಶ್ರೂಷಾನಿರತನೂ, ಪವಿತ್ರನೂ, ಅಂಜಲಿಬದ್ಧನೂ, ಶ್ರದ್ಧಾ-ತಾತ್ಪರ್ಯಗಳಿಂದ ಕೂಡಿದವನೂ ಆಗಿ ಸರ್ವಕಾಮಗಳನ್ನು ಅನುಭವಿಸುವನು.

೪೨. ಈ ವಿಧಾನದಿಂದ ಸುಪ್ರೀತರಾದ ಪಿತೃದೇವತೆಗಳು ಔದಾರ್ಯ, ಕೃತಜ್ಞತೆ, ದಾಕ್ಷಿಣ್ಯ, ಸಂಸ್ಕಾರದಿಂದ ಅಲಂಕರಿಸಿರುವ ವಾಣಿ, ತಪಸ್ಸು, ಯಜ್ಞಾಚರಣ, ದಾನ ಮುಂತಾದ ಸದ್ಗುಣನಿಷ್ಠೆಯನ್ನು ಅನುಗ್ರಹಿಸುತ್ತಾರೆ.

೪೩. ವಿಪ್ರರು ಭೋಜನಮಾಡಿದ ತರುವಾಯ ನಡೆಯಬೇಕಾದ ಉಪಶಾಂತವಾದ, ಆನುಪೂರ್ವಿಯಿಂದ ಕರ್ತವ್ಯವಾಗಿ ವಿಧಿಸಲ್ಪಟ್ಟಿರುವ ವಿಧಾನವನ್ನು ವಿವರಿಸುವೆನು. ಆ ನನ್ನ ವಚನವನ್ನು ಕೇಳು.

೪೪. ಪಿತೃಕರ್ಮದಲ್ಲಿ ನಿರತನಾದ ಕರ್ಮಿಯು ಮೊದಲು ಭೂಮಿಯಲ್ಲಿ ಪ್ರೋಕ್ಷಣಮಾಡಿ ಉಲ್ಲೇಖನದಿಂದ ಚಿಹ್ನವನ್ನು ಮಾಡಿ ವಿಧಿಯಲ್ಲಿ ಹೇಳಿರುವ ಮೇರೆಗೆ ಅನ್ನವಿಕಿರಣವನ್ನು ಮಾಡಬೇಕು.

**ಸ್ವಧಾ ವಾಚ್ಯಾ ತತೋ ವಿಪ್ರಾನ್ ವಿಧಿವದ್ಭೂರಿದಕ್ಷಿಣಾನ್ ।**
**ಅನ್ನಶೇಷಮನುಜ್ಞಾಪ್ಯ ಸತ್ಕೃತ್ಯ ದ್ವಿಜಸತ್ತಮಾನ್ ॥ ೪೫ ॥**

**ಪ್ರಾಂಜಲಿಃ ಪ್ರಯತಶ್ಚೈವ ಅನುಗಮ್ಯ ವಿಸರ್ಜಯೇತ್ ॥ ೪೬ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಾದಶೋಽಧ್ಯಾಯಃ**

---

೪೫. ಅನಂತರದಲ್ಲಿ ಸ್ವಧಾ ಮಂತ್ರವನ್ನು ವಾಚನಮಾಡಬೇಕು. ಅನಂತರ ದ್ವಿಜೋತ್ತಮರನ್ನು ಅಧಿಕ ದಕ್ಷಿಣಾದಾನಾದಿಗಳಿಂದ ವಿಧಿಪೂರ್ವಕವಾಗಿ ಸತ್ಕರಿಸಿ ಅನ್ನಶೇಷವನ್ನು ಸ್ವೀಕರಿಸಲು ಅನುಜ್ಞೆ ಪಡೆಯಬೇಕು.

೪೬. ಶ್ರಾದ್ಧಯಜ್ಞ ಪ್ರಯೋಗದ ಸಮಾಪ್ತಿಯಲ್ಲಿ ಪರಿಶುದ್ಧನೂ ನಮಸ್ಕಾರಾಂಜಲಿಯನ್ನು ಕಟ್ಟಿಕೊಂಡವನೂ ಆದ ಯಜಮಾನನು ಸ್ವಲ್ಪ ಹಿಂಬಾಲಿಸಿ ವಿಪ್ರರನ್ನು ವಿಸರ್ಜಿಸಬೇಕು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹನ್ನೆರಡನೆಯ ಅಧ್ಯಾಯವು ಸಮಾಪ್ತವು.

# ತ್ರಯೋದಶೋಽಧ್ಯಾಯಃ

ಬೃಹಸ್ಪತಿರುವಾಚ :—

ಸಕೃದಭ್ಯರ್ಚಿತಾಃ ಪ್ರೀತಾ ಭವಂತಿ ಪಿತರೋಽವ್ಯಯಾಃ ।
ಯೋಗಾತ್ಮಾನೋ ಮಹಾತ್ಮಾನೋ ವಿಪಾಪ್ಮಾನೋ ಮಹೌಜಸಃ ॥೧॥

ಪ್ರೇತ್ಯ ಚ ಸ್ವರ್ಗಲೋಕಾಯ ಕಾಮ್ಯೈಶ್ಚ ಬಹುಲಂ ಭುವಿ ।
ಯೇಷು ವಾಪ್ಯನುಗೃಹ್ಣಂತಿ ಮೋಕ್ಷಪ್ರಾಪ್ತಿಃ ಕ್ರಮೇಣ ತು ॥ ೨ ॥

ತಾನಿ ವಕ್ಷ್ಯಾಮ್ಯಹಂ ಸೌಮ್ಯ ಸರಾಂಸಿ ಸರಿತಸ್ತಥಾ ।
ತೀರ್ಥಾನಿ ಚೈವ ಪುಣ್ಯಾನಿ ದೇಶಾಂಶ್ಚೈಲಾಂಸ್ತಥಾಶ್ರಮಾನ್ ॥ ೩ ॥

ಪುಣ್ಯೋ ಹಿ ತ್ರಿಷು ಲೋಕೇಷು ಸದೈವಾಮರಕಂಟಕಃ ।
ಪರ್ವತಪ್ರವರಃ ಪುಣ್ಯಃ ಸಿದ್ಧಚಾರಣಸೇವಿತಃ ॥ ೪ ॥

---

೧. ಬೃಹಸ್ಪತಿಯು ಮುಂದೆ ಈ ರೀತಿಯಾಗಿ ಹೇಳಿದನು:- ಯೋಗಾತ್ಮರೂ, ಮಹಾತ್ಮರೂ, ಪಾಪಸಂಗರಹಿತರೂ, ಮಹಾತೇಜಸ್ವಿಗಳೂ, ಮತ್ತು ಚ್ಯುತಿಯಿಲ್ಲದವರೂ ಆದ ಪಿತೃಗಳು ವಿಧಿವತ್ತಾಗಿ ಒಂದು ಸಲ ಪೂಜಿತರಾದರೆ ಸುಪ್ರೀತರಾಗುವರು.

೨. ಮಾನವನು ಭೂಮಿಯಲ್ಲಿ ಸರ್ವಕಾಮಗಳನ್ನೂ, ಮರಣಾನಂತರದಲ್ಲಿ ಸ್ವರ್ಗವನ್ನೂ, ಪಿತೃಗಳ ಪ್ರಸಾದವನ್ನೂ .ಮತ್ತು ಕ್ರಮವಾಗಿ ಮುಕ್ತಿಯನ್ನೂ ಹೊಂದಲು ಸಾಧನವಾದ ಪುಣ್ಯದೇಶಗಳನ್ನು ಹೇಳುತ್ತೇನೆ.

೩. ಸೌಮ್ಯವಾದ ಶೀಲವುಳ್ಳ ಶಿಷ್ಯನೇ ! ಉತ್ತಮವಾದ ಸರೋವರ, ನದೀ, ತೀರ್ಥ, ಪುಣ್ಯದೇಶ, ಪರ್ವತ, ಮತ್ತು ಆಶ್ರಮರೂಪವಾದ ಪವಿತ್ರದೇಶಗಳನ್ನು ಕ್ರಮವಾಗಿ ಹೇಳುತ್ತೇನೆ. '

೪. ಮೂರು ಲೋಕಗಳಲ್ಲಿಯೂ ಪವಿತ್ರವೂ, ಸಿದ್ಧ-ಚಾರಣರೆಂಬ ದೇವಯೋನಿಗಳಿಂದ ಸೇವಿಸಲ್ಪಟ್ಟಿರುವುದೂ ಆದ ಅಮರಕಂಟಕ ಎಂಬ ಪರ್ವತವು ಯಾವಾಗಲೂ ಅತಿ ಪುಣ್ಯಕರವಾಗಿರುವುದು.

ಯತ್ರ ವರ್ಷಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।
ತಪಃ ಸುದುಶ್ಚರಂ ತೇಪೇ ಭಗವಾನಂಗಿರಾಃ ಪುರಾ ॥ ೫ ॥

ಯತ್ರ ಮೃತ್ಯೋರ್ಗತಿರ್ನಾಸ್ತಿ ತಥೈವಾಸುರರಕ್ಷಸಾಮ್ ।
ನ ಭಯಂ ನೈವ ಚಾಲಕ್ಷ್ಮೀರ್ಯಾವದ್ಭೂಮಿರ್ಧರಿಷ್ಯತಿ ॥ ೬ ॥

ತಪಸಾ ತೇಜಸಾ ತಸ್ಯ ಭ್ರಾಜತೇ ಸ ನಗೋತ್ತಮಃ ।
ಶೃಂಗೇ ಮಾಲ್ಯವತೋ ನಿತ್ಯಂ ವಹ್ನಿಃ ಸಂವರ್ತಕೋ ಯಥಾ ॥ ೭ ॥

ಮೃದವಸ್ತು ಸುಗಂಧಾಶ್ಚ ಹೇಮಾಭಾಃ ಪ್ರಿಯದರ್ಶನಾಃ ।
ಶಾಂತಾಃ ಕುಶಾ ಇತಿ ಖ್ಯಾತಾಃ ಪರಿದಕ್ಷಿಣನರ್ಮದಾಮ್ ॥ ೮ ॥

ದೃಷ್ಟವಾನ್ ಸ್ವರ್ಗಸೋಪಾನಂ ಭಗವಾನಂಗಿರಾಃ ಪುರಾ ।
ಅಗ್ನಿಹೋತ್ರೇ ಮಹಾತೇಜಾಃ ಪ್ರಸ್ತರಾರ್ಥಂ ಕುಶೋತ್ತಮಾನ್ ॥ ೯ ॥

---

೫. ಪೂರ್ವಕಾಲದಲ್ಲಿ ಪೂಜ್ಯನಾದ ಅಂಗಿರಮುನಿಯು ಈ ಪರ್ವತದಲ್ಲಿ ಸಹಸ್ರ-ಪ್ರಯುತ-ಅರ್ಬುದವೆಂಬ ಅಧಿಕ ಸಂಖ್ಯೆಯುಳ್ಳ ಬಹು ದೀರ್ಘಕಾಲದವರೆಗೆ ಕ್ಲೇಶ ಸಾಧ್ಯವಾದ ಮಹಾತಪಸ್ಸನ್ನು ಆಚರಿಸಿದನು.

೬. ಭೂಮಿಯು ಪ್ರಲಯವಾಗದಿರುವವರೆಗೂ ಮೃತ್ಯು, ಅಸುರ, ರಾಕ್ಷಸರು ಆ ಪವಿತ್ರ ದೇಶವನ್ನು ಪ್ರವೇಶಿಸಲಾರರು. ಆದ್ದರಿಂದ ಅಲ್ಲಿ ಭಯ, ಅಲಕ್ಷ್ಮೀ, ಮುಂತಾದ ದೋಷಗಳಿಗೆ ಅವಕಾಶವಿಲ್ಲ.

೭. ಮಾಲ್ಯವತ್ಪರ್ವತದ ಶಿಖರದಲ್ಲಿ ಸಂವರ್ತಕವೆಂಬ ಅಗ್ನಿಯು ಜ್ವಲಿಸುತ್ತಿರುವಂತೆ ಆ ಪರ್ವತವು ಅಂಗಿರಮುನಿಯ ತಪೋ ಮಹಿಮೆಯಿಂದ ಥಳಥಳಿಸುತ್ತಿದೆ.

೮. ಆ ಪರ್ವತದಲ್ಲಿ ಹರಿಯುವ ನರ್ಮದಾನದಿಯ ದಕ್ಷಿಣಭಾಗದಲ್ಲಿ ಮೃದುವಾಗಿಯೂ, ಸುವಾಸನೆಯುಳ್ಳದ್ದಾಗಿಯೂ, ಸುವರ್ಣಕಾಂತಿಯುಳ್ಳದ್ದಾಗಿಯೂ, ದರ್ಶನೀಯವಾಗಿಯೂ, ಮತ್ತು ಶಾಂತಾಕೃತಿಯುಳ್ಳದ್ದಾಗಿಯೂ ಇರುವ ಕುಶ ಎಂಬ ದರ್ಭೆಗಳು ಪ್ರಸಿದ್ಧವಾಗಿರುವುವು.

೯. ಮಹಾತೇಜಸ್ವಿಯೂ ಪೂಜ್ಯನೂ ಆದ ಆ ಅಂಗಿರಮುನಿಯು ಅಗ್ನಿಹೋತ್ರ ಕರ್ಮದಲ್ಲಿ ಉಪಯೋಗಿಸುವ ಪ್ರಸ್ತರವೆಂಬ ದರ್ಭಮುಷ್ಟಿಗೆ ಆ ಕುಶಗಳನ್ನು ಉಪಯೋಗಿಸುವುದು ಸ್ವರ್ಗಕ್ಕೆ ಸೋಪಾನವೆಂದು ಅರಿತನು.

**ತೇಷು ದರ್ಭೇಷು ಯಃ ಪಿಂಡಾನ್ ಮರಕಂಟಕಪರ್ವತೇ।**
**ದದ್ಯಾತ್ ಸಕೃದಪಿ ಪ್ರಾಜ್ಞಸ್ತಸ್ಯ ವಕ್ಷ್ಯಾಮಿ ಯತ್ಫಲಮ್ ॥ ೧೦ ॥**

**ತದ್ಭವತ್ಯಕ್ಷಯಂ ಶ್ರಾದ್ಧಂ ಪಿತೄಣಾಂ ಪ್ರೀತಿವರ್ಧನಮ್।**
**ಅಂತರ್ಧಾನಂ ಚ ಗಚ್ಛಂತಿ ಕ್ಷೇತ್ರಮಾಸಾದ್ಯ ತತ್ ಸದಾ ॥ ೧೧ ॥**

**ತತ್ರ ಜ್ವಾಲಾಸರಃ ಪುಣ್ಯಂ ದೃಶ್ಯತೇ ಚಾಪಿ ಪರ್ವಸು।**
**ಸಶಲ್ಯಾನಾಂ ಚ ಸತ್ತ್ವಾನಾಂ ವಿಶಲ್ಯಕರಣೀ ನದೀ ॥ ೧೨ ॥**

**ಪ್ರಾಗ್ದಕ್ಷಿಣಾಯತಾವರ್ತಾ ವಾಪೀ ಸಾ ಸುನಗೋತ್ತಮೇ।**
**ಕಲಿಂಗದೇಶಪಶ್ಚಾರ್ಧೇ ಶೃಂಗೇ ಮಾಲ್ಯವತೋ ವಿಭೋಃ ॥ ೧೩ ॥**

**ಸಿದ್ಧಿಕ್ಷೇತ್ರಮೃಷಿಶ್ರೇಷ್ಠಾ ಯದುಕ್ತಂ ಪರಮಂ ಭುವಿ।**
**ಸಮ್ಮತಂ ದೇವದೈತ್ಯಾನಾಂ ಶ್ಲೋಕಂ ಚಾಪ್ಯುಶನಾ ಜಗೌ ॥ ೧೪ ॥**

---

೧೦. ಅಮರಕಂಟಕಪರ್ವತದಲ್ಲಿ ಆ ದರ್ಭಗಳ ಮೇಲೆ ಜ್ಞಾನಿಯಾದ ಯಾವ ಮಾನವನು ಒಂದು ಸಲವಾದರೂ ಪಿತೃಗಳಿಗೆ ಪಿಂಡದಾನಮಾಡುವನೋ ಅವನು ಹೊಂದುವ ಫಲಗಳನ್ನು ವರ್ಣಿಸುತ್ತೇನೆ.

೧೧. ಆ ಶ್ರಾದ್ಧಕರ್ಮವು ಪಿತೃಗಳಿಗೆ ಅಕ್ಷಯವಾದ ಪ್ರೀತಿಯನ್ನುಂಟುಮಾಡುವುದು. ಪಿತೃಗಳು ಯಾವಾಗಲೂ ಆ ಕ್ಷೇತ್ರದಲ್ಲಿ ಸನ್ನಿಹಿತರಾಗಿ ಅದೃಶ್ಯತ್ವವನ್ನು ಹೊಂದಿರುವರು.

೧೨. ಅಲ್ಲಿ ಪರ್ವಕಾಲಗಳಲ್ಲಿ ಪವಿತ್ರವಾದ ಜ್ವಾಲಾಸರೋವರವೆಂಬ ತಟಾಕವು ಕಾಣುವುದು, ಮತ್ತು ಅಲ್ಲಿ ಶಲ್ಯಪ್ರಾಯವಾದ ವ್ಯಥೆಯನ್ನು ಅನುಭವಿಸುವ ಪ್ರಾಣಿಗಳಿಗೆ ಆ ಶಲ್ಯವ್ಯಥೆಯನ್ನು ದೂರಮಾಡುವ ನದಿಯು ಇರುವುದು.

೧೩. ವ್ಯಾಪಕವಾದ ಮಾಲ್ಯವತ್ಪರ್ವತದ ಕಲಿಂಗದೇಶದ ಪಶ್ಚಿಮಾರ್ಧದಲ್ಲಿ ಶಿಖರದಲ್ಲಿರುವ ಆ ಶ್ರೇಷ್ಠಪರ್ವತದಲ್ಲಿ ಪೂರ್ವದಕ್ಷಿಣದಿಕ್ಕುಗಳನ್ನು ಅನುಸರಿಸಿ ದೀರ್ಘವಾದ ಸುಳಿಗಳುಳ್ಳ ಒಂದು ಭಾವಿಯು ಇರುವುದು.

೧೪. ಋಷಿಶ್ರೇಷ್ಠರು ಆ ಸ್ಥಳವನ್ನು ದೇವತೆಗಳಿಗೂ ದೈತ್ಯರಿಗೂ ಸಮ್ಮತವಾದ, ಭೂಮಿಯಲ್ಲಿ ಅತ್ಯುತ್ತಮವಾದ ಸಿದ್ಧಿಕ್ಷೇತ್ರವನ್ನಾಗಿ ಹೇಳಿರುವರು. ಅದರ ಮಹಿಮೆಯ ವಿಷಯದಲ್ಲಿ ಶುಕ್ರನು ಒಂದು ಶ್ಲೋಕವನ್ನು ಪಠಿಸಿರುವನು.

ಧನ್ಯಾಸ್ತೇ ಪುರುಷಾ ಲೋಕೇ ಯೇ ಪ್ರಾಪ್ಯಾಮರಕಂಟಕಮ್ ।
ಪಿತೄನ್ ಸಂತರ್ಪಯಿಷ್ಯಂತಿ ಶ್ರಾದ್ಧೇ ಪಿತೃಪರಾಯಣಾಃ ॥ ೧೫ ॥

ಅಲ್ಪೇನ ತಪಸಾ ಸಿದ್ಧಿಂ ಗಮಿಷ್ಯಂತಿ ನ ಸಂಶಯಃ ।
ಸಕೃದೇವಾರ್ಚಿತಾಸ್ತತ್ರ ಸ್ವರ್ಗಮಾಮರಕಂಟಕೇ ॥ ೧೬ ॥

ಮಹೇಂದ್ರಃ ಪರ್ವತಃ ಪುಣ್ಯೋ ರಮ್ಯಃ ಶಕ್ರನಿಷೇವಿತಃ ।
ತತ್ರಾರುಹ್ಯ ಭವೇತ್ಪೂತಃ ಶ್ರಾದ್ಧಂ ಚೈವ ಮಹಾಫಲಮ್ ॥ ೧೭ ॥

ಚೈಲಾಟಶಿಖರೇ ಯುಕ್ತ್ವಾ ದಿವ್ಯಂ ಚಕ್ಷುಃ ಪ್ರವರ್ತತೇ ।
ಅಧೃಷ್ಯಶ್ಚೈವ ಭೂತಾನಾಂ ದೇವವಚ್ಚರತೇ ಮಹೀಮ್ ॥ ೧೮ ॥

ಸಪ್ತಗೋದಾವರೇ ಚೈವ ಗೋಕರ್ಣೇ ಚ ತಪೋವನೇ ।
ಅಶ್ವಮೇಧಫಲಂ ಸ್ನಾತ್ವಾ ತತ್ರ ದತ್ವಾ ಭವೇತ್ತತಃ ॥ ೧೯ ॥

---

೧೫. ಪಿತೃ ಕರ್ಮದಲ್ಲಿ ಭಕ್ತಿಯುಳ್ಳವರಾಗಿ ಯಾವ ಪುರುಷರು ಅಮರಕಂಟಕ ವೆಂಬ ಪವಿತ್ರದೇಶವನ್ನು ಹೊಂದಿ ಶ್ರಾದ್ಧಕರ್ಮವನ್ನು ಮಾಡಿ ಪಿತೃಗಳನ್ನು ತೃಪ್ತಿ ಪಡಿಸುವರೋ ಆ ಪುರುಷರು ಲೋಕದಲ್ಲಿ ಧನ್ಯರಾದವರು.

೧೬. ಅಮರಕಂಟಕಕ್ಷೇತ್ರದಲ್ಲಿ ಒಂದು ಸಲ ಮಾತ್ರ ಅರ್ಚಿಸಲ್ಪಟ್ಟ ಪಿತೃಗಳು ಅಲ್ಪ ಮಾತ್ರ ತಪಸ್ಸಿನಿಂದಲೇ ಸಿದ್ಧಿಯನ್ನೂ ಸ್ವರ್ಗವನ್ನೂ ಹೊಂದುವರು. ಈ ವಿಷ ಯದಲ್ಲಿ ಸಂಶಯವಿಲ್ಲ.

೧೭. ಇಂದ್ರನಿಂದ ಸೇವಿಸಲ್ಪಟ್ಟ ಮತ್ತು ರಮಣೀಯವಾದ ಮಹೇಂದ್ರವೆಂಬ ಪುಣ್ಯಪರ್ವತವಿರುವುದು. ಅದನ್ನು ಆರೋಹಣಮಾಡಿದ ಮನುಜನು ಪವಿತ್ರನಾ ಗುವನು, ಅಲ್ಲಿ ಮಾಡಿದ ಶ್ರಾದ್ಧವು ಮಹಾ ಫಲವನ್ನು ಕೊಡುವುದು.

೧೮. ಚೈಲಾಟವೆಂಬ ಪರ್ವತಶಿಖರವನ್ನು ಸೇವಿಸಿದರೆ ದಿವ್ಯ ದೃಷ್ಟಿಯು ಉಂಟಾಗುವುದು. ಮತ್ತು ಅದನ್ನು ಸೇವಿಸಿದವನು ಸಮಸ್ತ ಪ್ರಾಣಿಗಳಿಂದಲೂ ಅಜೇಯನಾಗುವನು.

೧೯. ಸಪ್ತ ಗೋದಾವರ, ಮತ್ತು ಗೋಕರ್ಣವೆಂಬ ಮಹಾ ಪವಿತ್ರವಾದ ತಪೋವನದಲ್ಲಿ ತೀರ್ಥಸ್ನಾನ-ಸತ್ಪಾತ್ರದಾನಮಾಡುವುದರಿಂದ ಅಶ್ವಮೇಧ ಯಜ್ಞದ ಫಲವನ್ನು ಹೊಂದುತ್ತಾನೆ.

ಧೂತಪಾಪಸ್ಥಲಂ ಪ್ರಾಪ್ಯ ಪೂತಃ ಸ್ನಾತ್ವಾ ಭವೇನ್ನರಃ
ರುದ್ರಸ್ತತ್ರ ತಪಸ್ತೇಪೇ ದೇವದೇವೋ ಮಹೇಶ್ವರಃ ॥ ೨೦ ॥

ಗೋಕರ್ಣೇ ನಿಹಿತಂ ದೇವೈರ್ನಾಸ್ತಿಕಾನಾಂ ನಿದರ್ಶನಮ್ ।
ಅಬ್ರಾಹ್ಮಣಸ್ಯ ಸಾವಿತ್ರೀಂ ಪಠತಸ್ತು ಪ್ರಣಶ್ಯತಿ ॥ ೨೧ ॥

ದೇವರ್ಷಿಭವನೇ ಶೃಂಗೇ ಸಿದ್ಧಚಾರಣಸೇವಿತೇ ।
ಆರುಹ್ಯ ತಂ ನಿಯಮವಾಂಸ್ತತೋ ಯಾತಿ ತ್ರಿವಿಷ್ಟಪಮ್ ॥ ೨೨ ॥

ದಿವ್ಯೈಶ್ಚಂದನವೃಕ್ಷೈಶ್ಚ ಪಾದಪೈರುಪಶೋಭಿತಮ್ ।
ಆಪಶ್ಚಂದನಸಂಯುಕ್ತಾಃ ಸ್ಪಂದಂತಿ ಸತತಂ ತತಃ ॥ ೨೩ ॥

ನದೀ ಪ್ರವರ್ತತೇ ತಾಭ್ಯಸ್ತಾಮ್ರಪರ್ಣೀತಿ ನಾಮತಃ ।
ಯಾ ಚಂದನಮಹಾಖಂಡಾದ್ದಕ್ಷಿಣಂ ಯಾತಿ ಸಾಗರಮ್ ॥ ೨೪ ॥

---

೨೦. ಧೂತಪಾಪವೆಂಬ ಸ್ಥಳವನ್ನು ಹೊಂದಿ ಸ್ನಾನಮಾಡಿದ ಮನುಷ್ಯನು ಬಹಳ ಪವಿತ್ರನಾಗುವನು, ದೇವೋತ್ತಮನೂ ಮಹೇಶ್ವರನೂ ಆದ ರುದ್ರನು ಆ ಪ್ರದೇಶದಲ್ಲಿ ತಪಸ್ಸನ್ನು ಆಚರಿಸಿದನು.

೨೧. ಗೋಕರ್ಣವೆಂಬ ಮಹಾಕ್ಷೇತ್ರದಲ್ಲಿ ದೇವತೆಗಳಿಂದ ನಾಸ್ತಿಕರಿಗೆ ಒಂದು ನಿದರ್ಶನವು ಇರಿಸಲ್ಪಟ್ಟಿದೆ. ಅದಾವುದೆಂದರೆ ಅಬ್ರಾಹ್ಮಣನಾದವನು ಅಲ್ಲಿ ಗಾಯತ್ರಿಯನ್ನು ಜಪಿಸಿದರೆ ನಾಶವನ್ನು ಹೊಂದುವನು.

೨೨. ಸಿದ್ಧ, ಚಾರಣರು ಸೇವಿಸಿಕೊಂಡಿರುವ, ದೇವರ್ಷಿಗಳಿಗೆ ವಾಸಸ್ಥಾನವಾದ ಶಿಖರವನ್ನು ಹತ್ತಿ ಅಲ್ಲಿ ನಿಯಮಗಳನ್ನು ಅನುಷ್ಠಾನಮಾಡಿದವನು ಸ್ವರ್ಗಲೋಕವನ್ನು ಹೊಂದುತ್ತಾನೆ.

೨೩. ಆ ಶಿಖರವು ದಿವ್ಯವಾದ ಚಂದನವೃಕ್ಷಗಳಿಂದ ಅಲಂಕರಿಸಲ್ಪಟ್ಟಿದೆ. ಅಲ್ಲಿ ಸುತ್ತಲೂ ಚಂದನದಿಂದ ಮಿಶ್ರಿತವಾದ ಜಲಗಳು ಯಾವಾಗಲೂ ಹರಿಯುತ್ತವೆ.

೨೪. ಚಂದನವೃಕ್ಷಗಳ ಚಿಹ್ನದಿಂದ ಚಂದನ ಖಂಡವೆಂದು ಪ್ರಸಿದ್ಧವಾದ ದೇಶದಿಂದ ದಕ್ಷಿಣಸಾಗರಕ್ಕೆ ಹೋಗಿ ಸೇರುವ ತಾಮ್ರ ಪರ್ಣಿ ಎಂಬ ನದಿಯು ಆ ಜಲಗಳಿಂದ ಹುಟ್ಟಿ ಹರಿಯುತ್ತದೆ.

ನದ್ಯಾಸ್ತಸ್ಯಾಶ್ಚ ತಾಮ್ರಾಯಾಸ್ತ್ವಾಹ್ಯಮಾನಾ ಮಹೋದಧೌ।
ಶಂಖಾ ಭವಂತಿ ಶುಕ್ತ್ಯಶ್ಚ ಜಾಯಂತೇ ಯಾಸು ಮೌಕ್ತಿಕಮ್॥ ೨೫ ॥

ಉದಕಾನಯನಂ ಕೃತ್ವಾ ಶಂಖಮೌಕ್ತಿಕಸಂಯುತಮ್।
ಆಧಿಭಿರ್ವ್ಯಾಧಿಭಿಶ್ಚೈವ ಮುಕ್ತಾ ಯಾಂತ್ಯಮರಾವತೀಮ್ ॥ ೨೬ ॥

ಚಂದನೇಭ್ಯಃ ಪ್ರಸೂತಾನಾಂ ಶಂಖಾನಾಂ ಮೌಕ್ತಿಕಸ್ಯ ವಾ।
ಪಾಪಕರ್ತ್ನ್‌ನಪಿ ಪಿತ್ರ್ಯಂಸ್ತಾರಯಂತಿ ಯಥಾಶ್ರುತಿ ॥ ೨೭ ॥

ಚಂದ್ರತೀರ್ಥೇ ಕುಮಾರ್ಯಾಂ ಚ ಕಾವೇರೀಪ್ರಭವೇ ಕ್ಷಯೇ।
ಶ್ರೀಪರ್ವತಸ್ಯ ತೀರ್ಥೇಷು ವೈಕೃತೇ ೭ ತಥಾ ಗಿರೌ ॥ ೨೮ ॥

ಏಕಸ್ಥಾ ಯತ್ರ ದೃಶ್ಯಂತೇ ವೃಕ್ಷಾ ಹ್ಯೌಶೀರಪರ್ವತೇ।
ಪಲಾಶಾಃ ಖದಿರಾ ಬಿಲ್ವಾಃ ಪ್ಲಕ್ಷಾಶ್ವತ್ಥವಿಕಂಕತಾಃ ॥ ೨೯ ॥

---

೨೫. ಆ ತಾಮ್ರಪರ್ಣೀ ನದಿಯಿಂದ ಶಂಖ, ಚಿಪ್ಪು, ಮುತ್ತು ಮುಂತಾದುವುಗಳು ಹುಟ್ಟುತ್ತವೆ. ಆ ಶಂಖ ಮೊದಲಾದುವು ನದೀ ಪ್ರವಾಹದಿಂದ ತೇಲಿ ಹೋಗಿ ಮಹೋದಧಿಯನ್ನು ಸೇರುತ್ತವೆ.

೨೬. ಶಂಖ ಮತ್ತು ಮುತ್ತುಗಳಿಂದ ಶೋಭಿಸಲ್ಪಟ್ಟ ಆ ತಾಮ್ರಪಾರ್ಣೀ ನದಿಯ ತೀರ್ಥವನ್ನು ತಂದು ಅದರ ಸೇವನೆಯಿಂದ ಮನೋವ್ಯಥೆ–ವೇದನೆಗಳಿಂದ ನಿರ್ಮುಕ್ತರಾಗಿ ಅಮರಾವತೀ ನಗರವನ್ನು ಹೊಂದುತ್ತಾರೆ.

೨೭. ಚಂದನ ಖಂಡದಿಂದ ಹುಟ್ಟಿದ ಶಂಖ, ಮುತ್ತು ಮುಂತಾದುವುಗಳ ಸಂಪರ್ಕವು ಪಾಪಗಳನ್ನು ಆಚರಿಸಿರುವ ಪಿತೃಗಳನ್ನು ಕೂಡ ತಾರಣ ಮಾಡುವುದು.

೨೮. ಚಂದ್ರತೀರ್ಥ, ಕುಮಾರೀ, ಕಾವೇರೀ ನದಿಯ ಉದ್ಗಮಸ್ಥಳ, ಶ್ರೀಪರ್ವತದಲ್ಲಿರುವ ಆಯಾಯ ತೀರ್ಥ, ವೈಕೃತಗಿರಿ ಎಂಬುವು ಅತ್ಯುತ್ತಮವಾದ ಪವಿತ್ರ ಕ್ಷೇತ್ರಗಳು.

೨೯. ಔಶೀರವೆಂಬ ಪರ್ವತದಲ್ಲಿ ಪಲಾಶ, ಖದಿರ, ಬಿಲ್ವ, ಪ್ಲಕ್ಷ, ಅಶ್ವತ್ಥ, ವಿಕಂಕತ ಎಂಬ ವೃಕ್ಷಗಳು ಒಂದೇ ಸ್ಥಳದಲ್ಲಿ ಕೂಡಿರುವಂತೆ ಕಾಣಿಸುತ್ತವೆ.

ಏವಂ ದ್ವಿಮಂಡಲಾವಿದ್ಧಂ ವಿಜ್ಞೇಯಂ ದ್ವಿಜಸತ್ತಮಾಃ ।
ಅಸ್ಮಿಂಸ್ತ್ಯಕ್ತ್ವಾ ಜನೋಽಂಗಾನಿ ಕ್ಷಿಪ್ರಂ ಯಾತ್ಯಮರಾವತೀಮ್ ॥೩೦॥

ಶ್ರೀಪರ್ವತಸ್ಯ ತೀರ್ಥೇ ತು ವೈಕೃತೇ ಚ ತಥಾ ಗಿರೌ ।
ಕರ್ಮಾಣಿ ತು ಪ್ರಯುಕ್ತಾನಿ ಸಿದ್ಧ್ಯಂತಿ ಪ್ರಭವಾಪ್ಯಯೇ || ೩೧ ||

ದುಷ್ಪ್ರಯುಕ್ತಾ ಹಿ ವಿಧಿಷು ಸುಪ್ರಯೋಗಾ ಭವಂತ್ಯುತ ।
ಪಿತೄಣಾಂ ದುಹಿತಾ ಪುಣ್ಯಾ ನರ್ಮದಾ ಸರಿತಾಂ ವರಾ || ೩೨ ||

ಯತ್ರ ಶ್ರಾದ್ಧಾನಿ ದತ್ತಾನಿ ಹ್ಯಕ್ಷಯಾಣಿ ಭವಂತ್ಯುತ ।
ಮಾಠರಸ್ಯ ವನೇ ಪುಣ್ಯೇ ಸಿದ್ಧಚಾರಣಸೇವಿತೇ || ೩೩ ||

ಅಂತರ್ಧಾನೇನ ಗಚ್ಛಂತಿ ಯುಕ್ತ್ವಾ ತಸ್ಮಿನ್ ಮಹಾಗಿರೌ ।
ವಿಂಧ್ಯೇ ಚೈವ ಗಿರೌ ಪುಣ್ಯೇ ಧರ್ಮಾಧರ್ಮನಿದರ್ಶಿನೀಮ್ || ೩೪ ||

---

೩೦. ದ್ವಿಜೋತ್ತಮರೆ! ಈ ವೃಕ್ಷಮಂಡಲಗಳಿಂದ ವ್ಯಾಪ್ತವಾದ ಆ ಸ್ಥಳವು ಶ್ರೇಷ್ಠವಾದುದೆಂದು ಅರಿಯಬೇಕು, ಅಲ್ಲಿ ದೇಹವನ್ನು ತ್ಯಜಿಸಿದವರು ಶೀಘ್ರವಾಗಿ ಅಮರಾವತಿಯನ್ನು ಹೊಂದುವರು.

೩೧. ಶ್ರೀ ಪರ್ವತದ ತೀರ್ಥ ಸನ್ನಿಧಿಯಲ್ಲಿಯೂ ವೈಕೃತವೆಂಬ ಗಿರಿಯಲ್ಲಿಯೂ ಅನುಷ್ಠಾನಮಾಡಿದ ಸತ್ಕರ್ಮಗಳು ಸೃಷ್ಟಿ ಪ್ರಲಯಕಾಲಗಳಲ್ಲಿಯೂ ಸಿದ್ಧಿಸುತ್ತಿವೆ.

೩೨. ಆ ಸ್ಥಳದ ಮಹಿಮೆಯಿಂದ ಪ್ರಮಾದದಿಂದ ಕೆಟ್ಟುಹೋದ ಕರ್ಮಗಳು ಕೂಡ ಯಥಾವಿಧಿಪ್ರಯೋಗರೂಪವನ್ನು ಹೊಂದುವುವು. ಅಲ್ಲಿ ಪಿತೃಗಳ ಮಾನಸ ಕನ್ಯೆಯಾದ, ಮತ್ತು ನದಿಗಳಲ್ಲೆಲ್ಲ ಉತ್ತಮವಾದ ನರ್ಮದಾ ಎಂಬ ಪುಣ್ಯ ನದಿಯು ಹರಿಯುವುದು.

೩೩. ಅಲ್ಲಿ ಮಾಡಿರುವ ಶ್ರಾದ್ಧಕರ್ಮಗಳು ಅಕ್ಷಯವಾದ ಫಲಗಳನ್ನು ಕೊಡುವುವು. ಸಿದ್ಧ-ಚಾರಣರಿಂದ ಸೇವಿಸಲ್ಪಟ್ಟ ಮಾಠರ ಪರ್ವತದ ವನವು ಮಹಾ ಪವಿತ್ರವಾದುದೆಂದು ಭಾವಿಸಬೇಕು.

೩೪. ಪವಿತ್ರವಾದ ಮಹಾಗಿರಿಯನ್ನು ಸೇವಿಸಿದವರು ಅಂತರ್ಧಾನ ಶಕ್ತಿಯನ್ನು ಹೊಂದುವರು. ವಿಂಧ್ಯವೆಂಬ ಗಿರಿಯಲ್ಲಿ ಒಂದು ಜಲಧಾರೆಯು ಧರ್ಮ-ಅಧರ್ಮಗಳಿಗೆ ನಿದರ್ಶನವಾಗಿರುವುದು.

ಧಾರಾಂ ಪಾಪಾ ನ ಪಶ್ಯಂತಿ ಧಾರಾಂ ಪಶ್ಯಂತಿ ಸಾಧವಃ ।
ತತ್ರ ತದ್ದೃಶ್ಯತೇ ಪಾಪಂ ಕೇಷಾಂ ಚಿತ್ ಪಾಪಕರ್ಮಣಾಮ್ ॥ ೩೫ ॥

ಕೈಲಾಸೇ ವಾ ಮತಂಗಸ್ಯ ವಾಪೀ ಪಾಪನಿಷೂದನೀ ।
ಸ್ನಾತ್ವಾ ತಸ್ಯಾಂ ದಿವಂ ಯಾಂತಿ ಕಾಮಚಾರಾ ವಿಹಂಗಮಾಃ ॥ ೩೬ ॥

ಶೌರ್ಪಾರಕೇ ತಥಾ ತೀರ್ಥೇ ಪರ್ವತೇ ಪಾಲಮಂಜರೇ ।
ಪಾಂಡುಕೂಪೇ ಸಮುದ್ರಾಂತೇ ಪಿಂಡಾರಕತಟೇ ತಥಾ ॥ ೩೭ ॥

ವಿಮಲೇ ಚ ವಿಪಾಪೇ ಚ ಸಂಕಲ್ಪಂ ಪ್ರಾಪ್ಯ ಚಾಕ್ಷಯಮ್ ।
ಶ್ರೀವೃಕ್ಷೇ ಚಿತ್ರಕೂಟೇ ಚ ಜಂಬೂಮಾರ್ಗೇ ಚ ನಿತ್ಯಶಃ ॥ ೩೮ ॥

ಅಸಿತಸ್ಯ ತಥಾ ಪುಣ್ಯೇ ಯೋಗಾಚಾರ್ಯಸ್ಯ ಧೀಮತಃ ।
ತತ್ರಾಪಿ ಶ್ರಾದ್ಧಮಾನಂತ್ಯಮಸಿತಾಯಾಂ ಚ ನಿತ್ಯಶಃ ॥ ೩೯ ॥

---

೩೫. ಆ ಜಲಧಾರೆಯನ್ನು ಪಾಪಿಗಳು ನೋಡಲಾರರು. ಸಾಧು ಜನರು ಮಾತ್ರ ಆ ಜಲಧಾರೆಯನ್ನು ಸಾಕ್ಷಾತ್ಕರಿಸುವರು, ಅಲ್ಲಿ ಪಾಪಕರ್ಮವನ್ನು ಆಚರಿಸಿದವರ ಕೆಲವು ಪಾಪಕರ್ಮಗಳು ಪ್ರತ್ಯಕ್ಷವಾಗುವುವು.

೩೬. ಕೈಲಾಸಪರ್ವತದಲ್ಲಿ ಮತಂಗಮುನಿಯ ಸಂಬಂಧವಾದ ಪಾಪಗಳನ್ನು ಧ್ವಂಸಮಾಡುವ ಒಂದು ಬಾವಿಯು ಇರುವುದು. ಆ ಬಾವಿಯಲ್ಲಿ ಸ್ನಾನಮಾಡಿದವರು ಸ್ನಾನಪ್ರಭಾವದಿಂದ ಸ್ವೇಚ್ಛಾಸಂಚಾರವುಳ್ಳ ಗಗನಚರರಾಗುವರು.

೩೭. ಹಾಗೆ ಶೌರ್ಪಾರಕವೆಂಬ ತೀರ್ಥ, ಪಾಲಮಂಜರವೆಂಬ ಪರ್ವತ, ಪಾಂಡು ಕೂಪವೆಂಬ ಕೊಳ ಮತ್ತು ಸಮುದ್ರಕ್ಕೆ ಸಮೀಪದಲ್ಲಿರುವ ಪಿಂಡಾರಕವೆಂಬ ತಟ–ಈ ಪ್ರದೇಶಗಳು ಶ್ರಾದ್ಧ ಕರ್ಮಕ್ಕೆ ಉತ್ತಮವಾದುವುಗಳು.

೩೮. ಕಲ್ಮಷ ಮತ್ತು ಪಾಪಗಳಿಂದ ದೂರವಾದ ಈ ಪವಿತ್ರ ಸ್ಥಳಗಳಲ್ಲಿ ಮತ್ತು ಶ್ರೀ ವೃಕ್ಷ, ಚಿತ್ರಕೂಟ, ಜಂಬೂಮಾರ್ಗಗಳಲ್ಲಿ ಮಾಡುವ ಶ್ರಾದ್ಧಕರ್ಮ ಸಂಕಲ್ಪಗಳು ಅಕ್ಷಯಫಲವನ್ನು ಕೊಡುವುವು.

೩೯. ಜ್ಞಾನಿಯೂ ಯೋಗಾಚಾರ್ಯನೂ ಆದ ಅಸಿತ ಮುನಿಯು ವಾಸ ಮಾಡುವ ಪವಿತ್ರವಾದ ಗಿರಿಯಲ್ಲಿರುವ ಅಸಿತಾ ಎಂಬ ನದೀ ತೀರದಲ್ಲಿ ಮಾಡಿದ ಶ್ರಾದ್ಧವು ಯಾವಾಗಲೂ ಅನಂತ ಫಲವನ್ನು ನೀಡುವುದು.

ಪುಷ್ಕರೇಷ್ವಕ್ಷಯಂ ಶ್ರಾದ್ಧಂ ತಪಶ್ಚೈವ ಮಹಾಫಲಮ್ ।
ಮಹೋದಧೌ ಪ್ರಭಾಸೇ ಚ ತದ್ವದೇವ ವಿನಿರ್ದಿಶೇತ್ ॥ ೪೦ ॥

ದೇವಿಕಾಯಾಂ ವೃಷೋ ನಾಮ ಕೂಪಃ ಸಿದ್ಧನಿಷೇವಿತಃ ।
ಸಮುತ್ಪತಂತಿ ತಸ್ಯಾಪೋ ಗವಾಂ ಶಬ್ದೇನ ನಿತ್ಯಶಃ ॥ ೪೧ ॥

ಯೋಗೇಶ್ವರೈಃ ಸದಾ ಜುಷ್ಟಃ ಸರ್ವಪಾಪಬಹಿಷ್ಕೃತಃ ।
ದದ್ಯಾಚ್ಛ್ರಾದ್ಧಂ ತು ಯಸ್ತಸ್ಮಿನ್ ತಸ್ಯ ವಕ್ಷ್ಯಾಮಿ ಯತ್ಫಲಮ್॥೪೨॥

ಅಕ್ಷಯಂ ಸರ್ವಕಾಮೀಯಂ ಶ್ರಾದ್ಧಂ ಪ್ರೀಣಾತಿ ವೈ ಪಿತೄನ್ ।
ಜಾತವೇದಃಶಿಲಾ ತತ್ರ ಸಾಕ್ಷಾದಗ್ನೇಃ ಸನಾತನಾತ್ ॥ ೪೩ ॥

ಶ್ರಾದ್ಧಾನಿ ಚಾಗ್ನಿಕಾರ್ಯಂ ಚ ತತ್ರ ಕುರ್ಯಾತ್ ಸದಾಕ್ಷಯಮ್ ।
ಯಸ್ತ್ವಗ್ನಿಂ ಪ್ರವಿಶೇತ್ತತ್ರ ನಾಕಪೃಷ್ಠೇ ಸ ಮೋದತೇ ॥ ೪೪ ॥

---

೪೦. ಪುಷ್ಕರ ಕ್ಷೇತ್ರದಲ್ಲಿ ಮಾಡಿದ ಶ್ರಾದ್ಧವು ಅಕ್ಷಯವಾದ ತೃಪ್ತಿಯನ್ನು ಕೊಡುವುದು, ಮತ್ತು ಅಲ್ಲಿ ಆಚರಿಸಿದ ತಪಸ್ಸು ಮಹಾ ಫಲವನ್ನು ಉಂಟುಮಾಡುವುದು. ಹಾಗೆಯೇ ಮಹೋದಧಿ ಮತ್ತು ಪ್ರಭಾಸಕ್ಷೇತ್ರಗಳಲ್ಲಿಯೂ ಶ್ರಾದ್ಧಕರ್ಮ-ತಪಶ್ಚರ್ಯೆಗಳಿಗೆ ಮಹಾ ಫಲವು ಪ್ರಾಪ್ತವಾಗುವುದು.

೪೧. ದೇವಿಕಾ ಎಂಬ ನದಿಯ ತೀರದಲ್ಲಿ ಸಿದ್ಧರಿಂದ ಸೇವಿಸಲ್ಪಟ್ಟ ವೃಷ ಎಂಬ ಕೂಪವಿರುವುದು. ಅಲ್ಲಿರುವ ತೀರ್ಥಗಳು ಯಾವಾಗಲೂ ಗೋವಿನ ಶಬ್ದವು ಕೇಳಿಸಿದ ಕೂಡಲೆ ಮೇಲೆ ಹಾರುವುವು.

೪೨. ಆ ಕೂಪವು ಯೋಗೇಶ್ವರರಿಂದ ಸೇವಿಸಲ್ಪಟ್ಟಿರುವುದೂ ಸಮಸ್ತ ಪಾಪಗಳನ್ನು ಬಹಿಷ್ಕರಿಸಿರುವುದೂ ಆಗಿದೆ. ಅಲ್ಲಿ ಶ್ರಾದ್ಧಾನ್ನ ದಾನವನ್ನು ಮಾಡಿದ್ದರಿಂದ ಲಭಿಸುವ ಫಲವನ್ನು ಹೇಳುತ್ತೇನೆ.

೪೩. ಅಲ್ಲಿ ಅನುಷ್ಠಾನಮಾಡಿದ ಶ್ರಾದ್ಧವು ಅಕ್ಷಯವೂ ಸರ್ವಕಾಮಾವಾಪ್ತಿಗೆ ಸಾಧನವೂ ಆಗಿ ಪಿತೃಗಳನ್ನು ತೃಪ್ತಿಪಡಿಸುವುದು. ಅಲ್ಲಿ ಅನಾದಿಯಾದ ಅಗ್ನಿಯಿಂದ ಹುಟ್ಟಿದ ಜಾತವೇದಃ ಶಿಲೆಯೆಂಬ ಒಂದು ಕಲ್ಲು ಇದೆ.

೪೪. ಶ್ರಾದ್ಧಕರ್ಮಗಳನ್ನೂ ಅಗ್ನಿಕಾರ್ಯವನ್ನೂ ಆ ಶಿಲೆಯ ಬಳಿಯಲ್ಲಿ ಮಾಡಿದರೆ ಆ ಕರ್ಮಗಳು ಅಕ್ಷಯವಾಗುವುವು. ಆ ಸ್ಥಳದಲ್ಲಿ ಅಗ್ನಿ ಪ್ರವೇಶಮಾಡಿದ ಪುರುಷನು ಸ್ವರ್ಗಲೋಕದಲ್ಲಿ ಆನಂದಿಸುತ್ತಾನೆ.

**ಅಗ್ನಿಃ ಶಾಂತಃ ಪುನರ್ಜಾತಸ್ತತ್ರ ದತ್ತಂ ತತೋಽಕ್ಷಯಮ್ ।**
**ದಶಾಶ್ವಮೇಧಿಕೇ ತೀರ್ಥೇ ತೀರ್ಥೇ ಪಂಚಾಶ್ವಮೇಧಿಕೇ ॥ ೪೫ ॥**

**ಯಥೋದ್ದಿಷ್ಟಫಲಂ ತೇಷಾಂ ಕ್ರತೂನಾಂ ನಾತ್ರ ಸಂಶಯಃ ।**
**ಖ್ಯಾತಂ ಹಯಶಿರೋ ನಾಮ ತೀರ್ಥಂ ಸದ್ಯೋ ವರಪ್ರದಮ್ ॥ ೪೬ ॥**

**ಶ್ರಾದ್ಧಂ ತತ್ರ ಸದಾಕ್ಷಯ್ಯಂ ದಾತಾ ಸ್ವರ್ಗೇ ಚ ಮೋದತೇ ।**
**ಶ್ರಾದ್ಧಂ ಸುಂದನಿಸುಂದೇ ಚ ದೇಯಂ ಪಾಪನಿಷೂದನಮ್ ॥ ೪೭ ॥**

**ಶ್ರಾದ್ಧಂ ತತ್ರಾಕ್ಷಯಂ ಪ್ರೋಕ್ತಂ ಜಪಹೋಮತಪಾಂಸಿ ಚ ।**
**ಅಜತುಂಗೇ ಶುಭೇ ತೀರ್ಥೇ ತರ್ಪಯೇತ್ ಸತತಂ ಪಿತೄನ್ ॥ ೪೮ ॥**

**ದೃಶ್ಯತೇ ಪರ್ವಸು ಚ್ಛಾಯಾ ಯತ್ರ ನಿತ್ಯಂ ದಿವೌಕಸಾಮ್ ।**
**ಪೃಥಿವ್ಯಾಮಕ್ಷಯಂ ದತ್ತಂ ವಿರಜಾ ಯತ್ರ ಪಾದಪಃ ॥ ೪೯ ॥**

---

೪೫. ಅಲ್ಲಿ ಅಗ್ನಿಯು ಶಾಂತವಾಗಿ ಮತ್ತೆ ಜನಿಸಿರುವುದು. ಅಂತಹ ಪವಿತ್ರ ಸ್ಥಳದಲ್ಲಿ ಮಾಡಿದ ದಾನವು ಅನಂತವಾದುದು, ದಶಾಶ್ವಮೇಧ, ಪಂಚಾಶ್ವಮೇಧವೆಂಬ ತೀರ್ಥಗಳಲ್ಲಿ ಮಾಡಿದ ದಾನವು ನಾಮಾನುಗುಣವಾಗಿ ಅಶ್ವಮೇಧಯಾಗ ಫಲಗಳನ್ನು ಕೊಡುವುದು.

೪೬. ತೀರ್ಥ ನಾಮಗಳಲ್ಲಿರುವ ಕ್ರತುಗಳ ಸಂಖ್ಯೆಗೆ ಅನುಗುಣವಾಗಿ ಹತ್ತು ಅಥವಾ ಐದು ಅಶ್ವಮೇಧ ಯಾಗಗಳ ಫಲವು ಆ ಎರಡು ತೀರ್ಥಗಳಲ್ಲಿ ನಡೆದ ದಾನಗಳಿಂದ ಉಂಟಾಗುವುದು. ಹಯಶಿರ ಎಂಬ ಹೆಸರಿನಿಂದ ಪ್ರಖ್ಯಾತವಾದ ತೀರ್ಥವು ಕೂಡಲೆ ವರಗಳನ್ನು ಕೊಡುವುದು.

೪೭. ಆ ತೀರ್ಥದಲ್ಲಿ ಮಾಡಿದ ಶ್ರಾದ್ಧವು ಅಕ್ಷಯವಾಗುವುದು. ಮತ್ತು ಶ್ರಾದ್ಧಾನ್ನ ದಾನಮಾಡಿದವನು ಸ್ವರ್ಗದಲ್ಲಿ ಆನಂದಿಸುತ್ತಾನೆ. ಸುಂದನಿಸುಂದವೆಂಬ ಕ್ಷೇತ್ರದಲ್ಲಿ ಮಾಡಿದ ಶ್ರಾದ್ಧವು ಪಾಪಗಳನ್ನು ಕಳೆಯುವುದು.

೪೮. ಅಲ್ಲಿ ಅನುಷ್ಠಾನಮಾಡಿದ ಶ್ರಾದ್ಧವು ಅಕ್ಷಯವಾಗುವುದು. ಮತ್ತು ಜಪ, ಹೋಮ, ತಪಸ್ಸುಗಳು ಅನಂತ ಫಲಗಳನ್ನು ಕೊಡುವುವು. ಅಜತುಂಗವೆಂಬ ಶುಭ ತೀರ್ಥದಲ್ಲಿ ಯಾವಾಗಲೂ ಪಿತೃಗಳಿಗೆ ತರ್ಪಣವನ್ನು ಕೊಡಬೇಕು.

೪೯. ಅಲ್ಲಿ ಪರ್ವಕಾಲಗಳಲ್ಲಿ ದೇವತೆಗಳ ಪ್ರತಿಕೃತಿಯು ಯಾವಾಗಲೂ ಕಾಣುವುದು. ವಿರಜಾ ಎಂಬ ವೃಕ್ಷದಿಂದ ಶೋಭಿಸಲ್ಪಟ್ಟ ಪಾರ್ಥಿವ ಕ್ಷೇತ್ರದಲ್ಲಿ ಮಾಡಿದ ಶ್ರಾದ್ಧದಾನವು ಅಕ್ಷಯವಾಗುವುದು.

ಯೋಗೇಶ್ವರೈಃ ಸದಾ ಜುಷ್ಟಃ ಸರ್ವಪಾಪಬಹಿಷ್ಕೃತಃ ।
ದದ್ಯಾಚ್ಛ್ರಾದ್ಧಂ ತು ಯಸ್ತಸ್ಮಿನ್ ತಸ್ಯ ವಕ್ಷ್ಯಾಮಿ ಯತ್ಫಲಮ್ ॥೫೦॥

ಅರ್ಚಿತಾಸ್ತೇನ ವೈ ಸಾಕ್ಷಾದ್ಭವಂತಿ ಪಿತರಃ ಸದಾ ।
ಅಸ್ಮಿನ್ ಲೋಕೇ ವಶೀ ಚ ಸ್ಯಾತ್ ಪ್ರೇತ್ಯ ಸ್ವರ್ಗೇ ಮಹೀಯತೇ ॥೫೧॥

ಪ್ರಾಯಶೋ ಮದ್ರವಾ ಪುಣ್ಯಾ ಶಿವೋ ನಾಮ ಹ್ರದಸ್ತಥಾ ।
ತತ್ರ ವ್ಯಾಸಸರಃ ಪುಣ್ಯಂ ದಿವ್ಯೋ ಬ್ರಹ್ಮಹ್ರದಸ್ತಥಾ ॥ ೫೨ ॥

ಊರ್ಜಂತಃ ಪರ್ವತಃ ಪುಣ್ಯೋ ಯತ್ರ ಯೋಗೇಶ್ವರಾಲಯಃ ।
ಅತ್ರೈವ ಚಾಶ್ರಮಃ ಪುಣ್ಯೋ ವಸಿಷ್ಠಸ್ಯ ಮಹಾತ್ಮನಃ ॥ ೫೩ ॥

ಋಗ್ಯಜುಃಸಾಮಶಿರಸಃ ಕಪೋತಾಃ ಪುಷ್ಪಸಾಹ್ವಯಾಃ ।
ಆಖ್ಯಾನಪಂಚಮಾ ವೇದಾಃ ಸೃಷ್ಟಾ ಹ್ಯೇತೇ ಸ್ವಯಂಭುವಾ ॥ ೫೪ ॥

---

೫೦. ಆ ವೃಕ್ಷವು ಯೋಗೇಶ್ವರರಿಂದ ಸೇವಿಸಲ್ಪಟ್ಟಿರುವುದೂ ಸಮಸ್ತ ಪಾಪಗಳನ್ನು ಬಹಿಷ್ಕರಿಸುವುದೂ ಆಗಿದೆ. ಆ ಪುಣ್ಯದೇಶದಲ್ಲಿ ಆಚರಿಸಿದ ಶ್ರಾದ್ಧದ ಫಲವನ್ನು ಹೇಳುವೆನು.

೫೧. ಆ ಮಾನವನಿಂದ ಪಿತೃಗಳು ಯಾವಾಗಲೂ ಪ್ರತ್ಯಕ್ಷವಾಗಿ ಪೂಜಿಸಲ್ಪಟ್ಟಂತೆ ಆಗುವರು. ಮತ್ತು ಅವನು ಈ ಲೋಕದಲ್ಲಿ ಜಿತೇಂದ್ರಿಯನಾಗಿದ್ದು ಮರಣಾನಂತರದಲ್ಲಿ ಸ್ವರ್ಗದಲ್ಲಿ ಪೂಜ್ಯನಾಗುತ್ತಾನೆ.

೫೨. ಪ್ರಾಯಕವಾಗಿ ಮದ್ರವಾ ಎಂಬ ಪವಿತ್ರನದಿಯೂ ಅದನ್ನು ಸಂಬಂಧಿಸಿ ಶಿವ ಎಂಬ ಜಲಾಶಯವೂ ಇರುವುದು. ಅಲ್ಲಿ ಪವಿತ್ರವಾದ ವ್ಯಾಸಸರಸ್ಸೆಂಬ ಸರೋವರ ಮತ್ತು ಬ್ರಹ್ಮಹ್ರದವೆಂಬ ದಿವ್ಯವಾದ ಮಡುಗಳು ಇರುವುವು.

೫೩. ಯೋಗೇಶ್ವರರಿಗೆ ವಾಸಸ್ಥಳವಾದ ಊರ್ಜಂತ ಎಂಬ ಒಂದು ಪುಣ್ಯಪರ್ವತವಿರುವುದು. ಆ ಪರ್ವತದಲ್ಲಿ ಮಹಾತ್ಮನಾದ ವಸಿಷ್ಠಮುನಿಯು ವಾಸ ಮಾಡಿರುವ ಪವಿತ್ರವಾದ ಆಶ್ರಮವಿರುವುದು.

೫೪. ಅಲ್ಲಿ ಸ್ವಯಂಭುವಾದ ಬ್ರಹ್ಮನು ಆಖ್ಯಾನವೆಂಬ ವೇದದಿಂದ ಕೂಡಿದ ಪಂಚವೇದಗಳನ್ನು ಋಕ್, ಯಜುಸ್ಸು, ಸಾಮವೆಂಬ ಶಿರಸ್ಸುಗಳಿಂದ ಕೂಡಿದ ಪುಷ್ಪವೆಂಬ ನಾಮಾಂಕಿತಗಳಾದ ಕಪೋತರೂಪದಿಂದ ಸೃಷ್ಟಿಸಿದನು.

18

ಗತ್ವೈತಾನ್ ಮುಚ್ಯತೇ ಪಾಪಾದ್ದ್ವಿಜೋ ವಹ್ನಿಂ ಸಮಾಶ್ರಯನ್ ।
ಶ್ರಾದ್ಧಂ ಚಾನಂತ್ಯಮೇತೇಷು ಜಪಹೋಮತಪಾಂಸಿ ಚ ॥ ೫೫ ॥

ಪುಂಡರೀಕೇ ಮಹಾತೀರ್ಥೇ ಪುಂಡರೀಕಸಮಂ ಫಲಮ್ ।
ಬ್ರಹ್ಮತೀರ್ಥೇ ಮಹಾಪ್ರಾಜ್ಞ ಸರ್ವಯಜ್ಞಸಮಂ ಫಲಮ್ ॥ ೫೬ ॥

ಸಿಂಧುಸಾಗರಸಂಭೇದೇ ತಥಾ ಪಂಚನದೇಽಕ್ಷಯಮ್ ।
ವಿರಜಾಯಾಂ ತಥಾ ಪುಣ್ಯಂ ಮದ್ರವಾಯಾಂ ಚ ಪರ್ವತೇ ॥ ೫೭ ॥

ದೇಯಂ ಸಪ್ತನದೇ ಶ್ರಾದ್ಧಂ ಮಾನಸೇ ವಾ ವಿಶೇಷತಃ ।
ಮಹಾಕೂಟೇ ಹ್ಯನಂತೇ ಚ ಗಿರೌ ತ್ರಿಕಕುದೇ ತಥಾ ॥ ೫೮ ॥

ಸಂಧ್ಯಾಯಾಂ ಚ ಮಹಾನದ್ಯಾಂ ದೃಶ್ಯತೇ ಮಹದದ್ಭುತಮ್ ।
ಅಶ್ರದ್ಧಧಾನಂ ನಾಭ್ಯೇತಿ ಸಾ ಚಾಭ್ಯೇತಿ ಧೃತವ್ರತಮ್ ॥ ೫೯ ॥

---

೫೫. ಆ ಕಪೋತಕ್ಷೇತ್ರವನ್ನು ಹೊಂದಿ ಅಗ್ನಿ ಶುಶ್ರೂಷೆಯನ್ನು ಮಾಡಿದ ದ್ವಿಜನು ಪಾಪದಿಂದ ಬಿಡುಗಡೆ ಹೊಂದುವನು. ಇಲ್ಲಿ ಆಚರಿಸಿದ ಶ್ರಾದ್ಧ, ಜಪ, ಹೋಮ, ತಪಸ್ಸುಗಳು ಅನಂತಫಲ ಸಾಧನಗಳಾಗುವುವು.

೫೬. ಮಹಾ ಪ್ರಜ್ಞಾಶಾಲಿಯಾದ ಶಿಷ್ಯನೆ, ಪುಂಡರೀಕವೆಂಬ ಮಹಾ ತೀರ್ಥದಲ್ಲಿನ ಸತ್ಕರ್ಮದಿಂದ ಪುಂಡರೀಕ ಯಾಗವನ್ನು ಆಚರಿಸಿದ ಪುಣ್ಯವು ಲಭಿಸುವುದು. ಹಾಗೆ ಬ್ರಹ್ಮತೀರ್ಥವೆಂಬಲ್ಲಿ ಮಾಡಿದ ಸತ್ಕರ್ಮವು ಸರ್ವಯಜ್ಞಗಳ ಫಲಗಳನ್ನು ಕೊಡುವುದು.

೫೭. ನದೀ-ಸಮುದ್ರಗಳ ಸಂಗಮಸ್ಥಳದಲ್ಲಿಯೂ ಪಂಚನದ ಕ್ಷೇತ್ರದಲ್ಲಿಯೂ ಶ್ರಾದ್ಧವು ಅಕ್ಷಯವಾಗುವುದು. ವಿರಜಾ ಮತ್ತು ಮದ್ರವಾ ಎಂಬ ನದಿ ಮತ್ತು ಪರ್ವತಗಳಲ್ಲಿ ಶ್ರಾದ್ಧವು ಪುಣ್ಯಪ್ರದವಾಗುವುದು.

೫೮. ಸಪ್ತನದ ಕ್ಷೇತ್ರ, ಮಾನಸತೀರ್ಥ, ಮಹಾಕೂಟ ಪರ್ವತ, ಅನಂತಗಿರಿ ಮತ್ತು ತ್ರಿಕಕುದವೆಂಬ ಪರ್ವತಗಳಲ್ಲಿ ಮಾಡಿರುವ ಶ್ರಾದ್ಧಾನುಷ್ಠಾನವು ವಿಶೇಷವಾಗಿ ಫಲದಾಯಕವಾಗುವುದು.

೫೯. ಸಂಧ್ಯಾ ಎಂಬ ನಾಮಾಂಕಿತವಾದ ಮಹಾ ನದಿಯಲ್ಲಿ ಪ್ರತಿನಿತ್ಯವೂ ಒಂದು ಮಹತ್ತಾದ ಅದ್ಭುತವು ಕಾಣಿಸುವುದು. ಆ ನದಿಯು ಶ್ರದ್ಧಾರಹಿತನನ್ನು ಸಮೀಪಿಸುವುದಿಲ್ಲ. ಶ್ರದ್ಧಾ-ನಿಯಮವಂತನನ್ನು ಕುರಿತು ಸಮೀಪಿಸುತ್ತಿದೆ.

ಸಂಶ್ರಯಿತ್ವೈಕಮೇಕೇನ ಸಾಯಾಹ್ನಂ ಪ್ರತಿ ನಿತ್ಯಶಃ ।
ತಸ್ಮಿನ್ ದೇಯಂ ಸದಾ ಶ್ರಾದ್ಧಂ ಪಿತೄಣಾಮಕ್ಷಯಾರ್ಥಿನಾಮ್
॥ ೬೦ ॥

ಕೃತಾತ್ಮಾ ವಾಕೃತಾತ್ಮಾ ಚ ಯತ್ರ ವಿಜ್ಞಾಯತೇ ನರಃ ।
ಸ್ವರ್ಗಮಾರ್ಗಪ್ರದಂ ನಾಮ ತೀರ್ಥಂ ಸದ್ಯೋ ವರಪ್ರದಮ್ ॥ ೬೧ ॥

ಚೀರಾಣ್ಯುತ್ಸೃಜ್ಯ ಯಸ್ಮಿಂಸ್ತು ದಿವಂ ಸಪ್ತರ್ಷಯೋ ಗತಾಃ ।
ಅದ್ಯಾಪಿ ತಾನಿ ದೃಶ್ಯಂತೇ ಚೀರಾಣ್ಯಂಭೋಗತಾನಿ ತು ॥ ೬೨ ॥

ಸ್ನಾತ್ವಾ ಸ್ವರ್ಗಮವಾಪ್ನೋತಿ ತಸ್ಮಿಂಸ್ತೀರ್ಥೋತ್ತಮೇ ನರಃ ।
ಖ್ಯಾತಮಾಯತನಂ ತತ್ರ ನಂದಿನಃ ಸಿದ್ಧಸೇವಿತಮ್ ॥ ೬೩ ॥

ನಂದೀಶ್ವರಸ್ಯ ಸಾ ಮೂರ್ತಿರ್ನಿರಾಚಾರೈರ್ನ ದೃಶ್ಯತೇ ।
ದೃಶ್ಯಂತೇ ಕಾಂಚನಾ ಯೂಪಾಸ್ತ್ವರ್ಚಿಷೋ ಭಾಸ್ಕರೋದಯೇ
॥ ೬೪ ॥

---

೬೦. ಪ್ರತಿನಿತ್ಯವೂ ಸಾಯಾಹ್ನ ಕಾಲದಲ್ಲಿ ಪರಸ್ಪರವಾಗಿ ಸಂಪರ್ಕವಾಗುವುದು. ಆ ಪವಿತ್ರದೇಶದಲ್ಲಿ ಅಕ್ಷಯ ಪ್ರೀತಿಯನ್ನು ಅಪೇಕ್ಷಿಸುವ ನರನು ಯಾವಾಗಲೂ ಶ್ರಾದ್ಧದಾನವನ್ನು ಮಾಡಬೇಕು.

೬೧. ಆ ಸ್ಥಳವು ಸಂಸ್ಕೃತ ಅಥವಾ ಅಸಂಸ್ಕೃತನಾದ ಮನುಷ್ಯ ನನ್ನು ಪರೀಕ್ಷಿಸಲು ಸಾಧನವಾದುದು, ಸ್ವರ್ಗಮಾರ್ಗವನ್ನು ತೋರಿಸುವುದರಿಂದ ಸ್ವರ್ಗ ಮಾರ್ಗಪ್ರದವೆಂಬ ತೀರ್ಥವು ಸದ್ಯದಲ್ಲಿಯೇ ಇಷ್ಟಾರ್ಥಗಳನ್ನು ಕೊಡುವುದು.

೬೨. ಆ ಸ್ಥಳದಲ್ಲಿ ಸಪ್ತರ್ಷಿಗಳು ನಾರುಬಟ್ಟೆಗಳನ್ನು ತ್ಯಜಿಸಿ ಸ್ವರ್ಗಲೋಕ ವನ್ನು ಹೊಂದಿರುವರು. ಅವರು ತ್ಯಜಿಸಿದ ನಾರು ಬಟ್ಟೆಗಳು ಈಗಲೂ ನೀರಿನಲ್ಲಿ ಕಾಣಿಸುತ್ತಿವೆ.

೬೩. ಮಾನವನು ಆ ತೀರ್ಥೋತ್ತಮದಲ್ಲಿ ಸ್ನಾನ ಮಾಡಿದುದರಿಂದ ಸ್ವರ್ಗ ವನ್ನು ಹೊಂದುತ್ತಾನೆ. ಆ ಕ್ಷೇತ್ರದಲ್ಲಿ ಸಿದ್ಧರಿಂದ ಸೇವಿಸಲ್ಪಟ್ಟ ನಂದೀಶ್ವರನ ಆಲಯವು ಪ್ರಸಿದ್ಧವಾಗಿರುವುದು.

೬೪. ಅಲ್ಲಿರುವ ನಂದೀಶ್ವರನ ಮೂರ್ತಿಯು ಆಚಾರರಹಿತರಾದವರಿಗೆ ಕಾಣಿಸು ವುದಿಲ್ಲ, ಅಲ್ಲಿ ಸೂರ್ಯನ ಉದಯ ಕಾಲದಲ್ಲಿ ಕಿರಣಗಳು ಸುವರ್ಣಮಯವಾದ ಯೂಪ ಸ್ತಂಭಗಳಂತೆ ಕಾಣಿಸುತ್ತಿವೆ.

ಕೃತ್ವಾ ಪ್ರದಕ್ಷಿಣಂ ತಾಂಸ್ತು ಗಚ್ಛಂತ್ಯಾನಂದಿತಾ ದಿವಮ್ ।
ಸರ್ವತಶ್ಚ ಕುರುಕ್ಷೇತ್ರಂ ಸುತೀರ್ಥಂ ತು ವಿಶೇಷತಃ ॥ ೬೫ ॥

ಪುಣ್ಯಂ ಸನತ್ಕುಮಾರಸ್ಯ ಯೋಗೇಶಸ್ಯ ಮಹಾತ್ಮನಃ ।
ಕೀರ್ತ್ಯತೇ ಚ ತಿಲಾನ್ ದತ್ವಾ ಪಿತೃಭ್ಯೋ ವೈ ಸದಾಕ್ಷಯಮ್ ॥ ೬೬ ॥

ಉಕ್ತಮೇವಾಕ್ಷಯಂ ಶ್ರಾದ್ಧಂ ಧರ್ಮರಾಜನಿಷೇವಿತಮ್ ।
ಶ್ರಾದ್ಧಂ ದತ್ತಮಮಾವಾಸ್ಯಾಂ ವಿಧಿನಾ ಚ ಯಥಾಕ್ರಮಮ್ ॥ ೬೭ ॥

ಪುಂಸಾಂ ಸನ್ನಿಹಿತಾಯಾಂ ತು ಕುರುಕ್ಷೇತ್ರೇ ವಿಶೇಷತಃ ।
ಅರ್ಚಯಿತ್ವಾ ಪಿತೄಂಸ್ತತ್ರ ಸ ಪುತ್ರಸ್ತ್ವನೃಣೋ ಭವೇತ್ ॥ ೬೮ ॥

ಸರಸ್ವತ್ಯಾಂ ವಿನಶನೇ ಪ್ಲಕ್ಷಪ್ರಸ್ರವಣೇ ತಥಾ ।
ವ್ಯಾಸತೀರ್ಥೇ ದೃಷದ್ವತ್ಯಾಂ ತ್ರಿಪ್ಲಕ್ಷೇ ಚ ವಿಶೇಷತಃ ॥ ೬೯ ॥

---

೬೫. ಆ ಯೂಪ ಸ್ತಂಭಗಳನ್ನು ಪ್ರದಕ್ಷಿಣ ಮಾಡಿದ ಜನರು ಆನಂದ ಪಟ್ಟವರಾಗಿ ಸ್ವರ್ಗವನ್ನು ಹೊಂದುತ್ತಾರೆ, ಎಲ್ಲ ಕ್ಷೇತ್ರಗಳಿಗಿಂತಲೂ ಕುರುಕ್ಷೇತ್ರವೆಂಬುದು ಉತ್ತಮವಾದ ತೀರ್ಥವಾಗಿರುವುದು.

೬೬. ಆ ಕ್ಷೇತ್ರವು ಯೋಗೇಶ್ವರನೂ ಮಹಾತ್ಮನೂ ಆದ ಸನತ್ಕುಮಾರ ಮುನಿಯು ವಾಸ ಮಾಡಿದ ಉತ್ತಮ ಕ್ಷೇತ್ರವಾಗಿರುವುದು, ಆ ಕ್ಷೇತ್ರದಲ್ಲಿ ಪಿತೃಗಳನ್ನು ಉದ್ದೇಶಿಸಿ ತಿಲ ದಾನಮಾಡುವುದು ಅಕ್ಷಯವಾದ ಫಲವನ್ನು ಕೊಡುವುದು.

೬೭. ಧರ್ಮರಾಜನಿಂದ ಸೇವಿಸಲ್ಪಟ್ಟಿರುವ ಆ ಕ್ಷೇತ್ರದಲ್ಲಿ ಮಾಡಿದ ಶ್ರಾದ್ಧವು ಅಕ್ಷಯವಾಗುವುದು, ಅಲ್ಲಿ ಮಾನವನು ಅಮಾವಾಸ್ಯೆಯಲ್ಲಿ ಯಥಾಕ್ರಮವಾಗಿ ವಿಧಿಯನ್ನು ಅನುಸರಿಸಿ ಶ್ರಾದ್ಧ ವಿಧಾನವನ್ನು ಆಚರಿಸಬೇಕು.

೬೮. ಕುರುಕ್ಷೇತ್ರದಲ್ಲಿ ಅಮಾವಾಸ್ಯಾತಿಥಿಯು ಪ್ರಾಪ್ತವಾಗಿರಲು ವಿಶೇಷವಾಗಿ ಪಿತೃಗಳನ್ನು ಅರ್ಚಿಸಿದ ಪುತ್ರನು ಪಿತೃಋಣವನ್ನು ಸಂಪೂರ್ಣವಾಗಿ ಕಳೆದುಕೊಂಡು ಋಣಮುಕ್ತನಾಗುವನು.

೬೯. ಹಾಗೆಯೇ ಸರಸ್ವತೀನದಿ, ವಿನಶನಕ್ಷೇತ್ರ, ಪ್ಲಕ್ಷ ಪ್ರಸ್ರವಣಕ್ಷೇತ್ರ, ವ್ಯಾಸತೀರ್ಥ, ದೃಷದ್ವತೀ ನದಿ ಮತ್ತು ತ್ರಿಪ್ಲಕ್ಷವೆಂಬ ತೀರ್ಥ ಕ್ಷೇತ್ರಗಳಲ್ಲಿ ಆಚರಿಸಿದ ವಿಧಿಗಳು ವಿಶೇಷವಾಗಿ ಫಲಪ್ರದಗಳಾಗುವುವು.

ದೇಯಮೋಂಕಾರಪವನೇ ಶ್ರಾದ್ಧಮಕ್ಷಯಮಿಚ್ಛತಾ ।
ಶಕ್ರಾವತಾರೇ ಗಂಗಾಯಾಂ ಮೈನಾಕೇ ಚ ನಗೋತ್ತಮೇ ॥ ೭೦ ॥

ಯಮುನಾಪ್ರಭವೇ ಚೈವ ಸರ್ವಪಾಪೈಃ ಪ್ರಮುಚ್ಯತೇ ।
ಅತ್ಯುಷ್ಣಾ ಶ್ಚಾತಿಶೀತಾಶ್ಚ ಆಪಸ್ತಸ್ಮಿನ್ ನಿದರ್ಶನಮ್ ॥ ೭೧ ॥

ಯಮಸ್ಯ ಭಗಿನೀ ಪುಣ್ಯಾ ಮಾರ್ತಂಡದುಹಿತಾ ಶುಭಾ ।
ತತ್ರಾಕ್ಷಯಂ ಸದಾ ಶ್ರಾದ್ಧಂ ಪಿತೃಭಿಃ ಪೂರ್ವಕೀರ್ತಿತಮ್ ॥ ೭೨ ॥

ಬ್ರಹ್ಮತುಂಡಹ್ರದೇ ಸ್ನಾತ್ವಾ ಸದ್ಯೋ ಭವತಿ ಬ್ರಾಹ್ಮಣಃ ।
ತಸ್ಮಿಂಸ್ತು ಶಾದ್ಧಮಾನಂತ್ಯಂ ಜಪಹೋಮತಪಾಂಸಿ ಚ ॥ ೭೩ ॥

ಸ್ಥಾಣುಭೂತೋಽಚರತ್ತತ್ರ ವಸಿಷ್ಠೋ ವೈ ಮಹಾತಪಾಃ ।
ಅದ್ಯಾಪಿ ತತ್ರ ದೃಶ್ಯಂತೇ ಪಾದಪಾ ಮಣಿಬರ್ಹಣಾಃ ॥ ೭೪ ॥

---

೭೦, ಶ್ರಾದ್ಧ ಫಲವನ್ನು ಅಕ್ಷಯವಾಗಬೇಕೆಂಬ ಆಕಾಂಕ್ಷೆಯಿಂದ ಮನುಜನು ಓಂಕಾರವೆಂಬ ಪವಿತ್ರಕ್ಷೇತ್ರದಲ್ಲಿ ಶ್ರಾದ್ಧದಾನವನ್ನು ಮಾಡಬೇಕು, ಹಾಗೆಯೇ ಶಕ್ರಾವತಾರ, ಗಂಗಾ, ಮೈನಾಕವೆಂಬ ಶ್ರೇಷ್ಠಪರ್ವತಗಳು ಅತ್ಯುತ್ತಮವಾದ ಕ್ಷೇತ್ರಗಳಾಗಿವೆ.

೭೧. ಆ ಕ್ಷೇತ್ರಗಳಲ್ಲಿಯೂ ಯಮುನಾನದಿಯ ಉತ್ಪತ್ತಿ ಕ್ಷೇತ್ರಗಳಲ್ಲಿಯೂ ಕ್ಷೇತ್ರವಿಧಿಯನ್ನು ಆಚರಿಸಿದ ಮಾನವನು ಸರ್ವ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ, ಅದರ ಮಹಿಮೆಗೆ ಅತಿಉಷ್ಣವೂ ಅತಿಶೀತವೂ ಅದ ಜಲವು ಹರಿಯುವುದೇ ನಿದರ್ಶನವು.

೭೨. ಯಮಧರ್ಮರಾಜನ ಪವಿತ್ರ ಭಗಿನಿಯೂ ಸೂರ್ಯದೇವನ ಪುತ್ರಿಯೂ ಆದ ಯಮುನಾನದಿಯ ತೀರದಲ್ಲಿ ಮಾಡುವ ಶ್ರಾದ್ಧವು ಯಾವಾಗಲೂ ಅಕ್ಷಯವಾದುದೆಂದು ಪಿತೃಗಳಿಂದ ಕೀರ್ತಿಸಲ್ಪಟ್ಟಿದೆ.

೭೩. ಬ್ರಹ್ಮತುಂಡವೆಂಬ ಹ್ರದದಲ್ಲಿ ಸ್ನಾನ ಮಾಡಿದ ನರನು ಆ ಕ್ಷಣದಲ್ಲಿ ಬ್ರಾಹ್ಮಣನಾಗುವನು. ಅಲ್ಲಿ ಮಾಡಿದ ಶ್ರಾದ್ಧವು, ಮತ್ತು ಜಪ-ಹೋಮ-ತಪಸ್ಸುಗಳು ಅನಂತ ಫಲಗಳನ್ನು ಕೊಡುತ್ತವೆ.

೭೪. ಮಹಾ ತಪಸ್ವಿಯಾದ ವಸಿಷ್ಠಮುನಿಯು ಆ ಹ್ರದದಲ್ಲಿ ಸ್ಥಾಣುರೂಪದಿಂದ ಸಂಚರಿಸಿದನು, ಅಲ್ಲಿ ಮಣಿಮಯವಾದ ಅಲಂಕಾರಗಳಿಂದ ಕೂಡಿದ ವೃಕ್ಷಗಳು ಈಗಲೂ ಕಾಣಿಸುತ್ತಿವೆ.

ತುಲಾ ತು ದೃಶ್ಯತೇ ತತ್ರ ಧರ್ಮಾಧರ್ಮನಿದರ್ಶನೀ ।
ಯಥಾ ವೈ ತೋಲಿತಂ ವಿಪ್ರೈಸ್ತೀರ್ಥಾನಾಂ ಫಲಮುತ್ತಮಮ್॥ ೬೫ ॥

ಪಿತೄಣಾಂ ದುಹಿತಾ ಯೋಗಾ ಗಂಧಕಾಲೀತಿ ವಿಶ್ರುತಾ ।
ಚತುರ್ಥೋ ಬ್ರಹ್ಮಣಸ್ತ್ವಂಶಃ ಪರಾಶರಕುಲೋದ್ಭವಃ ॥ ೬೬ ॥

ವ್ಯಸಿಷ್ಯತಿ ಚತುರ್ಧಾ ವೈ ವೇದಂ ಧೀವರ್ಾ ಮಹಾಮುನಿಃ ।
ಮಹಾಯೋಗಂ ಮಹಾತ್ಮಾನಂ ಯಾ ವ್ಯಾಸಂ ಜನಯಿಷ್ಯತಿ ॥ ೬೭ ॥

ಅಚ್ಛೋದಕಂ ನಾಮ ಸರಸ್ತತ್ರಾಚ್ಛೋದಾಸಮುದ್ಭವಃ ।
ಮತ್ಸ್ಯಯೋನೌ ಪುನರ್ಜಾತಾ ನಿಯೋಗಾತ್ ಕಾರಣೇನ ತು ॥ ೬೮ ॥

ತಸ್ಯಾಸ್ತ್ವದಾಶ್ರಮೇ ಪುಣ್ಯೇ ಪುಣ್ಯಕೃದ್ಭಿರ್ನಿಷೇವಿತೇ ।
ದತ್ತಂ ಸಕೃದಪಿ ಶ್ರಾದ್ಧಮಕ್ಷಯಂ ಸಮುದಾಹೃತಮ್ ॥ ೬೯ ॥

---

೬೫. ಅಲ್ಲಿ ಧರ್ಮ ಮತ್ತು ಅಧರ್ಮಗಳನ್ನು ತೋರಿಸುವ ತಕ್ಕಡಿಯು ಕಾಣುವುದು, ಆ ತಕ್ಕಡಿಯಿಂದ ತೀರ್ಥಗಳಿಂದ ಲಭಿಸುವ ಉತ್ತಮ ಫಲಗಳ ತಾರತಮ್ಯವು ತಿಳಿಸಲ್ಪಟ್ಟಿದೆ.

೬೬. ಅಲ್ಲಿ ಯೋಗಾತ್ಮಕಳಾದ ಪಿತೃಗಳ ಮಾನಸ ಕನ್ಯೆಯೊಬ್ಬಳು ಗಂಧಕಾಲಿಯೆಂದು ಪ್ರಸಿದ್ಧಳಾಗಿರುವಳು, ಬ್ರಹ್ಮನ ಚತುರ್ಥಾಂಶವು ಪರಾಶರ ಮುನಿಯ ಕುಲದಲ್ಲಿ ಮುನಿ ರೂಪದಿಂದ ಅವತರಿಸುವುದು.

೬೭. ಜ್ಞಾನಿಯಾದ ಆ ಮಹಾಮುನಿಯು ವೇದವನ್ನು ನಾಲ್ಕು ಭಾಗವಾಗಿ ವಿಂಗಡಿಸುವನು. ಅಂತಹ ಮಹಾಯೋಗಿಯೂ ಮಹಾತ್ಮನೂ ಆದ ವ್ಯಾಸಮುನಿಯನ್ನು ಗಂಧಕಾಲಿಯೆಂಬ ಪಿತೃಕನ್ಯೆಯು ಪ್ರಸವಿಸಿದಳು.

೬೮. ಅಲ್ಲಿ ಅಚ್ಛೋದಕವೆಂಬ ಒಂದು ಸರೋವರವಿದೆ. ಅಲ್ಲಿಂದ ಅಚ್ಛೋದಾ ಎಂಬ ನದಿಯು ಜನಿಸಿದೆ. ಆ ಗಂಧಕಾಲಿಯು ಪಿತೃ ನಿಯೋಗವೆಂಬ ಕಾರಣದಿಂದ ಮತ್ಸ್ಯಯೋನಿಯಲ್ಲಿ ಜನಿಸಿದಳು.

೬೯. ಪುಣ್ಯವಂತರಿಂದ ಸೇವಿಸಲ್ಪಟ್ಟ ಮತ್ತು ಪವಿತ್ರವಾದ ಅವಳ ಆದ್ಯವಾದ ಆಶ್ರಮದಲ್ಲಿ ಒಂದು ಸಲವಾದರೂ ಕೊಡಲ್ಪಟ್ಟ ಶ್ರಾದ್ಧವು ಅಕ್ಷಯವಾಗುವುದೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿದೆ.

ನದ್ಯಾಂ ಯೋಗಸಮಾಧಾನಂ ದತ್ತಂ ಯುಗಪದುದ್ಭವೇತ್ ।
ಕುಬೇರತುಂಗೇ ಪಾಪಘ್ನೇ ವ್ಯಾಸತೀರ್ಥೇ ತಥೈವ ಚ　　॥ ೮೦ ॥

ಪುಣ್ಯಾಯಾಂ ಬ್ರಹ್ಮಣೋ ವೇದ್ಯಾಂ ಶ್ರಾದ್ಧಮಾನಂತ್ಯಮಿಷ್ಯತೇ ।
ಸಿದ್ಧೈಸ್ತು ಸೇವಿತಾ ನಿತ್ಯಂ ದೃಶ್ಯತೇ ತು ಕೃತಾತ್ಮಭಿಃ　　॥ ೮೧ ॥

ಅನಿವರ್ತನಂ ತು ನಂದಾಯಾಂ ವೇದ್ಯಾಃ ಪ್ರಾಗುತ್ತರಾದಿಶಿ ।
ಸಿದ್ಧಿಕ್ಷೇತ್ರಂ ಸುರೈರ್ಜುಷ್ಟಂ ಯತ್ ಪ್ರಾಪ್ಯ ನ ನಿವರ್ತತೇ　　॥ ೮೨ ॥

ಮಹಾಲಯೇ ಪದಂ ನ್ಯಸ್ತಂ ಮಹಾದೇವೇನ ಧೀಮತಾ ।
ಭೂತಾನಾಮನುಕಂಪಾರ್ಥಂ ನಾಸ್ತಿಕಾನಾಂ ನಿದರ್ಶನಮ್　　॥ ೮೩ ॥

ವಿರಜೇ ತ್ವಕ್ಷಯಂ ಶ್ರಾದ್ಧಂ ಪೂರ್ವಮೇವ ಮಹಾಲಯೇ ।
ನಂದಾಯಾಂ ವಿರಜೇ ಚೈವ ತಥೈವ ಚ ಮಹಾಲಯೇ　　॥ ೮೪ ॥

---

೮೦. ಅಚ್ಛೋದಾ ನದಿ, ಕುಬೇರತುಂಗ ಮತ್ತು ಪಾಪಗಳನ್ನು ದೂರ ನಿವಾರಿಸುವ ವ್ಯಾಸತೀರ್ಥಗಳಲ್ಲಿ ಯೋಗಾಭ್ಯಾಸದಿಂದ ಚಿತ್ತಸಮಾಧಾನಪೂರ್ವಕವಾಗಿ ಕೊಟ್ಟ ಶ್ರಾದ್ಧಾನ್ನದಾನವು ಚಿತ್ತಶುದ್ಧಿಯನ್ನು ಉಂಟುಮಾಡುವುದು.

೮೧. ಪವಿತ್ರವಾದ ಬ್ರಹ್ಮವೇದಿ ಎಂಬಲ್ಲಿ ಮಾಡಿದ ಶ್ರಾದ್ಧವು ಅನಂತ ಫಲಗಳಿಗೆ ಸಾಧನವಾಗುವುದು. ಸಿದ್ಧರಿಂದ ಸೇವಿಸಲ್ಪಟ್ಟ ಆ ಬ್ರಹ್ಮವೇದಿಯು ಪುಣ್ಯಾತ್ಮರಿಗೆ ಮಾತ್ರ ಕಾಣಿಸುವುದು.

೮೨. ಬ್ರಹ್ಮವೇದಿಯ ಪೂರ್ವೋತ್ತರ ಮಧ್ಯವಾದ ಈಶಾನ್ಯದಿಕ್ಕಿನಲ್ಲಿ ಅನಿವರ್ತನವೆಂಬ ಸಿದ್ಧಿಕ್ಷೇತ್ರವು ದೇವಾದಿದೇವತೆಗಳಿಂದ ಸೇವಿಸಲ್ಪಟ್ಟಿರುವುದು. ಅದನ್ನು ಸೇವಿಸಿದವನು ಪುನರಾವೃತ್ತಿಯನ್ನು ಹೊಂದುವುದಿಲ್ಲ.

೮೩. ಆ ಕ್ಷೇತ್ರಸ್ವರೂಪವಾದ ಮಹಾಲಯದಲ್ಲಿ ಜ್ಞಾನಿಯಾದ ಮಹಾದೇವನಿಂದ ಪಾದವು ಸರ್ವಭೂತಗಳ ಮೇಲಿನ ಕರುಣೆಯಿಂದ ಇರಿಸಲ್ಪಟ್ಟಿದೆ. ಆ ಕ್ಷೇತ್ರವು ನಾಸ್ತಿಕರನ್ನು ಗುರುತಿಸಿ ತೋರಿಸುವ ನಿದರ್ಶನರೂಪವಾಗಿದೆ.

೮೪. ವಿರಜಕ್ಷೇತ್ರದಲ್ಲಿಯೂ, ಮಹಾಲಯಕ್ಷೇತ್ರದಲ್ಲಿಯೂ, ನಂದಾನದಿಯಲ್ಲಿಯೂ ಕೂಡ ಮಾಡಿರುವ ಶ್ರಾದ್ಧವು ಅಕ್ಷಯಫಲವನ್ನು ಕೊಡುವುದು. ಮತ್ತು ಉತ್ತಮವಾದ ಈ ಕ್ಷೇತ್ರಗಳಲ್ಲಿ ಆಚರಿಸಿದ ಶ್ರಾದ್ಧದಿಂದ ಅತಿಶಯಫಲವನ್ನು ಹೊಂದುವನು.

ಆತ್ಮಾನಂ ತಾರಯಂತೀಹ ದಶಪೂರ್ವಾನ್ ದಶಾಪರಾನ್ ।
ಕಾಕಹ್ರದೇ ಜಾತಿಸ್ಮರ್ಯಂ ಸುವರ್ಣಮಮಿತೌಜಸಮ್ ॥ ೮೫ ॥

ಕೌಮಾರಂ ಚ ಸರಃ ಪುಣ್ಯಂ ನಾಗಭೋಗಾಭಿರಕ್ಷಿತಮ್ ।
ಕುಮಾರತೀರ್ಥೇ ಸ್ನಾತ್ವಾ ತು ತ್ರಿದಿವಂ ಯಾತಿ ಮಾನವಃ ॥ ೮೬ ॥

ದೇವಾಲಯೇ ತಪಸ್ತಪ್ತ್ವಾ ಏಕಪಾದೇನ ದುಶ್ಚರಮ್ ।
ನಿರಾಹಾರೋ ಯುಗಂ ದಿವ್ಯಮುಮಾತುಂಗೇ ಸ್ಥಿತೋ ಜ್ವಲನ್ ॥ ೮೭ ॥

ಉಮಾತುಂಗೇ ಭೃಗೋಸ್ತುಂಗೇ ಬ್ರಹ್ಮತುಂಗೇ ಮಹಾಲಯೇ ।
ತತ್ರ ಶ್ರಾದ್ಧಾನಿ ದೇಯಾನಿ ನಿತ್ಯಮಕ್ಷಯಮಿಚ್ಛತಾ ॥ ೮೮ ॥

ಅಕ್ಷಯಂ ತು ಸದಾ ಶ್ರಾದ್ಧಂ ಶಾಲಗ್ರಾಮೇ ಸಮಂತತಃ ।
ದುಷ್ಕೃತಂ ದೃಶ್ಯತೇ ತತ್ರ ಪ್ರತ್ಯಕ್ಷಮಕೃತಾತ್ಮನಾಮ್ ॥ ೮೯ ॥

---

೮೫. ಅಲ್ಲಿ ಶ್ರಾದ್ಧಕರ್ಮವನ್ನು ಆಚರಿಸಿದವರು ಹಿಂದಿನ ಹತ್ತು ಮಂದಿ ಮತ್ತು ಮುಂದಿನ ಹತ್ತು ಮಂದಿ ವಂಶೀಕರನ್ನು ತಾರಣಮಾಡುವರು ಕಾಕಹ್ರದವೆಂಬ ಕ್ಷೇತ್ರದಲ್ಲಿ ಅತಿಶಯ ತೇಜಸ್ಸಿನಿಂದ ಕೂಡಿದ ಸುವರ್ಣ ಮತ್ತು ಜಾತಿಸ್ಮರತ್ವವನ್ನು ಹೊಂದುವರು.

೮೬. ಕುಮಾರತೀರ್ಥವೆಂಬ ಒಂದು ಪವಿತ್ರವಾದ ಸರೋವರವು ಸರ್ಪಗಳ ದೇಹಗಳಿಂದ ರಕ್ಷಿಸಲ್ಪಟ್ಟಿದೆ. ಆ ಕುಮಾರತೀರ್ಥದಲ್ಲಿ ಸ್ನಾನಮಾಡಿದ ಪ್ರಭಾವದಿಂದ ಮಾನವನು ಸ್ವರ್ಗಲೋಕವನ್ನು ಹೊಂದುತ್ತಾನೆ.

೮೭. ಉಮಾತುಂಗವೆಂಬ ದಿವ್ಯಕ್ಷೇತ್ರದಲ್ಲಿ ದೇವಾಲಯದಲ್ಲಿ ಏಕಪಾದದಿಂದ ನಿಂತು ಕಠಿನವಾದ ತಪಸ್ಸನ್ನು ತಪಿಸುತ್ತಲೂ ತಪೋಜ್ವಾಲೆಯಿಂದ ಜ್ವಲಿಸುತ್ತಲೂ ನಿರಾಹಾರನಾಗಿ ಒಂದು ದೇವಮಾನದ ಯುಗದವರೆಗೆ ಇದ್ದ ಮಾನವನು ಸದ್ಗತಿಯನ್ನು ಹೊಂದುವನು.

೮೮. ಉಮಾತುಂಗ, ಭೃಗುತುಂಗ, ಬ್ರಹ್ಮತುಂಗ ಮತ್ತು ಮಹಾಲಯ ಎಂಬ ದಿವ್ಯಕ್ಷೇತ್ರಗಳಲ್ಲಿ ಅಕ್ಷಯಫಲಾಕಾಂಕ್ಷಿಯಾದ ಮಾನವನು ನಿತ್ಯವೂ ಶ್ರಾದ್ಧಾನ್ನವನ್ನು ದಾನಮಾಡಬೇಕು.

೮೯. ಶಾಲಗ್ರಾಮವೆಂಬ ವಿಶೇಷ ಕ್ಷೇತ್ರದಲ್ಲಿ ಸುತ್ತಲೂ ಇದ್ದ ಪ್ರದೇಶಗಳಲ್ಲಿ ಮಾಡಿದ ಶ್ರಾದ್ಧಯಜ್ಞವು ಯಾವಾಗಲೂ ಅಕ್ಷಯವಾಗುವುದು, ಅಲ್ಲಿ ದುಷ್ಟರಾದ ಪಾಪಿಗಳ ದುಷ್ಕೃತವು ಪ್ರತ್ಯಕ್ಷವಾಗಿ ಕಾಣುವುದು.

ಪ್ರತ್ಯಾದೇಶೋ ಹ್ಯಶಿಷ್ಟಾನಾಂ ಶಿಷ್ಟಾನಾಂ ಚ ವಿಶೇಷತಃ ।
ತತ್ರ ದೇವಹ್ರದಃ ಪುಣ್ಯೋ ಬ್ರಹ್ಮಣೋ ನಾಗರಾಟ್ ಶುಚಿಃ ॥ ೯೦ ॥

ಪಿಂಡಂ ಗೃಹ್ಣಾತಿ ಹಿ ಸತಾಂ ನ ಗೃಹ್ಣಾತ್ಯಸತಾಂ ಸದಾ ।
ಅತಿಪ್ರದೀಪ್ತೈರ್ಭುಜಗೈರ್ಭೋಕ್ತುಮನ್ನಂ ನ ಶಕ್ಯತೇ ॥ ೯೧ ॥

ಪ್ರತ್ಯಕ್ಷಂ ದೃಶ್ಯತೇ ಧರ್ಮಸ್ತೀರ್ಥಯೋರ್ನ ತಯೋರ್ದ್ವಯೋಃ ।
ಕಾರವತ್ಯಾಂ ಚ ಶಾಂಡಿಲ್ಯಾಂ ಗುಹಾಯಾಂ ವಾಮನಸ್ಯ ಚ ॥ ೯೨ ॥

ಗತ್ವಾ ಚೈತಾನಿ ಪೂತಃ ಸ್ಯಾಚ್ಛ್ರಾದ್ಧಮಕ್ಷಯಮೇವ ಚ ।
ಜಪೋ ಹೋಮಸ್ತಪೋ ಧ್ಯಾನಂ ಯತ್ಕಿಂಚಿತ್ ಸುಕೃತಂ ಭವೇತ್
॥ ೯೩ ॥

ಬ್ರಹ್ಮಚರ್ಯಂ ಚ ಯೋ ಧತ್ತೇ ಗುರುಭಕ್ತಿಂ ಶತಂ ಸಮಾಃ ॥
ಏವಮಾದ್ಯಾಃ ಸರಿಚ್ಛ್ರೇಷ್ಠಾ ಯತ್ಸ್ನಾನಾದಘಮೋಕ್ಷಣಮ್ ।
ಕುಮಾರಧಾರಾ ತತ್ರೈವ ದೃಷ್ಟ್ವಾ ಪಾಪಂ ಪ್ರಣಶ್ಯತಿ ॥ ೯೪ ॥

---

೯೦. ಆ ಕ್ಷೇತ್ರದಲ್ಲಿ ಆಸ್ತಿಕ-ನಾಸ್ತಿಕರ ತಾರತಮ್ಯವು ವಿಶೇಷವಾಗಿ ತಿಳಿಯುವುದು. ಅಲ್ಲಿ ಪವಿತ್ರವಾದ ಒಂದು ದೇವಹ್ರದವು ಇರುವುದು, ಅದರಲ್ಲಿ ಶುದ್ಧನಾದ ನಾಗರಾಜನು ವಾಸಮಾಡುವನು.

೯೧. ಆ ನಾಗರಾಜನು ಸತ್ಪುರುಷರು ಕೊಟ್ಟ ಪಿಂಡವನ್ನು ಪ್ರತ್ಯಕ್ಷವಾಗಿ ಸ್ವೀಕರಿಸುವನು, ಪಾಪಿಷ್ಠರಿಂದ ಪಿಂಡವನ್ನು ತೆಗೆದುಕೊಳ್ಳುವುದಿಲ್ಲ. ಅಲ್ಲಿ ಮಾನವನಿಗೆ ಜ್ವಲಿಸುತ್ತಿದ್ದ ಸರ್ಪಗಳ ಮಹಿಮೆಯಿಂದ ಅನ್ನವನ್ನು ಊಟಮಾಡಲಾಗುವುದಿಲ್ಲ.

೯೨. ಕಾರವತೀ ಎಂಬ ತೀರ್ಥ, ವಾಮನಮೂರ್ತಿಯು ವಾಸಮಾಡಿದ ಶಾಂಡಿಲ್ಯ ಎಂಬ ಕ್ಷೇತ್ರ—ಈ ಎರಡು ತೀರ್ಥಗಳಲ್ಲಿ ಪುಣ್ಯಾತ್ಮರ ಧರ್ಮವು ಪ್ರತ್ಯಕ್ಷವಾಗಿ ಕಾಣಿಸುವುದು.

೯೩. ಈ ಪುಣ್ಯತೀರ್ಥದಲ್ಲಿ ಯಾತ್ರೆಮಾಡಿದ್ದರಿಂದ ನರನು ಪವಿತ್ರನಾಗುವನು. ಮತ್ತು ಅಲ್ಲಿ ಆಚರಿಸಿದ ಶ್ರಾದ್ಧ ಯಜ್ಞ, ಜಪ, ಹೋಮ, ತಪಸ್ಸು, ಧ್ಯಾನ ಅಥವಾ ಮತ್ತಾವುದಾದರೂ ಪುಣ್ಯಕರ್ಮಗಳು ಅಕ್ಷಯವಾದ ಫಲಸಾಧನಗಳಾಗುವುವು.

೯೪. ಮತ್ತು ಆ ದಿವ್ಯಕ್ಷೇತ್ರಗಳಲ್ಲಿ ಒಂದುನೂರು ವರ್ಷಗಳವರೆಗೆ ಬ್ರಹ್ಮಚರ್ಯ, ಗುರುಶುಶ್ರೂಷಾ ಭಕ್ತಿಯನ್ನು ಆಚರಿಸುವುದು ಅತ್ಯುತ್ತಮವು. ಹೀಗೆ ಸ್ನಾನಮಾತ್ರದಿಂದ ಪಾಪಗಳನ್ನು ದೂರಮಾಡುವ ನದಿಗಳು ತೀರ್ಥರೂಪವಾಗಿರುವುವು. ಅಲ್ಲಿರುವ ಕುಮಾರಧಾರಾ ಎಂಬ ತೀರ್ಥವು ದರ್ಶನ ಮಾತ್ರದಿಂದ ಪಾಪವನ್ನು ಕಳೆಯುವುದು.

ಧ್ಯಾನಾಸನಂ ತು ತತ್ರೈವ ವ್ಯಾಸಸ್ಯಾದ್ಯಾಪಿ ದೃಶ್ಯತೇ ।
ಶೈಲಃ ಕಾಂತಿಪುರಾಭ್ಯಾಶೇ ಪ್ರಾಗುದೀಚ್ಯಾಂ ದಿಶಿ ಸ್ಥಿತಃ ॥ ೯೫ ॥

ಪುಣ್ಯಾ ಪುಷ್ಕರಿಣೀ ತತ್ರ ಕಿರಾತಗಣರಕ್ಷಿತಾ ।
ಯಸ್ಯಾಂ ಸ್ನಾತ್ವಾ ಸಕೃದ್ವಿಪ್ರಃ ಕಾಮಾನಾಪ್ನೋತಿ ಶಾಶ್ವತಾನ್ ॥ ೯೬ ॥

ಅದೃಶ್ಯಃ ಸರ್ವಭೂತಾನಾಂ ದೇವವಚ್ಚರತೇ ಮಹೀಮ್ ॥ ೯೭ ॥

ಕಾಶ್ಯಪಸ್ಯ ಮಹಾತೀರ್ಥಂ ಕಾಲಸರ್ಪಿರಿತಿ ಶ್ರುತಮ್ ।
ತತ್ರ ಶ್ರಾದ್ಧಾನಿ ದೇಯಾನಿ ನಿತ್ಯಮಕ್ಷಯಮಿಚ್ಛತಾ ॥ ೯೮ ॥

ದೇವದಾರುವನೇ ವಾಪಿ ಧಾರಾಯಾಸ್ತು ನಿದರ್ಶನಮ್ ।
ನಿರ್ಧೂತಾನಿ ತು ಪಾಪಾನಿ ದೃಶ್ಯಂತೇ ಸುಕೃತಾತ್ಮನಾಮ್ ॥ ೯೯ ॥

---

೯೫. ಅದರ ಸನ್ನಿಧಿಯಲ್ಲಿ ವ್ಯಾಸಮುನಿಯ ಧ್ಯಾನಾರ್ಥವಾದ ಆಸನವು ಈಗಲೂ ಕಾಣಿಸುವುದು. ಕಾಂತಿಪುರದ ಸಮೀಪದಲ್ಲಿ ಈಶಾನ್ಯ ದಿಕ್ಕಿನಲ್ಲಿ ಒಂದು ಪವಿತ್ರವಾದ ಪರ್ವತವು ಇರುವುದು.

೯೬. ಅಲ್ಲಿ ಕಿರಾತರ ಸೈನ್ಯದಿಂದ ರಕ್ಷಿಸಲ್ಪಟ್ಟಿರುವ ಪವಿತ್ರವಾದ ಒಂದು ಪುಷ್ಕರಿಣೀತೀರ್ಥವು ಇರುವುದು. ಆ ತೀರ್ಥದಲ್ಲಿ ಒಂದುಸಲ ಸ್ನಾನಮಾಡಿದ ವಿಪ್ರನು ಶಾಶ್ವತವಾದ ಕಾಮ್ಯಫಲಗಳನ್ನು ಹೊಂದುತ್ತಾನೆ.

೯೭. ಮತ್ತು ಆ ತೀರ್ಥಸ್ನಾನದ ಮಹಿಮೆಯಿಂದ ಅಂತರ್ಧಾನ ಶಕ್ತಿಯನ್ನು ಹೊಂದಿ ಸರ್ವಪ್ರಾಣಿಗಳಿಗೆ ಅದೃಶ್ಯನಾಗಿ ದೇವತೆಯಂತೆ ಭೂಮಿಯಲ್ಲಿ ಸಂಚರಿಸುತ್ತಾನೆ.

೯೮. ಕಶ್ಯಪಮುನಿಯ ಕಾಲಸರ್ಪಿ ಎಂಬ ನಾಮಾಂಕಿತವಾದ ಮಹಾತೀರ್ಥವು ಪ್ರಸಿದ್ಧವಾಗಿದೆ. ನಿತ್ಯವೂ ಅಕ್ಷಯಫಲಾನುಭವವನ್ನು ಇಚ್ಛಿಸುವ ಮನುಜನು ಅಲ್ಲಿ ಶ್ರಾದ್ಧಹವಿರ್ದಾನವನ್ನು ಮಾಡಬೇಕು.

೯೯. ದೇವದಾರು ಎಂಬ ವನದಲ್ಲಿ ಧಾರೆಯು ಪುಣ್ಯಪಾಪಗಳಿಗೆ ನಿದರ್ಶನವಾಗಿರುವುದು. ಅಲ್ಲಿ ಪುಣ್ಯಾತ್ಮರಲ್ಲಿ ಇದ್ದ ಇತರ ಪಾಪಗಳೆಲ್ಲವೂ ತ್ಯಜಿಸಲ್ಪಟ್ಟವುಗಳಾಗಿ ಕಾಣುವುವು.

**ಭಾಗೀರಥ್ಯಾಂ ಪ್ರಯಾಗೇ ತು ನಿತ್ಯಮಕ್ಷಯಮುಚ್ಯತೇ ।**
**ಕಾಲಂಜರೇ ದಶಾರ್ಣಾಯಾಂ ನೈಮಿಷೇ ಕುರುಜಾಂಗಲೇ ॥ ೧೦೦ ॥**

**ವಾರಾಣಸ್ಯಾಂ ನಗರ್ಯಾಂ ಚ ದೇಯಂ ಶ್ರಾದ್ಧಂ ಪ್ರಯತ್ನತಃ ।**
**ತತ್ರ ಯೋಗೇಶ್ವರೋ ನಿತ್ಯಂ ತಸ್ಯಾಂ ದತ್ತಮಥಾಕ್ಷಯಮ್ ॥೧೦೧॥**

**ಗತ್ವಾ ಚೈತಾನಿ ಪೂತಃ ಸ್ಯಾಚ್ಛ್ರಾದ್ಧಮಕ್ಷಯ್ಯಮೇವ ಚ ।**
**ಜಪೋ ಹೋಮಸ್ತಪೋ ಧ್ಯಾನಂ ಯತ್ಕಿಂಚಿತ್ ಸುಕೃತಂ ಭವೇತ್ ॥ ೧೦೨ ॥**

**ಲೌಹಿತ್ಯೇ ವೈತರಣ್ಯಾಂ ಚ ಸ್ವರ್ಗವೇದ್ಯಾಂ ತಥೈವ ಚ ।**
**ಸಾ ತು ದೇವೀ ಸಮುದ್ರಾಂತೇ ದೃಶ್ಯತೇ ಚೈವ ನಾಮಭಿಃ ॥ ೧೦೩ ॥**

**ಗಯಾಯಾಂ ಧರ್ಮಪೃಷ್ಠೇ ತು ಸರಸಿ ಬ್ರಹ್ಮಣಸ್ತಥಾ ।**
**ಗವಾಂ ಗೃಧ್ರವಟೇ ಚೈವ ಶ್ರಾದ್ಧಂ ದತ್ತಂ ಮಹಾಫಲಮ್ ॥ ೧೦೪ ॥**

---

೧೦೦. ಭಾಗೀರಥೀ, ಪ್ರಯಾಗ, ಕಾಲಂಜರ, ದಶಾರ್ಣ, ನೈಮಿಷ, ಕುರುಜಾಂಗಲ—ಎಂಬ ಪವಿತ್ರಕ್ಷೇತ್ರ ವಿಶೇಷಗಳಲ್ಲಿ ಆಚರಿಸಿದ ಶ್ರಾದ್ಧಕರ್ಮಗಳು ಅನಂತ ಫಲಸಾಧನಗಳಾಗುವುವು.

೧೦೧. ವಾರಾಣಸೀ ನಗರಿಯಲ್ಲಿ ಯೋಗೇಶ್ವರನು ಸರ್ವಕಾಲದಲ್ಲಿಯೂ ಸನ್ನಿಹಿತನಾಗಿರುವನು. ಆದುದರಿಂದ ಅಲ್ಲಿ ಯತ್ನಪೂರ್ವಕವಾಗಿ ಶ್ರಾದ್ಧವನ್ನು ಆಚರಿಸಬೇಕು. ಅದು ಅಕ್ಷಯವಾಗುವುದು.

೧೦೨ ಈ ಪವಿತ್ರ ತೀರ್ಥಯಾತ್ರೆಯನ್ನು ನೆರವೇರಿಸಿದವನು ಪವಿತ್ರನಾಗುವನು, ಮತ್ತು ಅಲ್ಲಿ ಆಚರಿಸಿದ ಶ್ರಾದ್ಧಗಳು ಅಕ್ಷಯ ತೃಪ್ತಿಯನ್ನು ಕೊಡುವುವು. ಹಾಗುಅಲ್ಲಿಯ ಜಪ, ಹೋಮ, ತಪಸ್ಸು, ಧ್ಯಾನ ಮುಂತಾದ ಸಮಸ್ತ ಸುಕೃತವು ವೀರ್ಯವತ್ತಾಗುವುದು.

೧೦೩. ಲೌಹಿತ್ಯ, ವೈತರಣೀ, ಮತ್ತು ಸ್ವರ್ಗವೇದೀ ಎಂಬುವು ಶ್ರಾದ್ಧದಾನಕ್ಕೆ ಉತ್ತಮ ಕ್ಷೇತ್ರಗಳು, ಆ ಸ್ವರ್ಗವೇದಿಯು ಸಮುದ್ರತೀರದಲ್ಲಿ ಅನೇಕ ನಾಮಗಳಿಂದ ಪ್ರಸಿದ್ಧವಾಗಿ ಕಾಣಿಸುತ್ತಿದೆ.

೧೦೪. ಗಯಾ, ಧರ್ಮಪೃಷ್ಠ. ಮತ್ತು ಬ್ರಹ್ಮಸರೋವರ, ಗೋಕ್ಷೇತ್ರ, ಗೃಧ್ರವಟವೆಂಬ ಅತಿ ಪವಿತ್ರ ಕ್ಷೇತ್ರಗಳಲ್ಲಿ ಕೊಟ್ಟ ಶ್ರಾದ್ಧವು ಅಕ್ಷಯವಾದ ಮಹಾ ಫಲವನ್ನು ಕೊಡುವುದು.

ಹಿಮಂ ಚ ಪತತೇ ತತ್ರ ಸಮಂತಾತ್ ಪಂಚಯೋಜನಮ್ ।
ಭರತಸ್ಯಾಶ್ರಮೇ ಪುಣ್ಯೇಽರಣ್ಯಂ ಪುಣ್ಯತಮಂ ಸ್ಮೃತಮ್ ॥ ೧೦೫ ॥

ಮತಂಗಸ್ಯ ವನಂ ತತ್ರ ದೃಶ್ಯತೇ ಸರ್ವಮಾನುಷೈಃ ।
ಸ್ಥಾಪಿತಂ ಧರ್ಮಸರ್ವಸ್ವಂ ಲೋಕಸ್ಯಾಸ್ಯ ನಿದರ್ಶನಮ್ ॥ ೧೦೬ ॥

ಯದ್ದಂಡಕವನಂ ಪುಣ್ಯಂ ಪುಣ್ಯಕೃದ್ಭಿರ್ನಿಷೇವಿತಮ್ ।
ಯಸ್ಮಿನ್ ಪ್ರಾಹುರ್ವಿಶಲ್ಯೇತಿ ತೀರ್ಥಂ ಸದ್ಯೋ ನಿದರ್ಶನಮ್ ॥೧೦೭॥

ತುಲಾಮಾನೈಸ್ತಥಾ ಚಾಪಿ ಶಾಸ್ತ್ರೈಶ್ಚ ವಿವಿಧೈಸ್ತಥಾ ।
ಉನ್ಮಜ್ಜಂತಿ ತಥಾ ಲಗ್ನಾ ಯೇ ವೈ ಪಾಪಕೃತೋ ಜನಾಃ ॥ ೧೦೮ ॥

ತೃತೀಯಾಯಾಂ ತಥಾ ಪಾದೇ ನಿರಾಧಾಯಾಂ ತು ಮಂಡಲೇ ।
ಮಹಾಹ್ರದೇ ಚ ಕೌಶಿಕ್ಯಾಂ ದತ್ತಂ ಶ್ರಾದ್ಧಂ ಮಹಾಫಲಮ್ ॥ ೧೦೯ ॥

---

೧೦೫. ಆ ಕ್ಷೇತ್ರಗಳಲ್ಲಿ ಪಂಚಯೋಜನಪರಿಮಾಣದ ವಿಸ್ತಾರವುಳ್ಳ ಸುತ್ತ ಪ್ರದೇಶಗಳಲ್ಲಿ ಹಿಮವು ಬೀಳುತ್ತಿರುವುದು, ಭರತನ ಪವಿತ್ರವಾದ ಆಶ್ರಮದಲ್ಲಿ ಅತಿಶಯವಾಗಿ ಪವಿತ್ರವಾದ ಅರಣ್ಯವು ಇರುವುದೆಂದು ಸ್ಮರಿಸಲ್ಪಟ್ಟಿದೆ.

೧೦೬. ಅಲ್ಲಿ ಮತಂಗಮುನಿಯ ವನವು ಸಮಸ್ತ ಮನುಷ್ಯರಿಂದಲೂ ಪ್ರತ್ಯಕ್ಷವಾಗಿ ನೋಡಲ್ಪಡುವುದು, ಅಲ್ಲಿ ಸಕಲಲೋಕಗಳಿಗೆ ನಿದರ್ಶನವಾಗುವಂತೆ ಧರ್ಮದ ಸರ್ವಸ್ವವು ಇರಿಸಲ್ಪಟ್ಟಿದೆ.

೧೦೭. ಮತ್ತು ಪುಣ್ಯವಂತರಿಂದ ಸೇವಿಸಲ್ಪಟ್ಟ ಪವಿತ್ರವಾದ ದಂಡಕವನವೆಂಬ ಅರಣ್ಯವು ಪ್ರಖ್ಯಾತವಾಗಿದೆ. ಅಲ್ಲಿ ವಿಶಲ್ಯವೆಂಬ, ತತ್ಕ್ಷಣದಲ್ಲಿ ನಿದರ್ಶನವನ್ನು ತೋರಿಸುವ, ಒಂದು ತೀರ್ಥವಿದೆಯೆಂದು ಪ್ರಾಜ್ಞರು ಹೇಳುವರು.

೧೦೮. ಅಲ್ಲಿ ಅನೇಕ ಶಾಸ್ತ್ರಾಧಾರಗಳಿಂದ ಸಮ್ಮತವಾದ ತುಲಾಮಾನವು ಕಲ್ಪಿತವಾಗಿರುವುದು. ಪಾಪಿಷ್ಠರಾದ ಜನರು ಆ ತುಲಾಪಾತ್ರದಲ್ಲಿ ಕುಳಿತುಕೊಂಡವರಾಗಿ ಲಘುವಾಗಿ ಮೇಲಕ್ಕೆ ಏಳುವರು.

೧೦೯. ತೃತೀಯಾ ಎಂಬ ನದೀತೀರ್ಥದ ಪಾದದಲ್ಲಿಯೂ, ನಿರಾಧಾ ಎಂಬ ತೀರ್ಥದ ಮಂಡಲಾಕಾರದಲ್ಲಿಯೂ, ಕೌಶಿಕೀನದಿಯ ಮಹಾಹ್ರದಲ್ಲಿಯೂ, ಕೊಡಲ್ಪಟ್ಟ ಶ್ರಾದ್ಧದಾನ ಮಹಿಮೆಯು ಮಹಾ ಫಲವನ್ನು ಕೊಡುವುದು.

ಮುಂಡಪೃಷ್ಠೇ ಪದಂ ನ್ಯಸ್ತಂ ಮಹಾದೇವೇನ ಧೀಮತಾ ।
ಬಹುದೇವಯುಗಾಂಸ್ತಪ್ತ್ವಾ ತಪಸ್ತೀವ್ರಂ ಸುದುಶ್ಚರಮ್ ॥ ೧೧೦ ॥

ಅಲ್ಪೇನಾಪ್ಯತ್ರ ಕಾಲೇನ ನರೋ ಧರ್ಮಪರಾಯಣಃ ।
ಪಾಪ್ಮಾನಮುತ್ಸೃಜತ್ಯಾಶು ಜೀರ್ಣಾಂ ತ್ವಚಮಿವೋರಗಃ ॥ ೧೧೧ ॥

ಸಿದ್ಧಾನಾಂ ಪ್ರೀತಿಜನನಂ ಪಾಪಾನಾಂ ಚ ಭಯಂಕರಮ್ ।
ಲೇಲಿಹಾನೈರ್ಮಹಾಘೋರೈ ರಕ್ಷ್ಯತೇ ಸುಮಹೋರಗೈಃ ॥ ೧೧೨ ॥

ನಾಮ್ನಾ ಕನಕನಂದೀತಿ ತೀರ್ಥಂ ಜಗತಿ ವಿಶ್ರುತಮ್ ।
ಉದೀಚ್ಯಾಂ ಮುಂಡಪೃಷ್ಠಸ್ಯ ಬ್ರಹ್ಮರ್ಷಿಗಣಸೇವಿತಮ್ ॥ ೧೧೩ ॥

ತತ್ರ ಸ್ನಾತ್ವಾ ದಿವಂ ಯಾಂತಿ ಸ್ವಶರೀರೇಣ ಮಾನವಾಃ ।
ದತ್ತಂ ಚಾಪಿ ಸದಾ ಶ್ರಾದ್ಧಮಕ್ಷಯ್ಯಂ ಸಮುದಾಹೃತಮ್ ॥ ೧೧೪ ॥

---

೧೧೦. ಮುಂಡಪೃಷ್ಠವೆಂಬ ಕ್ಷೇತ್ರದಲ್ಲಿ ಅನೇಕ ದೇವಯುಗಗಳು ಕಳೆಯುವವರೆಗೆ ಕಠಿನವಾದ ತಪಸ್ಸನ್ನು ಆಚರಿಸಲು ಪ್ರಾಜ್ಞನಾದ ಮಹಾದೇವನು ಪಾದವನ್ನು ಇಟ್ಟಿರುವನು.

೧೧೧. ಈ ಪವಿತ್ರಕ್ಷೇತ್ರದಲ್ಲಿ ಧರ್ಮಾನುಷ್ಠಾನ ತತ್ಪರನಾದ ನರನು ಅಲ್ಪಕಾಲದಲ್ಲಿಯೇ ಸರ್ಪವು ಜೀರ್ಣವಾದ ಪರೆಯನ್ನು ಬಿಟ್ಟು ಪ್ರಕಾಶಿಸುವಂತೆ ಶೀಘ್ರವಾಗಿ ತನ್ನ ಪಾಪಕವಚವನ್ನು ಬಿಡುವನು.

೧೧೨. ಆ ಪ್ರಶಸ್ತಕ್ಷೇತ್ರವು ನಾಲಿಗೆಯನ್ನು ಚಾಚುತ್ತಲಿರುವ ಘೋರಾಕಾರವಾದ ಸರ್ಪಗಳಿಂದ ಕಾಯಲ್ಪಟ್ಟಿರುವುದು. ಅದು ಸಿದ್ಧರಿಗೆ ಆನಂದವನ್ನು ಕೊಡುವುದೂ, ಪಾಪಿಗಳಿಗೆ ಭಯಂಕರವೂ ಆಗಿದೆ.

೧೧೩. ಆ ಮುಂಡಪೃಷ್ಠದ ಉತ್ತರದಿಕ್ಕಿನಲ್ಲಿ ಅನೇಕ ಬ್ರಹ್ಮರ್ಷಿಗಳಿಂದ ಸೇವಿಸಲ್ಪಟ್ಟಿರುವ ಕನಕನಂದೀ ಎಂಬ ಹೆಸರಿನ ತೀರ್ಥವು ಲೋಕಗಳಲ್ಲಿ ಪ್ರಖ್ಯಾತಿಯನ್ನು ಹೊಂದಿದೆ.

೧೧೪. ಆ ಕನಕನಂದೀತೀರ್ಥದಲ್ಲಿ ಸ್ನಾನಮಾಡಿದ ಮಾನವರು ಶರೀರ ಸಹಿತವಾಗಿ ಸ್ವರ್ಗವನ್ನು ಹೊಂದುವರು. ಅಲ್ಲಿ ಆಚರಿಸಿದ ಶ್ರಾದ್ಧಯಜ್ಞವು ಅಕ್ಷಯವಾದುದೆಂದು ವರ್ಣಿಸಲ್ಪಟ್ಟಿರುತ್ತದೆ.

ಋಣೈಸ್ತ್ರಿಭಿಸ್ತತಃ ಸ್ನಾತ್ವಾ ನಿಷ್ಕ್ರೀಣಾತಿ ನರಸ್ತನುಮ್ ।
ಮಾನಸೇ ಸರಸಿ ಸ್ನಾತ್ವಾ ಶ್ರಾದ್ಧಂ ನಿರ್ವರ್ತಯೇತ್ತತಃ ॥ ೧೧೫ ॥

ತೀರೇ ತು ಸರಸಸ್ತಸ್ಯ ದೇವಸ್ಯಾಯತನಂ ಮಹತ್ ।
ಆಪುಹ್ಯ ತು ಜಪಂಸ್ತತ್ರ ಸಿದ್ಧೋ ಯಾತಿ ದಿವಂ ತತಃ ॥ ೧೧೬ ॥

ಉತ್ತರಂ ಮಾನಸಂ ಗತ್ವಾ ಸಿದ್ಧಿಂ ಪ್ರಾಪ್ನೋತ್ಯನುತ್ತಮಾಮ್ ।
ಸ್ನಾತ್ವಾ ತಸ್ಮಿನ್ ಸರಃಶ್ರೇಷ್ಠೇ ದೃಶ್ಯತೇ ಮಹದದ್ಭುತಮ್ ॥ ೧೧೭ ॥

ದಿವಶ್ಚ್ಯುತಾ ಮಹಾಭಾಗಾ ಹ್ಯಂತರಿಕ್ಷೇ ವಿರಾಜತೇ ।
ಗಂಗಾ ತ್ರಿಪಥಗಾ ದೇವೀ ವಿಷ್ಣುಪಾದಾಚ್ಚ್ಯುತಾ ಸತೀ ॥ ೧೧೮ ॥

ಆಕಾಶೇ ದೃಶ್ಯತೇ ತತ್ರ ತೋರಣಂ ಸೂರ್ಯಸನ್ನಿಭಮ್ ।
ಜಾಂಬೂನದಮಯಂ ಪುಣ್ಯಂ ಸ್ವರ್ಗದ್ವಾರಮಿವಾಯತಮ್ ॥ ೧೧೯ ॥

---

೧೧೫. ಮತ್ತು ಆ ತೀರ್ಥಸ್ನಾನಮಹಿಮೆಯಿಂದ ಮಾನವನು ಋಣತ್ರಯದಿಂದ ರಹಿತವಾದ ಶರೀರವನ್ನು ಧರಿಸುವನು. ಮಾನಸಸರೋವರದಲ್ಲಿ ಸ್ನಾನ ಮಾಡಿ ಶ್ರಾದ್ಧವನ್ನು ಯಥಾವಿಧಿಯಾಗಿ ನೆರವೇರಿಸಬೇಕು.

೧೧೬. ಆ ಸರೋವರದ ತೀರದಲ್ಲಿ ಮಹತ್ತಾದ ಒಂದು ದೇವಾಲಯವು ಇರುವುದು. ಅದನ್ನು ಹೊಂದಿ ಅಲ್ಲಿ ಜಪಮಾಡಿ ಸಿದ್ಧಿಯನ್ನು ಹೊಂದಿದ ನರನು ಸ್ವರ್ಗ ಸೌಖ್ಯವನ್ನು ಹೊಂದುತ್ತಾನೆ.

೧೧೭. ಮಾನಸಸರೋವರದ ಉತ್ತರ ದಿಗ್ಭಾಗದಲ್ಲಿ ಸ್ನಾನಮಾಡಿ ಅತ್ಯುತ್ತಮವಾದ ಸಿದ್ಧಿಯನ್ನು ಹೊಂದುವನು. ಆ ಶ್ರೇಷ್ಠ ಸರೋವರದಲ್ಲಿ ಸ್ನಾನಮಾಡಿದವನಿಗೆ ಮಹತ್ತಾದ ಅದ್ಭುತವು ಕಾಣಿಸುವುದು.

೧೧೮. ವಿಷ್ಣುಪಾದದಿಂದ ಚ್ಯುತಳಾಗಿ, ದ್ಯುಲೋಕದಿಂದ ಕೆಳಗೆ ಬೀಳುವ ಸ್ವರ್ಗ, ಮರ್ತ್ಯ, ಪಾತಾಳವೆಂಬ ತ್ರಿಲೋಕಗಳಲ್ಲಿ ಸಂಚರಿಸುವ, ಮಹಾಭಾಗ್ಯಳಾದ ಗಂಗಾದೇವಿಯು ಅಂತರಿಕ್ಷದಲ್ಲಿ ಪ್ರಕಾಶಿಸುವಳು.

೧೧೯. ಅಲ್ಲಿ ಸೂರ್ಯಬಿಂಬದಂತೆ ಥಳಥಳಿಸುವ, ಸುವರ್ಣಮಯವಾದ ಮತ್ತು ಪವಿತ್ರವಾದ ತೋರಣವು ದೀರ್ಘವಾದ ಸ್ವರ್ಗದ್ವಾರದಂತೆ ಆಕಾಶದಲ್ಲಿ ಕಾಣಿಸುತ್ತಿದೆ.

ತತಃ ಪ್ರವರ್ತತೇ ಭೂಯಃ ಸರ್ವಸಾಗರಮಂಡಿಕಾ।
ಪಾವನೀ ಸರ್ವಭೂತಾನಾಂ ಧರ್ಮಜ್ಞಾನಾಂ ವಿಶೇಷತಃ ॥ ೧೨೦ ॥

ಚಂದ್ರಭಾಗಾ ಚ ಸಿಂಧುಶ್ಚ ಶುಭೇ ಮಾನಸಸಂಭವೇ।
ಸಾಗರಂ ಪಶ್ಚಿಮಂ ಯಾತೋ ದಿವ್ಯಃ ಸಿಂಧುನದೋ ವರಃ ॥ ೧೨೧ ॥

ಪರ್ವತೋ ಹಿಮವಾನ್ನಾಮ ನಾನಾಧಾತುವಿಭೂಷಿತಃ।
ಆಯತೋ ವೈ ಸಹಸ್ರಾಣಿ ಯೋಜನಾನಾಂ ಬಹೂನಿ ತು ॥ ೧೨೨ ॥

ಸಿದ್ಧಚಾರಣಸಂಕೀರ್ಣಾ ದೇವರ್ಷಿಗಣಸೇವಿತಾ।
ತತ್ರ ಪುಷ್ಕರಿಣೀ ರಮ್ಯಾ ಸುಷುಮ್ನಾ ನಾಮ ನಾಮತಃ ॥ ೧೨೩ ॥

ದಶವರ್ಷಸಹಸ್ರಾಣಿ ತಸ್ಯಾಂ ಸ್ನಾತಸ್ತು ಜೀವತಿ।
ಶ್ರಾದ್ಧಂ ಭವತಿ ಚಾನಂತಂ ಸರ್ವೇ ಪುಣ್ಯಾಃ ಸಮಂತತಃ ॥ ೧೨೪ ॥

---

೧೨೦. ಆ ದ್ವಾರದಿಂದ ಸಮಸ್ತ ಸಾಗರಗಳಿಗೆ ಅಲಂಕಾರಪ್ರಾಯಳಾಗಿ ಸಮಸ್ತ ಪ್ರಾಣಿಗಳಿಗೂ ವಿಶೇಷವಾಗಿ ಧರ್ಮಜ್ಞಪುರುಷರಿಗೂ ಪಾವನಳಾದ ಭಾಗೀರಥಿಯು ಹರಿಯುವುದು.

೧೨೧. ಆ ಮಾನಸಸರೋವರದಿಂದ ಚಂದ್ರಭಾಗಾ ಮತ್ತು ಸಿಂಧು ಎಂಬ ಎರಡು ಮಂಗಳ ನದಿಗಳು ಹುಟ್ಟಿರುವುವು. ಅವುಗಳಲ್ಲಿ ಶ್ರೇಷ್ಠವಾದ, ಮತ್ತು ದಿವ್ಯವಾದ ಸಿಂಧುವು ಪಶ್ಚಿಮ ಸಾಗರವನ್ನು ಸೇರುವುದು.

೧೨೨. ವಿವಿಧವಾದ ಗೈರಿಕಾದಿಧಾತುಗಳಿಂದ ಅಲಂಕರಿಸಲ್ಪಟ್ಟ ಹಿಮವಾನ್ ಎಂಬ ಪರ್ವತವು ಅನೇಕ ಸಹಸ್ರ ಯೋಜನ ಪರಿಮಾಣದವರೆಗೆ ವಿಶಾಲವೂ ದೀರ್ಘವೂ ಆಗಿರುವುದು.

೧೨೩. ಆ ಪರ್ವತದಲ್ಲಿ ಸಿದ್ಧ ಚಾರಣರಿಂದ ವ್ಯಾಪ್ತವಾಗಿಯೂ ದೇವ ಋಷಿಗಳ ಗಣದಿಂದ ಸೇವಿಸಲ್ಪಟ್ಟದ್ದಾಗಿಯೂ ಇರುವ ರಮ್ಯವಾದ ಮತ್ತು ಸುಷುಮ್ನಾ ಎಂಬ ನಾಮಾಂಕಿತವಾದ ಪುಷ್ಕರಣಿಯು ಇರುವುದು.

೧೨೪. ಆ ಪುಷ್ಕರಣೀ ತೀರ್ಥದಲ್ಲಿ ಸ್ನಾನಮಾಡಿದ ಮಾನವನು ಹತು ಸಹಸ್ರವರ್ಷ ಜೀವಿಸುವನು. ಅದರ ಸನ್ನಿಧಿಯಲ್ಲಿ ಅರ್ಪಿಸಲ್ಪಟ್ಟ ಶ್ರಾದ್ಧವು ಅನಂತವೂ ಮಹಾ ಫಲೋದಯವುಳ್ಳದ್ದೂ ಆಗುವುದು.

ತಾರಯೇಚ್ಚ ಸದಾ ಶ್ರಾದ್ಧೇ ದಶ ಪೂರ್ವಾನ್ ದಶಾಪರಾನ್ ।
ಸರ್ವತ್ರ ಹಿಮವಾನ್ ಪುಣ್ಯೋ ಗಂಗಾ ಪುಣ್ಯಾ ಸಮಂತತಃ ॥ ೧೨೫ ॥

ಸಮುದ್ರಗಾಃ ಸಮುದ್ರಾಶ್ಚ ಸರ್ವೇ ಪುಣ್ಯಾಃ ಸಮಂತತಃ ।
ಏವಮಾದಿಷು ಚಾನ್ಯೇಷು ಶ್ರಾದ್ಧಂ ನಿರ್ವರ್ತಯೇದ್ಬುಧಃ ॥ ೧೨೬ ॥

ಪೂತೋ ಭವತಿ ನೈ ಸ್ನಾತ್ವಾ ಹುತ್ವಾ ದತ್ವಾ ತಥೈವ ಚ ।
ಶೈಲಸಾನುಷು ಶೃಂಗೇಷು ಕಂದರೇಷು ಗುಹಾಸು ಚ ॥ ೧೨೭ ॥

ಉಪಹ್ವರಸಿತಂಟೇಷು ತಥಾ ಪ್ರಸ್ರವಣೇಷು ಚ ।
ಪುಲಿನೇಷ್ವಾಪಗಾನಾಂ ಚ ತಥೈವ ಪ್ರಭವೇಷು ಚ ॥ ೧೨೮ ॥

ಮಹೋದಧೌ ಗವಾಂ ಗೋಷ್ಠೇ ಸಂಗಮೇಷು ವನೇಷು ಚ ।
ಸುಸಂಮೃಷ್ಟೋಪಲಿಪ್ತೇಷು ಹೃದ್ಯೇಷು ಸುರಭಿಷ್ವಥ ॥ ೧೨೯ ॥

---

೧೨೫. ಅಲ್ಲಿ ಆಚರಿಸಿದ ಶ್ರಾದ್ಧವು ಹಿಂದಿನ ಹತ್ತು ವಂಶೀಕರನ್ನೂ ಮುಂದಿನ ಹತ್ತುಮಂದಿ ವಂಶೀಕರನ್ನೂ ಸದಾಕಾಲದಲ್ಲಿಯೂ ತಾರಣಮಾಡುವುದು, ಹಿಮವತ್ಪರ್ವತವೂ ಮತ್ತು ಗಂಗಾನದಿಯೂ ಸರ್ವಕಾಲಗಳಲ್ಲಿಯೂ ಸಕಲಪ್ರದೇಶಗಳಲ್ಲಿಯೂ ಪವಿತ್ರವಾದುವುಗಳು.

೧೨೬. ಸಮುದ್ರವನ್ನು ಸೇರುವ ಎಲ್ಲ ನದಿಗಳೂ ಮತ್ತು ಸಕಲ ಸಮುದ್ರಗಳೂ ಸುತ್ತಲೂ ಅತಿ ಪವಿತ್ರವಾಗಿರುವುವು, ಇಂತಹ ಅನೇಕ ಕ್ಷೇತ್ರಗಳಲ್ಲಿ ಜ್ಞಾನಿಯಾದ ಯಜಮಾನನು ಶ್ರಾದ್ಧಕರ್ಮಗಳನ್ನು ನೆರವೇರಿಸಬೇಕು.

೧೨೭. ಪುಣ್ಯಕ್ಷೇತ್ರಗಳಲ್ಲಿ ಸ್ನಾನ, ಹೋಮ, ದಾನಗಳನ್ನು ಆಚರಿಸಿದವನು ಅವರ ಮಹಿಮೆಯಿಂದ ಪವಿತ್ರನಾಗುವನು, ಮತ್ತು ಪುಣ್ಯಪರ್ವತಗಳ ತಪ್ಪಲು, ಶಿಖರ, ಮತ್ತು ಗುಹೆಗಳು ಎಲ್ಲವೂ ಮಹಾ ಪವಿತ್ರವಾದುವುಗಳು.

೧೨೮. ದುರ್ಗಮವಾದ ಪರ್ವತಪ್ರದೇಶ, ತಪ್ಪಲು, ನದಿಗಳ ಝರಿ, ಮಳಲು ದಿಣ್ಣೆ ಮತ್ತು ನದಿಗಳ ಜನ್ಮಸ್ಥಳಗಳು ಅತಿಶಯವಾಗಿ ಪವಿತ್ರತೆಯನ್ನುಂಟುಮಾಡುವ ಸ್ಥಳಗಳಾಗಿವೆ.

೧೨೯. ಮಹೋದಧಿ, ಗೋವುಗಳನ್ನು ಬಂಧಿಸುವ ಗೋಶಾಲೆ, ನದಿಗಳ ಸಂಗಮಸ್ಥಳ, ಪುಣ್ಯವನ, ಮುಂತಾದ ಪವಿತ್ರದೇಶಗಳಲ್ಲಿ ಸಂಮಾರ್ಜನ ಉಪಲೇಪಗಳಿಂದ ಭೂಮಿಯನ್ನು ಸಂಸ್ಕಾರಮಾಡಿ ಸುವಾಸನೆ ಮತ್ತು ಸೌಂದರ್ಯಗಳಿರುವಂತೆ ಮಾಡಬೇಕು.

ಗೋಮಯೇನೋಪಲಿಪ್ತೇಷು ವಿವಿಕ್ತೇಷು ಗೃಹೇಷು ಚ ।
ಕುರ್ಯಾಚ್ಛ್ರಾದ್ಧಮೇತೇಷು ನಿತ್ಯಮೇವ ಯಥಾವಿಧಿ ॥ ೧೩೦ ॥

ಪ್ರಾಗ್ದಕ್ಷಿಣಾಂ ದಿಶಂ ಗತ್ವಾ ಸರ್ವಕಾಮಚಿಕೀರ್ಷಯಾ ।
ಏವಮೇತೇಷು ಸರ್ವೇಷು ಶ್ರಾದ್ಧಂ ಕುರ್ಯಾದತಂದ್ರಿತಃ ॥ ೧೩೧ ॥

ಏತೇಷ್ವೇವ ತು ಮೇಧಾವೀ ಬ್ರಾಹ್ಮೀಂ ಸಿದ್ಧಿಮವಾಪ್ನುಯಾತ್ ।
ತ್ರೈವರ್ಣವಿಹಿತೈಃ ಸ್ಥಾನೇ ಧರ್ಮೈರ್ವರ್ಣಾಶ್ರಮೋರತೈಃ ॥ ೧೩೨ ॥

ಕೋಪಸ್ಥಾನಂ ಚ ಸಂತ್ಯಾಗಾತ್ ಪ್ರಾಪ್ಯತೇ ಪಿತೃಪೂಜನಮ್ ।
ತೀರ್ಥಾನ್ಯನುಸರನ್ ವೀರಃ ಶ್ರದ್ದಧಾನಃ ಸಮಾಹಿತಃ ॥ ೧೩೩ ॥

ಕೃತಪಾಪೋಽಪಿ ಶುಧ್ಯೇತ ಕಿಂ ಪುನಃ ಶುಭಕರ್ಮಕೃತ್ ।
ತಿರ್ಯಗ್ಯೋನಿಂ ನ ಗಚ್ಛೇಚ್ಚ ಕುದೇಶೇ ಚ ನ ಜಾಯತೇ ॥ ೧೩೪ ॥

---

೧೩೦. ಇಂತಹ ಸ್ಥಳಗಳಲ್ಲಿ ಗೋಮಯದಿಂದ ಉಪಲೇಪಸಂಸ್ಕಾರಮಾಡಿ ವಿಜನವಾದ ವಾಸಭೂಮಿಯನ್ನು ಏರ್ಪಡಿಸಿ ಅವುಗಳಲ್ಲಿ ನಿತ್ಯವೂ ಯಥಾವಿಧಿಯಾಗಿ ಶ್ರಾದ್ಧಗಳನ್ನು ಆಚರಿಸಬೇಕು.

೧೩೧. ಪೂರ್ವದಕ್ಷಿಣ ದಿಗ್ಭಾಗ ಅಥವಾ ಆಗ್ನೇಯದಿಕ್ಕಿನ ಕಡೆಗೆ ಹೋಗಿ ಸಕಲ ಕಾಮ್ಯಗಳ ಪ್ರಾಪ್ತಿಗೋಸ್ಕರ ಈ ಎಲ್ಲ ಪವಿತ್ರ ಕ್ಷೇತ್ರಗಳಲ್ಲಿ ಆಲಸ್ಯವಿಲ್ಲದೆ ಶ್ರಾದ್ಧಕರ್ಮಗಳನ್ನು ಆಚರಿಸಬೇಕು.

೧೩೨. ಈ ಕ್ಷೇತ್ರಗಳಲ್ಲಿ ಕರ್ಮಾನುಷ್ಠಾನದ ಪ್ರಭಾವದಿಂದ ಮೇಧಾವಿಯಾದ ನರನು ಬ್ರಾಹ್ಮಸಿದ್ಧಿಯನ್ನು ಹೊಂದುವನು, ತ್ರಿವರ್ಣಗಳಿಗೂ, ಚತುರಾಶ್ರಮಿಗಳಿಗೂ ವಿಹಿತವಾದ ಧರ್ಮಾಚರಣೆಯಿಂದ ಅತಿಶಯಸಿದ್ಧಿಯನ್ನು ಹೊಂದುವನು.

೧೩೩. ಕೋಪಕಾರಣವನ್ನು ಬಿಟ್ಟು ಶುದ್ಧ ಮನಸ್ಸಿನಿಂದ ಪಿತೃ ಆರಾಧನೆಯನ್ನು ಮಾಡಬೇಕು. ವೀರನೂ, ಶ್ರದ್ಧಾಬುದ್ಧಿಯುಳ್ಳವನೂ, ಮತ್ತು ಸಮಾಧಾನಚಿತ್ತವುಳ್ಳವನೂ ಆದ ನರನು ಪವಿತ್ರನಾಗುವನು.

೧೩೪. ಅಂತಹ ನರನು ಪಾಪಿಷ್ಠನಾದರೂ ಶುದ್ಧನಾಗುವನು. ಕಲ್ಯಾಣವಾದ ಆಚಾರವುಳ್ಳವನ ವಿಷಯವನ್ನು ಹೇಳುವುದೇನು? ಅಂತಹ ನರನು ತಿರ್ಯಕ್ಪ್ರಾಣಿಯ ಜನ್ಮವನ್ನು ಎತ್ತುವುದಿಲ್ಲ. ಮತ್ತು ಕೆಟ್ಟ ಪ್ರದೇಶಗಳಲ್ಲಿ ಹುಟ್ಟುವುದಿಲ್ಲ.

ಸ್ವರ್ಗೀ ಭವತಿ ವಿಪ್ರೋ ವೈ ಮೋಕ್ಷೋಪಾಯಂ ಚ ವಿಂದತಿ ।
ಅಶ್ರದ್ಧಧಾನಃ ಪಾಪಾಯುರ್ನಾಸ್ತಿಕೋಽಚ್ಛಿನ್ನಸಂಶಯಃ ॥ ೧೩೫ ॥

ಹೇತುನಿಷ್ಠಶ್ಚ ಪಂಚೈತೇ ನ ತೀರ್ಥೇ ಫಲಭಾಗಿನಃ ।
ಗುರುತೀರ್ಥೇ ಪರಾ ಸಿದ್ಧಿಸ್ತೀರ್ಥಾನಾಂ ಪರಮಂ ಪದಮ್ ॥ ೧೩೬ ॥

ಧ್ಯಾನಂ ತೀರ್ಥಂ ಪರಂ ತಸ್ಮಾದ್ಬ್ರಹ್ಮತೀರ್ಥೇ ಸನಾತನಮ್ ।
ಉಪವಾಸಾತ್ಪರಂ ಧ್ಯಾನಮಿಂದ್ರಿಯಾಣಾಂ ನಿವರ್ತನಮ್ ॥ ೧೩೭ ॥

ಉಪವಾಸನಿಬದ್ಧೈರ್ಹಿ ಪ್ರಾಣೈರೇವ ಪುನಃ ಪುನಃ ।
ಪ್ರಾಣಾಪಾನೌ ವಶೇ ಕೃತ್ವಾ ವಶಗಾನೀಂದ್ರಿಯಾಣಿ ಚ ॥ ೧೩೮ ॥

ಬುದ್ಧಿಂ ಮನಸಿ ಸಂಯಮ್ಯ ಸರ್ವೇಷಾಂ ತು ನಿವರ್ತನಮ್ ।
ಪ್ರತ್ಯಾಹಾರಂ ಕೃತಂ ವಿದ್ಧಿ ಮೋಕ್ಷೋಪಾಯಮಸಂಶಯಮ್
॥ ೧೩೯ ॥

---

೧೩೫. ಮತ್ತು ಸ್ವರ್ಗಪ್ರಾಪ್ತಿಗೆ ಅರ್ಹನೂ ಆಗುವನು, ಹಾಗು ಮುಕ್ತಿಯ ಉಪಾಯವನ್ನು ಹೊಂದುತ್ತಾನೆ. ಇದರಲ್ಲಿ ಶ್ರದ್ಧಾಬುದ್ಧಿಯಿಲ್ಲದವನು ಪಾಪಿಯಾದ ಆಯುಷ್ಯವುಳ್ಳವನೂ, ನಾಸ್ತಿಕನೂ, ಮತ್ತು ಸರ್ವದಾ ಸಂಶಯ ಗ್ರಸ್ತನೂ ಆಗಿ ಅನರ್ಥಫಲವನ್ನು ಹೊಂದುವನು.

೧೩೬. ಶ್ರದ್ಧಾರಹಿತಾದಿಗಳಿಂದ ಕೂಡಿದವನೊಡನೆ ಹೇತುವಾದದಲ್ಲಿ ರಸಿಕನೂ ಸೇರಿ ಐದುಮಂದಿಯು ತೀರ್ಥಯಾತ್ರಾಫಲಕ್ಕೆ ಭಾಗಿಗಳಾವುದಿಲ್ಲ. ಎಲ್ಲ ತೀರ್ಥಗಳಿಗಿಂತಲೂ ಸದ್ಗುರು ಎಂಬ ತೀರ್ಥದಲ್ಲಿ ಅತಿಶಯ ಸಿದ್ಧಿಯು ಲಭಿಸುವುದು. ಅದು ತೀರ್ಥಗಳಿಗೆಲ್ಲ ಕಡೆಯ ಎಲ್ಲೆಯು.

೧೩೭. ಅದಕ್ಕಿಂತಲೂ ಧ್ಯಾನಮಾಡಬೇಕಾದ ಅನಾದಿಯಾದ ಬ್ರಹ್ಮತೀರ್ಥವು ಅತ್ಯುತ್ತಮವು. ಉಪವಾಸವ್ರತಕ್ಕಿಂತಲೂ ಇಂದ್ರಿಯಗಳ ನಿಗ್ರಹದಿಂದ ಕೂಡಿ ಮಾಡುವ ಧ್ಯಾನವು ಶ್ರೇಷ್ಠವಾದುದು.

೧೩೮. ಉಪವಾಸವ್ರತದಿಂದ ಪ್ರಾಣಾಪಾನ ವಾಯುಗಳ ಸಂಚಾರವು ನಿಲ್ಲುವಂತೆ ಬಂಧಿಸಬಹುದು. ಹಾಗೆ ಪ್ರಾಣ ಅಪಾನವಾಯುಗಳ ವಶೀಕರಣದಿಂದ ಇಂದ್ರಿಯಗಳೆಲ್ಲವೂ ನಿಗ್ರಹಿಸಲ್ಪಟ್ಟು ಅಧೀನವಾಗುವುವು.

೧೩೯. ಸಕಲ ವೈಷಯಿಕ ಜ್ಞಾನವೃತ್ತಿಗಳನ್ನು ಮನಸ್ಸಿನಲ್ಲಿ ಅಡಗಿಸಿ ಎಲ್ಲ ಇಂದ್ರಿಯಗಳನ್ನು ಹಿಂದಿರುಗಿಸಬೇಕು. ಇದನ್ನು ಮುಕ್ತಿಯೆಂಬ ಪುರುಷಾರ್ಥಕ್ಕೆ ಸಾಧನವಾದ ಪ್ರತ್ಯಾಹಾರಯೋಗವೆಂದು ನಿಸ್ಸಂಶಯವಾಗಿ ತಿಳಿ.

ಇಂದ್ರಿಯಾಣಾಂ ಮನೋ ಘೋರಂ ಬುದ್ಧ್ಯಾದೀನಾಂ ನಿವರ್ತನಮ್ ।
ಅನಾಹಾರೋಽಕ್ಷಯಂ ಯಾತಿ ವಿದ್ಯಾದನಶನಂ ತಪಃ ॥ ೧೪೦ ॥

ನಿಗ್ರಹೇ ಬುದ್ಧಿಮನಸೋರನ್ಯಬುದ್ಧಿರ್ನ ಜಾಯತೇ ।
ಕ್ಷೀಣೇಷು ಸರ್ವದೋಷೇಷು ಕ್ಷೀಣೇಷ್ವೇವೇಂದ್ರಿಯೇಷು ಚ ॥ ೧೪೧ ॥

ಪರಿನಿರ್ವಾತಿ ಶುದ್ಧಾತ್ಮಾ ಯಥಾ ವಹ್ನಿರನಿಂಧನಃ ।
ಕಾರಣೇಭ್ಯೋ ಗುಣೇಭ್ಯಶ್ಚ ವ್ಯಕ್ತಾವ್ಯಕ್ತಾಚ್ಚ ಕೃತ್ಸ್ನಶಃ ॥ ೧೪೨ ॥

ನಿಯೋಜಯತಿ ಕ್ಷೇತ್ರಜ್ಞಂ ತೇಭ್ಯೋ ಯೋಗೇನ ಯೋಗವಿತ್ ।
ತಸ್ಯ ನಾಸ್ತಿ ಗತಿಃ ಸ್ಥಾನಂ ವ್ಯಕ್ತಾವ್ಯಕ್ತೇ ಚ ಸರ್ವಶಃ ॥ ೧೪೩ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ತ್ರಯೋದಶೋಽಧ್ಯಾಯಃ

---

೧೪೦. ಇಂದ್ರಿಯ-ಬುದ್ಧ್ಯಾದಿಗಳನ್ನು ಘೋರವಾದ ಮನಸ್ಸು ವಿವೇಕದಿಂದ ಹಿಂತಿರುಗಿಸುವುದು, ಉಪವಾಸವ್ರತವು ಅಕ್ಷಯವಾದ ಫಲವನ್ನು ಕೊಡುವುದು. ಅನಶನ ವ್ರತವನ್ನು ಉತ್ತಮವಾದ ತಪಸ್ಸೆಂದು ಪರಿಗಣಿಸು.

೧೪೧. ಬುದ್ಧಿ–ಮನಸ್ಸುಗಳನ್ನು ನಿಗ್ರಹಿಸಲಾಗಿ ಬೇರೆ ಯಾವುದೊಂದು ವಸ್ತುವಿನಲ್ಲಿಯೂ ಜ್ಞಾನವು ಹುಟ್ಟುವುದಿಲ್ಲ. ಹೀಗೆ ಸಮಸ್ತ ದೋಷಗಳು ಲಯಹೊಂದುವುವು. ಮತ್ತು ಇಂದ್ರಿಯಗಳು ತಮ್ಮ ವ್ಯಾಪಾರಗಳನ್ನು ಬಿಟ್ಟು ಲಯಹೊಂದುವುವು.

೧೪೨. ಆಗ ಕಾಷ್ಠಗಳಿಲ್ಲದ ಅಗ್ನಿಯಂತೆ ಶುದ್ಧವಾದ ಆತ್ಮವು ಸ್ವಸ್ವರೂಪದಲ್ಲಿ ಲಯವನ್ನು ಹೊಂದುವುದು. ಮತ್ತು ಕಾರಣಗಳಿಂದಲೂ, ತ್ರೈಗುಣ್ಯದಿಂದಲೂ, ವ್ಯಕ್ತ–ಅವ್ಯಕ್ತವಾದ ನಾಮರೂಪಗಳಿಂದಲೂ ಪೃಥಕ್ಕಾದ ತತ್ತ್ವದ ಜ್ಞಾನವುಂಟಾಗುವುದು.

೧೪೩. ಮತ್ತು ಇಂತಹ ಯೋಗಗತಿಯುಳ್ಳ ಮಾನವನು ಜೀವಾತ್ಮನನ್ನು ವ್ಯಕ್ತ-ಅವ್ಯಕ್ತಾದಿ ಉಪಾಧಿಬಂಧನವನ್ನು ತ್ಯಜಿಸಿ ಸ್ವಸ್ವರೂಪದಲ್ಲಿ ಐಕ್ಯಹೊಂದಿಸುವನು. ಅಂತಹ ಮುಕ್ತಪುರುಷನಿಗೆ ಗಂತವ್ಯವಾದ ಸ್ಥಾನ, ವ್ಯಕ್ತ, ಅವ್ಯಕ್ತ, ಸತ್, ಅಸತ್ ಮತ್ತು ಸದಸತ್ ಎಂಬ ಯಾವ ಭಿನ್ನವಸ್ತುವೂ ಇರುವುದಿಲ್ಲ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹದಿಮೂರನೆಯ
ಅಧ್ಯಾಯವು ಮುಗಿದುದು.

---

## ಚತುರ್ದಶೋಽಧ್ಯಾಯಃ

ಬೃಹಸ್ಪತಿರುವಾಚ :—

ಅತಃ ಪರಂ ಪ್ರವಕ್ಷ್ಯಾಮಿ ಸರ್ವದಾನಫಲಾನಿ ಚ ।
ಶ್ರಾದ್ಧಕರ್ಮಣಿ ಮೇಧ್ಯಾನಿ ವರ್ಜನೀಯಾನಿ ಯಾನಿ ಚ ॥ ೧ ॥

ಹಿಮಪ್ರಪತನೇ ಕುರ್ಯಾದಾಹರೇದ್ವಾ ಹಿಮಂ ತತಃ ।
ಅಗ್ನಿಹೋತ್ರಮುಪಾಯುಷ್ಯಂ ಪವಿತ್ರಂ ಪರಮಂ ಹಿತಮ್ ॥ ೨ ॥

ನಕ್ತಂ ತು ವರ್ಜಯೇಚ್ಛ್ರಾದ್ಧಂ ರಾಹೋರನ್ಯತ್ರ ದರ್ಶನಾತ್ ।
ಸರ್ವಸ್ವೇನಾಪಿ ಕರ್ತವ್ಯಂ ಕ್ಷಿಪ್ರಂ ವೈ ರಾಹುದರ್ಶನೇ ॥ ೩ ॥

ಉಪರಾಗೇ ನ ಕುರ್ಯಾದ್ಯಃ ಪಂಕೇ ಗೌರಿವ ಸೀದತಿ ।
ಕುರ್ವಾಣಸ್ತುತ್ತರೇತ್ಪಾಪಂ ಸತೀ ನೌರಿವ ಸಾಗರೇ ॥ ೪ ॥

---

೧. ಬೃಹಸ್ಪತಿಯು ಮುಂದೆ ಈ ರೀತಿಯಾಗಿ ಹೇಳಿದನು :—ಇನ್ನು ಮುಂದೆ ಆಯಾಯ ಸರ್ವವಸ್ತುಗಳ ದಾನದಿಂದ ಲಭಿಸುವ ಫಲಗಳನ್ನು ವರ್ಣಿಸುತ್ತೇನೆ. ಮತ್ತು ಶ್ರಾದ್ಧಕರ್ಮಗಳಲ್ಲಿ ಪವಿತ್ರವಾದುವುಗಳನ್ನೂ ತಾಜ್ಯವಾದುವುಗಳನ್ನೂ ಉಪದೇಶಿಸುತ್ತೇನೆ.

೨. ಹಿಮವು ಸುರಿಯುವ ಭೂಮಿಯಲ್ಲಿ ಶ್ರಾದ್ಧಾಂಗಗಳನ್ನು ಆಚರಿಸಬೇಕು. ಅಥವಾ ಹಿಮವನ್ನು ಆ ಸ್ಥಳದಿಂದ ತಂದಿರಿಸಬೇಕು. ಅಗ್ನಿಹೋತ್ರ ಹೋಮ ಭೂಮಿಯು ಆಯುಷ್ಯ ವೃದ್ಧಿಪ್ರದವೂ ಮತ್ತು ಅತಿಪವಿತ್ರವೂ ಆಗಿರುವುದು.

೩. ರಾಹು ಗ್ರಹಣ ಕಾಲವನ್ನು ಹೊರತಾಗಿ ಯಾವ ಕಾಲದಲ್ಲಿಯೂ ರಾತ್ರಿ ವೇಳೆಯಲ್ಲಿ ಶ್ರಾದ್ಧಾನುಷ್ಠಾನವನ್ನು ಬಿಡಬೇಕು. ರಾಹುಗ್ರಹಣ ಕಾಲದಲ್ಲಿ ಮಾತ್ರ ಶೀಘ್ರವಾಗಿ ಸರ್ವಸ್ವವನ್ನು ವ್ಯಯಮಾಡಿಯಾದರೂ ಶ್ರಾದ್ಧವನ್ನು ಆಚರಿಸಲೇಬೇಕು.

೪. ಗ್ರಹಣ ಸಮಯದಲ್ಲಿ ಶ್ರಾದ್ಧಯಜ್ಞವನ್ನು ಆಚರಿಸದಿರುವ ಮಾನವನು ಕೆಸರಿನಲ್ಲಿ ಹೂತುಹೋದ ಗೋವಿನಂತೆ ಕ್ಷಯಿಸುತ್ತಾನೆ. ಶ್ರಾದ್ಧಾಚರಣೆಯುಳ್ಳವನು ಉತ್ತಮವಾದ ದೋಣಿಯಿಂದ ಸಮುದ್ರವನ್ನು ತರಣಮಾಡಿದಂತೆ ಸಕಲ ಪಾಪಗಳನ್ನು ತರಣಮಾಡುತ್ತಾನೆ.

ವೈಶ್ವದೇವಂ ಚ ಸೌಮ್ಯಂ ಚ ಖಡ್ಗಮಾಂಸಂ ಪರಂ ಹವಿಃ ।
ವಿಷಾಣವರ್ಜಂ ಖಡ್ಗಸ್ಯ ಮಾತ್ಸರ್ಯಾನ್ನಾಶಯಾಮಹೇ ॥ ೫ ॥

ತ್ವಷ್ಟ್ರಾ ವೈ ಯಜಮಾನೇನ ದೇವೇಶೇನ ಮಹಾತ್ಮನಾ ।
ಪಿಬನ್ ಶಚೀಪತಿಃ ಸೋಮಂ ಪೃಥಿವ್ಯಾಂ ಮಧ್ಯಗಃ ಪುರಾ ॥ ೬ ॥

ಶ್ಯಾಮಾಕಾಸ್ತತ್ರ ಉತ್ಪನ್ನಾಃ ಪಿತ್ರರ್ಥಮಪರಾಜಿತಾಃ ।
ವಿಪ್ರುಷಸ್ತಸ್ಯ ನಾಸಾಭ್ಯಾಮಾಸಕ್ತಾಭ್ಯಾಂ ತಥೇಕ್ಷವಃ ॥ ೭ ॥

ಶ್ಲೇಷ್ಮಲಾಃ ಶೀತಲಾಃ ಸ್ನಿಗ್ಧಾ ಮಧುರಾಶ್ಚ ತಥೇಕ್ಷವಃ ।
ಶ್ಯಾಮಾಕೈರಿಕ್ಷುಭಿಶ್ಚೈವ ಪಿತೄಣಾಂ ಸರ್ವಕಾಮಿಕಮ್ ॥ ೮ ॥

ಕುರ್ಯಾದಾಗ್ರಯಣಂ ಯಸ್ತು ಸ ಶೀಘ್ರಂ ಸಿದ್ಧಿಮಾಪ್ನುಯಾತ್ ।
ಶ್ಯಾಮಾಕಾಸ್ತು ದ್ವಿನಾಮಾನೋ ವಿಹಿತಾ ಯಜನೇ ಸ್ಮೃತೇ ॥ ೯ ॥

---

೫. ವಿಶ್ವೇದೇವ ಮತ್ತು ಸೋಮದೇವತೆಗಳಿಗೆ ಅರ್ಪಿಸಿರುವ ಹವಿಸ್ಸು, ಹಾಗು ಖಡ್ಗಮೃಗದ ಮಾಂಸವು ಪಿತೃಗಳಿಗೆ ಉತ್ತಮವಾದ ಹವಿಸ್ಸಾಗಿರುವುದು. ಕೊಂಬುಗಳಿಂದ ರಹಿತವಾದ ಖಡ್ಗಮೃಗದ ಮಾಂಸವನ್ನು ಅರ್ಪಿಸದಿರುವುದು ಮಾತ್ಸರ್ಯ ದೋಷವನ್ನು ಸೂಚಿಸುವುದು.

೬. ಪೂರ್ವಕಾಲದಲ್ಲಿ ದೇವಾಧಿಪತಿಯೂ ಮಹಾತ್ಮನೂ ಆದ ತ್ವಷ್ಟೃಬ್ರಹ್ಮನು ಯಾಗದೀಕ್ಷಿತನಾಗಿರಲು ಪೃಥಿವಿಯಲ್ಲಿ ಶಚೀದೇವಿಯ ಪತಿಯಾದ ಇಂದ್ರನು ದೇವಗಣ ಮಧ್ಯದಲ್ಲಿ ಸೋಮವನ್ನು ಪಾನಮಾಡಿದನು.

೭. ಆಗ ಆ ಭೂಮಿಯಲ್ಲಿ ಪಿತೃದೇವತೆಗಳಿಗೋಸ್ಕರ ಪರಾಜಯವನ್ನು ಹೊಂದಿರುವ ಶ್ಯಾಮಾಕವೆಂಬ ಧಾನ್ಯಗಳು ಜನಿಸಿದುವು. ಇಂದ್ರನ ಮೂಗಿನಿಂದ ಕೆಳಕ್ಕೆ ಬಿದ್ದಿರುವ ಸೋಮರಸದ ಬಿಂದುಗಳಿಂದ ಆ ಶ್ಯಾಮಾಕ ಧಾನ್ಯಗಳೂ ಮತ್ತು ಇಕ್ಷುದಂಡಗಳೂ ಜನಿಸಿದುವು.

೮. ನೊರೆ, ಶೈತ್ಯ, ಸ್ನೇಹ, ಮಾಧುರ್ಯ ಗುಣಗಳಿಂದ ಕೂಡಿದ ಇಕ್ಷು (ಕಬ್ಬು) ದಂಡಗಳು ಜನಿಸಿದುವು. ಅಂತಹ ಶ್ಯಾಮಾಕ ಮತ್ತು ಇಕ್ಷು ದಂಡಗಳಿಂದ ಸಿದ್ಧವಾದ ಹವಿಸ್ಸನ್ನು ಪಿತೃಗಳಿಗೆ ಅರ್ಪಿಸುವುದು ಸರ್ವಕಾಮಾವಾಪ್ತಿಗೆ ಸಾಧನವಾಗುವುದು.

೯. ಶ್ಯಾಮಾಕಾದಿ ಧಾನ್ಯಗಳಿಂದ ಆಗ್ರಯಣಕರ್ಮವನ್ನು ಅನುಷ್ಠಾನಮಾಡಿದ ಮಾನವನು ಶೀಘ್ರವಾಗಿ ಸಿದ್ಧಿಯನ್ನು ಹೊಂದುವನು. ಯಜ್ಞಕರ್ಮದಲ್ಲಿ ಶ್ಯಾಮಾಕ ಧಾನ್ಯಗಳು ವಿಹಿತವಾಗಿವೆ.

ಯಸ್ಮಾತ್ತೇ ದೇವಸೃಷ್ಟಾಸ್ತು ತಸ್ಮಾತ್ತೇ ಚಾಕ್ಷಯಾಃ ಸ್ಮೃತಾಃ ।
ಪ್ರಸಾತಿಕಾಃ ಪ್ರಿಯಂಗುಶ್ಚ ಮುದ್ಗಾಶ್ಚ ಹರಿತಾಸ್ತಥಾ ॥ ೧೦ ॥

ಏತಾನ್ಯಪಿ ಸನಾಮಾನಿ ಶ್ಯಾಮಾಕಾನಾಂ ಗುಣೈಸ್ತು ತೈಃ ।
ಕೃಷ್ಣಮಾಷಾಸ್ತಿಲಾಶ್ಚೈವ ಶ್ರೇಷ್ಠಾಸ್ತು ಯವಶಾಲಯಃ ॥ ೧೧ ॥

ಮಹಾಯವಾಶ್ಚ ನಿಷ್ಪಾವಾಸ್ತಥೈವ ಚ ಮಧೂಲಿಕಾಃ ।
ಕೃಷ್ಣಾಶ್ಚೈವಾನ್ನಲೋಹಾಶ್ಚ ಗರ್ಹ್ಯಾಃ ಸ್ಯುಃ ಶ್ರಾದ್ಧಕರ್ಮಣಿ॥ ೧೨ ॥

ರಾಜಮಾಷಾಸ್ತಥಾನ್ಯೇ ವೈ ವರ್ಜನೀಯಾಃ ಪ್ರಯತ್ನತಃ ।
ಮಸೂರಾಶ್ಚೈವ ಪುಣ್ಯಾಶ್ಚ ಕುಸುಂಭಂ ಶ್ರೀನಿಕೇತನಮ್ ॥ ೧೩ ॥

ವರ್ಷಾಸ್ತ್ವತಿಯವಾ ನಿತ್ಯಂ ತಥಾ ವೃಷಕವಾಸಕೌ ।
ಬಿಲ್ವಾಮಲಕಮೃದ್ವೀಕಾಪನಸಾಮ್ರಾತದಾಡಿಮಾಃ ॥ ೧೪ ॥

---

೧೦. ಆ ಧಾನ್ಯಗಳು ದೇವತೆಗಳಿಂದ ಸೃಷ್ಟಿಸಲ್ಪಟ್ಟಿರುವುದರಿಂದ ಅವು ಅಕ್ಷಯವೆಂದು ಸ್ಮರಿಸಲ್ಪಟ್ಟಿವೆ. ಪ್ರಸಾತಿಕಾ, ಪ್ರಿಯಂಗು ಮುದ್ಗ, ಹರಿತ ಎಂಬ ಧಾನ್ಯಗಳು ಶ್ಯಾಮಾಕದಂತೆ ವಿಹಿತವಾದುವುಗಳು.

೧೧. ಪ್ರಸಾತಿಕಾ ಮುಂತಾದ ಧಾನ್ಯಗಳು ಗುಣಗಳಿಂದ ಶ್ಯಾಮಾಕಗಳಿಗೆ ಸಮಾನವಾಗಿವೆ. ಕೃಷ್ಣಮಾಷ, ತಿಲ, ಯವ ಮತ್ತು ಶಾಲಿ ಎಂಬ ಧಾನ್ಯವಿಶೇಷಗಳು ಅತಿಶ್ರೇಷ್ಠವಾಗಿವೆ.

೧೨. ಮಹಾಯವ, ನಿಷ್ಪಾವ, ಮಧೂಲಿಕಾ, ಕೃಷ್ಣ ಮತ್ತು ಅನ್ನಲೋಹ ಎಂಬ ಧಾನ್ಯ ವಿಶೇಷಗಳು ಶ್ರಾದ್ಧಯಜ್ಞಗಳಲ್ಲಿ ನಿಷಿದ್ಧವಾಗಿವೆ.

೧೩. ಹಾಗೆ ರಾಜಮಾಷ ಎಂಬ ಧಾನ್ಯವು ನಿಷಿದ್ಧವಾದುದರಿಂದ ಪ್ರಯತ್ನಪೂರ್ವಕವಾಗಿ ವರ್ಜ್ಯವಾದುದು. ಮತ್ತು ಮಸೂರ ಎಂಬ ಧಾನ್ಯವು ಪವಿತ್ರವಾದುದು. ಹಾಗೂ ಕುಸುಂಭ ಪುಷ್ಪವು ಲಕ್ಷ್ಮೀಪ್ರದವಾಗಿದೆ.

೧೪. ವರ್ಷಾಕಾಲದಲ್ಲಿ ವಿಶೇಷವಾಗಿ ಬೆಳೆಯುವ ಅತಿಯವ, ವೃಷಕ, ವಾಸಕ, ಬಿಲ್ವ, ಆಮಲಕ, ಮೃದ್ವೀಕಾ, ಪನಸ, ಆಮ್ರಾತ, ದಾಡಿಮ ಮುಂತಾದುವು ಶ್ರಾದ್ಧ ಯಜ್ಞದಲ್ಲಿ ಅತ್ಯಂತ ಪವಿತ್ರವಾದುವುಗಳು.

ತವಶೋಲಂಯತಾಕ್ಷೌದ್ರಖರ್ಜೂರಾಮ್ರಫಲಾನಿ ಚ ।
ಕಶೇರುಕೋವಿದಾರ್ಯಶ್ಚ ತಾಲಕಂದಂ ತಥಾ ಬಿಸಮ್ ॥ ೧೫ ॥

ತಮಾಲಂ ಶತಕಂದಂ ಚ ಮಧ್ವಸೂಚಾಂತಕಾಂದಿಕೀ ।
ಕಾಲೇಯಂ ಕಾಲಶಾಕಂ ಚ ಭೂರಿಪೂರ್ಣಾ ಸುವರ್ಚಲಾ ॥ ೧೬ ॥

ಮಾಂಸಾಕ್ಷಂ ದುವಿಶಾಕಂ ಚ ಬುಬುಚೇತಾಂಕುರಸ್ತಥಾ ।
ಕಫಾಲಕಂ ಕಣಾ ದ್ರಾಕ್ಷಾ ಲಕುಚಂ ಚೋಚಮೇವ ಚ ॥ ೧೭ ॥

ಅಲಾಬುಂ ಗ್ರೀವಕಂ ವೀರಂ ಕರ್ಕಂಧೂಮಧುಸಾಹ್ವಯಮ್ ।
ವೈಕಂಕತಂ ನಾಲಿಕೇರಶೃಂಗಾಜಪಕರೂಷಕಮ್ ॥ ೧೮ ॥

ಪಿಪ್ಪಲೀ ಮರಿಚಂ ಚೈವ ಪಟೋಲಂ ಬೃಹತೀಫಲಮ್ ।
ಸುಗಂಧಿಮಾಂಸಪೀವಂತಿ ಕಷಾಯಾಃ ಸರ್ವ ಏವ ಚ ॥ ೧೯ ॥

---

೧೫. ತವಶ, ಲಂಯತ, ಕ್ಷೌದ್ರ, ಖರ್ಜೂರ, ಆಮ್ರಫಲ, ಕಶೇರು,ಕೋವಿದಾರಿ, ತಾಲಕಂದ ಮತ್ತು ಬಿಸ—ಎಂಬ ಫಲ ಪುಷ್ಪಾದಿಗಳು ಶ್ರಾದ್ಧಯಜ್ಞದಲ್ಲಿ ಉಪಯೋಗಕ್ಕೆ ಅರ್ಹವಾಗಿವೆ.

೧೬. ತಮಾಲ, ಶತಕಂದ, ಮಧ್ವಸೂ, ಅಂತಕಾಂದಿಕೆ, ಕಾಲೇಯ, ಕಾಲಶಾಕ, ಭೂರಿಪೂರ್ಣಾ, ಸುವರ್ಚಲಾ ಎಂಬ ಶಾಕದ್ರವ್ಯಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಹುದು.

೧೭. ಮಾಂಸಾಕ್ಷ, ದುವಿಶಾಕ, ಬುಬುಚೇತಾಂಕುರ, ಕಫಾಲಕ, ಕಣಾ, ದ್ರಾಕ್ಷಾ, ಲಕುಚ, ಚೋಚ ಮುಂತಾದುವುಗಳು ಉತ್ತಮವಾದ ಶ್ರಾದ್ಧಯಜ್ಞಾರ್ಹವಾದ ವಸ್ತುಗಳಾಗಿವೆ.

೧೮. ಅಲಾಬು, ಗ್ರೀವಕ, ವೀರ, ಕರ್ಕಂಧು, ಮಧುಸಾಹ್ವಯ, ವೈಕಂಕತ, ನಾಳಿಕೇರ, ಶೃಂಗಾಜಪಕ, ದೂಷಕ ಎಂಬ ವಸ್ತುಗಳು ಶ್ರಾದ್ಧಕರ್ಮದ ಉಪಯೋಗಕ್ಕೆ ಅರ್ಹಗಳಾಗಿವೆ.

೧೯. ಪಿಪ್ಪಲೀ, ಮರಿಚ, ಪಟೋಲ, ಬೃಹತೀಫಲ, ಸುಗಂಧಮಾಂಸ ಪೀವ ಮತ್ತು ಸಮಸ್ತ ಕಷಾಯ ದ್ರವ್ಯಗಳು ಶ್ರಾದ್ಧಯಜ್ಞಕ್ಕೆ ಅರ್ಹಗಳೆಂದು ಸ್ಮರಿಸಲ್ಪಟ್ಟಿವೆ.

ಏವಮಾದೀನಿ ಚಾನ್ಯಾನಿ ವರಾಣಿ ಮಧುರಾಣಿ ಚ ।
ನಾಗರಂ ಚಾತ್ರ ವೈ ದೇಯಂ ದೀರ್ಘಮೂಲಕ ಮೇವ ಚ ॥ ೨೦ ॥

ವಂಶಃ ಕರೀರಃ ಸುರಸಃ ಸರ್ಜಕಂ ಭೂಸ್ತೃಣಾನಿ ಚ ।
ವಿರ್ಜನೀಯಾನಿ ವಕ್ಷ್ಯಾಮಿ ಶ್ರಾದ್ಧಕರ್ಮಣಿ ನಿತ್ಯಶಃ ॥ ೨೧ ॥

ಲಶುನಂ ಗೃಂಜನಂ ಚೈವ ಪಲಾಂಡುಂ ಪಿಂಡಮೂಲಕಮ್ ।
ಕರಂಭಾದ್ಯಾನಿ ಚಾನ್ಯಾನಿ ಹೀನಾನಿ ರಸಗಂಧತಃ ॥ ೨೨ ॥

ಶ್ರಾದ್ಧಕರ್ಮಣಿ ವರ್ಜ್ಯಾನಿ ಕಾರಣಂ ಚಾತ್ರ ವಕ್ಷ್ಯತೇ ।
ಪುರಾ ದೇವಾಸುರೇ ಯುದ್ಧೇ ನಿರ್ಜಿತಸ್ಯ ಬಲೇಃ ಸುರೈಃ ॥ ೨೩ ॥

ಶರೈಸ್ತು ವಿಕ್ಷತಾದಂಗಾತ್ ಪತಿತಾ ರಕ್ತಬಿಂದವಃ ।
ತತ ಏತಾನಿ ಜಾತಾನಿ ಲಶುನಾದೀನಿ ಸರ್ವಶಃ ॥ ೨೪ ॥

---

೨೦. ಹಿಂದೆ ಹೇಳಿರುವ ವಸ್ತುಗಳಿಗೆ ತುಲ್ಯವಾಗಿಯೂ, ಉತ್ತಮವಾಗಿಯೂ ಮತ್ತು ಮಧುರವಾಗಿಯೂ ಇರುವ ವಸ್ತುಗಳನ್ನು ಉಪಯೋಗಿಸಬೇಕು. ಹಾಗು ಶುಂಠಿಯನ್ನೂ ದೀರ್ಘಮೂಲವನ್ನೂ ಅವಶ್ಯವಾಗಿ ಉಪಯೋಗಿಸಬೇಕು.

೨೧. ವಂಶ, ಕರೀರ, ಸುರಸ, ಸರ್ಜಕ ಮತ್ತು ಭೂಸ್ತೃಣ ಎಂಬುವು ಉಪಯೋಗಾರ್ಹವಾದ ಪದಾರ್ಥಗಳು. ಇನ್ನು ಮುಂದೆ ಶ್ರಾದ್ಧಕರ್ಮದಲ್ಲಿ ಯಾವಾಗಲೂ ನಿಷಿದ್ಧವಾದ ವಸ್ತುಗಳನ್ನು ಹೇಳುತ್ತೇನೆ.

೨೨. ಲಶುನ, ಗೃಂಜನ, ಪಲಾಂಡು ಮತ್ತು ಪಿಂಡಮೂಲ ಕರಂಭ ಮತ್ತು ಇವುಗಳಂತೆ ಹೀನವಾದ ರಸ-ಗಂಧಗಳಿಂದ ಕೂಡಿದ ಇತರ ವಸ್ತುಗಳನ್ನು ಉಪಯೋಗಿಸಕೂಡದು.

೨೩. ಹಿಂದೆ ಹೇಳಿದ ಲಶುನಾದಿಗಳನ್ನು ಶ್ರಾದ್ಧದಲ್ಲಿ ವರ್ಜಿಸಬೇಕು. ಇದಕ್ಕೆ ಕಾರಣವನ್ನು ಹೇಳುವೆನು. ಪೂರ್ವಕಾಲದಲ್ಲಿ ದೇವ-ದಾನವರಿಗೆ ದೊಡ್ಡ ಸಂಗ್ರಾಮವು ನಡೆದು ಅದರಲ್ಲಿ ಬಲಿರಾಜನು ದೇವತೆಗಳಿಂದ ಅಪಜಯವನ್ನು ಹೊಂದಿದನು.

೨೪. ಆಗ ಬಾಣಗಳ ಏಟಿನಿಂದ ಗಾಯವಾದ ಬಲಿಯ ದೇಹದಿಂದ ರಕ್ತದ ಬಿಂದುಗಳು ಕೆಳಕ್ಕೆ ಬಿದ್ದುವು. ಆ ರಕ್ತದಿಂದ ಲಶುನಾದಿಗಳು ಎಲ್ಲೆಲ್ಲಿಯೂ ಹುಟ್ಟಿರುತ್ತವೆ.

ತಥೈವ ರಕ್ತನಿರ್ಯಾಸಾ ಲವಣಾನ್ಯೌಶರಾಣಿ ಚ ।
ಶ್ರಾದ್ಧಕರ್ಮಣಿ ವರ್ಜ್ಯಾನಿ ಯಾಶ್ಚ ನಾರ್ಯೋ ರಜಸ್ವಲಾಃ ॥ ೨೫ ॥

ದುರ್ಗಂಧಂ ಫೇನಿಲಂ ಚೈವ ತಥಾ ವೈ ಪಲ್ವಲೋದಕಮ್ ।
ಲಭೇದ್ಯತ್ರ ನ ಗೌಸ್ತೃಪ್ತಿಂ ನಕ್ತಂ ಯಚ್ಚೈವ ಗೃಹ್ಯತೇ ॥ ೨೬ ॥

ಆವಿಕಂ ಮಾರ್ಗಮೌಷ್ಟ್ರಂ ಚ ಸರ್ವಮೇಕಶಫಂ ಚ ಯತ್ ।
ಮಾಹಿಷಂ ಚಾಮರಂ ಚೈವ ಪಯೋ ವರ್ಜ್ಯಂ ವಿಜಾನತಾ ॥ ೨೭ ॥

ಅತಃ ಪರಂ ಪ್ರವಕ್ಷ್ಯಾಮಿ ವರ್ಜ್ಯಾನ್ ದೇಶಾನ್ ಪ್ರಯತ್ನತಃ ।
ನ ದ್ರಷ್ಟವ್ಯಂ ಚ ಯೈಃ ಶ್ರಾದ್ಧಂ ಶೌಚಾಶೌಚಂ ಚ ಕೃತ್ಸ್ನಶಃ ॥ ೨೮ ॥

ವನ್ಯಮೂಲಫಲೈರ್ಭಕ್ಷ್ಯೈಃ ಶ್ರಾದ್ಧಂ ಕುರ್ಯಾತ್ತು ಶ್ರದ್ಧಯಾ ।
ರಾಜನಿಷ್ಠಾಮವಾಪ್ನೋತಿ ಸ್ವರ್ಗಮಕ್ಷಯಮೇವ ಚ ॥ ೨೯ ॥

---

೨೫. ಹಾಗೆಯೇ ಆ ರಕ್ತದ ಪ್ರವಾಹದ ಪರಿಣಾಮವಾಗಿ ಮರುದೇಶದ ಸಂಬಂಧವಾದ ಲವಣವು ಉಂಟಾಗಿರುವುದು. ಆದ್ದರಿಂದ ಇವುಗಳು ಶ್ರಾದ್ಧದಲ್ಲಿ ತ್ಯಾಜ್ಯವಾಗಿರುವುವು, ರಜಸ್ವಲೆಯರಾದ ನಾರಿಯರು ಶ್ರಾದ್ಧ ಪ್ರಸಂಗದಲ್ಲಿ ದೂರ ತ್ಯಾಜ್ಯರಾಗಿರುವರು.

೨೬. ದುರ್ವಾಸನೆ, ನೊರೆ, ಕೆಸರುಇ ವುಗಳಿಂದ ಕೂಡಿದ, ಹಸುವು ಕೂಡ ಪಾನಮಾಡಿ ತೃಪ್ತಿಪಡೆಯದ, ಅಥವಾ ರಾತ್ರಿಯಲ್ಲಿ ತಂದಿರಿಸಿದ ನೀರನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು.

೨೭. ಕುರಿ, ಜಿಂಕೆ, ಒಂಟೆ, ಒಂದು ಗೊರಸಿನ ಎಲ್ಲ ಪ್ರಾಣಿ, ಎಮ್ಮೆ, ಅಮರ ಎಂಬ ಪ್ರಾಣಿಗಳ ಹಾಲನ್ನು ಜ್ಞಾನಿಯಾದ ಯಜಮಾನನು ಶ್ರಾದ್ಧಯಜ್ಞದಲ್ಲಿ ತ್ಯಜಿಸಬೇಕು.

೨೮. ಇನ್ನು ಮುಂದೆ ಶ್ರಾದ್ಧ ಕರ್ಮಕ್ಕೆ ನಿಷಿದ್ಧಗಳಾಗಿ ಪ್ರಯತ್ನದಿಂದ ವರ್ಜನೀಯವಾದ ದೇಶಗಳನ್ನು ವರ್ಣಿಸುತ್ತೇನೆ. ಮತ್ತು ಶ್ರಾದ್ಧ ಕರ್ಮವನ್ನು ನೋಡಲು ಅನರ್ಹರನ್ನೂ, ಶೌಚ, ಅಶೌಚಗಳನ್ನೂ ಹೇಳುತ್ತೇನೆ.

೨೯. ಕಾಡಿನಲ್ಲಿ ಬೆಳೆಯುವ ಗೆಡ್ಡೆ ಗೆಣಸು ಹಣ್ಣುಗಳಿಂದಲೂ ಭಕ್ಷ್ಯಗಳಿಂದಲೂ ಶ್ರದ್ಧೆಯಿಂದ ಶ್ರಾದ್ಧವನ್ನು ಆಚರಿಸಬೇಕು. ಅದರಿಂದ ರಾಜ್ಯಾಧಿಕಾರವನ್ನೂ ಅಕ್ಷಯವಾದ ಸ್ವರ್ಗಸುಖವನ್ನೂ ಹೊಂದುತ್ತಾನೆ.

ಅನಿಷ್ಟಶಬ್ದಾಂ ಸಂಕೀರ್ಣಾಂ ಜಂತುವ್ಯಾಪ್ತಾಮಥಾವಿಲಾಮ್ ।
ಪೂತಿಗಂಧಾಂ ತಥಾ ಭೂಮಿಂ ವರ್ಜಯೇಚ್ಛ್ರಾದ್ಧಕರ್ಮಣಿ ॥ ೩೦ ॥

ನದ್ಯಃ ಸಾಗರಪರ್ಯಂತಾ ದ್ವಾರಂ ದಕ್ಷಿಣಪೂರ್ವತಃ ।
ತ್ರಿಶಂಕೋರ್ವರ್ಜಯೆದ್ದೇಶಂ ಸರ್ವಂ ದ್ವಾದಶಯೋಜನಮ್ ॥ ೩೧ ॥

ಉತ್ತರೇಣ ಮಹಾನದ್ಯಾ ದಕ್ಷಿಣೇನ ಚ ವೈಕಟಿಮ್ ।
ದೇಶಾಸ್ತ್ರಿಶಂಕವೋ ನಾಮ ವರ್ಜ್ಯಾ ವೈ ಶ್ರಾದ್ಧಕರ್ಮಣಿ ॥ ೩೨ ॥

ಕಾರಸ್ಕರಾಃ ಕಲಿಂಗಾಸ್ಚ ಸಿಂಧೋರುತ್ತರಮೇವ ಚ ।
ಪ್ರಣಷ್ಟಾಶ್ರಮಧರ್ಮಾಶ್ಚ ವರ್ಜ್ಯಾ ದೇಶಾಃ ಪ್ರಯತ್ನತಃ ॥ ೩೩ ॥

ನಗ್ನಾದಯೋ ನ ಪಶ್ಯೇಯುಃ ಶ್ರಾದ್ಧಕರ್ಮ ವ್ಯವಸ್ಥಿತಮ್ ।
ಗಚ್ಛಂತ್ಯೇತೈಸ್ತು ದೃಷ್ಟಾನಿ ನ ಪಿತೄಂಶ್ಚ ಪಿತಾಮಹಾ ॥ ೩೪ ॥

---

೩೦. ಅಹಿತವಾದಶಬ್ದವುಳ್ಳ, ವಸ್ತುಗಳಿಂದ ತುಂಬಿಹೋದ, ಪ್ರಾಣಿಗಳಿಂದ ವ್ಯಾಪಿಸಲ್ಪಟ್ಟ, ಕೊಳಕಾಗಿರುವ, ಮತ್ತು ದುರ್ವಾಸನೆಯುಳ್ಳ ಭೂಮಿಯನ್ನು ಶ್ರಾದ್ಧ ಕರ್ಮದಲ್ಲಿ ವರ್ಜಿಸಬೇಕು.

೩೧. ಸಾಗರದ ಮುಖದಲ್ಲಿರುವ ನದೀ ಸಮೀಪಭೂಮಿ, ದಕ್ಷಿಣ ಪೂರ್ವ ಭಾಗದ ದ್ವಾರ ಭೂಮಿ ಮತ್ತು ಮುಂದೆ ಹೇಳುವ ತ್ರಿಶಂಕುದೇಶವೆಂಬ ನಾಮಾಂಕಿತ ವಾದ ಹನ್ನೆರಡು ಯೋಜನ ಪರಿಮಾಣದ ದೇಶ-ಇವುಗಳು ತ್ಯಾಜ್ಯ ಪ್ರದೇಶ ಗಳಾಗಿವೆ.

೩೨. ಮಹಾನದಿಯ ಉತ್ತರದಿಂದ ವೈಕಟ ಭೂಮಿಯ ದಕ್ಷಿಣದವರೆಗೆ ವ್ಯಾಪಿಸಲ್ಪಟ್ಟಿರುವ ದೇಶಗಳು ಶ್ರಾದ್ಧಕರ್ಮದಲ್ಲಿ ವರ್ಜಿಸಬೇಕಾದ ತ್ರಿಶಂಕು ದೇಶ ಗಳೆಂದು ಸಂಕೇತವನ್ನು ಹೊಂದಿವೆ.

೩೩. ಕಾರಸ್ಕರ, ಕಲಿಂಗ, ಸಿಂಧುನದಿಯ ಉತ್ತರದೇಶ ಮತ್ತು ವರ್ಣಾಶ್ರಮ ಧರ್ಮಗಳಿಂದ ರಹಿತವಾದ ದೇಶಗಳು ಶ್ರಾದ್ಧಕ್ಕೆ ಅನರ್ಹವೆಂದು ಪರಿಗಣಿಸಲ್ಪ ಟ್ಟಿರುವುವು.

೩೪. ಮುಂದೆ ಹೇಳುವ ನಗ್ನ ಮುಂತಾದ ಸಂಕೇತವುಳ್ಳ ಜನರು ಶ್ರಾದ್ಧ ಕರ್ಮವನ್ನು ನೋಡಲಾಗದು. ಅವರಿಂದ ನೋಡಲ್ಪಟ್ಟ ಶ್ರಾದ್ಧಾನ್ನವು ಪಿತೃ ಅಥವಾ ಪಿತಾಮಹರಿಗೆ ಸೇರುವುದಿಲ್ಲ.

ಶಂಯುರುವಾಚ :—
ನಗ್ನಾದೀನ್ ಭಗವನ್ ಸಮ್ಯಗಾಚಕ್ಷ್ವ ಪರಿಪೃಚ್ಛತಃ ।
ಬೃಹಸ್ಪತಿರುವಾಚ :—
ಸರ್ವೇಷಾಮೇವ ಭೂತಾನಾಂ ತ್ರಯೀ ಸಂವರಣಂ ಸ್ಮೃತಮ್ ॥ ೩೫ ॥

ತಾಂ ಯೇ ತ್ಯಜಂತಿ ಸಂಮೋಹಾತ್ ತೇ ವೈ ನಗ್ನಾದಯೋ ಜನಾಃ ।
ಪ್ರಲೀಯತೇ ವೃಷೋ ಯಸ್ಮಿನ್ ನಿರಾಲಂಬಶ್ಚ ಯೋ ವೃಷೇ ॥ ೩೬ ॥

ವೃಷಂ ಯಸ್ತು ಪರಿತ್ಯಜ್ಯ ಮೋಕ್ಷಮನ್ಯತ್ರ ಮಾರ್ಗತಿ ।
ವೃಷೋ ವೇದಾಶ್ರಮಸ್ತಸ್ಮಿನ್ ಯೋ ವೈ ಸಮ್ಯಙ್ನ ಪಶ್ಯತಿ ॥ ೩೭ ॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯೋ ವೃಷಲಃ ಸ ನ ಸಂಶಯಃ ।
ಪುರಾ ದೇವಾಸುರೇ ಯುದ್ಧೇ ನಿರ್ಜಿತೈರಸುರೈಸ್ತಥಾ ॥ ೩೮ ॥

ಪಾಖಂಡಾ ವೈ ಕೃತಾಸ್ತಾತ ತೇಷಾಂ ಸೃಷ್ಟಿಃ ಪ್ರಜಾಯತೇ ।
ವೃದ್ಧಶ್ರಾವಕಿನಿಗ್ರಂಥಾಃ ಶಾಕ್ಯಾಜೀವಕಕಾರ್ಪಟಾಃ ॥ ೩೯ ॥

---

೩೫. ಮುಂದೆ ಶಂಯು ಎಂಬ ಶಿಷ್ಯನು ಕೇಳಿದನು :—ಪೂಜ್ಯನೆ ! ಜಿಜ್ಞಾಸೆಯಿಂದ ಪ್ರಶ್ನಿಸುತ್ತಿರುವ ನನಗೆ ನಗ್ನ ಮುಂತಾದವರು ಯಾರೆಂಬುದನ್ನು ತಿಳಿಸಬೇಕು, ಎಂದು ಪ್ರಶ್ನಿಸಲಾಗಿ ಬೃಹಸ್ಪತಿಯು ಪ್ರತ್ಯುತ್ತರವನ್ನು ಹೇಳಿದನು. ಸಮಸ್ತ ಪ್ರಾಣಿಗಳಿಗೆ ವೇದತ್ರಯವು ಆವರಣರೂಪವಾಗಿದೆಯೆಂದು ಸ್ಮರಿಸಲ್ಪಟ್ಟಿದೆ.

೩೬. ಅಂತಹ ತ್ರಯೀ ಎಂಬ ಆವರಣ ವಸ್ತ್ರವನ್ನು ಮೋಹದಿಂದ ಬಿಟ್ಟಂತಹ ಜನರು ನಗ್ನ ಸ್ವರೂಪರಾಗಿರುವರು. ಯಾವ ಮಾನವನಲ್ಲಿ ವೃಷವು ಲಯ ಹೊಂದಿರುವುದೊ, ಯಾವನು ವೃಷಾಲಂಬನದಿಂದ ರಹಿತವಾಗಿರುವನೋ ಅವನು ವೃಷಲನೆಂದು ಅರಿಯಬೇಕು.

೩೭. ಯಾವ ನರನು ವೃಷವನ್ನು ದೂರಮಾಡಿ ಬೇರೊಂದು ಸಾಧನದಿಂದ ಮುಕ್ತಿಯನ್ನು ಸಾಧಿಸಲು ಯತ್ನಿಸುವನೋ ಅಂತಹವನು ವೃಷಲನು. ವೃಷವೆಂದರೆ ವೇದವೆಂಬ ಆಶ್ರಮವು. ಆ ಆಶ್ರಮವನ್ನು ಚನ್ನಾಗಿ ನೋಡಿಕೊಂಡಿರುವುದು ಆವಶ್ಯಕ.

೩೮. ಆ ಆಶ್ರಮದೃಷ್ಟಿಯಿಲ್ಲದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಇವರಲ್ಲಿ ಯಾರೇ ಆದರೂ ವೃಷಲನೆಂಬುದರಲ್ಲಿ ಸಂಶಯವಿಲ್ಲ. ಪೂರ್ವಕಾಲದಲ್ಲಿ ದೇವತೆಗಳಿಗೂ ಅಸುರರಿಗೂ ನಡೆದ ಘೋರ ಯುದ್ಧದಲ್ಲಿ ರಾಕ್ಷಸರು ಪರಾಜಿತರಾದರು.

೩೯. ಆಗ ಆ ಅಸುರರಿಂದ ಪಾಖಂಡರು ಸೃಷ್ಟಿಸಲ್ಪಟ್ಟರು. ಅದರಿಂದ ಎಲ್ಲೆಲ್ಲಿಯೂ

ಯೇ ಧರ್ಮಂ ನಾನುವರ್ತಂತೇ ತೇ ವೈ ನಗ್ನಾದಯೋ ಜನಾಃ।
ವೃಥಾ ಜಟೀ ವೃಥಾ ಮುಂಡೀ ವೃಥಾ ನಗ್ನಶ್ಚ ಯೋ ಜನಃ ॥ ೪೦ ॥

ವೃಥಾ ವ್ರತೀ ವೃಥಾ ಜಾಪೀ ತೇ ವೈ ನಗ್ನಾದಯೋ ಜನಾಃ।
ಕುಲಧರ್ಮಾತಿಗಾಃ ಶಶ್ವಸ್ತ್ವೃಥಾ ವೃತ್ತಿಕಲತ್ರಕಾಃ ॥ ೪೧ ॥

ಕೃತಕರ್ಮದಿಶಸ್ತ್ವೇತೇ ಕುಪಥಾಃ ಪರಿಕೀರ್ತಿತಾಃ।
ಏತೈರ್ಹಿ ದತ್ತಂ ದೃಷ್ಟಂ ವೈ ಶ್ರಾದ್ಧಂ ಗಚ್ಛತಿ ದಾನವಾನ್ ॥ ೪೨ ॥

ಬ್ರಹ್ಮಘ್ನಶ್ಚ ಕೃತಘ್ನಶ್ಚ ನಾಸ್ತಿಕೋ ಗುರುತಲ್ಪಗಃ।
ದಸ್ಯುಶ್ಚೈವ ನೃಶಂಸಶ್ಚ ದರ್ಶನೇ ತಾನ್ ವಿಸರ್ಜಯೇತ್ ॥ ೪೩ ॥

ಪತಿತಾಃ ಕ್ರೂರಕರ್ಮಾಣಃ ಸರ್ವಾಂಸ್ತಾನ್ ಪರಿವರ್ಜಯೇತ್।
ದೇವತಾನಾಮೃಷೀಣಾಂ ಚ ವಿವಾದೇ ಪ್ರವದಂತಿ ಯೇ ॥ ೪೪ ॥

---

ಪಾಖಂಡರ ಸೃಷ್ಟಿಯು ಹೆಚ್ಚಿತು. ವೃದ್ಧಶ್ರಾವಕಿ, ನಿಗ್ರಂಥ, ಶಾಕ್ಯ, ಆಜೀವಕ ಮತ್ತು ಕಾರ್ಪಟ ಎಂಬ ಸಂಕೇತವುಳ್ಳವರು ಅವೈದಿಕ ಮತವನ್ನು ಅವಲಂಬಿಸಿದ ಪಾಖಂಡಿಗಳಾದರು.

೪೦. ಯಾವ ಮಾನವರು ಧರ್ಮವನ್ನು ಆಚರಿಸುವುದಿಲ್ಲವೋ ಅಂತಹವರು ನಗ್ನ ಮುಂತಾದ ಸಂಕೇತವುಳ್ಳ ಜನರಾಗಿರುವರು. ಮತ್ತು ಜಟಾ ಧಾರಣ, ಮುಂಡನ, ದಿಗಂಬರತ್ವ ವ್ಯರ್ಥವಾಗಿ ಆಚರಿಸುವವರು ನಗ್ನರು.

೪೧. ಹಾಗೆ ವ್ರತ-ಜಪಗಳನ್ನು ಅಶಾಸ್ತ್ರೀಯವಾಗಿ ವ್ಯರ್ಥವಾಗಿ ನಡೆಸುವ ಜನರು ನಗ್ನರೆಂದು ಭಾವಿಸಬೇಕು. ಮತ್ತು ಕುಲಧರ್ಮಗಳನ್ನು ತ್ಯಜಿಸಿದವರು, ವೃತ್ತಿಗೋಸ್ಕರ ಕಲತ್ರ ಸಂಬಂಧವನ್ನು ಹೊಂದಿದವರು ನಗ್ನರಾದವರು.

೪೨. ಕರ್ಮಮಾರ್ಗದ ದಿಕ್ಕನ್ನು ಪ್ರದರ್ಶಿಸುವ ಇಂತಹ ಮಾನವರು. ಕುಮಾರ್ಗಗಾಮಿಗಳೆಂದು ಕೀರ್ತಿಸಲ್ಪಟ್ಟಿದ್ದಾರೆ. ಇಂತಹವರಿಂದ ಕೊಡಲ್ಪಟ್ಟಿರುವ, ಅಥವಾ ನೋಡಲ್ಪಟ್ಟಿರುವ ಶ್ರಾದ್ಧವು ದಾನವರಿಗೆ ಅಧೀನವಾಗುವುದು.

೪೩. ಬ್ರಹ್ಮಹತ್ಯೆ, ಕೃತಘ್ನತೆ, ನಾಸ್ತಿಕತೆ, ಗುರುಪತ್ನೀ ಸಮಾಗಮವೆಂಬ ಮಹಾಪಾತಕಗಳುಳ್ಳವನು, ಚೋರ ಮತ್ತು ಕ್ರೂರ ಇಂತಹವರ ಪ್ರದರ್ಶನ ಪ್ರಸಂಗವನ್ನು ಶ್ರಾದ್ಧಕರ್ಮದಲ್ಲಿ ವರ್ಜಿಸಬೇಕು.

೪೪. ಪತಿತರು, ಕ್ರೂರಕರ್ಮಿಗಳು, ದೇವಋಷಿಗಳ ವಿವಾದದಲ್ಲಿ ಮನ ತೋರಿದಂತೆ ವಾದಿಸುವವರು ಮುಂತಾದವರನ್ನು ದೂರದಲ್ಲಿ ವರ್ಜಿಸಬೇಕು.

ದೇವಾಂಶ್ಚ ಬ್ರಾಹ್ಮಣಾಂಶ್ಚೈವ ಆಮ್ನಾಯಂ ಯಸ್ತು ನಿಂದತಿ ।
ಅಸುರಾ ಯಾತುಧಾನಾಂಶ್ಚ ದೃಷ್ಟಮೇಭಿರ್ವ್ರಜತ್ಯುತ ॥ ೪೫ ॥

ಬ್ರಾಹ್ಮಂ ಕೃತಯುಗಂ ಪ್ರೋಕ್ತಂ ತ್ರೇತಾ ತು ಕ್ಷತ್ರಿಯಂ ಯುಗಮ್ ।
ವೈಶ್ಯಂ ದ್ವಾಪರಮಿತ್ಯಾಹುಃ ಶೂದ್ರಂ ಕಲಿಯುಗಂ ಸ್ಮೃತಮ್ ॥ ೪೬ ॥

ಕೃತೇಽಪೂಜ್ಯಂತ ಪಿತರಸ್ತ್ರೇತಾಯಾಂ ತು ಸುರಾಸ್ತಥಾ ।
ಯುದ್ಧಾನಿ ದ್ವಾಪರೇ ನಿತ್ಯಂ ಪಾಖಂಡಾಶ್ಚ ಕಲೌ ಯುಗೇ ॥ ೪೭ ॥

ಅಪುಮಾನಪವಿದ್ಧಶ್ಚ ಕುಕುಲೋ ಗ್ರಾಮಸೂಕರಃ ।
ಶ್ವಾ ಚೈವ ಹಂತಿ ಶ್ರಾದ್ಧಾನಿ ದರ್ಶನಾದೇವ ಸರ್ವಶಃ ॥ ೪೮ ॥

ಶ್ವಸೂಕರೋಪಸಂಸೃಷ್ಟಂ ದೀರ್ಘರೋಗಿಭಿರೇವ ಚ ।
ಪತಿತೈರ್ಮಲಿನೈಶ್ಚೈವ ನ ದ್ರಷ್ಟವ್ಯಂ ಕಥಂ ಚನ ॥ ೪೯ ॥

---

೪೫. ಮತ್ತು ದೇವತೆ, ಬ್ರಾಹ್ಮಣ, ಹಾಗು ವೇದಗಳನ್ನು ವೃಥಾ ದ್ವೇಷಮಾಡಿ ನಿಂದಿಸುವವರು ಶ್ರಾದ್ಧಕರ್ಮವನ್ನು ನೋಡಬಾರದು. ಇವರ ದೃಷ್ಟಿಗೋಚರವಾದ ಶ್ರಾದ್ಧಕರ್ಮವು ಅಸುರ ಮತ್ತು ಯಾತುಧಾನರ ಪಾಲಾಗುವುದು.

೪೬. ಚತುರ್ಯುಗಗಳಲ್ಲಿ ಕೃತಯುಗವು ಬ್ರಾಹ್ಮಣರೂಪವೆಂದೂ, ತ್ರೇತಾ ಯುಗವು ಕ್ಷತ್ರಿಯರೂಪವೆಂದೂ, ದ್ವಾಪರಯುಗವು ವೈಶ್ಯರೂಪವೆಂದೂ ಕಲಿಯುಗವು ಶೂದ್ರಸ್ವರೂಪವೆಂದೂ ಹೇಳಲ್ಪಟ್ಟಿವೆ.

೪೭. ಕೃತಯುಗದಲ್ಲಿ ವಿಶೇಷವಾಗಿ ಪಿತೃಗಳು ಪೂಜಿಸಲ್ಪಡುವರು, ತ್ರೇತಾ ಯುಗದಲ್ಲಿ ದೇವತೆಗಳೂ, ದ್ವಾಪರ ಯುಗದಲ್ಲಿ ಮುನಿಗಳೂ, ಮತ್ತು ಕಲಿಯುಗ ದಲ್ಲಿ ಪಾಖಂಡ ಜನರೂ ವಿಶೇಷವಾಗಿ ಪೂಜ್ಯರಾಗಿರುವರು.

೪೮. ನಪುಂಸಕನು, ಬಹಿಷ್ಕೃತನು, ಕೋಳಿ, ಗ್ರಾಮವರಾಹ, ಮತ್ತು ನಾಯಿ ಇವುಗಳು ದರ್ಶನ ಮಾತ್ರದಿಂದ ಶ್ರಾದ್ಧ ಯಜ್ಞವನ್ನು ವಿಧ್ವಂಸನಮಾಡುವುವು.

೪೯. ನಾಯಿ, ಹಂದಿ ಇವುಗಳಿಂದ ಸ್ಪರ್ಶಮಾಡಲ್ಪಟ್ಟ ಹವಿಸ್ಸು ಶ್ರಾದ್ಧಕ್ಕೆ ಅರ್ಹವಲ್ಲ. ಮತ್ತು ದೀರ್ಘ ರೋಗಗ್ರಸ್ತರಾದ ಮನುಷ್ಯರು, ಪತಿತರು, ಮಲಿನರು, ಶ್ರಾದ್ಧವನ್ನು ನೋಡಬಾರದು.

ಅನ್ನಂ ಪಶ್ಯೇಯುರೇತೇ ಯತ್ತನ್ನಾರ್ಹಂ ಹವ್ಯಕವ್ಯಯೋಃ ।
ಉತ್ಸೃಷ್ಟವ್ಯಾಃ ಪ್ರಧಾನಾರ್ಥೈಃ ಸಂಸ್ಕಾರಸ್ತ್ವಾಪದೋ ಭವೇತ್ ॥ ೫೦ ॥

ಹವಿಷಾಂ ಸಂಹತಾನಾಂ ಚ ಪೂರ್ವಮೇವ ವಿವರ್ಜಯೇತ್ ।
ಮೃಷ್ಟಂ ಯುಕ್ತಾಭಿರದ್ಭಿಶ್ಚ ಪ್ರೋಕ್ಷಣಂ ಚ ವಿಧೀಯತೇ ॥ ೫೧ ॥

ಸಿದ್ಧಾರ್ಥಕೈಃ ಕೃಷ್ಣತಿಲೈಃ ಕಾರ್ಯಂ ವಾಪ್ಯಪವಾರಣಮ್ ।
ಗುರುಸೂರ್ಯಾಗ್ನಿಪಾಸ್ರಾಣಾಂ ದರ್ಶನಂ ವಾಪಿ ಯತ್ನತಃ ॥ ೫೨ ॥

ಆಸನಾರೂಢಮನ್ನಾದ್ಯಂ ಪಾದೋಪಹತಮೇವ ಚ ।
ಅಮೇಧ್ಯೈರ್ಜಂಗಮೈರ್ದೃಷ್ಟಂ ಶುಷ್ಕಂ ಪರ್ಯುಷಿತಂ ಚ ಯತ್ ॥ ೫೩ ॥

ಅಸ್ವಿನ್ನಂ ಪರಿದಗ್ಧಂ ಚ ತಥೈವಾಗ್ರಾವಲೇಹಿತಮ್ ।
ಶರ್ಕರಾಕೀಟಪಾಷಾಣೈಃ ಕೇಶೈರ್ಯಚ್ಚಾಪ್ಯುಪಾಹೃತಮ್ ॥ ೫೪ ॥

---

೫೦. ಹಿಂದೆ ಹೇಳಿದ ಪತಿತಾದಿಗಳಿಂದ ನೋಡಲ್ಪಟ್ಟಿರುವ ಹವಿಸ್ಸು ಹವ್ಯ-ಕವ್ಯಗಳಿಗೆ ಅರ್ಹವಲ್ಲ. ಅವುಗಳನ್ನು ಪ್ರಧಾನ ಕರ್ಮಗಳಿಗೆ ಉಪಯೋಗಿಸದೆ ತ್ಯಜಿಸುವುದು ಉತ್ತಮವು. ಆಪತ್ಕಾಲದಲ್ಲಿ ಅವುಗಳಲ್ಲಿ ಸಂಸ್ಕಾರವನ್ನಾದರೂ ಮಾಡಬೇಕು.

೫೧. ಸಂಘಾತರೂಪವಾಗಿದ್ದ ಹವಿಸ್ಸುಗಳಲ್ಲಿ ಅಪವಿತ್ರವಾದುದನ್ನು ಬೇರೆಯಾಗಿ ವಿಸರ್ಜಿಸಬೇಕು. ಮತ್ತು ಮಾರ್ಜನ, ಪವಿತ್ರವಾದ ಜಲದಿಂದ ಪ್ರೋಕ್ಷಣಗಳನ್ನು ಮಾಡಿ ಸಂಸ್ಕರಿಸಬೇಕು.

೫೨. ಬಿಳಿಯ ಸಾಸುವೆ, ಕಪ್ಪು ಎಳ್ಳು ಧಾನ್ಯಗಳಿಂದ ಅಪವಿತ್ರದೋಷಗಳನ್ನು ವಾರಣಮಾಡಬೇಕು. ಗುರು, ಸೂರ್ಯ, ಅಗ್ನಿ, ವಾಯು ಮುಂತಾದ ಪಾವನ ವಸ್ತುಗಳ ದರ್ಶನವನ್ನು ಯತ್ನಪೂರ್ವಕವಾಗಿ ಮಾಡಿಸಬೇಕು.

೫೩. ಆಸನದಲ್ಲಿ ಇರಿಸಿರುವ ಅನ್ನ-ಆದ್ಯ, ಪಾದದಿಂದ ಸ್ಪರ್ಶ ಹೊಂದಿರುವುದು, ಅಮೇಧ್ಯವಾದ ಜಂಗಮ ಪ್ರಾಣಿಗಳಿಂದ ನೋಡಲ್ಪಟ್ಟಿರುವುದು, ಒಣಗಿ ನಿಸ್ಸಾರವಾಗಿರುವುದು, ಪಾಕಮಾಡಿ ಒಂದು ಯಾಮ ಕಳೆದು ತಂಗಳಾದುದು—ಈ ಎಲ್ಲ ಹವಿಸ್ಸು ಶ್ರಾದ್ಧಕರ್ಮಾರ್ಹವಲ್ಲ.

೫೪. ಆರ್ದ್ರತೆಯನ್ನು ಬಿಟ್ಟಿರುವುದು, ಹೆಚ್ಚಾಗಿ ಬೆಂದುಹೋಗಿರುವುದು, ಅಗ್ರಭಾಗದಿಂದ ರುಚಿ ನೋಡಿ ಮಿಕ್ಕಿರುವುದು, ಕಲ್ಲು, ಹುಳು, ಮಳಲು ಮತ್ತು ಕೂದಲುಗಳು ಬಿದ್ದು ಕೆಟ್ಟುಹೋಗಿರುವ ಹವಿಸ್ಸು ಶ್ರಾದ್ಧಕ್ಕೆ ದೂಷಿತವಾಗಿದೆ.

ಪಿಣ್ಯಾಕಂ ಮಥಿತಂ ಚೈವ ತಥಾ ತಿಲಯವಾದಿಷು ।
ಸಿದ್ಧೀಕೃತಾಶ್ಚ ಯೇ ಭಕ್ಷ್ಯಾಃ ಪ್ರತ್ಯಕ್ಷಲವಣೀಕೃತಾಃ ॥ ೩೫ ॥

ದೃಷ್ಟ್ವಾ ಚೈವ ತಥಾ ದೋಷೋಪಾತ್ತಶ್ವೋಪಹತಂ ತಥಾ ।
ವಾಸಸಾ ಚಾವಧೂತಾನಿ ವರ್ಜ್ಯಾನಿ ಶ್ರಾದ್ಧಕರ್ಮಣಿ ॥ ೩೬ ॥

ಸಂತಿ ವೇದವಿರೋಧೇನ ಕೇಚಿದ್ವಿಜ್ಞಾಭಿಮಾನಿನಃ ।
ಅಯಜ್ಞಯತಯೋ ನಾಮ ತೇ ಧ್ವಂಸಂತಿ ಯಥಾ ರಜಃ ॥ ೩೭ ॥

ದಧಿ ಶಾಕಂ ತಥಾ ಭಕ್ಷ್ಯಂ ತಥಾ ಚೌಷಧಿವರ್ಜಿತಮ್ ।
ವಾರ್ತಾಕಂ ವರ್ಜಯೇಚ್ಛ್ರಾದ್ಧೇ ಸರ್ವಾನಭಿಷವಾನಪಿ॥
ಸೈಂಧವಂ ಲವಣಂ ಚೈವ ತಥಾ ಮಾನಸಸಂಭವಮ್ ॥ ೩೮ ॥

ಪವಿತ್ರೇ ಪರಮೇ ಹ್ಯೇತೇ ಪ್ರತ್ಯಕ್ಷಮಪಿ ವರ್ತಿತೇ ।
ಅಗ್ನೌ ಪ್ರಕ್ಷಿಪ್ಯ ಗೃಹ್ಣೀಯಾದ್ಧಸ್ತೌ ಪ್ರಕ್ಷಿಪ್ಯ ಯತ್ನತಃ ॥ ೩೯ ॥

---

೩೫. ತಿಲ-ಯವ ಧಾನ್ಯಗಳ ಹಿಂಡಿ, ಕಡೆದು ಇರುವ ಮಜ್ಜಿಗೆ ಮುಂತಾದುದು, ಮೊದಲು ನಿಮಿತ್ತಾಂತರದಿಂದ ಸಿದ್ಧಮಾಡಿರುವ ಭಕ್ಷ್ಯ ಮತ್ತು ಪ್ರತ್ಯಕ್ಷವಾಗಿ ಲವಣದ ಉಪಯೋಗದಿಂದ ಕೂಡಿರುವುದು—ಇವುಗಳು ನಿಷಿದ್ಧವಾಗಿವೆ.

೩೬. ಹಿಂದೆ ಹೇಳಿದ ಅನೇಕ ದೋಷದರ್ಶನದಿಂದ ಕೆಟ್ಟುಹೋಗಿರುವುದನ್ನೂ ನಾಯಿಯ ಸಂಪರ್ಕದಿಂದ ದುಷ್ಟವಾದುದನ್ನೂ, ಮತ್ತು ವಸ್ತ್ರಸಂಪರ್ಕದಿಂದ ದುಷ್ಟವಾಗಿರುವುದನ್ನೂ ಶ್ರಾದ್ಧದಲ್ಲಿ ತ್ಯಜಿಸಬೇಕು.

೩೭. ವೇದಕ್ಕೆ ವಿರೋಧವಾಗಿ ಧರ್ಮಗಳನ್ನು ನುಡಿಯುವ ಪಂಡಿತಮಾನಿಗಳು ಕೆಲವರು ಅಯಜ್ಞಮತಿ ಎಂಬ ಸಂಕೇತಕ್ಕೆ ಪಾತ್ರರಾಗಿರುವರು. ಅವರು ಶ್ರಾದ್ಧಾದಿ ಕರ್ಮಗಳನ್ನು ಕೆಟ್ಟಧೂಳಿ ಪುಂಜದಂತೆ ಕೆಡಿಸುವರು.

೩೮. ದಧಿಯಿಂದ ಮಾಡಿದ ಶಾಕಪಾಕ, ಓಷಧಿ ವರ್ಜಿತವಾದ ಭಕ್ಷ್ಯ, ವಾರ್ತಾಕ, ಸಕಲವಿಧ ಅಭಿಷ್ಟವರಸ, ಇವುಗಳನ್ನು ಶ್ರಾದ್ಧಕರ್ಮದಲ್ಲಿ ಉಪಯೋಗಿಸಕೂಡದು. ಸೈಂಧವ-ಮತ್ತು ಮಾನಸ ಸರೋವರದ ಲವಣಗಳು ಪವಿತ್ರವಾದುವುಗಳು.

೩೯. ಇವುಗಳು ಅತ್ಯಂತ ಪವಿತ್ರವಾಗಿದ್ದರೂ ಪ್ರತ್ಯಕ್ಷವಾಗಿ ನಿರ್ದುಷ್ಟವಾಗಿದ್ದರೂ ಕೂಡ ಯತ್ನಪೂರ್ವಕವಾಗಿ ಹಸ್ತಗಳಿಂದ ಅಗ್ನಿಯಲ್ಲಿರಿಸಿ ಮತ್ತೆ ತೆಗೆದು ಅವುಗಳನ್ನು ಉಪಯೋಗಿಸಬೇಕು.

ಗಮುಯೇನ್ಮಸ್ತಕಂ ಚೈವ ಬ್ರಹ್ಮತೀರ್ಥಂ ಹಿ ತತ್ ಸ್ಮೃತಮ್ ।
ದ್ರವ್ಯಾಣಾಂ ಪ್ರೋಕ್ಷಣಂ ಕಾರ್ಯಂ ತಥೈವಾವಪನಂ ಪುನಃ ॥ ೬೦ ॥

ನಿಧಾಯ ಚಾದ್ಭಿಃ ಸಿಂಚೇತ್ತತ್ತಥಾ ಚಾಪ್ಸು ನಿವೇಶನಮ್ ।
ಅಶ್ಮಮೂಲಫಲೇಕ್ಷೂಣಾಂ ರಜ್ಜೂನಾಂ ಚರ್ಮಣಾಮಪಿ ॥ ೬೧ ॥

ವೈದಲಾನಾಂ ಚ ಸರ್ವೇಷಾಂ ಪೂರ್ವವಚ್ಛೌಚಮಿಷ್ಯತೇ ।
ತಥಾ ದಂತಾಸ್ಥಿದಾರೂಣಾಂ ಶೃಂಗಾಣಾಂ ಚಾವಲೇಖನಮ್ ॥ ೬೨ ॥

ಸರ್ವೇಷಾಂ ಮೃಣ್ಮಯಾನಾಂ ಚ ಪುನರ್ದಾಹೋ ವಿಧೀಯತೇ ।
ಮಣಿಮುಕ್ತಾಪ್ರವಾಲಾನಾಂ ಜಲಜಾನಾಂ ಚ ಸರ್ವಶಃ ॥ ೬೩ ॥

ಸಿದ್ಧಾರ್ಥಕಾನಾಂ ಕಲ್ಕೇನ ತಿಲಕಲ್ಕೇನ ವಾ ಪುನಃ ।
ಸ್ಯಾಚ್ಛೌಚಂ ಸರ್ವಬಾಲಾನಾ ಮಾವಿಕಾನಾಂ ಚ ಸರ್ವಶಃ ॥ ೬೪ ॥

---

೬೦. ಮತ್ತು ಅಂತಹ ವಸ್ತುವನ್ನು ಶಿರಸ್ಸಿನಲ್ಲಿ ಇಟ್ಟುಕೊಳ್ಳಬೇಕು. ಶಿರೋಗ್ರ ದೇಶವು ಬ್ರಹ್ಮತೀರ್ಥವೆಂದು ಸ್ಮರಿಸಲ್ಪಟ್ಟಿದೆ. ದ್ರವ್ಯಗಳಿಗೆ ಶುದ್ಧಿಗೋಸ್ಕರ ಆವಾಪ ಅಥವಾ ಪ್ರೋಕ್ಷಣವೆಂಬ ಸಂಸ್ಕಾರಗಳನ್ನು ಆಚರಿಸಬೇಕು.

೬೧. ಅಂತಹ ವಸ್ತುವನ್ನು ಕೆಳಗಿರಿಸಿ ನೀರಿನಿಂದ ಒದ್ದೆಮಾಡಬೇಕು. ಅಥವಾ ಆ ವಸ್ತುವನ್ನು ನೀರಿನಲ್ಲಿ ಮುಳುಗಿಸಬೇಕು. ಕಲ್ಲು, ಮೂಲ, ಫಲ, ಇಕ್ಷು, ರಜ್ಜು, ಚರ್ಮ ಮುಂತಾದುವುಗಳಿಗೆ ಹಿಂದೆ ಹೇಳಿದಂತೆ ಶೌಚವಿಧಾನವನ್ನು ಅನುಸರಿಸಬೇಕು.

೬೨. ಎಲ್ಲ ಬಿದುರಿನ ಸೀಳಿನ ಪಾತ್ರಗಳಿಗೂ ಮೊದಲಿನಂತೆ ಶೌಚವೆಂದು ವಿಧಿಸಲ್ಪಟ್ಟಿದೆ. ದಂತ, ಅಸ್ಥಿ, ಮರ, ಮತ್ತು ಕೊಂಬುಗಳ ಪದಾರ್ಥಗಳನ್ನು ಕೆತ್ತುವುದು ಅವುಗಳಿಗೆ ಶೌಚವು.

೬೩. ಸಮಸ್ತ ಮೃಣ್ಮಯ ಪಾತ್ರಗಳಿಗೆ ಪುನಃ ದಹನ ಸಂಸ್ಕಾರವು ಶೌಚವು. ಮಣಿ ಮುತ್ತು, ಹವಳ ಮತ್ತು ಶಂಖ ಮುಂತಾದುವುಗಳಿಗೆ ಯಾವಾಗಲೂ ಕಲ್ಕ ದ್ರವ್ಯದಿಂದ ಶೋಧನವು ಶೌಚವು.

೬೪. ಸಾಸ್ವೆ, ಅಥವಾ ತಿಲಗಳ ಕಲ್ಕದಿಂದ ಮಣಿ ಮುಂತಾದ ವಸ್ತುಗಳನ್ನು ಶೋಧಿಸಬೇಕು, ಬಾಲದ ಕೂದಲಿನಿಂದ ನಿರ್ಮಿತವಾದ ವಸ್ತು, ಉಣ್ಣೆಯ ವಸ್ತ್ರ ಮುಂತಾದುವುಗಳ ಶೌಚವಿಧಾನವು ಮುಂದೆ ಹೇಳಲ್ಪಟ್ಟಿದೆ.

ದ್ವಿಪದಾಂ ಚೈವ ಸರ್ವೇಷಾಂ ಮೃದ್ಭಿರದ್ಭಿರ್ವಿಧೀಯತೇ ।
ಆದ್ಯಂತಯೋಸ್ತು ಶೌಚಾನಾಮದ್ಭಿಃ ಪ್ರಕ್ಷಾಲನಂ ವಿಧಿಃ ॥ ೬೫ ॥

ತಥಾ ಕಾರ್ಪಾಸಿಕಾನಾಂ ಚ ಭಸ್ಮನಾ ಸಮುದಾಹೃತಮ್ ।
ಫಲಪುಷ್ಪಪಲಾಶಾನಾಂ ಪ್ಲಾವನಂ ಚಾದ್ಭಿರಿಷ್ಯತೇ ॥ ೬೬ ॥

ಪ್ರೋಕ್ಷಣಂ ಹ್ಯುಪಲೇಪಶ್ಚ ಭೂಮೇಶ್ಚೈವಾವಲೇಖನಮ್ ।
ನಿಷೇಕೋ ಗೋಕ್ರಮೋ ದಾಹಃ ಖನನಂ ಶುದ್ಧಿರಿಷ್ಯತೇ ॥ ೬೭ ॥

ನಿಷ್ಕ್ರಮೋಽಧ್ವಗತೋ ಗ್ರಾಮಾದ್ವಾಯುಪ್ರೂತಾ ವಸುಂಧರಾ ।
ಪುಂಸಾಂ ಚತುಷ್ಪದಾಂ ಚೈವ ಮೃದ್ಭಿಃ ಶೌಚಂ ವಿಧೀಯತೇ ॥ ೬೮ ॥

ಏವಮೇವ ಸಮುದ್ದಿಷ್ಟಃ ಶೌಚಾನಾಂ ವಿಧಿರುತ್ತಮಃ ।
ಅನಿರ್ದಿಷ್ಟಮತೋ ಯದ್ಯತ್ತನ್ಮೇ ನಿಗದತಃ ಶೃಣು ॥ ೬೯ ॥

---

೬೫. ದ್ವಿಪಾದ ಪ್ರಾಣಿಗಳಿಗೆಲ್ಲ ಜಲ-ಮೃತ್ತಿಕೆಗಳಿಂದ ಶೌಚವು ವಿಧಿಸಲ್ಪಟ್ಟಿದೆ. ಪ್ರತಿಯೊಂದು ಶೌಚ ವಿಧಾನಗಳಲ್ಲಿ ಆದಿ-ಅಂತಗಳಲ್ಲಿ ನೀರಿನಿಂದ ಕ್ಷಾಲನ ಮಾಡಬೇಕೆಂದು ವಿಹಿತವಾಗಿದೆ.

೬೬. ಹಾಗೆ ಹತ್ತಿಯಿಂದ ನಿರ್ಮಿತವಾದ ಪದಾರ್ಥಗಳನ್ನು ಭಸ್ಮದಿಂದ ಪವಿತ್ರಮಾಡಬೇಕೆಂದು ಹೇಳಲ್ಪಟ್ಟಿದೆ. ಫಲ, ಪುಷ್ಪ ಮತ್ತು ಪರ್ಣಗಳಿಗೆ ನೀರಿನಿಂದ ನೆನೆಸುವುದು ಶೌಚಸಾಧನವು.

೬೭. ಭೂಮಿಗೆ ಪ್ರೋಕ್ಷಣ, ಗೋಮಯಾದಿ ಉಪಲೇಪ, ಗೀರುವುದು, ಪೂರಣ, ಗೋಸಂಚಾರ, ದಹನ ಮತ್ತು ಖನನ ಎಂಬ ಸಂಸ್ಕಾರಗಳು ಪವಿತ್ರತೆಯನ್ನು ಕೊಡುವುವು.

೬೮. ಮಾರ್ಗದಲ್ಲಿರುವ ಸೇತು ಮುಂತಾದ ನಿಷ್ಕ್ರಮಣಗಳು ಮತ್ತು ಭೂಮಿಯು ವಾಯು ಸಂಚಾರದಿಂದ ಪವಿತ್ರವಾಗುವುವು. ಪುರುಷ, ಚತುಷ್ಪಾದ ಪ್ರಾಣಿಗಳಿಗೆ ಮೃತ್ತಿಕೆಯಿಂದ ಶೌಚವು ವಿಧಿಸಲ್ಪಟ್ಟಿದೆ.

೬೯. ಈ ರೀತಿಯಾಗಿ ಉತ್ತಮವಾದ ಶೌಚಕರ್ಮ ವಿಧಾನವು ತೋರಿಸಲ್ಪಟ್ಟಿರುವುದು. ಹೇಳದೇ ಬಿಟ್ಟಿರುವ ಮತ್ತೆ ಕೆಲವು ಅಂಶಗಳನ್ನು ವಿವರಿಸುವ ನನ್ನ ವಚನವನ್ನು ಕೇಳು.

ಪ್ರಾತರ್ಗೃಹಾದ್ದಕ್ಷಿಣಪಶ್ಚಿಮೇನ
ಗತ್ವಾ ಚೇಷುಕ್ಷೇಪಮಾತ್ರಂ ಪದಂ ವೈ ।
ಕುರ್ಯಾತ್ ಪುರೀಷಂ ಹಿ ಶಿರೋಽವಗುಂಠ್ಯ
ನ ವೈ ಸ್ಪೃಶೇಜ್ಜಾತು ಶಿರಃ ಕರೇಣ ॥ ೭೦ ॥

ಶುಷ್ಕೈಸ್ತೃಣೈರ್ವಾ ಕಾಷ್ಠೈರ್ವಾ ಪರ್ಣೈರ್ವೇಣುದಲೇನ ಚ ।
ಸುಸಂವೃತ್ತೇ ಪ್ರದೇಶೇ ಚ ಅಂತರ್ಧಾಯ ವಸುಂಧರಾಮ್ ॥ ೭೧ ॥

ಉದ್ಧೃತ್ಯೋದಕಮಾದಾಯ ಮೃತ್ತಿಕಾಂ ಚೈವ ವಾಗ್ಯತಃ ।
ದಿವಾ ಉದಙ್ಮುಖಃ ಕುರ್ಯಾದ್ರಾತ್ರೌ ವೈ ದಕ್ಷಿಣಾಮುಖಃ ॥ ೭೨ ॥

ದಕ್ಷಿಣೇನ ತು ಹಸ್ತೇನ ಗೃಹೀತ್ವಾಥ ಕಮಂಡಲುಮ್ ।
ಶೌಚಂ ವಾಮೇನ ಹಸ್ತೇನ ಗುದೇ ತಿಸ್ರಸ್ತು ಮೃತ್ತಿಕಾಃ ॥ ೭೩ ॥

---

೭೦. ಪ್ರಾತಃಕಾಲದಲ್ಲಿ ಮನೆಯ ದಕ್ಷಿಣ ಅಥವಾ ಪಶ್ಚಿಮ ಭಾಗಗಳಲ್ಲಿ ಇಷುಕ್ಷೇಪ ಮಾತ್ರ ಭೂಮಿಯನ್ನು ನಡೆದು ಶಿರಸ್ಸನ್ನು ವಸ್ತ್ರದಿಂದ ಆಚ್ಛಾದಿಸಿ ಪುರೀಷೋತ್ಸರ್ಗವನ್ನು ಆಚರಿಸಬೇಕು, ಆಗ ಹಸ್ತದಿಂದ ಶಿರಸ್ಸನ್ನು ಯಾವಾಗಲೂ ಸ್ಪರ್ಶಿಸಬಾರದು.

೭೧. ನಿರ್ಜನವಾದ ಪ್ರದೇಶಕ್ಕೆ ಹೋಗಿ ಒಣಗಿದ ತೃಣ. ಕಾಷ್ಠ, ಪರ್ಣ, ವೇಣುಭಾಗ ಮುಂತಾದುವುಗಳಿಂದ ಭೂಮಿಯನ್ನು ಮುಚ್ಚಿ ಅಲ್ಲಿ ಪುರೀಷವನ್ನು ವಿಸರ್ಜಿಸಬೇಕು.

೭೨. ಶೌಚಕ್ಕೋಸ್ಕರ ಮೃತ್ತಿಕೆಯನ್ನು ತಂದಿರಿಸಿ ಹಾಗು ಜಲವನ್ನು ಸಂಗ್ರಹಿಸಿಟ್ಟು ಮೌನದಿ.ದ ಪಗಲಿನಲ್ಲಿ ಉತ್ತರದಿಕ್ಕಿಗೆ ಅಭಿಮುಖವಾಗಿಯೂ ರಾತ್ರಿಯಲ್ಲಿ ದಕ್ಷಿಣದಿಕ್ಕಿಗೆ ಅಭಿಮುಖವಾಗಿಯೂ ಕುಳಿತುಕೊಂಡು ಪುರೀಷೋತ್ಸರ್ಗವನ್ನು ಮಾಡಬೇಕು.

೭೩. ತರುವಾಯ ಬಲಗೈಯಿಂದ ಜಲಪಾತ್ರವನ್ನು ಹಿಡಿದುಕೊಂಡು ವಾಮ ಹಸ್ತದಿಂದ ಕ್ಷಾಲನಾದಿ ಶೌಚವನ್ನು ಮಾಡುತ್ತ ಗುದಪ್ರದೇಶದಲ್ಲಿ ಮೂರುಸಲ ಮೃತ್ತಿಕೆಯನ್ನು ಹಚ್ಚಬೇಕು.

ದಶ ಚಾಪಿ ಶನೈರ್ದದ್ಯಾದ್ವಾಮಹಸ್ತೇ ಕ್ರಮೇಣ ತು ।
ಉಭಾಭ್ಯಾಂ ವಾ ಪುನರ್ದದ್ಯಾದ್ದ್ವಾಭ್ಯಾಂ ಸಪ್ತ ತು ಮೃತ್ತಿಕಾಃ ॥ ೭೪ ॥

ಮೃದಾ ಪ್ರಕ್ಷಾಲ್ಯ ಪಾದೌ ತು ಆಚಮ್ಯ ಚ ಯಥಾವಿಧಿ ।
ಆಪಸ್ತ್ರ್ಯುದ್ಯಾಸ್ತ್ರಯಶ್ಚೈವ ಸೂರ್ಯಾಗ್ನ್ಯನಿಲದೇವತಾಃ ॥ ೭೫ ॥

ಕುರ್ಯಾತ್ ಸನ್ನಿಹಿತೋ ನಿತ್ಯಮಚ್ಛಿದ್ರೇ ದ್ವೇ ಕಮಂಡಲೂ ।
ಅಸಂವಾರ್ಯೈರನ್ಯೈರೇವ ಯಥಾವತ್ ಪಾದಧಾವನಮ್ ॥ ೭೬ ॥

ಆಚಾಮನಂ ದ್ವಿತೀಯಂ ಚ ದೇವಕಾರ್ಯೇ ತತೋಽಪರಮ್ ।
ಉಪವಾಸಸ್ತ್ರಿರಾತ್ರಂ ತು ದುಷ್ಟಭಕ್ತೇ ಹ್ಯುದಾಹೃತಃ ॥ ೭೭ ॥

ವಿಪ್ರಕೃಷ್ಟೇಷು ಕೃಚ್ಛ್ರಂ ಚ ಪ್ರಾಯಶ್ಚಿತ್ತಮುದಾಹೃತಮ್ ।
ಸ್ಪೃಷ್ಟ್ವಾ ಶ್ವಾನಂ ಶ್ವಪಾಕಂ ಚ ತಪ್ತಕೃಚ್ಛ್ರಂ ಸಮಾಚರೇತ್ ॥ ೭೮ ॥

---

೭೪. ಮತ್ತೆ ವಾಮಹಸ್ತದಲ್ಲಿ ಹತ್ತುಸಲ ಮೃತ್ತಿಕೆಯನ್ನು ಇರಿಸಬೇಕು. ಅದಾದ ತರುವಾಯ ವಾಮ-ದಕ್ಷಿಣ ಎರಡು ಹಸ್ತಗಳಲ್ಲಿಯೂ ಕ್ರಮವಾಗಿ ಏಳುಸಲ ಮೃತ್ತಿಕೆಯನ್ನು ಹಚ್ಚಿ ಶೌಚಮಾಡಬೇಕು.

೭೫. ಹಾಗೆ ಪಾದಗಳನ್ನು ಮೃತ್ತಿಕಾಲೇಪಪೂರ್ವಕವಾಗಿ ಕ್ಷಾಲನಮಾಡಿ ಯಥಾವಿಧಿಯಾಗಿ ಜಲವನ್ನು ಆಚಮನಮಾಡಬೇಕು, ಆಚಮನ ಕರ್ಮದಲ್ಲಿ ಮೊದಲು ಉಪಯೋಗಿಸುವ ಮೂರು ಜಲಾಂಶಗಳು ಸೂರ್ಯ, ಅಗ್ನಿ, ವಾಯು ದೇವತಾಂಶಗಳೆಂದು ಭಾವಿಸಬೇಕು.

೭೬. ಇಂತಹ ಶೌಚವಿಧಿಗಳಲ್ಲಿ ಛಿದ್ರರಹಿತವಾದ ಎರಡು ಜಲಪಾತ್ರಗಳನ್ನು ಸಿದ್ಧಪಡಿಸಿಕೊಂಡಿರಬೇಕು. ಮತ್ತು ಅಚ್ಛಿನ್ನವಾದ ಜಲಧಾರೆಯಿಂದ ಯಥಾವಿಧಿಯಾಗಿ ಪಾದಪ್ರಕ್ಷಾಲನವನ್ನು ಮಾಡಬೇಕು.

೭೭. ದೇವಕಾರ್ಯವನ್ನು ಆಚರಿಸುವ ಪ್ರಸಂಗದಲ್ಲಿ ಮತ್ತೆ ಎರಡನೆಯ ಆಚಮನವನ್ನು ಮಾಡಬೇಕು. ದುಷ್ಟವಾದ ಅನ್ನಭೋಜನದಿಂದ ಆಗುವ ಅಪವಿತ್ರತೆಗೆ ತ್ರಿರಾತ್ರ ಉಪವಾಸವು ಶುಚಿತ್ವಪ್ರದವೆಂದು ಹೇಳಲ್ಪಟ್ಟಿದೆ.

೭೮. ಬಹು ವ್ಯವಧಾನದಿಂದ ದೂರವಾದ ಪಾಪಕರ್ಮಗಳಲ್ಲಿ ಕೃಚ್ಛ್ರಪ್ರಾಯಶ್ಚಿತ್ತವು ಶುದ್ಧಿಕರವಾಗಿ ವಿಹಿತವಾಗಿದೆ. ನಾಯಿ, ಚಂಡಾಲರನ್ನು ಸ್ಪರ್ಶಮಾಡಿದರೆ ತಪ್ತಕೃಚ್ಛ್ರ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ಮಾನುಷಾಸ್ಥೀನಿ ಸಂಸ್ಪೃಶ್ಯ ಉಪೋಷ್ಯಂ ಶುಚಿಕಾರಣಾತ್ ।
ತ್ರಿರಾತ್ರಮುಕ್ತಂ ಸಸ್ನೇಹಾನ್ಯೇಕರಾತ್ರಮತೋಽನ್ಯಥಾ ॥ ೭೯ ॥

ಕಾರಸ್ಕರಾಃ ಕಲಿಂಗಾಶ್ಚ ತಥಾಂಧ್ರಶಬರಾದಯಃ ।
ಪೀತ್ವಾ ಚಾಪೋ ಭೂತಿಲಪಾ ಗತ್ವಾ ಚಾಪಿ ಯುಗಂಧರಮ್ ॥ ೮೦ ॥

ಸಿಂಧೋರುತ್ತರಪರ್ಯಂತಂ ತಥೋವೀಚ್ಯಂತರಂ ನರಃ ।
ಪಾಪದೇಶಾಶ್ಚ ಯೇ ಕೇಚಿತ್ ಪಾಪೈರಧ್ಯುಷಿತಾ ಜನೈಃ ॥ ೮೧ ॥

ಶಿಷ್ಟೈಸ್ತು ವರ್ಜಿತಾ ಯೇ ವೈ ಬ್ರಾಹ್ಮಣೈರ್ವೇದಪಾರಗೈಃ ।
ಗಚ್ಛತಾಂ ರಾಗಸಂಮೋಹಾತ್ ತೇಷಾಂ ಪಾಪಂ ನ ಗಚ್ಛತಿ ॥ ೮೨ ॥

ಗತ್ವಾ ದೇಶಾನಪುಣ್ಯಾಂಸ್ತು ಕೃತ್ಸ್ನಂ ಪಾಪಂ ಸಮಶ್ನುತೇ ।
ಆಪುಹ್ಯ ಭೃಗುತುಂಗಂ ತು ಗತ್ವಾ ಪುಣ್ಯಾಂ ಸರಸ್ವತೀಮ್ ॥ ೮೩ ॥

---

೭೯. ಆರ್ದ್ರತೆಯ ಸ್ನೇಹಗುಣದಿಂದ ಕೂಡಿದ ಮಾನುಷಾಸ್ಥಿಯನ್ನು ಸ್ಪರ್ಶಿಸಿದರೆ ಅವರಿಂದ ಶುಚಿತ್ವವನ್ನು ಹೊಂದಲು ತ್ರಿರಾತ್ರ ಉಪವಾಸವನ್ನು ಮಾಡಬೇಕು. ಸಾಮಾನ್ಯವಾದ ಅಸ್ಥಿಯಾದರೆ ಎಕರಾತ್ರೋಪವಾಸವು ಸಾಕಾಗಿದೆ.

೮೦. ಕಾರಸ್ಕರ, ಕಲಿಂಗ, ಆಂಧ್ರ, ಶಬರ ಮತ್ತು ಯುಗಂಧರ ಮುಂತಾದ ದೇಶಗಳು ಪಾಪದೇಶಗಳು. ಅಲ್ಲಿಗೆ ಪ್ರಯಾಣಮಾಡುವುದು, ಅಲ್ಲಿರುವ ಜಲಪಾನ, ಐಶ್ವರ್ಯೋಪಭೋಗ ಮುಂತಾದುವು ನಿಷಿದ್ಧವಾಗಿವೆ.

೮೧. ಸಿಂಧುನದಿಯ ಉತ್ತರಭಾಗ, ಹಾಗು ಸಾಮಾನ್ಯ ಅತಿಯಾಗಿ ಮೀರಿ ಉತ್ತರದೇಶ, ಸಹಜವಾಗಿ ಪಾಪಕರದೇಶ, ಅಥವಾ ಪಾಪಿಗಳು ವಾಸಮಾಡಿರುವ ದೇಶಗಳು, ವಾಸಕ್ಕೆ ಅಯೋಗ್ಯಗಳಾಗಿವೆ.

೮೨. ಮತ್ತು ವೇದಾಧ್ಯಯನ ಪಾರಂಗತರಾದ ಶಿಷ್ಟಜನರ ಸಂಪರ್ಕಶೂನ್ಯವಾದ ದೇಶಗಳನ್ನು ಮೋಹ-ಅಭಿರುಚಿಗಳಿಂದ ಪ್ರಯಾಣಮಾಡಿದ ಜನರ ಪಾಪವು ಯಾವುದರಿಂದಲೂ ಕಳೆಯುವುದಿಲ್ಲ.

೮೩. ಅಂತಹ ಅಪವಿತ್ರ ದೇಶಗಳಿಗೆ ಹೋಗುವುದರಿಂದ ಸಮಸ್ತ ನಿಷಿದ್ಧ ಕರ್ಮಾಚರಣೆಯಿಂದುಂಟಾಗುವ ಪಾಪಗಳನ್ನು ಅನುಭವಿಸುತ್ತಾನೆ. ಅಂತಹ ಮಹತ್ತಾದ ಪಾಪಗಳನ್ನು ಕಳೆದುಕೊಳ್ಳಲು ಭೃಗುತುಂಗ ಅಥವಾ ಪವಿತ್ರವಾದ ಸರಸ್ವತೀ ನದಿಗಳನ್ನು ಸೇವಿಸಬೇಕು.

ಆಪಗಾಂ ಚ ನದೀಂ ರಮ್ಯಾಂ ಗಂಗಾಂ ದೇವೀಂ ಮಹಾನದೀಮ್ ।
ಹಿಮವತ್ಪ್ರಭವಾ ನದ್ಯೋ ಯಾಶ್ಚಾನ್ಯಾ ಋಷಿಪೂಜಿತಾಃ ॥ ೮೪ ॥

ಸರಸ್ತೀರ್ಥಾನಿ ಸರ್ವಾಣಿ ನದೀಃ ಪ್ರಸ್ರವಣಾನಿ ಚ ।
ಗತ್ವೈತಾಸ್ಮುಚ್ಯತೇ ಪಾಪೈಃ ಸ್ವರ್ಗೇ ಚಾತ್ಯಂತಮಶ್ನುತೇ ॥ ೮೫ ॥

ದಶರಾತ್ರಮಶೌಚಂ ತು ಪ್ರೋಕ್ತಂ ಮೃತಕಸೂತಕೇ ।
ಬ್ರಾಹ್ಮಣಸ್ಯ ದ್ವಾದಶಾಹಂ ಕ್ಷತ್ರಿಯಸ್ಯ ವಿಧೀಯತೇ ॥ ೮೬ ॥

ಅರ್ಧಮಾಸಂ ತು ವೈಶ್ಯಸ್ಯ ಮಾಸಂ ಶೂದ್ರಸ್ಯ ಚೈವ ಹ ।
ಉದಕ್ಯಾ ಸರ್ವವರ್ಣಾನಾಂ ಚತೂರಾತ್ರೇಣ ಶುದ್ಧ್ಯತಿ ॥ ೮೭ ॥

ಉದಕ್ಯಾಂ ಸೂತಿಕಾಂ ಚೈವ ಶ್ವಾನಮಂತಾವಸಾಯಿನಮ್ ।
ನಗ್ನಾದೀನ್ ಮೃತಹಾರಾಂಶ್ಚ ಸ್ಪೃಷ್ಟ್ವಾ ಶೌಚಂ ವಿಧೀಯತೇ ॥ ೮೮ ॥

---

೮೪. ಅಥವಾ ರಮ್ಯವೂ, ಪೂಜ್ಯವೂ ಮತ್ತು ಮಹಾ ನದಿಯೂ ಆದ ಗಂಗಾ ನದಿಯನ್ನು ಸೇವಿಸಬೇಕು. ಹಿಮವತ್ಪರ್ವತದಲ್ಲಿ ಹುಟ್ಟಿರುವ, ಮುನಿಗಳಿಂದ ಸೇವಿಸಲ್ಪಟ್ಟ, ಪವಿತ್ರವಾದ ಸಮಸ್ತ ನದಿಗಳೂ ಪಾವನವಾದುವುಗಳು.

೮೫. ತೀರ್ಥರೂಪವಾದ ಸರೋವರ, ಸಮಸ್ತನದೀ, ಪರ್ವತಗಳ ಜಲ ಪ್ರಪಾತ ಮುಂತಾದ ಸ್ಥಳಗಳನ್ನು ನಿಯಮದಿಂದ ಸೇವಿಸಿ ಪಾಪದಿಂದ ನಿರ್ಮುಕ್ತನಾಗಿ ಅವಸಾನದಲ್ಲಿ ಸ್ವರ್ಗಸೌಖ್ಯವನ್ನು ಅನುಭವಿಸುತ್ತಾನೆ.

೮೬. ಮೃತಾಶೌಚವು ಬ್ರಾಹ್ಮಣನಿಗೆ ಹತ್ತು ದಿನಗಳಿರುವುದೆಂದು ಹೇಳಲ್ಪಟ್ಟಿದೆ. ಕ್ಷತ್ರಿಯನಿಗೆ ಮೃತಾಶೌಚವು ಹನ್ನೆರಡು ದಿನಗಳು ವಿಧಿಸಲ್ಪಟ್ಟಿರುವುದು.

೮೭. ವೈಶ್ಯನಿಗೆ ಹದಿನೈದು ದಿನಗಳ ವರೆಗೂ ಶೂದ್ರನಿಗೆ ಒಂದು ಮಾಸದ ವರೆಗೂ ಮೃತಾಶೌಚವು ವಿಧಿಸಲ್ಪಟ್ಟಿದೆ. ಸಮಸ್ತ ವರ್ಣಗಳಲ್ಲಿಯೂ ರಜಸ್ವಲೆಯಾದ ನಾರಿಯು ನಾಲ್ಕು ದಿನಗಳು ಕಳೆದ ತರುವಾಯ ಶುದ್ಧಳಾಗುತ್ತಾಳೆ.

೮೮. ರಜಸ್ವಲೆ, ಸೂತಿಕಾ, ನಾಯಿ, ಚಂಡಾಲ, ನಗ್ನಾದಿ ಪ್ರಜೆ ಮತ್ತು ಶವಾಹಾರಿಗಳನ್ನು ಸ್ಪರ್ಶಮಾಡಿದರೆ ಶುದ್ಧಿಗಾಗಿ ಶೌಚವು ವಿಧಿಸಲ್ಪಟ್ಟಿದೆ.

ಸ್ನಾತ್ವಾ ಸಚೈಲೋ ಮೃದ್ಭಿಸ್ತು ಶುದ್ಧೋ ದ್ವಾದಶಭಿರ್ದ್ವಿಜಃ ।
ಏತದೇವ ಭವೇಚ್ಛೌಚಂ ಮೈಥುನೇ ವಮನೇ ತಥಾ ॥ ೮೯ ॥

ಮೃದಾ ಪ್ರಕ್ಷಾಲ್ಯ ಹಸ್ತೌ ತು ಕುರ್ಯಾಚ್ಛೌಚಂ ಚ ಮಾನವಃ ।
ಪ್ರಕ್ಷಾಲ್ಯ ಚಾದ್ಭಿಃ ಸ್ನಾತ್ವಾ ತು ಹಸ್ತೌ ಚೈವ ಪುನರ್ಮೃದಾ ॥ ೯೦ ॥

ತ್ರಿಃ ಕೃತ್ವಾ ದ್ವಾದಶಾಂತಾನಿ ಯಥಾಲೇಪಸ್ತಥಾ ಭವೇತ್ ।
ಏವಂ ಶೌಚವಿಧಿರ್ದೃಷ್ಟಃ ಸರ್ವಕೃತ್ಯೇಷು ನಿತ್ಯದಾ ॥ ೯೧ ॥

ಪರಿದದ್ಯಾನ್ಮೃದಸ್ತಿಸ್ರಸ್ತಿಸ್ರಃ ಪಾದಾವಸೇಚನೇ ।
ಅರಣ್ಯೇ ಶೌಚಮೇತತ್ತು ಗ್ರಾಮ್ಯಂ ವಕ್ಷ್ಯಾಮ್ಯತಃ ಪರಮ್ ॥ ೯೨ ॥

ಮೃದಃ ಪಂಚದಶಾಮೇಧ್ಯಾ ಹಸ್ತಾದೀನಾಂ ವಿಶೇಷತಃ ।
ಅತಿರಿಕ್ತಮೃದಂ ದದ್ಯಾನ್ಮೃದಂತೇ ತ್ವದ್ಭಿರೇವ ಚ ॥ ೯೩ ॥

---

೮೯. ಇಂತಹ ಸ್ಪರ್ಶವು ಸಂಭವಿಸಿದ ಕೂಡಲೆ ಹಾಗೆಯೇ ಸಚೈಲವಾಗಿ ಸ್ನಾನಮಾಡಿ ಮತ್ತು ಹನ್ನೆರಡು ಸಲ ಮೃತ್ತಿಕೆಯಿಂದಲೂ ಸ್ನಾನಮಾಡಿ ಶುದ್ಧನಾಗುವನು. ಮೈಥುನ, ವಮನಗಳ ನಿಮಿತ್ತಗಳಲ್ಲಿಯೂ ಈ ಶೌಚವೇ ವಿಹಿತವಾಗಿರುವುದು.

೯೦. ಶೌಚಕರ್ಮಾರಂಭದಲ್ಲಿ ಮಾನವನು ಮೃತ್ತಿಕೆಯಿಂದ ಹಸ್ತಗಳನ್ನು ಕ್ಷಾಲನಮಾಡಿ ಮತ್ತೆ ಜಲದಿಂದ ಪ್ರಕ್ಷಾಲನಮಾಡಿ, ಸ್ನಾನಮಾಡಿ ಅನಂತರ ಮತ್ತೆ ಹಸ್ತಗಳನ್ನು ಮೃತ್ತಿಕೆಯಿಂದ ಶೋಧಿಸಬೇಕು.

೯೧. ಹೀಗೆ ಮೂರು ಸಲ ಮೊದಲಾಗಿ ಹನ್ನೆರಡು ಸಲದ ವರೆಗೆ ಲೇಪ ಗಂಧಗಳು ದೂರವಾಗುವ ವರೆಗೆ ಶೌಚವನ್ನು ಆಚರಿಸಬೇಕು. ಹೀಗೆ ಸಮಸ್ತ ಕಾರ್ಯಗಳಲ್ಲಿಯೂ ಯಾವಾಗಲೂ ಮಾಡಬೇಕಾದ ಶೌಚವಿಧಿಯು ಶಾಸ್ತ್ರಗಳಲ್ಲಿ ಕಂಡಿರುವುದು.

೯೨. ಪಾದಪ್ರಕ್ಷಾಳನದಲ್ಲಿ ಮೂರು ಮೂರು ಸಲ ಮೃತ್ತಿಕಾಲೇಪವನ್ನು ಮಾಡಿ ಶೋಧನಮಾಡಬೇಕು. ಈ ವಿಧಾನವು ಅರಣ್ಯವಾಸದಲ್ಲಿ ಮಾಡಬೇಕಾದುದು. ಇನ್ನು ಮುಂದೆ ಗ್ರಾಮಕ್ಕೆ ಸಂಬಂಧಿಸಿದ ಶೌಚವಿಧಿಯನ್ನು ವರ್ಣಿಸುತ್ತೇನೆ.

೯೩. ಹಸ್ತ ಮುಂತಾದುವುಗಳಿಗೆ ಹದಿನೈದು ಸಲ ಪವಿತ್ರವಾದ ಮೃತ್ತಿಕೆಯನ್ನು ವಿಶೇಷವಾಗಿ ಲೇಪಿಸಬೇಕು. ವಿಹಿತವಾದ ಮೃತ್ತಿಕಾ ಲೇಪವಾದ ಮೇಲೆ ಕಡೆಯದಾಗಿ ಮತ್ತೊಂದು ಸಲ ಮೃತ್ತಿಕೆಯನ್ನು ಹಚ್ಚಿ ಜಲದಿಂದ ಕ್ಷಾಲನ ಮಾಡಬೇಕು.

ಅದ್ಭಿರವ್ಯಕ್ತೈಕೇ ಶೌಚಮೇತಚ್ಛ್ರುತೇಷು ಕೃತ್ಸ್ನಶಃ ।
ಕಂಠಂ ಶಿರೋ ವಾ ಆವೃತ್ಯ ರಥ್ಯಾಪಣಗತೋಽಪಿ ವಾ ॥ ೯೪ ॥

ಅಕೃತ್ವಾ ಪಾದಯೋಃ ಶೌಚಮಾಚಾಂತೋಽಪ್ಯಶುಚಿರ್ಭವೇತ್ ।
ಪ್ರಕ್ಷಾಲ್ಯ ಪಾತ್ರಂ ನಿಕ್ಷಿಪ್ಯ ಆಚಮ್ಯಾಭ್ಯುಕ್ಷಣಂ ತತಃ ॥ ೯೫ ॥

ದ್ರವ್ಯಸ್ಯಾನ್ಯಸ್ಯ ತು ತಥಾ ಕುರ್ಯಾದಭ್ಯುಕ್ಷಣಂ ತತಃ ।
ಪುಷ್ಪಾದೀನಾಂ ತೃಣಾನಾಂ ಚ ಪ್ರೋಕ್ಷಣಂ ಹವಿಷಾಂ ತಥಾ ॥ ೯೬ ॥

ಪರಾಹೃತಾನಾಂ ದ್ರವ್ಯಾಣಾಂ ನಿಧಾಯಾಭ್ಯುಕ್ಷಣಂ ತಥಾ ।
ನಾಪ್ರೋಕ್ಷಿತಂ ಸ್ಪೃಶೇತ್ ಕಿಂಚಿಚ್ಛ್ರಾದ್ಧೇ ದೈವೇಽಥವಾ ಪುನಃ ॥ ೯೭ ॥

ಉತ್ತರೇಣಾಹರೇದ್ದ್ರವ್ಯಂ ದಕ್ಷಿಣೇನ ವಿಸರ್ಜಯೇತ್ ।
ಸಂವೃತೇ ಯಜಮಾನಸ್ತು ಸರ್ವಂ ಶ್ರಾದ್ಧೇ ಸಮಾಹರೇತ್ ॥ ೯೮ ॥

---

೯೪. ಅಶುಚಿತ್ವ ಕಾರಣವು ವ್ಯಕ್ತವಾಗದಿರಲು ಸಾಮಾನ್ಯವಾಗಿ ಎಲ್ಲ ಪ್ರಸಂಗಗಳಲ್ಲಿಯೂ ಜಲದಿಂದ ಶೌಚವನ್ನು ಆಚರಿಸಬೇಕು. ಮಾರ್ಗ-ಅಂಗಡಿ ಮುಂತಾದ ಜನನಿಬಿಡ ಸ್ಥಳಗಳಲ್ಲಿ ಕಂಠ-ಅಥವಾ ಶಿರಸ್ಸನ್ನು ಶೌಚಪ್ರಸಂಗದಲ್ಲಿ ಆಚ್ಛಾದನ ಮಾಡಿಕೊಂಡಿರಬೇಕು.

೯೫. ಪಾದಗಳಲ್ಲಿ ಶೌಚವನ್ನು ಆಚರಿಸದವನು ಆಚಮನಮಾಡಿದರೂ ಶುದ್ಧನಾಗುವುದಿಲ್ಲ. ಶೌಚಪಾತ್ರವನ್ನು ಕ್ಷಾಲನಮಾಡಿ ಅದನ್ನು ಕೆಳಗೆ ಇರಿಸಿ ಆಚಮನಮಾಡಿ ಮತ್ತೆ ಅದನ್ನು ಪ್ರೋಕ್ಷಿಸಬೇಕು.

೯೬. ಮಿಕ್ಕ ಯಾವುದಾದರೊಂದು ದ್ರವ್ಯವನ್ನು ಕೂಡ ಹಾಗೆಯೇ ಆಚಮನಾನಂತರದಲ್ಲಿ ಪ್ರೋಕ್ಷಣಮಾಡಬೇಕು. ಪುಷ್ಪ, ತೃಣ ಅಥವಾ ಹವಿಸ್ಸು ಇವುಗಳನ್ನು ಅದರಂತೆಯೇ ಪ್ರೋಕ್ಷಣಮಾಡಬೇಕು.

೯೭. ಬೇರೊಬ್ಬರಿಂದ ತರಿಸಲ್ಪಟ್ಟ ದ್ರವ್ಯಗಳನ್ನು ಕೆಳಕ್ಕೆ ಇರಿಸಿ ಪ್ರೋಕ್ಷಣ ಮಾಡಬೇಕು. ಶ್ರಾದ್ಧ ಅಥವಾ ದೈವಕರ್ಮಗಳಲ್ಲಿ ಪ್ರೋಕ್ಷಣಮಾಡದೆ ಯಾವುದೊಂದು ವಸ್ತುವನ್ನೂ ಸ್ಪರ್ಶಮಾಡಬಾರದು.

೯೮. ದ್ರವ್ಯವನ್ನು ಉತ್ತರ ಭಾಗದಿಂದ ಸಂಗ್ರಹಿಸಬೇಕು. ಹಾಗೂ ದಕ್ಷಿಣ ಭಾಗದಿಂದ ಅದನ್ನು ವಿಸರ್ಜಿಸಬೇಕು. ಯಜಮಾನನು ಎಲ್ಲ ಶ್ರಾದ್ಧಕರ್ಮ ಸಾಮಗ್ರಿಯನ್ನು ವಿವಿಕ್ತದೇಶದಲ್ಲಿ ಸಂಗ್ರಹಿಸಿಡಬೇಕು.

ಉಚ್ಛಿಷ್ಟೇ ಸ್ಯಾದ್ವಿಪರ್ಯಾಸೋ ದೈವೇ ಪಿತ್ರ್ಯೇ ತಥೈವ ಚ ।
ದಕ್ಷಿಣೇನ ತು ಹಸ್ತೇನ ದಕ್ಷಿಣಾಂ ವೇದಿಮಾಲಭೇತ್ ॥ ೯೯ ॥

ಕರಾಭ್ಯಾಮೇವ ದೇವಾನಾಂ ಪಿತೄಣಾಂ ವಿಕಿರಂ ತಥಾ ।
ಕ್ಷರಣಂ ಸ್ವಪ್ನಯೋಶ್ಚೈವ ತಥಾ ಮೂತ್ರಪುರೀಷಯೋಃ ॥ ೧೦೦ ॥

ನಿಷ್ಠೀವಿತೇ ತಥಾಭ್ಯಂಗೇ ಭುಕ್ತ್ವಾ ವಿಪರಿಧಾಯ ಚ ।
ಉಚ್ಛಿಷ್ಟಾನಾಂ ಚ ಸಂಸ್ಪರ್ಶೇ ತಥಾ ಪಾದಾವಸೇಚನೇ ॥ ೧೦೧ ॥

ಉಚ್ಛಿಷ್ಟಸ್ಯ ಚ ಸಂಭಾಷಾದಶಿತ್ವಾ ಪ್ರಯತಸ್ಯ ವಾ ।
ಸಂದೇಹೇಷು ಚ ಸರ್ವೇಷು ಶಿಖಾಂ ಮುಕ್ತ್ವಾ ತಥೈವ ಚ ॥ ೧೦೨ ॥

ವಿನಾ ಯಜ್ಞೋಪವೀತೇನ ಮೋಘಂ ತತ್ಸಮುಪಸ್ಪೃಶೇತ್ ।
ಉಷ್ಟ್ರಸ್ಯಾವೇಶ್ಚ ಸಂಸ್ಪರ್ಶೇ ದರ್ಶನೇऽವಾಚ್ಯವಾಚಿನಾಮ್ ॥ ೧೦೩ ॥

---

೯೯. ದೈವ ಮತ್ತು ಪಿತ್ರ್ಯ ಉಚ್ಛಿಷ್ಟ ಪಾತ್ರಗಳನ್ನು ವಿಪರೀತ ಕ್ರಮದಿಂದ ಎತ್ತಬೇಕು. ದಕ್ಷಿಣ ಹಸ್ತದಿಂದ ದಕ್ಷಿಣ ವೇದಿಕೆಯನ್ನು ಸ್ಪರ್ಶಿಸಬೇಕು.

೧೦೦. ದೇವ ಮತ್ತು ಪಿತೃಗಳಿಗೆ ವಿಕಿರಾನ್ನ ದಾನವನ್ನು ಎರಡು ಹಸ್ತಗಳಿಂದಲೂ ಮಾಡಬೇಕು. ಸ್ವಪ್ನ, ಇಂದ್ರಿಯಸ್ಖಲನ, ಮೂತ್ರ ವಿಸರ್ಜನ ಮತ್ತು ಮಲವಿಸರ್ಜನ ಮುಂತಾದ ಸಂದರ್ಭಗಳಲ್ಲಿ ಆಚಮನವನ್ನು ಮಾಡಬೇಕು.

೧೦೧. ಎಂಜಲನ್ನು ಉಗುಳುವುದು, ಅಭ್ಯಂಜನ, ಭೋಜನ, ವಸ್ತ್ರಧಾರಣ ಉಚ್ಛಿಷ್ಟಸ್ಪರ್ಶ ಮತ್ತು ಪಾದಗಳ ಪ್ರಕ್ಷಾಳನ ಮುಂತಾದ ಕರ್ಮಗಳ ನಿಮಿತ್ತದಿಂದ ಆಚಮನಮಾಡಿ ಶುದ್ಧನಾಗಬೇಕು.

೧೦೨. ಉಚ್ಛಿಷ್ಟನಾದವನ ಸಂಗಡ ಸಂಭಾಷಣ, ಭೋಜನಾನಂತರದಲ್ಲಿ ಪವಿತ್ರನಾಗಿರಲು ಆಕಾಂಕ್ಷೆ, ಅಥವಾ ಅಶುಚಿತ್ವವನ್ನುಂಟುಮಾಡುವ ಪ್ರಸಂಗಗಳ ಸಂದೇಹ ಮತ್ತು ಶಿಖೆಯನ್ನು ಕಟ್ಟಿಕೊಳ್ಳುವುದು—ಮುಂತಾದ ಕಾರಣಗಳಲ್ಲಿ ಆಚಮನಮಾಡಬೇಕು.

೧೦೩. ಅಂತಹ ಆಚಮನಕಾಲದಲ್ಲಿ ಯಜ್ಞೋಪವೀತಧಾರಣವಿಲ್ಲದಿದ್ದರೆ ಆ ಆಚಮನವು ವ್ಯರ್ಥವಾಗುವುದು, ಒಂಟೆ ಅಥವಾ ಕುರಿಗಳ ಸ್ಪರ್ಶ ಮತ್ತು ಅವಾಚ್ಯವನ್ನು ನುಡಿಯುವವರ ದರ್ಶನವೆಂಬ ನಿಮಿತ್ತಗಳಲ್ಲಿ ಆಚಮನಮಾಡಬೇಕು.

ಜಿಹ್ವಯಾ ಚೈವ ಸಂಸ್ಪೃಶ್ಯ ದಂತಾಸಕ್ತಂ ತಥೈವ ಚ ।
ಸಶಬ್ದ ಮಂಗುಲೀಭಿರ್ವಾ ಪತಿತಂ ವಾ ವಿಲೋಕಯನ್ ॥ ೧೦೪ ॥

ಸ್ಥಿತೋ ಯಶ್ಚಾಚಮೇನ್ಮೋಹಾದಾಚಾಂತೋಽಪ್ಯಶುಚಿರ್ಭವೇತ್ ।
ಉಪವಿಶ್ಯ ಶುಚೌ ದೇಶೇ ಪ್ರಯತಃ ಪ್ರಾಗುದಙ್ಮುಖಃ ॥ ೧೦೫ ॥

ಪಾದೌ ಪ್ರಕ್ಷಾಳ್ಯ ಹಸ್ತೌ ಚ ಅಂತರ್ಜಾನು ತ್ವಪಃ ಸ್ಪೃಶೇತ್ ।
ಪ್ರಸನ್ನಾಸ್ತ್ರಿಃ ಪಿಬೇದ್ವಾರಿ ಪ್ರಯತಃ ಸುಸಮಾಹಿತಃ ॥ ೧೦೬ ॥

ದ್ವಿರೇವ ಮಾರ್ಜನಂ ಕುರ್ಯಾತ್ ಸಕೃದಭ್ಯುಕ್ಷಣಂ ತತಃ ।
ಖಾನಿ ಮೂರ್ಧಾನಮಾತ್ಮಾನಂ ಹಸ್ತೌ ಪಾದೌ ತಥೈವ ಚ ॥ ೧೦೭ ॥

ಅಭ್ಯುಕ್ಷಯೇತ್ತತಸ್ತಸ್ಯ ಯದ್ಯ ನ್ಮೀಮಾಂಸಿತಂ ಭವೇತ್ ।
ಏವಮಾಚಮತಸ್ತಸ್ಯ ವೇದಾ ಯಜ್ಞಾಸ್ತಪಾಂಸಿ ಚ ॥ ೧೦೮ ॥

---

೧೦೪. ಮತ್ತು ದಂತಮಧ್ಯದಲ್ಲಿ ಅಂಟಿಕೊಂಡಿರುವ ಉಚ್ಛಿಷ್ಟವಸ್ತುವನ್ನು ನಾಲಿಗೆಯಿಂದ ಸ್ಪರ್ಶಮಾಡಿದರಾಗಲಿ, ಬೆರಳುಗಳಿಂದ ಶಬ್ದಮಾಡಿದರಾಗಲಿ, ಅಥವಾ ಪತಿತನಾದವನನ್ನು ನೋಡಿದರಾಗಲಿ ಆಚಮನಮಾಡಬೇಕು.

೧೦೫. ಯಾವನು ವಿಧಾನವನ್ನು ಅರಿಯದೇ ಮೋಹದಿಂದ ನಿಂತುಕೊಂಡು ಆಚಮನಮಾಡುವನೋ ಅವನು ಆಚಮನಮಾಡಿದರೂ ಅಶುಚಿಯೇ ಆಗಿರುವನು. ಶುಚಿಯಾದ ಸ್ಥಳದಲ್ಲಿ ಪವಿತ್ರನಾಗಿ ಪೂರ್ವ ಅಥವಾ ಉತ್ತರಾಭಿಮುಖನಾಗಿ ಆಚಮನಮಾಡಬೇಕು.

೧೦೬. ಮೊದಲು ಕೈಕಾಲುಗಳನ್ನು ತೊಳೆದುಕೊಂಡು ಮಂಡಿಯೊಳಭಾಗ ದಲ್ಲಿ ಕೈಗಳನ್ನಿಟ್ಟುಕೊಂಡು ಪವಿತ್ರನೂ, ಸಮಾಧಾನದಿಂದ ಕೂಡಿದ ಚಿತ್ತವುಳ್ಳ ವನೂ ಆಗಿ ನಿರ್ಮಲವಾದ ಜಲವನ್ನು ಮೂರುಸಲ ಕುಡಿಯಬೇಕು.

೧೦೭. ಮತ್ತು ಎರಡುಸಲ ಮಾರ್ಜನವನ್ನೂ ಇಂದ್ರಿಯ, ಮೂರ್ಧ, ಹೃದಯ, ಹಸ್ತ ಮತ್ತು ಪಾದಗಳಲ್ಲಿ ಒಂದುಸಲ ಮುಷ್ಟಿರೂಪವಾದ ಹಸ್ತದಿಂದ ಪ್ರೋಕ್ಷಣವೆಂಬ ಅಭ್ಯುಕ್ಷಣವನ್ನೂ ಮಾಡುವುದು ಆಚಮನ ವಿಧಾನದಲ್ಲಿ ಸೇರಿದೆ.

೧೦೮. ಅನಂತರದಲ್ಲಿ ಶಾಸ್ತ್ರದಲ್ಲಿ ವಿಚಾರಿಸಿ ತೀರ್ಮಾನಿಸಿದ ಆಯಾಯ ಅವಯವಗಳನ್ನು ಅಭ್ಯುಕ್ಷಣಮಾಡಬೇಕು. ಈ ರೀತಿಯಾಗಿ ಆಚಮನ ಮಾಡಿ ಮಾಡಿರುವ ವೇದಾಭ್ಯಾಸ, ಯಜ್ಞ, ತಪಸ್ಸು ಮುಂತಾದ ಅನುಷ್ಠಾನಗಳು ಸಫಲವಾಗುವುವು.

ದಾನಾನಿ ವ್ರತಚರ್ಯಾಶ್ಚ ಭವಂತಿ ಸಫಲಾನಿ ವೈ ।
ಕ್ರಿಯಾಂ ಯಃ ಕುರುತೇ ಮೋಹಾದನಾಚಮ್ಯೇಹ ನಾಸ್ತಿಕಃ॥ ೧೦೯ ॥

ಭವಂತಿ ಹಿ ವೃಥಾ ತಸ್ಯ ಕ್ರಿಯಾ ಹ್ಯೇತಾ ನ ಸಂಶಯಃ ।
ವಾಕ್ಕಾಯಬುದ್ಧಿಪೂತಾನಿ ಅಸ್ಪೃಷ್ಟಂ ವಾಪ್ಯನಿಂದಿತಮ್ ॥ ೧೧೦ ॥

ಜ್ಞೇಯಾನ್ಯೇತಾನಿ ಮೇಧ್ಯಾನಿ ದುಷ್ಟಮೇಭ್ಯೋ ವಿಪರ್ಯಯೇ ।
ಮನೋವಾಕ್ಕಾಯಮಗ್ನಿಶ್ಚ ಕಾಲಶ್ಚೈವೋಪಲೇಖನಮ್ ॥ ೧೧೧ ॥

ವಿಖ್ಯಾಪನಂ ಚ ಶೌಚಾನಾಂ ನಿತ್ಯಮಜ್ಞಾನಮೇವ ವಾ ।
ಅತೋಽನ್ಯಥಾ ತು ಯಃ ಕುರ್ಯಾನ್ಮೋಹಾಚ್ಛೌಚಸ್ಯ ಸಂಕರಮ್ ॥ ೧೧೨ ॥

ಪಿಶಾಚಾನ್ ಯಾತುಧಾನಾಂಶ್ಚ ಫಲಂ ಗಚ್ಛತ್ಯಸಂಶಯಮ್ ।
ಶೌಚೇ ಚಾಶ್ರದ್ದಧಾನೋ ಹಿ ಮ್ಲೇಚ್ಛಜಾತಿಷು ಜಾಯತೇ ॥ ೧೧೩ ॥

---

೧೦೯. ಹಾಗೆಯೇ ದಾನ, ವ್ರತಚರ್ಯೆ ಮುಂತಾದುವುಗಳು ಆಚಮನದಿಂದ ಸಫಲವಾಗುವುವು. ಮೋಹದಿಂದ ನಾಸ್ತಿಕತೆಯನ್ನು ಅವಲಂಬಿಸಿ ಆಚಮನವನ್ನು ಮಾಡದೆ ಯಜ್ಞಾದಿಕ್ರಿಯೆಯನ್ನು ಮಾಡಬಾರದು.

೧೧೦. ಅಂತಹ ದಾನ ಮುಂತಾದ ಸಕಲಕ್ರಿಯೆಗಳು ವ್ಯರ್ಥವಾಗುವುವು. ಇದರಲ್ಲಿ ಸಂಶಯವಿಲ್ಲ. ಮುಖ್ಯವಾಗಿ ವಾಕ್ಕು, ಕಾಯ ಬುದ್ಧಿ ಇವುಗಳು ಶುದ್ಧವಾಗಿ ಇವುಗಳಿಂದ ನಡೆಸಲ್ಪಡುವ ಕರ್ಮ, ಸ್ವತಃ ಅನಿಂದ್ಯವೂ, ಸ್ಪರ್ಶದೋಷ ಸಂಪರ್ಕವಿಲ್ಲದ್ದೂ ಆದ ವಸ್ತು—ಇವು ಪವಿತ್ರವಾದುವುಗಳು.

೧೧೧. ಮೇಲೆ ಹೇಳಿರುವ ವಸ್ತುಗಳು ಪವಿತ್ರವಾದುವುಗಳೆಂದು ಅರಿಯಬೇಕು. ಅದಕ್ಕೆ ವಿರುದ್ಧವಾಗಿ ಹಿಂದೆ ಹೇಳಿದ ನಿಮಿತ್ತಗಳಿಂದ ಕೂಡಿದ ವಸ್ತುಗಳು ದುಷ್ಟವಾದುವುಗಳು. ಮನಸ್ಸು, ವಾಕ್ಕು, ಶರೀರ, ಅಗ್ನಿ, ಕಾಲ ಮತ್ತು ಉಪಲೇಖನ. ದಿಂದ ಉಪಲಕ್ಷಿತವಾದ ಕ್ರಿಯೆ—ಇವುಗಳ ಶೌಚವನ್ನು ಗಮನದಿಂದ ಪಾಲಿಸಬೇಕು

೧೧೨. ಅಜ್ಞಾನದಿಂದ ಸಂಭವಿಸಿರುವ ಇವುಗಳ ಅಶುಚಿತ್ವವನ್ನು ಪ್ರಕಟಪಡಿಸುವುದರಿಂದ ಶುಚಿತ್ವವನ್ನು ಆರ್ಜಿಸಬೇಕು. ಇಲ್ಲಿ ಹೇಳಿರುವ ವಿಧಾನಕ್ಕೆ ವಿರುದ್ಧವಾಗಿ ಶೌಚಕ್ರಮಗಳ ಸಂಕರವನ್ನು ಮೋಹದಿಂದ ಯಾರೊಬ್ಬನೂ ಮಾಡಕೂಡದು.

೧೧೩. ಅಂತಹ ಶೌಚವಿಧಾನಾತಿಕ್ರಮದಿಂದ ಮಾಡಿರುವ ಸತ್ಕರ್ಮಗಳ ಫಲವು ನಿಸ್ಸಂಶಯವಾಗಿ ಪಿಶಾಚ ಮತ್ತು ಯಾತುಧಾನರನ್ನು ಸೇರುವುದು, ಶೌಚವಿಧಾನದಲ್ಲಿ ಶ್ರದ್ಧೆಯಿಲ್ಲದ ಮಾನವನು ಮ್ಲೇಚ್ಛ ಜಾತಿಯಲ್ಲಿ ಜನಿಸುತ್ತಾನೆ.

ಅಯಜ್ವಾ ಚೈವ ಪಾಪಶ್ಚ ತಿರ್ಯಗ್ಯೋನಿಗತೋಽಪಿ ಚ ।
ಶೌಚೇನ ಮೋಕ್ಷಂ ಕುರ್ವಾಣಃ ಸ್ವರ್ಗವಾಸೀ ಭವೇನ್ನರಃ ॥ ೧೧೪ ॥

ಶುಚಿಕಾಮಾ ಹಿ ದೇವಾ ವೈ ದೇವೈಶ್ಚೈತದುದಾಹೃತಮ್ ।
ಬೀಭತ್ಸಾನಶುಚೀಂಶ್ಚೈವ ವರ್ಜಯಂತಿ ಸುರಾಃ ಸದಾ ॥ ೧೧೫ ॥

ತ್ರೀಣಿ ಶೌಚಾನಿ ಕುರ್ವಂತಿ ನ್ಯಾಯತಃ ಶುಭಕರ್ಮಿಣಃ ।
ಬ್ರಹ್ಮಣ್ಯಾಯಾತಿಥೇಯಾಯ ಶೌಚಯುಕ್ತಾಯ ಧೀಮತೇ ॥೧೧೬ ॥

ಪಿತೃಭಕ್ತಾಯ ದಾಂತಾಯ ಸಾನುಕ್ರೋಶಾಯ ಚ ದ್ವಿಜಾಃ ।
ತಸ್ಮೈ ದೇವಾಃ ಪ್ರಯಚ್ಛಂತಿ ಪಿತರಃ ಶ್ರೀವಿವರ್ಧನಾಃ ।

ಮನಸಾ ಕಾಂಕ್ಷಿತಾನ್ ಕಾಮಾಂಸ್ತ್ರೈಲೋಕ್ಯಪ್ರವರಾನಪಿ ॥ ೧೧೭ ॥
ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಚತುರ್ದಶೋಽಧ್ಯಾಯಃ

---

೧೧೪. ಯಜ್ಞಾನುಷ್ಠಾನರಹಿತನೂ, ಪಾಪಿಯೂ, ಕುಯೋನಿಯಲ್ಲಿ ಜನಿಸಿದವನೂ ಆದ ನರನು ವಿಧಿಪೂರ್ವಕವಾದ ಶೌಚಾನುಷ್ಠಾನದ ಬಲದಿಂದ ಸ್ವರ್ಗವಾಸವನ್ನೂ ಕ್ರಮವಾಗಿ ಮುಕ್ತಿಯನ್ನೂ ಹೊಂದುವನು.

೧೧೫. ಶುಚಿವಸ್ತುಗಳಲ್ಲಿ ಕಾಮನೆಯುಳ್ಳ ದೇವತೆಗಳು ಶುಚಿತ್ವಕ್ಕೆ ವಿರೋಧದಿಂದ ಇರುವ, ಜುಗುಪ್ಸೆಯನ್ನುಂಟುಮಾಡುವ, ಅಶುಚಿಯಾದ ಪದಾರ್ಥಗಳನ್ನು ಯಾವಾಗಲೂ ದೂರದಲ್ಲಿ ವರ್ಜಿಸುವರು, ಎಂಬುದು ದೇವತೆಗಳಿಂದ ಹೇಳಲ್ಪಟ್ಟಿದೆ.

೧೧೬. ಶುಭಕರ್ಮಾನುಷ್ಠಾನದಲ್ಲಿ ಆದರವುಳ್ಳವರು ಶಾಸ್ತ್ರೀಯ ನ್ಯಾಯವನ್ನು ಅನುಸರಿಸಿ ಕಾಯಿಕ ವಾಚಿಕ ಮತ್ತು ಮಾನಸಿಕವೆಂಬ ಮೂರು ಶೌಚಗಳನ್ನು ಆಚರಿಸುವರು.

೧೧೭. ದ್ವಿಜರೆ! ಬ್ರಹ್ಮಭಕ್ತಿ, ಅತಿಥಿಸತ್ಕಾರ, ಶೌಚ, ಜ್ಞಾನ, ಪಿತೃಭಕ್ತಿ, ಇಂದ್ರಿಯನಿಗ್ರಹ, ಕರುಣೆ ಮುಂತಾದ ಸದ್ಗುಣಗಳಿಂದ ಕೂಡಿದ ಮಾನವನಿಗೆ ದೇವತೆಗಳು ಮತ್ತು ಪಿತೃಗಳು ಸಂತುಷ್ಟರಾಗಿ ಸಂಪತ್ತನ್ನು ವೃದ್ಧಿಪಡಿಸಿ ತ್ರೈಲೋಕ್ಯದಲ್ಲಿ ಉತ್ತಮವಾದ ಇಷ್ಟಫಲಗಳನ್ನು ಸಂಪೂರ್ಣವಾಗಿ ಅನುಗ್ರಹಿಸುವರು. ಆದುದರಿಂದ ನಿಖಿಲ ಗುಣಗಳೊಡನೆ ಶೌಚವು ಅತ್ಯುತ್ತಮವಾದುದು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಹದಿನಾಲ್ಕನೆಯ
ಅಧ್ಯಾಯವು ಮುಗಿದುದು.

## ಪಂಚದಶೋಽಧ್ಯಾಯಃ

**ಋಷಯ ಊಚುಃ :—**

**ಅಹೋ ಧನ್ಯಸ್ತ್ವಯಾ ಸೂತ ಶ್ರಾದ್ಧಕಲ್ಪಃ ಪ್ರಕೀರ್ತಿತಃ ।**
**ಶ್ರುತಾ ನಃ ಶ್ರಾದ್ಧಕಲ್ಪಾಸ್ತು ಋಷಿಭಿರ್ಯೇ ಪ್ರಕೀರ್ತಿತಾಃ ॥ ೧ ॥**

**ಅತೀವ ವಿಸ್ತರೋ ಹ್ಯಸ್ಯ ವಿಶೇಷೇಣ ತು ಕೀರ್ತಿತಃ ।**
**ವೇದಾಶೇಷಂ ಮಹಾಪ್ರಾಜ್ಞ ಋಷೇಸ್ತಸ್ಯ ಮತಂ ಯಥಾ ॥ ೨ ॥**

**ಸೂತ ಉವಾಚ :—**

**ಕೀರ್ತಯಿಷ್ಯಾಮಿ ವೋ ವಿಪ್ರಾ ಋಷೇಸ್ತಸ್ಯ ಮತಂ ತು ಯತ್ ।**
**ಶ್ರಾದ್ಧಂ ಪ್ರತಿ ಮಹಾಭಾಗಾಸ್ತನ್ಮೇ ಶೃಣುತ ವಿಸ್ತರಾತ್ ॥ ೩ ॥**

**ಉಕ್ತಂ ಶ್ರಾದ್ಧಂ ಮಯಾ ಪೂರ್ವಂ ವಿಧಿಶ್ಚ ಶ್ರಾದ್ಧಕರ್ಮಣಿ ।**
**ಪರಿಶಿಷ್ಟಂ ಪ್ರವಕ್ಷ್ಯಾಮಿ ಬ್ರಾಹ್ಮಣಾನಾಂ ಪರೀಕ್ಷಣಮ್ ॥ ೪ ॥**

---

೧. ಇದನ್ನು ಕೇಳಿದ ಮುನಿಗಳು ಈ ರೀತಿಯಾಗಿ ಹೇಳಿದರು :—ಸೂತ ಮುನಿಯೆ! ನಾವು ಮುನಿಗಳಿಂದ ಉಪದಿಷ್ಟವಾದ ಶ್ರಾದ್ಧಕಲ್ಪಗಳನ್ನು ಕೇಳಿದ್ದರೂ ಮತ್ತೆ ಅದನ್ನು ಸಮಗ್ರವಾಗಿ ಹೇಳಿರುವ ನೀನು ಮಹಾ ಧನ್ಯನು.

೨. ಮಹಾ ಪ್ರಜ್ಞಾಶಾಲಿಯೇ! ಗುರುವಾದ ವ್ಯಾಸಮುನಿಗೆ ಸಮ್ಮತವಾದ ಅಶೇಷ ವಿಷಯಗಳನ್ನು ನೀನು ತಿಳಿದು ಅದರಂತೆ ಅತಿಶಯವಾದ ವಿಸ್ತಾರದಿಂದ ಕೂಡಿ ಶ್ರಾದ್ಧ ಕಲ್ಪವನ್ನು ವಿಶೇಷವಾಗಿ ಹೇಳಿರುತ್ತೀ.

೩. ಸೂತಮುನಿಯು ಪ್ರತ್ಯುತ್ತರವಿತ್ತನು:—ವಿಪ್ರರೆ! ಶ್ರಾದ್ಧಕರ್ಮದಲ್ಲಿರುವ ನನ್ನ ಗುರುಗಳ ಅಭಿಪ್ರಾಯವನ್ನು ಅನುಸರಿಸಿ, ಅದರ ವಿಸ್ತಾರವನ್ನು ಇನ್ನೂ ಉಪದೇಶಿಸುತ್ತೇನೆ. ಮಹಾ ಭಾಗರೆ, ನನ್ನ ವಚನವನ್ನು ಕೇಳಿರಿ.

೪. ಇದುವರೆಗೆ ಶ್ರಾದ್ಧ ಕರ್ಮಾನುಷ್ಠಾನದಲ್ಲಿರುವ ವಿಧಿಯನ್ನು ನಾನು ಸ್ಪಷ್ಟಪಡಿಸಿರುವೆನು. ಇನ್ನು ಮಿಕ್ಕಿರುವ ಶ್ರಾದ್ಧಾರ್ಹ ಬ್ರಾಹ್ಮಣರ ಪರೀಕ್ಷಾ ವಿಷಯವನ್ನು ಹೇಳುವೆನು.

ನ ಮೀಮಾಂಸ್ಯಾಃ ಸದಾ ವಿಪ್ರಾಃ ಪವಿತ್ರಂ ಹ್ಯೇತದುತ್ತಮಮ್ ।
ದೈವೇ ಪಿತ್ರ್ಯೇ ಚ ನಿಯತಂ ಶ್ರೂಯತೇ ವೈ ಪರೀಕ್ಷಣಮ್ ॥ ೫ ॥

ಯಸ್ಮಿನ್ ದೋಷಾಃ ಪ್ರದೃಶ್ಯೇರನ್ ಸ ಹಿ ಕಾರ್ಯೇಷು ವರ್ಜಿತಃ ।
ಜ್ಞಾನಿಯಾದ್ವಾಪಿ ಸ್ಸಂವಾಸಾದ್ವರ್ಜಯೇತ್ತಂ ಪ್ರಯತ್ನತಃ ॥ ೬ ॥

ಅವಿಜ್ಞಾತಂ ದ್ವಿಜಂ ಶ್ರಾದ್ಧೇ ನ ಪರೀಕ್ಷೇತ ಪಂಡಿತಃ ।
ಸಿದ್ಧಾ ಹಿ ವಿಪ್ರರೂಪೇಣ ಚರಂತಿ ಪೃಥಿವೀಮಿಮಾಮ್ ॥ ೭ ॥

ತಸ್ಮಾದತಿಥಿಮಾಯಾಂತಮಭಿಗಚ್ಛೇತ್ ಕೃತಾಂಜಲಿಃ ।
ಪೂಜಯೇಚ್ಚಾರ್ಘ್ಯಪಾದ್ಯಾಭ್ಯಾಂ ತಥಾಭ್ಯಂಜನಭೋಜನೈಃ ॥ ೮ ॥

ಉರ್ವೀಂ ಸಾಗರಪರ್ಯಂತಾಂ ದೇವಾ ಯೋಗೇಶ್ವರಾಃ ಸದಾ ।
ನಾನಾರೂಪೈಶ್ಚರಂತ್ಯೇತೇ ಪ್ರಜಾ ಧರ್ಮೇಣ ಯೋಜಯನ್ ॥ ೯ ॥

---

೫. ವಿಪ್ರರ ವಿಷಯದಲ್ಲಿ ಯಾವಾಗಲೂ ಹೆಚ್ಚಾಗಿ ವಿಚಾರವನ್ನು ಮಾಡಲಾಗದು. ವಿಪ್ರರೆಂಬುದು ಅತಿಶಯಪವಿತ್ರವಾದ ವಸ್ತುವು. ದೈವ-ಪಿತೃಕಾರ್ಯಗಳ ವಿಪ್ರಪರೀಕ್ಷೆಯಲ್ಲಿ ನಿಯತವಾಗಿ ವಿಧಿಸಲ್ಪಟ್ಟ ಈ ವಿಷಯವನ್ನು ಗಮನದಲ್ಲಿಡಬೇಕು.

೬. ಯಾವ ಮಾನವನಲ್ಲಿ ಪ್ರತ್ಯಕ್ಷವಾಗಿ ದೋಷಗಳು ಕಾಣುವುವೋ, ಅಥವಾ ಸಹವಾಸದಿಂದ ತಿಳಿಯುವುವೋ, ಅಂತಹವನು ಸತ್ಕರ್ಮಗಳಲ್ಲಿ ತ್ಯಜಿಸಲು ಅರ್ಹನಾದವನು. ಅವನನ್ನು ಯತ್ನಪೂರ್ವಕವಾಗಿ ದೂರ ವರ್ಜಿಸಬೇಕು.

೭. ಶ್ರಾದ್ಧಯಜ್ಞದಲ್ಲಿ ಗುಣದೋಷಗಳನ್ನು ಅರಿಯದಿರುವ ವಿಪ್ರನನ್ನು ಪಂಡಿತನಾದವನು ಪರೀಕ್ಷಿಸಬಾರದು. ತಪೋ-ಯೋಗಸಿದ್ಧಿಯುಳ್ಳ ಮಹಾತ್ಮರು ವಿಪ್ರರೂಪದಿಂದ ಸಕಲ ಪೃಥಿವಿಯಲ್ಲಿ ಸಂಚರಿಸುತ್ತಿರುವರು.

೮. ಆದುದರಿಂದ ಆಕಸ್ಮಿಕವಾಗಿ ಬರುತ್ತಿದ್ದ ಅತಿಥಿಯನ್ನು ನಮಸ್ಕರಿಸಿ ಕರೆತಂದು ಅರ್ಘ್ಯ, ಪಾದ್ಯ, ಅಭ್ಯಂಜನ ಮತ್ತು ಭೋಜನಗಳೆಂಬ ವಿವಿಧೋಪಚಾರಗಳಿಂದ ಆದರಪೂರ್ವಕವಾಗಿ ಅರ್ಚಿಸಬೇಕು.

೯. ಯೋಗೇಶ್ವರರಾದ ದೇವತೆಗಳು ನಾನಾ ರೂಪಗಳನ್ನು ಧರಿಸಿ ಪ್ರಜೆಗಳಿಗೆ ಸ್ವಧರ್ಮದಲ್ಲಿ ಆಸಕ್ತಿಯನ್ನುಂಟುಮಾಡಲು ಸಮುದ್ರ ಪರ್ಯಂತವಾಗಿ ವಿಶಾಲ ಪೃಥಿವಿಯಲ್ಲಿ ಸಂಚರಿಸುವರು.

ತಸ್ಮಾದ್ದದ್ಯಾತ್ ಸದಾ ದಾಂತಃ ಸಮಭ್ಯರ್ಚ್ಯಾತಿಥಿಂ ನರಃ ।
ವ್ಯಂಜನಾನಿ ತು ವಕ್ಷ್ಯಾಮಿ ಫಲಂ ತೇಷಾಂ ತಥೈವ ಚ ॥ ೧೦ ॥

ಅಗ್ನಿಷ್ಟೋಮಂ ಪಯಸಾ ಪ್ರಾಪ್ನುಯಾದ್ವೈ
ಫಲಂ ತಥೋಕ್ಥ್ಯಸ್ಯ ಚ ಪಾಯಸೇನ ।
ಸಷೋಡಶೀ ಸತ್ರಫಲಂ ಘೃತೇನ
ಮಧ್ವಾತಿರಾತ್ರಸ್ಯ ಫಲಂ ತಥೈವ ॥ ೧೧ ॥

ತಥಾಪ್ನುಯಾಚ್ಛ್ರದ್ಧಧಾನೋ ನರೋ ವೈ
ಸರ್ವೈಃ ಕಾಮ್ಯೈರ್ಭೋಜಯೇದ್ಯಸ್ತು ವಿಪ್ರಾನ್ ।
ಸರ್ವಾರ್ಥದಂ ಸರ್ವವಿಪ್ರಾತಿಥೇಯಂ
ಫಲಂ ಚ ಭುಂಕ್ತೇ ಸರ್ವಮೇಧಸ್ಯ ನಿತ್ಯಮ್ ॥ ೧೨ ॥

ಯಸ್ತು ಶ್ರಾದ್ಧೇಽತಿಥಿಂ ಪ್ರಾಪ್ತಂ ದೈವೇ ಚಾಪ್ಯವಮನ್ಯತೇ ।
ತಂ ವೈ ದೇವಾ ನಿರಸ್ಯಂತಿ ಹತೋ ಯದ್ವತ್ ಪರಾವಸುಃ ॥ ೧೩ ॥

---

೧೦. ಆದ್ದರಿಂದ ಜಿತೇಂದ್ರಿಯನಾದ ಮನುಜನು ಯಾವಾಗಲೂ ಅತಿಥಿಯನ್ನು ಸತ್ಕರಿಸಬೇಕು. ಅತಿಥಿ ಸತ್ಕಾರಕ್ಕೆ ಅರ್ಹವಾದ ಸಾಮಗ್ರಿಯನ್ನೂ ಆಯಾಯ ಸಾಮಗ್ರಿಯಿಂದ ಲಭಿಸುವ ಫಲವನ್ನೂ ಹೇಳುತ್ತೇನೆ.

೧೧. ಅತಿಥಿಗೆ ಕ್ಷೀರವನ್ನು ಅರ್ಪಿಸಿದುದರಿಂದ ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾನೆ. ಪಾಯಸ ನಿವೇದನದಿಂದ ಉಕ್ಥ್ಯಯಾಗ ಫಲವನ್ನು ಅನುಭವಿಸುವನು. ಘೃತದಿಂದ ತೃಪ್ತಿಪಡಿಸಿ ಷೋಡಶಿಯಾಗದ ಫಲಕ್ಕೆ ಭಾಗಿಯಾಗುವನು. ಮತ್ತು ಜೇನುತಪ್ಪದಿಂದ ಸತ್ಕರಿಸಿದವನು ಅತಿರಾತ್ರಯಾಗಾನುಷ್ಠಾನದ ಫಲವನ್ನು ಹೊಂದುವನು.

೧೨. ಹಾಗೆ ಶ್ರದ್ಧೆಯಿಂದ ಕೂಡಿದ ನರನು ಸರ್ವಕಾಮಗಳಿಂದಲೂ ಅತಿಥಿಗೆ ಭೋಜನಮಾಡಿಸಿದುದರಿಂದ ಸರ್ವಮೇಧ ಯಾಗದಿಂದ ಬರುವ, ಸಮಸ್ತವಿಪ್ರರಿಗೂ ಆತಿಥ್ಯಸತ್ಕಾರವನ್ನು ಮಾಡಿ ಸಂಪಾದಿಸುವ ಮತ್ತು ಸಮಸ್ತಾರ್ಥಗಳನ್ನು ಕೊಡುವ ಫಲರಾಶಿಯನ್ನು ಹೊಂದುತ್ತಾನೆ.

೧೩. ಯಾವ ನರನು ದೈವ-ಪಿತ್ರ್ಯಕರ್ಮಗಳ ಪ್ರಸಂಗದಲ್ಲಿ ಬಂದಿರುವ ಅತಿಥಿಗೆ ಅವಮಾನಮಾಡುವನೊ, ಅಂತಹವನನ್ನು ದೇವತೆಗಳು ದೂರಬಿಡುವರು. ಇದರಿಂದಲೇ ಪರಾವಸು ಎಂಬುವನು ಅನರ್ಥಕ್ಕೆ ಪಾತ್ರನಾದನು.

ದೇವಾಶ್ಚ ಪಿತರಶ್ಚೈವ ತನೋವಾಂತರ್ಹಿತಾ ದ್ವಿಜಮ್ ।
ಆವಿಶ್ಯ ವಿಪ್ರಂ ಭೋಕ್ಷ್ಯಂತಿ ಲೋಕಾನುಗ್ರಹಕಾರಣಾತ್ ॥ ೧೪ ॥

ಅಪೂಜಿತೋ ದಹತ್ಯೇಷ ದಿಶೇತ್ ಕಾಮಾಂಶ್ಚ ಪೂಜಿತಃ ।
ಸರ್ವಸ್ವೇನಾಪಿ ತಸ್ಮಾದ್ಧಿ ಪೂಜಯೇದತಿಥಿಂ ಸದಾ ॥ ೧೫ ॥

ವಾನಪ್ರಸ್ಥೋ ಗೃಹಸ್ಥಶ್ಚ ಸತಾಮಭ್ಯಾಗತೋ ಯಥಾ ।
ವಾಲಖಿಲ್ಯೋ ಯತಿಶ್ಚೈವ ವಿಜ್ಞೇಯೋ ಹ್ಯತಿಥಿಃ ಸದಾ ॥ ೧೬ ॥

ಅಭ್ಯಾಗತಃ ಪಾಕಚಾರಾದತಿಥಿಃ ಸ್ಯಾದಸಾವಕಃ ।
ಅತಿಥೇರತಿಥಿಃ ಪ್ರೋಕ್ತಃ ಸೋತಿಥಿರ್ಯೋಗ ಉಚ್ಯತೇ ॥ ೧೭ ॥

ನಾವ್ರತೀ ನ ಚ ಸಂಕೀರ್ಣೋ ನಾವಿದ್ಯೋ ನಾವಿಶೇಷವಿತ್ ।
ನ ಚ ಸಂತಾನಸಂಬದ್ಧೋ ನ ಸೇವೀ ನಾಗಸೋತಿಥಿಃ ॥ ೧೮ ॥

---

೧೪. ದೇವತೆ-ಪಿತೃಗಳು ಅಂತರ್ಧಾನ ಶಕ್ತಿಯಿಂದ ಅದೃಶ್ಯರಾಗಿ ಅತಿಥಿ ಸ್ವರೂಪನಾದ ವಿಪ್ರನಲ್ಲಿ ಪ್ರವೇಶಿಸಿ ಲೋಕಾನುಗ್ರಹಕ್ಕೋಸ್ಕರವಾಗಿ ಜನರಿಂದ ಕೊಡಲ್ಪಟ್ಟ ಸತ್ಕಾರವನ್ನು ಸ್ವೀಕರಿಸುವರು.

೧೫ ನರನಿಂದ ಪೂಜಿಸಲ್ಪಡದಿರುವ ಅತಿಥಿಯು ಸರ್ವಸ್ವವನ್ನೂ ಭಸ್ಮ ಮಾಡುತ್ತಾನೆ. ಪೂಜಿಸಲ್ಪಟ್ಟವನಾಗಿ ಸರ್ವಕಾಮಗಳನ್ನೂ ಅನುಗ್ರಹಿ ಎತ್ತಾನೆ. ಆದ್ದರಿಂದ ಸರ್ವಸ್ವವನ್ನು ಒಪ್ಪಿಸಿಯಾದರೂ ಯಾವಾಗಲೂ ಅತಿಥಿಯನ್ನು ಅವಶ್ಯ ವಾಗಿ ಪೂಜಿಸಬೇಕು.

೧೬. ಸದಾಚಾರವಂತರಾದ ಜನರಿಗೆ ವಾನಪ್ರಸ್ಥ ಅಥವಾ ಗೃಹಸ್ಥನು ಬಂದರೆ ಅಭ್ಯಾಗತನೆಂದು ಭಾವಿಸಬೇಕು. ವಾಲಖಿಲ್ಯ ಋಷಿ ಅಥವಾ ಯತಿಯು ಬಂದರೆ ಯಾವಾಗಲೂ ಅತಿಥಿಯೆಂದು ಭಾವಿಸಬೇಕು.

೧೭. ಪಾಕಾರಂಭ ಸಮಯದಲ್ಲಿ ಬಂದವನು ಅಭ್ಯಾಗತನೆಂದೂ, ಪಾಕ ಸಮಾಪ್ತಿಯಾದ ಬಳಿಕ ಅಗ್ನಿ ಪ್ರಜ್ವಲನಶೂನ್ಯ ಸಮಯದಲ್ಲಿ ಬಂದವನು ಅತಿಥಿ ಯೆಂದೂ ಅತಿಥಿ-ಅಭ್ಯಾಗತರ ತಾರತಮ್ಯವು. ತಿಥಿ ನಿಯಮವಿಲ್ಲದೇ ಆಕಸ್ಮಿಕವಾಗಿ ಬರುವುದರಿಂದ ಅತಿಥಿಯೆಂದು ಕರೆಯಲ್ಪಡುವನು. ಅಂತಹ ಅತಿಥಿಯು ಯೋಗ ಸ್ವರೂಪನಾಗಿರುವನು.

೧೮. ವ್ರತಾನುಷ್ಠಾನಶೂನ್ಯ, ಸಂಕೀರ್ಣ, ವಿದ್ಯಾವಿಹೀನ, ವಿಶೇಷಜ್ಞಾನ ರಹಿತ, ಸಂತತಿ ಸಂಬಂಧವುಳ್ಳವನು, ಸೇವಕ ಮತ್ತು ಅಪರಾಧದಲ್ಲಿ ದೃಷ್ಟಿಯುಳ್ಳ ವನು, ಇವರು ಅತಿಥಿಸತ್ಕಾರಕ್ಕೆ ಅರ್ಹರಲ್ಲ.

ಪಿಪಾಸಿತಾಯ ಶ್ರಾಂತಾಯ ಭ್ರಾಂತಾಯಾತಿಬುಭುಕ್ಷತೇ ।
ತಸ್ಮೈ ಸತ್ಕೃತ್ಯ ದಾತವ್ಯಂ ಯಜ್ಞಸ್ಯ ಫಲಮಿಚ್ಛತಾ ॥ ೧೯ ॥

ನ ವಕ್ತವ್ಯಂ ಸದಾ ವಿಪ್ರ ಕ್ಷುಧಿತೇ ನಾಸ್ತಿ ಕಿಂಚನ ।
ತಸ್ಮೈ ಸತ್ಕೃತ್ಯ ದಾತವ್ಯಂ ಸದಾಪಚಿತಿರೇವ ಸಃ ॥ ೨೦ ॥

ಅಕ್ಲಿಷ್ಟಮವ್ರಣಂ ಯುಕ್ತಂ ಕೃಶವೃತ್ತಿಮಯಾಚಕಮ್ ।
ಏಕಾಂತಶೀಲಂ ಧೀಮಂತಂ ಸದಾ ಶ್ರಾದ್ಧೇಷು ಭೋಜಯೇತ್ ॥೨೧॥

ನೋ ದದಾಮಿ ತಮಿತ್ಯೇವಂ ಬ್ರೂಯಾದ್ಯೋ ವೈ ದುರಾತ್ಮವಾನ್ ।
ಅಪಿ ಜಾತಿಶತಂ ಗತ್ವಾ ನ ಸ ಮುಚ್ಯೇತ ಕಿಲ್ಬಿಷಾತ್ ॥ ೨೨ ॥

ಸಮೋದಂ ಭೋಜಯೇದ್ವಿಪ್ರಾನೇಕಪಂಕ್ತ್ಯಾಂ ತು ಯೋ ನರಃ ।
ನಿಯುಕ್ತೋ ಹ್ಯನಿಯುಕ್ತೋ ವಾ ಪಂಕ್ತ್ಯಾಹರತಿ ಕಿಲ್ಬಿಷಮ್॥ ೨೩ ॥

---

೧೯. ನೀರಡಿಕೆಹೊಂದಿರುವ, ಬಳಲಿರುವ, ಭ್ರಮಿಸಿಬಂದ ಮತ್ತು ಹೆಚ್ಚು ಹಸಿವಿನಿಂದ ಪೀಡಿತನಾದಂತಹ ಮನುಷ್ಯನಿಗೆ ಸತ್ಕರಿಸಿ ಭೋಜನಾದಿಗಳನ್ನು ದಾನ ಮಾಡಬೇಕು. ಇದರಿಂದ ಯಜ್ಞಾನುಷ್ಠಾನದ ಫಲವು ಪ್ರಾಪ್ತವಾಗುವುದು.

೨೦. ಹಸಿಗೊಂಡಿರುವ ಮಾನವನ ವಿಷಯದಲ್ಲಿ ಏನೊಂದೂ ನುಡಿಯಬೇಕಾಗಿಲ್ಲ. ಅಂತಹ ದೋಷವು ಅವನಲ್ಲಿ ಯಾವುದೂ ಇಲ್ಲ, ಅಂತಹವನಿಗೆ ಸತ್ಕರಿಸಿ ದಾನಮಾಡಬೇಕು. ಅವನು ಯಾವಾಗಲೂ ಪೂಜಾರ್ಹನಾಗಿರುವನು.

೨೧. ಕ್ಲೇಶವರ್ಜಿತನು, ವ್ರಣರಹಿತನು, ಯೋಗಿ, ಅಲ್ಪಜೀವಿಕೆಯುಳ್ಳವನು, ಯಾಚನಮಾಡದಿರುವವನು ಮತ್ತು ಏಕಾಂತವಾದ ಶೀಲವುಳ್ಳ ಜ್ಞಾನಿ ಇಂತಹ ಸತ್ಪಾತ್ರವನ್ನು ಶ್ರಾದ್ಧದಲ್ಲಿ ಭೋಜನ ಮಾಡಿಸಬೇಕು.

೨೨. ಅಂತಹವನನ್ನು ಕುರಿತು ಏನೊಂದನ್ನೂ ಕೊಡುವುದಿಲ್ಲವೆಂದು ನಿರಾಕರಿಸಿದ ದುಷ್ಟಶೀಲವುಳ್ಳ ಮಾನವನು ನೂರಾರು ಕೆಟ್ಟ ಜಾತಿಗಳಲ್ಲಿ ಹುಟ್ಟಿದರೂ ಸಂಪೂರ್ಣವಾಗಿ ಪಾಪಗಳಿಂದ ಮುಕ್ತನಾಗುವುದಿಲ್ಲ.

೨೩. ಯಾವ ಕರ್ಮಶೀಲನು ಒಂದು ಪಂಕ್ತಿಯಲ್ಲಿ ಅನೇಕಮಂದಿ ವಿಪ್ರರನ್ನು ಕುಳ್ಳಿರಿಸಿ ಸಂತೋಷದಿಂದ ಭೋಜನಮಾಡಿಸುವನೋ ಅವನು ಮತ್ತೊಬ್ಬರ ಆಜ್ಞೆಯನ್ನು ಒಪ್ಪಿ ಅಥವಾ ಸ್ವತಂತ್ರನಾಗಿ ಮಾಡಿರುವ ಈ ಕರ್ಮದಿಂದ ಪಾಪಗಳನ್ನು ಕಳೆದುಕೊಳ್ಳುತ್ತಾನೆ.

ಪಾಪ್ಮಾನಂ ಗೃಹ್ಯತೇ ಕ್ಷಿಪ್ರಮಿಷ್ಟಾಪೂರ್ತಂ ಚ ನಶ್ಯತಿ ।
ಯತಿಸ್ತು ಸರ್ವವಿಪ್ರಾಣಾಂ ಸರ್ವೇಷಾಮಗ್ರತೋ ಭವೇತ್ ॥ ೨೪ ॥

ಪಂಚ ವೇದಾನ್ ಸೇತಿಹಾಸಾನ್ ಯಃ ಪಠೇದ್ದ್ವಿಜಸತ್ತಮಃ ।
ಯೋಗಾಚನಂತರಂ ಸೋಽಥ ನಿಯೋಕ್ತವ್ಯೋ ವಿಜಾನತಾ ॥ ೨೫ ॥

ತ್ರಿವೇದೋಽನಂತರಂ ತಸ್ಯ ದ್ವಿವೇದಸ್ತದನಂತರಮ್ ।
ಏಕವೇದಸ್ತತಃ ಪಶ್ಚಾದುಪಾಧ್ಯಾಯಸ್ತತಃ ಪರಮ್ ॥ ೨೬ ॥

ಪಾವನಾ ಯೇಽತ್ರ ಸಂಖ್ಯಾತಾಸ್ತಾನ್ ಪ್ರವಕ್ಷ್ಯೇ ನಿಬೋಧತ ।
ಯ ಏತೇ ಪೂರ್ವನಿರ್ದಿಷ್ಟಾಃ ಸರ್ವೇ ತೇ ಹ್ಯನುಪೂರ್ವಶಃ ॥ ೨೭ ॥

ಷಡಂಗವಿದ್ಧ್ಯಾನಯೋಗೌ ಸರ್ವತಂತ್ರಸ್ತಥೈವ ಚ ।
ಯಾಯಾವರಶ್ಚ ಪಂಚೈತೇ ವಿಜ್ಞೇಯಾಃ ಪಂಕ್ತಿಪಾವನಾಃ ॥ ೨೮ ॥

---

೨೪. ಅತಿಥಿಸತ್ಕಾರ ತ್ಯಾಗದಿಂದ ಪಾಪವುಂಟಾಗುವುದು. ಮತ್ತು ಇಷ್ಟಾಪೂರ್ತಾದಿ ಸತ್ಕರ್ಮಗಳು ನಶಿಸುವುವು. ಸರ್ವವಿಪ್ರರಲ್ಲಿಯೂ ಯತಿಯು ಅಗ್ರಪೂಜೆಗೆ ಯೋಗ್ಯನಾದವನು.

೨೫. ಯೋಗಿಯಾದ ಯತಿಯ ಅನಂತರದಲ್ಲಿ ಇತಿಹಾಸದಿಂದ ಕೂಡಿದ ನಾಲ್ಕು ವೇದಗಳನ್ನು ಅಧ್ಯಯನಮಾಡಿದ ಬ್ರಾಹ್ಮಣ ಶ್ರೇಷ್ಠನನ್ನು ಜ್ಞಾನಿಯಾದ ಯಜಮಾನನು ನಿಮಂತ್ರಿಸಬೇಕು.

೨೬. ಅನಂತರದಲ್ಲಿ ತ್ರಿವೇದಿಯೂ, ಅವನನಂತರ ದ್ವಿವೇದಿಯೂ, ತದನಂತರ ಏಕವೇದಿಯೂ ಮತ್ತು ಕಡೆಯಲ್ಲಿ ಉಪಾಧ್ಯಾಯನೂ ನಿಯೋಗಕ್ಕೆ ಕ್ರಮವಾಗಿ ಅರ್ಹರೆಂದು ತಿಳಿಯಬೇಕು.

೨೭. ಹಿಂದೆ ಹೇಳಿದವರಲ್ಲಿ ಪಾವನರಾದ ವ್ಯಕ್ತಿಗಳನ್ನು ಹೇಳುತ್ತೇನೆ, ಕೇಳಿರಿ. ಹಿಂದೆ ಹೇಳಿರುವವರೆಲ್ಲರೂ ಅದೇ ಕ್ರಮದಂತೆ ಪೂಜ್ಯರೂ ಮತ್ತು ಪಾವನರೆಂದು ಅರಿಯಬೇಕು.

೨೮. ಶಿಕ್ಷಾದಿಷಡಂಗ ಜ್ಞಾನಿ, ಧ್ಯಾನನಿರತ, ಯೋಗಿ, ಸರ್ವತಂತ್ರನಿಷ್ಣಾತ, ಮತ್ತು ಯತಿ—ಇವರು ಐದುಮಂದಿಯೂ ಪಂಕ್ತಿಯನ್ನು ಪವಿತ್ರಮಾಡುವ ಮಹಿಮೆಯುಳ್ಳವರೆಂದು ತಿಳಿಯಬೇಕು.

ಶ್ರಾದ್ಧಕಲ್ಪೇ ಭವೇದ್ಯಸ್ತು ಸನ್ನಿಪತ್ಯ ತು ಪಾವನಃ ।
ಚತುರ್ದಶಾನಾಂ ವಿದ್ಯಾನಾಮೇಕಸ್ಯಾಮಪಿ ಪಾರಗಾಃ ॥ ೨೯ ॥

ಯಥಾವದ್ವರ್ತಮಾನಾಶ್ಚ ಸರ್ವೇ ತೇ ಪಂಕ್ತಿಪಾವನಾಃ ।
ಅಸಂದೇಹಸ್ತು ಸೌಪರ್ಣಾಃ ಪಂಚಾಗ್ನೇಯಾಶ್ಚ ಸಾಮಗಾಃ ॥ ೩೦ ॥

ಯಶ್ಚರೇದ್ವಿಧಿವದ್ವಿಪ್ರ ಸಮಾ ದ್ವಾದಶ ಸಂತತಃ ।
ತ್ರಿನಾಚಿಕೇತಸ್ತ್ರೈವಿದ್ಯೋ ಯಶ್ಚ ಧರ್ಮಾನ್ ದ್ವಿಜಃ ಪಠೇತ್
॥ ೩೧ ॥

ಬಾರ್ಹಸ್ಪತ್ಯೇ ಮಹಾಶಾಸ್ತ್ರೇ ಯಶ್ಚ ಪಾರಂಗತೋ ದ್ವಿಜಃ ।
ಸರ್ವೇ ತೇ ಪಾವನಾ ವಿಪ್ರಾಃ ಪಂಕ್ತೀನಾಂ ಸಮುದಾಹೃತಾಃ ॥ ೩೨ ॥

ಆಮಂತ್ರಿತಸ್ತು ಯಃ ಶ್ರಾದ್ಧೇ ಯೋಷಿತಂ ಸೇವತೇ ದ್ವಿಜಃ ।
ಪಿತರಸ್ತಸ್ಯ ತನ್ಮಾಸಂ ತಸ್ಮಿನ್ ರೇತಸಿ ಶೇರತೇ ॥ ೩೩ ॥

---

೨೯. ಶ್ರಾದ್ಧಕಲ್ಪವನ್ನು ಸಮಗ್ರವಾಗಿ ತಿಳಿದಿರುವವನು ಸನ್ನಿಧಿಯಲ್ಲಿರುವಿಕೆಯಿಂದಲೇ ಪಾವಿತ್ರ್ಯವನ್ನುಂಟುಮಾಡುವನು, ಮತ್ತು ಹದಿನಾಲ್ಕು ವಿದ್ಯೆಗಳಲ್ಲಿ ಯಾವುದಾದರೊಂದು ವಿದ್ಯೆಯಲ್ಲಿ ಪಾರಂಗತನೂ ವಿಶೇಷವಾಗಿ ಪಾವನನು.

೩೦. ಶಾಸ್ತ್ರ ವಿಧಿಯನ್ನನುಸರಿಸಿ ಅನುಷ್ಠಾನ ತತ್ಪರರೆಲ್ಲರೂ ಪಂಕ್ತಿಪಾವನರು. ಇದರಲ್ಲಿ ಸಂದೇಹವಿಲ್ಲ. ಸುಪರ್ಣ ಮಂತ್ರಾಧ್ಯಾಯಿಗಳು, ಪಂಚಾಗ್ನಿ ಉಪಾಸಕರು ಮತ್ತು ಸಾಮವೇದಾಧ್ಯಾಯಿಗಳು ವಿಶೇಷವಾಗಿ ಪಾವನರು.

೩೧. ವಿಪ್ರನೆ! ಯಥಾ ವಿಧಿಯಾಗಿ ಹನ್ನೆರಡು ಸಂವತ್ಸರಗಳ ವರೆಗೆ ಅವಿಚ್ಛಿನ್ನವಾಗಿ ನಾಚಿಕೇತಾಗ್ನಿ ವಿಧಿಯನ್ನು ಅಧ್ಯಯನ, ಜ್ಞಾನ, ಅನುಷ್ಠಾನಗಳೆಂಬ ಮೂರು ಆವೃತ್ತಿಯಿಂದ ನೆರವೇರಿಸಿದವನು, ವೇದತ್ರಯಾಭಿಜ್ಞನು, ಧರ್ಮ ಬೋಧಕನಾದ ವಿಪ್ರನು ಇವರು ಪಾವನರಾದವರು.

೩೨. ಮತ್ತು ಬೃಹಸ್ಪತಿ ಪ್ರಣೀತಶಾಸ್ತ್ರದಲ್ಲಿ ಪಾರಂಗತನಾದ ದ್ವಿಜನು ಸೇರಿ ಹಿಂದೆ ಹೇಳಿದುವ ಮಹಾತ್ಮರೆಲ್ಲರೂ ಪಂಕ್ತಿಪಾವನರೆಂದು ಸ್ಮರಿಸಲ್ಪಟ್ಟಿರುವರು.

೩೩. ಶ್ರಾದ್ಧದಲ್ಲಿ ಆಮಂತ್ರಿತನಾದ ವಿಪ್ರನು ನಿಯಮವನ್ನು ಉಲ್ಲಂಘಿಸಿ ಸ್ತ್ರೀ ಸಮಾಗಮವನ್ನು ಮಾಡಿದರೆ ಅವನ ಪಿತೃಗಳು ಒಂದು ತಿಂಗಳು ಪರ್ಯಂತರೇತಸ್ಸಿನಲ್ಲಿ ಶಯನಮಾಡುವರು.

ಧ್ಯಾನನಿಷ್ಠಾಯ ದಾತವ್ಯಂ ಸಾನುಕ್ರೋಶಾಯ ಧೀಮತೇ ।
ಯತಿಂ ವಾ ವಾಲಖಿಲ್ಯಂ ವಾ ಭೋಜಯೇಚ್ಛ್ರಾದ್ಧಕರ್ಮಣಿ॥ ೩೪ ॥

ವಾನಪ್ರಸ್ಥಾಯ ಕುರ್ವಾಣಃ ಪೂಜಾಮಾತ್ರೇಣ ತುಷ್ಯತೇ ।
ಗೃಹಸ್ಥಂ ಭೋಜಯೇದ್ಯಸ್ತು ವಿಶ್ವೇದೇವಾಸ್ತು ಪೂಜಿತಾಃ ॥ ೩೫ ॥

ವಾನಪ್ರಸ್ಥೇನ ಋಷಯೋ ವಾಲಖಿಲ್ಯೈಃ ಪುರಂದರಃ ।
ಯತೀನಾಂ ತು ಕೃತಾ ಪೂಜಾ ಸಾಕ್ಷಾದ್ಬ್ರಹ್ಮಾ ತು ಪೂಜಿತಃ ॥ ೩೬ ॥

ಆಶ್ರಮೋಽಪಾವನೋ ಯಸ್ತು ಪಂಚಮಃ ಸಂಕರಾತ್ಮಕಃ ।
ಚತ್ವಾರಸ್ತ್ವಾಶ್ರಮಾಃ ಪೂಜ್ಯಾಃ ಶ್ರಾದ್ಧೇ ದೈವೇ ತಥೈವ ಚ ॥ ೩೭ ॥

ಚಾತುರಾಶ್ರಮಬಾಹ್ಯೇಭ್ಯಸ್ತೇಭ್ಯಃ ಶ್ರಾದ್ಧೇ ನ ದಾಪಯೇತ್ ।
ಯಸ್ತಿಷ್ಠೇದ್ವಾಯುಭಕ್ಷಶ್ಚ ಚಾತುರಾಶ್ರಮಬಾಹ್ಯತಃ ॥ ೩೮ ॥

---

೩೪. ಧ್ಯಾನನಿಷ್ಠೆ, ದಯೆ, ಜ್ಞಾನ ಮುಂತಾದುವುಗಳಿಂದ ಕೂಡಿದ ಪುರುಷ, ಯತಿ ಅಥವಾ ವಾಲಖಿಲ್ಯ ಎಂಬ ಮಹಾತ್ಮರನ್ನು ಕರೆದು ಶ್ರಾದ್ಧಯಜ್ಞದಲ್ಲಿ ಭೋಜನಮಾಡಿಸಬೇಕು.

೩೫. ಹೀಗೆ ಪೂಜೆಯನ್ನು ಆಚರಿಸಿದ ಮಾತ್ರದಿಂದ ತೃಪ್ತಿಗೊಳ್ಳುವ ವಾನಪ್ರಸ್ಥಾಶ್ರಮಿಯಾದ ಗೃಹಸ್ಥನನ್ನು ಯಾವನು ಭೋಜನಮಾಡಿಸುವನೋ ಅವನಿಂದ ವಿಶ್ವೇದೇವರು ಪೂಜಿಸಲ್ಪಟ್ಟಂತೆ ಆಗಿ ಪ್ರಸನ್ನರಾಗುವರು.

೩೬. ವಾನಪ್ರಸ್ಥಾಶ್ರಮಿಯ ಅರ್ಚನೆಯಿಂದ ಋಷಿಗಳು, ವಾಲಖಿಲ್ಯನ ಅರ್ಚನೆಯಿಂದ ಇಂದ್ರನು ಅರ್ಚಿಸಲ್ಪಟ್ಟಂತಾಗಿ ಪ್ರಸನ್ನರಾಗುವರು. ಯತಿಗಳಿಗೆ ಮಾಡಿದ ಪೂಜೆಯು ಸಾಕ್ಷಾತ್ತಾಗಿ ಬ್ರಹ್ಮದೇವನ ಅರ್ಚನೆಯಾಗುವುದು.

೩೭. ಪಿತೃಕರ್ಮವಾದ ಶ್ರಾದ್ಧ ಮತ್ತು ದೈವಕರ್ಮಗಳಲ್ಲಿ ಚತುರಾಶ್ರಮಿಗಳು ಮಾತ್ರ ಪೂಜ್ಯರಾಗಿರುವರು. ಈ ನಾಲ್ಕು ಆಶ್ರಮಗಳನ್ನು ತ್ಯಜಿಸಿ ಅಪಾವನವೂ ಸಂಕರರೂಪವೂ ಆದ ಐದನೆಯ ಆಶ್ರಮವು ಪೂಜಾರ್ಹವಲ್ಲ.

೩೮. ಚತುರಾಶ್ರಮ ಬಾಹ್ಯನಾಗಿ ವಾಯುಭಕ್ಷಾದಿ ವ್ರತದಿಂದ ಕೂಡಿದ ಕ್ಲೇಶಸಾಧ್ಯವಾದ ಮಹಾ ತಪಸ್ಸನ್ನು ಆಚರಿಸುವವನು ಕೂಡ ಚತುರಾಶ್ರಮ ಬಾಹ್ಯನಾದುದರಿಂದ ಅವನಿಗೆ ಶ್ರಾದ್ಧಯಜ್ಞದಲ್ಲಿ ಭೋಜನಾದಿ ದಾನದಿಂದ ಸತ್ಕಾರವನ್ನು ಅರ್ಪಿಸಬಾರದು.

**ಅನಾಶ್ರಮೀ ತಪಸ್ತೇಪೇ ನ ತಂ ತತ್ರ ನಿಮಂತ್ರಯೇತ್ ।**
**ಅಯತಿರ್ಮೋಕ್ಷವಾದೀ ಚ ಶ್ರುತೌ ತೌ ಪಂಕ್ತಿದೂಷಕೌ ॥ ೩೯ ॥**

**ಉಗ್ರೇಣ ತಪಸಾ ಯುಕ್ತಾ ಬಹುಜ್ಞಾಶ್ಚಿತ್ರವಾದಿನಃ ।**
**ನಿಂದಂತಿ ಚ ದ್ವಿಜಾತಿಭ್ಯಃ ಸರ್ವೇ ತೇ ಪಂಕ್ತಿದೂಷಕಾಃ ॥ ೪೦ ॥**

**ಔಪವಸ್ತ್ಯಾಸ್ತಥಾ ಸಾಂಖ್ಯಾ ನಾಸ್ತಿಕಾ ವೇದನಿಂದಕಾಃ ।**
**ಧ್ಯಾನಂ ನಿಂದಂತಿ ಯೇ ಕೇಚಿತ್ ಸರ್ವೇ ತೇ ಪಂಕ್ತಿದೂಷಕಾಃ ॥ ೪೧ ॥**

**ವೃಥಾ ಮುಂಡಾಶ್ಚ ಜಟಿಲಾಃ ಸರ್ವೇ ಕಾರ್ಪಟಿಕಾಸ್ತಥಾ ।**
**ನಿರ್ಘೃಣಾನ್ ಭಿನ್ನವೃತ್ತಾಂಶ್ಚ ಸರ್ವಭಕ್ಷಾಂಶ್ಚ ವರ್ಜಯೇತ್ ॥ ೪೨ ॥**

**ಕಾರುಕಾದೀನನಾಚಾರಾಂಲ್ಲೋಕವೇದಬಹಿಷ್ಕೃತಾನ್ ।**
**ಗಾಯನಾನ್ ವೇದವೃತ್ತಾಂಶ್ಚ ಹವ್ಯಕವ್ಯೇ ನ ಭೋಜಯೇತ್ ॥ ೪೩ ॥**

---

೩೯. ಅನಾಶ್ರಮಿಯಾಗಿದ್ದು ತಪಸ್ಸನ್ನು ಆಚರಿಸಿದ ಮಾತ್ರದಿಂದ ಅವನು ಶ್ರಾದ್ಧನಿಮಂತ್ರಣಕ್ಕೆ ಅರ್ಹನಾದ ಪಾವನನಾಗಲಾರನು. ಹಾಗೆ ಯತಿಯಲ್ಲದ ಮೋಕ್ಷವಾದಿಯು ಪಾವನನಲ್ಲ. ಅಂತಹವರಿಬ್ಬರು ಪಂಕ್ತಿದೂಷಕರೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವರು.

೪೦. ಉಗ್ರವಾದ ತಪಸ್ಸಿನ ಆಚರಣೆ, ವಿವಿಧಾರ್ಥಜ್ಞಾನ ಮತ್ತು ವಿಚಿತ್ರವಾದ ವಾಗ್ಮಿತಾ ಮುಂತಾದ ಗುಣಗಳಿದ್ದರೂ ದ್ವಿಜರನ್ನು ನಿಂದಿಸುವವರು ಪಂಕ್ತಿ ದೂಷಕರೆಂದು ಪರಿಗಣಿಸಲ್ಪಟ್ಟಿರುವರು.

೪೧. ಅಸಾಂಖ್ಯರೂ, ನಾಸ್ತಿಕರೂ, ವೇದನಿಂದಕರೂ ಆಗಿ ಶಾಸ್ತ್ರೀಯವಾದ ಧ್ಯಾನಮಾರ್ಗವನ್ನು ಭಿನ್ನದೃಷ್ಟಿಯಿಂದ ದೂಷಿಸುವವರು ಪಂಕ್ತಿ ದೂಷಕರಾಗಿರುವರು.

೪೨. ಅಶಾಸ್ತ್ರೀಯವಾಗಿ ಮುಂಡನ, ಜಟಾಧಾರಣ, ಕರ್ಪಟಧಾರಣ— ಮುಂತಾದ ನಿಯಮಗಳನ್ನು ವ್ಯರ್ಥವಾಗಿ ಆಚರಿಸುವ, ನಿಷ್ಕರುಣರಾದ, ಆಚಾರವನ್ನು ಉಲ್ಲಂಘಿಸಿದ ಮತ್ತು ಸರ್ವಭಕ್ಷರಾದವರನ್ನು ವರ್ಜಿಸಬೇಕು.

೪೩. ಲೋಕ—ವೇದಕರ್ಮಗಳಲ್ಲಿ ಬಹಿಷ್ಕೃತರಾಗಿರುವ, ರಜಕ ಮುಂತಾದ ಶಿಲ್ಪಕರ್ಮ ಚತುರರಾದ ಅನಾಚಾರ ಪುರುಷರನ್ನು ಮತ್ತು ವೇದೋಕ್ತಾಚಾರವಂತರಾದ ಗಾಯಕರನ್ನು ಹವ್ಯ-ಕವ್ಯಗಳಲ್ಲಿ ವರ್ಜಿಸಬೇಕು.

ಏತೈಸ್ತು ವರ್ತಯೇದ್ಯಸ್ತು ಕೃಷ್ಣವರ್ಣಂ ಸ ಗಚ್ಛತಿ ।
ಯೋಽಶ್ನಾತಿ ಸಹ ಶೂದ್ರೇಣ ಸರ್ವೇ ತೇ ಪಂಕ್ತಿದೂಷಕಾಃ ॥ ೪೪ ॥

ವ್ಯಾಕರ್ಷಣಂ ಸತ್ತ್ವನಿಬರ್ಹಣಂ ಚ
ಕೃಷಿರ್ವಣಿಜ್ಯಾ ಪಶುಪಾಲನಂ ಚ ।
ಶುಶ್ರೂಷಣಂ ಚಾಪ್ಯಗುರೋರರೇರ್ವಾ-
ಪ್ಯಕಾರ್ಯಮೇತದ್ಧಿ ಸದಾ ದ್ವಿಜಾನಾಮ್ ॥ ೪೫ ॥

ಮಿಥ್ಯಾಸಂಕಲ್ಪಿನಃ ಸರ್ವಾನುದ್ವೃತ್ತಾಂಶ್ಚ ವಿವರ್ಜಯೇತ್ ।
ಮಿಥ್ಯಾಪ್ರವಾದೀ ನಿಂದಾಕೃತ್ತಥಾ ಸೂಚಕದಾಂಭಿಕೌ ॥ ೪೬ ॥

ಉಪಪಾತಕಸಂಯುಕ್ತಾಃ ಪಾತಕೈಶ್ಚ ವಿಶೇಷತಃ ।
ವೇದೇ ನಿಯೋಗದಾತಾರೋ ಲೋಭಮೋಹಫಲಾರ್ಥಿನಃ ॥ ೪೭ ॥

---

೪೪. ಈ ರೀತಿ ನಿಷಿದ್ಧರಾದವರನ್ನು ನಿಮಂತ್ರಿಸಿದರೆ ಯಜಮಾನನು ಅಂತ್ಯ ಜಾತಿಯನ್ನು ಹೊಂದುತ್ತಾನೆ. ಶೂದ್ರನ ಸಂಗಡ ಭೋಜನಮಾಡಿದವನು ಕೂಡ ಪಂಕ್ತಿ ದೂಷಕನಾಗುವನು.

೪೫. ಮೃಗ ಬೇಟೆಯಲ್ಲಿ ಅಥವಾ ಯುದ್ಧದಲ್ಲಿ ಮೌರ್ವಿಯನ್ನು ಸೆಳೆಯುವುದು, ಪ್ರಾಣಿಗಳನ್ನು ಸಂಹರಿಸುವುದು, ಕೃಷಿ, ವ್ಯಾಪಾರ, ಪಶುಪಾಲನ, ಗುರುವಲ್ಲದ ಸಾಧಾರಣ ಪುರುಷ ಮತ್ತು ಶತ್ರುಗಳನ್ನು ಸೇವಿಸುವುದು— ಈ ಕರ್ಮಗಳು ವಿಪ್ರರಿಗೆ ಯಾವಾಗಲೂ ನಿಷಿದ್ಧವಾಗಿವೆ.

೪೬. ಸತ್ಕರ್ಮಗಳಲ್ಲಿ ವ್ಯರ್ಥವಾದ ಸಂಕಲ್ಪಮಾಡುವವರೂ, ಆಚಾರೋಲ್ಲಂಘಿಗಳೂ, ಮಿಥ್ಯಾಪ್ರವಾದಿಗಳೂ, ನಿಂದಕರೂ, ಚಾಡಿಗೋರರೂ ಮತ್ತು ದಾಂಭಿಕರೂ ಶ್ರಾದ್ಧಕರ್ಮದಲ್ಲಿ ತ್ಯಜಿಸಲ್ಪಡಬೇಕು.

೪೭. ಹಾಗು ಉಪಪಾತಕಗಳಿಂದ ಕೂಡಿದವರೂ, ಇತರ ವಿಶೇಷ ಪಾತಕಗಳಿಂದ ಕೂಡಿದವರೂ, ಲೋಭ-ಮೋಹಗಳಿಗೆ ವಶರಾಗಿ ಫಲಾಕಾಂಕ್ಷೆಯಿಂದ ವೇದಾಧ್ಯಯನದಲ್ಲಿ ನಿಯೋಗವನ್ನು ಕೊಡುವವರೂ ಶ್ರಾದ್ಧದಲ್ಲಿ ಬಹಿಷ್ಕಾರಕ್ಕೆ ಅರ್ಹರು.

ಬ್ರಹ್ಮವಿಕ್ರಯಿಣಸ್ತಾನ್ ವೈ ಶ್ರಾದ್ಧಕರ್ಮಣಿ ವರ್ಜಯೇತ್ ।
ನ ನಿಯೋಗಸ್ತು ವೇದಾನಾಂ ಯೋ ನಿಯುಂಕ್ತೇ ಸ ಪಾಪಕೃತ್॥ ೪೮ ॥

ವಕ್ತಾ ವೇದಫಲಾದ್ಭ್ರಶ್ಯೇದ್ದಾತಾ ದಾನಫಲಾತ್ತಥಾ ।
ಭೃತಕೋಽಧ್ಯಾಪಯೇದ್ಯಸ್ತು ಭೃತಕಾಧ್ಯಾಪಿತಸ್ತು ಯಃ ॥ ೪೯ ॥

ನಾರ್ಹತಸ್ತಾವಪಿ ಶ್ರಾದ್ಧೇ ಬ್ರಾಹ್ಮಣಃ ಕ್ರಯವಿಕ್ರಯೀ ।
ಕ್ರಯಶ್ಚ ವಿಕ್ರಯಶ್ಚೈವಾಜೀವಿತಾರ್ಥೇ ವಿಗರ್ಹಿತೌ ॥ ೫೦ ॥

ವೃತ್ತಿರೇಷಾ ತು ವೈಶ್ಯಸ್ಯ ಬ್ರಾಹ್ಮಣಸ್ಯ ತು ಪಾತಕಮ್ ।
ಆಹರೇದ್ಭೃತಿತೋ ವೇದಾನ್ ವೇದೇಭ್ಯಶ್ಚೋಪಜೀವತಿ ॥ ೫೧ ॥

ಉಭೌ ತೌ ನಾರ್ಹತಃ ಶ್ರಾದ್ಧಂ ಪುತ್ರಿಕಾಪತಿರೇವ ಚ ।
ವೃಥಾ ದಾರಾಂಶ್ಚ ಯೋ ಗಚ್ಛೇದ್ಯೋ ಯಜೇತ ವೃಥಾಧ್ವರೈಃ ॥ ೫೨ ।

---

೪೮. ವೇದ ವಿಕ್ರಯಿಗಳಾಗಿರುವ ಅಂತಹ ಪಾಪಿಗಳನ್ನು ಶ್ರಾದ್ಧಕರ್ಮದಲ್ಲಿ ವರ್ಜಿಸಬೇಕು. ವೇದಗಳಲ್ಲಿ ನಿಯೋಗವೆಂಬುದು ಅನ್ಯಾಯವು. ಹಾಗೆ ನಿಯೋಗ ಮಾಡುವವನು ಪಾಪಿಯಾಗುವನು.

೪೯. ಇಂತಹ ನಿಯೋಗವಶನಾಗಿ ಭೃತಿಯ ಆಶೆಯಿಂದ ಅಧ್ಯಯನಮಾಡಿಸಿದವನು ಮತ್ತು ಅಧ್ಯಯನಮಾಡಿದವನು—ಈ ಇಬ್ಬರಲ್ಲಿ ಶಿಷ್ಯನಿಗೆ ವೇದಾಧ್ಯಯನ ಫಲವು ಭ್ರಷ್ಟವಾಗುವುದು. ಹಾಗು ಗುರುವಿಗೆ ವೇದವಿದ್ಯಾ ದಾನಫಲವು ಶೂನ್ಯವಾಗುವುದು.

೫೦. ಆದುದರಿಂದ ಅಂತಹವರು ಶ್ರಾದ್ಧದಲ್ಲಿ ಅರ್ಹರಲ್ಲ. ಕ್ರಯವಿಕ್ರಯ ವ್ಯವಹಾರವುಳ್ಳ ಬ್ರಾಹ್ಮಣನು ಅರ್ಹನಲ್ಲ. ಕ್ರಯ-ವಿಕ್ರಯವೆಂಬ ವ್ಯವಹಾರವು ಜೀವನ ವೃತ್ತಿಯಂತಿರುವುದು ಯಾವಾಗಲೂ ನಿಂದ್ಯವಾದುದು.

೫೧. ಕ್ರಯ-ವಿಕ್ರಯ ವ್ಯವಹಾರವು ವೈಶ್ಯನಿಗೆ ವೃತ್ತಿಯು, ಬ್ರಾಹ್ಮಣನಿಗೆ ಆ ವೃತ್ತಿಯು ನಿಷಿದ್ಧವಾಗಿದೆ. ಹಿಂದೆ ಹೇಳಿದಂತೆ ಭೃತಿಯಿಂದ ವೇದಗಳ ವ್ಯಾಸಂಗ್ಯ ಮಾಡುವುದು, ಭೃತಿಯಿಂದ ವೇದ ಪ್ರವಚನಮಾಡಿ ಜೀವಿಸುವುದು—ಇವು ನಿಂದ್ಯವಾದುವುಗಳು.

೫೨. ಅದನ್ನು ಆಚರಿಸಿದವರಿಬ್ಬರು ಶ್ರಾದ್ಧಕ್ಕೆ ಅರ್ಹರಲ್ಲ. ಪುತ್ರಿಕೆಯನ್ನು ಸಂಕೇತಪೂರ್ವಕವಾಗಿ ವಿವಾಹ ಮಾಡಿಕೊಂಡಿರುವವನು, ವ್ಯರ್ಥವಾಗಿ ಭಾರ್ಯಾ ಸಮಾಗಮಮಾಡುವವನು ಮತ್ತು ವ್ಯರ್ಥವಾದ ಯಜ್ಞಗಳನ್ನು ಆಚರಿಸುವವನು—ಇವರೆಲ್ಲರೂ ಶ್ರಾದ್ಧಾರ್ಹರಲ್ಲ.

ನಾರ್ಹತಸ್ತಾವಪಿ ಶ್ರಾದ್ಧಂ ದ್ವಿಜೋ ಯಶ್ಚೈವ ವಾರ್ಧುಷೀ ।
ಸ್ತ್ರಿಯೋ ರಕ್ತಾಂತರಾ ಯೇಷಾಂ ಪರದಾರಪರಾಶ್ಚ ಯೇ ॥ ೫೩ ॥

ಅರ್ಥಕಾಮರತಾಶ್ಚೈವ ನ ತಾನ್ ಶ್ರಾದ್ಧೇಷು ಭೋಜಯೇತ್ ।
ವರ್ಣಾಶ್ರಮಾಣಾಂ ಧರ್ಮೇಷು ವಿರುದ್ಧಾಃ ಸರ್ವಕರ್ಮಣಿ ॥ ೫೪ ॥

ಸ್ತೇನಶ್ಚ ಸರ್ವಯಾಜೀ ಚ ಸರ್ವೇ ತೇ ಪಂಕ್ತಿದೂಷಕಾಃ ।
ಯಶ್ಚ ಸೂಕರವದ್ಭುಂಕ್ತೇ ಯಶ್ಚ ಪಾಣಿತಲೇ ದ್ವಿಜಃ ॥ ೫೫ ॥

ನ ತದಶ್ನಂತಿ ಪಿತರೋ ಯಶ್ಚ ವಾಚ್ಯಂ ಸಮಶ್ನುತೇ ।
ಸ್ತ್ರೀಶೂದ್ರಾಯಾಸ್ನಮೇತದ್ವೈ ಶ್ರಾದ್ಧೋಚ್ಛಿಷ್ಟಂ ನ ದಾಪಯೇತ್ ॥ ೫೬ ॥

ಯೋ ದದ್ಯಾಚ್ಚಾನುಸಂಮೋಹಾನ್ನ ತದ್ಗಚ್ಛತಿ ವೈ ಪಿತೄನ್ ।
ತಸ್ಮಾನ್ನ ದೇಯಮನ್ನಾದ್ಯಮುಚ್ಛಿಷ್ಟಂ ಶ್ರಾದ್ಧಕರ್ಮಣಿ ॥ ೫೭ ॥

೫೩. ಅಂತಹ ವೃಥಾ ಕರ್ಮಾನುಷ್ಠಾನವಂತರು, ವೃದ್ಧಿ ಜೀವಿಕೆಯುಳ್ಳ ದ್ವಿಜನು, ಪರಪುರುಷನನ್ನು ಕಾಮಿಸುವ ನಾರಿಯ ಪತಿಯು, ಮತ್ತು ಪರ ಸ್ತ್ರೀ ಲಂಪಟನು ಶ್ರಾದ್ಧನಿಮಂತ್ರಣಕ್ಕೆ ಅರ್ಹರಲ್ಲ.

೫೪. ಅರ್ಥ ಮತ್ತು ಕಾಮ ಇವೆರಡರಲ್ಲಿ ವಿಶೇಷವ್ಯಸನವುಳ್ಳವರನ್ನು ಶ್ರಾದ್ಧದಲ್ಲಿ ಭೋಜನಮಾಡಿಸಬಾರದು, ಹಾಗು ವರ್ಣಾಶ್ರಮ ಧರ್ಮಗಳಲ್ಲಿಯೂ ಇತರ ಸರ್ವ ಕರ್ಮಗಳಲ್ಲಿಯೂ ವಿರುದ್ಧವಾದ ವರ್ತನೆಯುಳ್ಳವರು ಶ್ರಾದ್ಧಾನ್ನ ದಾನಕ್ಕೆ ಯೋಗ್ಯರಲ್ಲ.

೫೫. ಮತ್ತು ಚೋರ, ಸರ್ವರಿಗೂ ಯಜನಮಾಡಿಸುವವನು, ವರಾಹದಂತೆ ಮುಖದಿಂದಲೆ ಆಹಾರವನ್ನು ಸ್ವೀಕರಿಸಿ ಭುಂಜಿಸುವವನು, ಹಾಗು ಹಸ್ತತಲದಲ್ಲಿ ಆಹಾರವನ್ನಿಟ್ಟುಕೊಂಡು ಭುಂಜಿಸುವವನು ಇವರೆಲ್ಲರೂ ಪಂಕ್ತಿ ದೂಷಕರಾಗಿರುವರು.

೫೬. ಮತ್ತು ಅಪವಾದ ಗ್ರಸ್ತನಾದವನು ಅರ್ಹನಲ್ಲ. ಇಂತಹವರಿಗೆ ಭೋಜನ ಮಾಡಿಸಿದ ಹವಿಸ್ಸನ್ನು ಪಿತೃಗಳು ಭುಂಜಿಸುವುದಿಲ್ಲ. ಶ್ರಾದ್ಧಕರ್ಮದಲ್ಲಿ ಮಿಕ್ಕಿರುವ ಅನ್ನವನ್ನು ಸ್ತ್ರೀ ಶೂದ್ರರಿಗೆ ಅರ್ಪಿಸಬಾರದು.

೫೭. ಮೋಹದಿಂದ ಶ್ರಾದ್ಧಕರ್ಮದಲ್ಲಿ ಮಿಕ್ಕಿರುವ ಅನ್ನಾದಿಗಳನ್ನು ಇತರರಿಗೆ ಕೊಟ್ಟರೆ ಪಿತೃಗಳು ಅಂತಹ ಹವಿಸ್ಸನ್ನು ಸ್ವೀಕರಿಸುವುದಿಲ್ಲ. ಆದುದರಿಂದ ಶ್ರಾದ್ಧೋಚ್ಛಿಷ್ಟವಾದ ಅನ್ನ-ಆದ್ಯವಸ್ತುಗಳನ್ನು ದಾನಮಾಡಬಾರದು.

ಅನ್ಯೋಚ್ಛಿಷ್ಟ ದಧಿಸರ್ಪಿರ್ಭ್ಯಾಂ ಶಿಷ್ಟಂ ಪುತ್ರಾಯ ನಾನ್ಯಥಾ ।
ಅವಶೇಷಂ ತು ದಾತವ್ಯಮನ್ನಾದ್ಯಂ ತು ವಿಶೇಷತಃ ॥ ೫೮ ॥

ಪುಷ್ಪಮೂಲಫಲೈರ್ವಾಪಿ ತುಷ್ಟಾ ಗಚ್ಛೇಯುರಂತತಃ ।
ಯಾವನ್ನ ಶ್ರಪಿತಂ ಚಾನ್ನಂ ಯಾವದೌಷ್ಣ್ಯಂ ನ ಮುಂಚತಿ ॥ ೫೯ ॥

ತಾವದಶ್ನಂತಿ ಪಿತರೋ ಯಾವದಶ್ನಂತಿ ವಾಗ್ಯತಾಃ ।
ದತ್ತಂ ಪ್ರತಿಗ್ರಹೋ ಹೋಮೋ ಭೋಜನಂ ಬಲಿರೇವ ಚ ॥ ೬೦ ॥

ಸಾಂಗುಷ್ಠೇನ ತಥಾ ಪಾದ್ಯಂ ನಾಸುರೇಭ್ಯೋ ಯಥಾ ಭವೇತ್ ।
ಏತಾನ್ಯೇವ ಚ ಸರ್ವಾಣಿ ದಾನಾನಿ ಚ ವಿಶೇಷತಃ ॥ ೬೧ ॥

ಅಂತರ್ಜಾನೂಪವಿಷ್ಟೇನ ತದ್ವದಾಚಮನಂ ಭವೇತ್ ।
ಮುಂಡಾಞ್ಜಟಿಲಕಾಷಾಯಾನ್ ಶ್ರಾದ್ಧಕರ್ಮಣಿ ವರ್ಜಯೇತ್ ॥ ೬೨ ॥

---

೫೮. ದಧಿ-ಘೃತಗಳು ಮಾತ್ರ ಶ್ರಾದ್ಧೋಚ್ಛಿಷ್ಟವೆಂದು ಗಣಿಸಲ್ಪಡುವುದಿಲ್ಲ. ಶ್ರಾದ್ಧಾವಶಿಷ್ಟವಾದ ಅನ್ನಾದಿಗಳನ್ನು ಪುತ್ರನಿಗೆ ಮಾತ್ರ ಕೊಡಬೇಕು. ಮತ್ತೊಬ್ಬನಿಗೆ ಅವನ್ನು ಕೊಡಬಾರದು. ಪುತ್ರನು ಮಾತ್ರ ಶ್ರಾದ್ಧ ಶಿಷ್ಟವನ್ನು ವಿಶೇಷವಾಗಿ ಸ್ವೀಕರಿಸಬೇಕು.

೫೯. ಪಿತೃಗಳು ಕಡೆಯಲ್ಲಿ ಪುಷ್ಪ-ಮೂಲ-ಫಲಗಳಿಂದ ಮಾತ್ರವಾದರೂ ಸಂತುಷ್ಟರಾಗಿ ಹೋಗುವರು, ಪಕ್ವವಾದ ಅನ್ನದ ಬಿಸಿಯು ಆರಿಹೋಗುವಷ್ಟರವರೆಗೆ ಮಾತ್ರ ಆ ಅನ್ನವನ್ನು ಪಿತೃಗಳು ಸ್ವೀಕರಿಸುವರು.

೬೦. ನಿಮಂತ್ರಿತರಾದ ದ್ವಿಜರು ಮೌನವ್ರತದಿಂದ ಭುಂಜಿಸುವವರೆಗೆ ಪಿತೃಗಳು ಆ ಹವಿಸ್ಸನ್ನು ಭೋಜನಮಾಡುವರು. ದಾನ, ಪ್ರತಿಗ್ರಹ, ಹೋಮ, ಭೋಜನ ಮತ್ತು ಬಲಿಕರ್ಮಗಳನ್ನು ಅಂಗುಷ್ಠ ಸಹಿತವಾದ ಪಾಣಿಯಿಂದ ಆಚರಿಸಬೇಕು.

೬೧. ಹಾಗು ವಿಪ್ರರಿಗೆ ಪಾದ್ಯವನ್ನು ಅಂಗುಷ್ಠ ಸಹಿತವಾದ ಪಾಣಿಯಿಂದ ಅರ್ಪಿಸಬೇಕು. ಈ ವಿಧಿಯಿಂದ ಆಚರಿಸಿದ ಸತ್ಕರ್ಮವು ರಾಕ್ಷಸರ ವಶವಾಗುವುದಿಲ್ಲ. ಇವುಗಳು ವಿಶೇಷವಾದ ದಾನಗಳೆಂದು ವಿಧಿಸಲ್ಪಟ್ಟಿವೆ.

೬೨. ಮಂಡಿಯ ನಡುವೆ ಕೈಗಳನ್ನಿಟ್ಟುಕೊಂಡು ಕುಳಿತುಕೊಂಡವನಾಗಿ ಕರ್ಮಾಂಗವಾಗಿ ಆಚಮನವನ್ನು ಮಾಡಬೇಕು. ಮುಂಡ, ಜಟಿಲ, ಕಾಷಾಯಧಾರಿ, ಪುರುಷರನ್ನು ಶ್ರಾದ್ಧಕರ್ಮದಲ್ಲಿ ದೂರ ತ್ಯಜಿಸಬೇಕು.

ಯೇ ತು ವೃತ್ತೇ ಸ್ಥಿತಾ ನಿತ್ಯಂ ಜ್ಞಾನಿನೋ ಧ್ಯಾನಿನಸ್ತಥಾ ।
ದೇವಭಕ್ತಾ ಮಹಾತ್ಮಾನಃ ಪುನೀಯುರ್ದರ್ಶನಾದಪಿ ॥ ೬೩ ॥

ಶಿಖಿಭ್ಯೋ ಧಾತುರಕ್ತೇಭ್ಯಸ್ತ್ರಿದಂಡೇಭ್ಯಃ ಪ್ರದಾಪಯೇತ್ ।
ಸರ್ವಂ ಯೋಗೇಶ್ವರೈರ್ವ್ಯಾಪ್ತಂ ತ್ರೈಲೋಕ್ಯಂ ಹಿ ನಿರಂತರಮ್॥ ೬೪ ॥

ತಸ್ಮಾತ್ ಪಶ್ಯಂತಿ ತೇ ಸರ್ವಂ ಯತ್ಕಿಂಚಿಜ್ಜಗತೀಗತಮ್ ।
ವ್ಯಕ್ತಾವ್ಯಕ್ತಂ ವಶೇ ಕೃತ್ವಾ ಸರ್ವಸ್ಯಾಪಿ ಚ ಯತ್ ಪರಮ್ ॥ ೬೫ ॥

ಸತ್ಯಾಸತ್ಯಂ ಚ ಯದ್ದೃಷ್ಟಂ ಸದಸಚ್ಚ ಮಹಾತ್ಮಭಿಃ ।
ಸರ್ವಜ್ಞಾನಾನಿ ಸೃಷ್ಟಾನಿ ಮೋಕ್ಷಾದೀನಿ ಮಹಾತ್ಮಭಿಃ ॥ ೬೬ ॥

ತಸ್ಮಾತ್ತೇಷಾಂ ಸದಾ ಭಕ್ತಃ ಫಲಂ ಪ್ರಾಪ್ನೋತಿ ಚೋತ್ತಮಮ್
॥ ೬೭ ॥

---

೬೩. ಸದಾಚಾರನಿರತರೂ, ಯಾವಾಗಲೂ ಜ್ಞಾನನಿಷ್ಠೆ-ಧ್ಯಾನನಿಷ್ಠೆಗಳಲ್ಲಿ ತತ್ಪರರೂ, ದೇವಭಕ್ತರೂ, ಮಹಾತ್ಮರೂ ಮತ್ತು ದರ್ಶನ ಮಾತ್ರದಿಂದ ಪವಿತ್ರತೆಯನ್ನು ಉಂಟುಮಾಡುವವರೂ ಆದ ಸಜ್ಜನರನ್ನು ಶ್ರಾದ್ಧದಲ್ಲಿ ಉಪಚರಿಸಬೇಕು.

೬೪. ಶಿಖಾ, ಧಾತುವಿಶೇಷಗಳಿಂದ ರಂಜನ, ಮತ್ತು ತ್ರಿದಂಡ ಧಾರಣಗಳಿಂದ ಕೂಡಿದ ಯತಿಗಳಿಗೆ ವಿಶೇಷವಾಗಿ ದಾನಮಾಡಬೇಕು, ಅಂತಹ ಯೋಗೇಶ್ವರರಿಂದ ಯಾವಾಗಲೂ ಲೋಕತ್ರಯವೂ ವ್ಯಾಪಿಸಲ್ಪಟ್ಟಿದೆ.

೬೫. ಆದುದರಿಂದ ಯೋಗೇಶ್ವರರು ಜಗತ್ತಿನಲ್ಲಿರುವ ವ್ಯಕ್ತ-ಅವ್ಯಕ್ತ ಆದಿಯಾದ ವಸ್ತು ಜಾಲವನ್ನು ಸಾಕ್ಷಾತ್ಕರಿಸಿ ಅದನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಅದಕ್ಕಿಂತಲೂ ಪರಮವಾದ ತತ್ತ್ವವನ್ನು ಸಾಕ್ಷಾತ್ಕರಿಸುವರು.

೬೬. ಪ್ರಪಂಚದಲ್ಲಿ ಸತ್ಯ-ಅಸತ್ಯ ; ಸತ್-ಅಸತ್ ಎಂಬ ಪದಾರ್ಥ ವಿಭಾಗ ತತ್ತ್ವವು ಮಹಾತ್ಮರಿಂದ ತಿಳಿಯಲ್ಪಟ್ಟಿದೆ. ಮೋಕ್ಷಸಾಧನವಾದ ಜ್ಞಾನನಿಷ್ಠಾದಿ ಸಕಲೋಪಾಯಗಳು ಮಹಾತ್ಮರಿಂದ ಪ್ರಕಾಶಪಡಿಸಲ್ಪಟ್ಟಿವೆ.

೬೭. ಆದ್ದರಿಂದ ಲೋಕೋಪಕಾರಮಾಡಿದ ಅಂತಹ ಮಹಾತ್ಮರಲ್ಲಿ ಭಕ್ತನಾಗಿ ಅವರನ್ನು ಆದರದಿಂದ ಸತ್ಕರಿಸಿದ ಮಾನವನು ಉತ್ತಮವಾದ ಫಲವನ್ನು ಹೊಂದುವನು.

ಋಚಶ್ಚ ಯೋ ವೇದ ಸ ವೇದ ವೇದಾನ್
ಯಜೂಂಷಿ ಯೋ ವೇದ ಸ ವೇದ ಯಜ್ಞಮ್ ।
ಸಾಮಾನಿ ಯೋ ವೇದ ಸ ವೇದ ಬ್ರಹ್ಮ
ಯೋ ಮಾನಸಂ ವೇದ ಸ ವೇದ ಸರ್ವಮ್ ॥ ೬೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಪಂಚದಶೋಽಧ್ಯಾಯಃ

---

೬೮. ಚತುರ್ವೇದಗಳಲ್ಲಿ ಋಙ್ಮಂತ್ರಗಳನ್ನು ಅರಿತವನು ಸಕಲ ವೇದಜ್ಞಾನಿಯಾಗುವನು, ಯಜುರ್ವೇದವನ್ನು ಅರಿತವನು ಯಜ್ಞಪ್ರಯೋಗಜ್ಞನಾಗುವನು. ಸಾಮಗಾನವನ್ನು ಅರಿತವನು ಸಾಕ್ಷಾತ್ತಾಗಿ ಬ್ರಹ್ಮಜ್ಞಾನಿಯಾಗುವನು. ತನ್ನ ಮಾನಸವನ್ನು ಪರೀಕ್ಷಿಸಿ ನಿಗ್ರಹಿಸಿದವನು ಸರ್ವಜ್ಞನಾಗುವನು. ಚತುರ್ವೇದಜ್ಞನು ಅತ್ಯಂತ ಪವಿತ್ರನಾದವನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹದಿನೈದನೆಯ ಅಧ್ಯಾಯವು
ಮುಗಿದುದು.

---

# ಷೋಡಶೋಽಧ್ಯಾಯಃ

ಬೃಹಸ್ಪತಿರುವಾಚ :—

ಅತಃ ಪರಂ ಪ್ರವಕ್ಷ್ಯಾಮಿ ದಾನಾನಿ ಚ ಫಲಾನಿ ಚ ।
ತಾರಣಂ ಸರ್ವಭೂತಾನಾಂ ಸ್ವರ್ಗಮಾರ್ಗಸುಖಾವಹಮ್ ॥ ೧ ॥

ಲೋಕೇ ಶ್ರೇಷ್ಠತಮಂ ಸರ್ವಮಾತ್ಮನಶ್ಚೈವ ಯತ್ಪ್ರಿಯಮ್ ।
ಸರ್ವಂ ಪಿತೄಣಾಂ ದಾತವ್ಯಂ ತೇಷಾಮೇವಾಕ್ಷಯಾರ್ಥಿನಾ ॥ ೨ ॥

ಜಾಂಬೂನದಮಯಂ ದಿವ್ಯಂ ವಿಮಾನಂ ಸೂರ್ಯಸನ್ನಿಭಮ್ ।
ದಿವ್ಯಾಪ್ಸರೋಭಿಃ ಸಂಪೂರ್ಣಮನ್ನದೋ ಲಭತೇಽಕ್ಷಯಮ್ ॥ ೩ ॥

ಸವ್ಯಂಜನಂ ತು ಯೋ ದದ್ಯಾದಹತಂ ಶ್ರಾದ್ಧಕರ್ಮಣಿ ।
ಆಯುಃ ಪ್ರಾಕಾಶ್ಯಮೈಶ್ವರ್ಯಂ ರೂಪಂ ಚ ಲಭತೇ ಶುಭಮ್ ॥ ೪ ॥

---

೧. ಬೃಹಸ್ಪತಿಯು ಉಪದೇಶಿಸಿದನು :—ಸಮಸ್ತ ಪ್ರಾಣಿಗಳನ್ನು ಅಧೋಗತಿಯಿಂದ ತಾರಣಮಾಡಿ ಸ್ವರ್ಗಸುಖದ ಮಾರ್ಗವನ್ನು ತೋರಿಸುವ ದಾನ ವಿಶೇಷ ಮತ್ತು ಅವುಗಳ ಫಲಗಳನ್ನು ಇನ್ನು ಮುಂದೆ ವಿಸ್ತರಿಸುತ್ತೇನೆ.

೨. ಲೋಕದಲ್ಲಿ ಶ್ರೇಷ್ಠವೆಂದೆನಿಸಿರುವ ಮತ್ತು ತನಗೆ ಹಿತವಾಗಿರುವ ಸಕಲ ವಸ್ತುಗಳು ಪಿತೃಗಳ ಆಜ್ಞಾವಚನದಂತೆ ತನ್ನ ಶ್ರೇಯಸ್ಸಿನ ಆಕಾಂಕ್ಷೆಯಿಂದ ಶ್ರಾದ್ಧದಲ್ಲಿ ದಾನಮಾಡಲು ಯೋಗ್ಯಗಳಾಗಿವೆ.

೩. ಶ್ರಾದ್ಧದಲ್ಲಿ ಅನ್ನವನ್ನು ದಾನಮಾಡಿದ ದ್ವಿಜನು ದಾನಪ್ರಭಾವದಿಂದ ಸುವರ್ಣಮಯವಾಗಿ ಸೂರ್ಯನಂತೆ ಫಳಫಳಿಸುವ, ಅಪ್ಸರಃಸ್ತ್ರೀಯರಿಂದ ಕೂಡಿರುವ ದಿವ್ಯವಾದ ವಿಮಾನವನ್ನು ಶಾಶ್ವತವಾಗಿ ಹೊಂದುತ್ತಾನೆ.

೪. ವ್ಯಂಜನಗಳಿಂದ ಕೂಡಿ ಪರಿಷ್ಕೃತವಾದ ಅನ್ನವನ್ನು ಶ್ರಾದ್ಧದಲ್ಲಿ ದಾನ ಮಾಡಿದ ಮಾನವನು ಆಯುಷ್ಯ, ಕೀರ್ತಿ, ಐಶ್ವರ್ಯ, ರೂಪ ಮತ್ತು ಮಂಗಳಗಳನ್ನು ನಿರಂತರವಾಗಿ ಹೊಂದುತ್ತಾನೆ.

ಯಜ್ಞೋಪವೀತಂ ಯೋ ದದ್ಯಾಚ್ಛ್ರಾದ್ಧಕಾಲೇ ತು ಯಜ್ಞವಿತ್ ।
ಪಾವನಂ ಸರ್ವವಿಪ್ರಾಣಾಂ ಬ್ರಹ್ಮದಾನಸ್ಯ ತತ್ ಫಲಮ್ ॥ ೫ ॥

ಪ್ಲುತಂ ವಿಪ್ರೇಷು ಯೋ ದದ್ಯಾಚ್ಛ್ರಾದ್ಧಕಾಲೇ ಕಮಂಡಲುಮ್ ।
ಮಧುಕ್ಷೀರಾಜ್ಯದಧಿಭಿರ್ದಾತಾರಮುಪತಿಷ್ಠತೇ ॥ ೬ ॥

ತಕ್ರಾವಿದ್ಧಂ ಚ ಯೋ ದದ್ಯಾಚ್ಛ್ರಾದ್ಧ ಕಾಲೇ ಕಮಂಡಲುಮ್ ।
ಧೇನುಂ ಸ ಲಭತೇ ದಿವ್ಯಾಂ ಪಯೋದಾಂ ಸುಖದೋಹಿನೀಮ್॥ ೭ ॥

ತೂಲಪೂರ್ಣೇ ಚ ಯೋ ದದ್ಯಾತ್ಪಾದುಕೇ ಶ್ರಾದ್ಧಕರ್ಮಣಿ ।
ಶೋಭನಂ ಲಭತೇ ಯಾನಂ ಪಾದಯೋಃ ಸುಖಮೇಧತೇ ॥ ೮ ॥

ವ್ಯಜನಂ ತಾಲವೃಂತಂ ಚ ದತ್ವಾ ವಿಪ್ರಾಯ ಸತ್ಕೃತಮ್ ।
ಪ್ರಾಪ್ನುಯಾತ್ ಸರ್ವಪುಷ್ಪಾಣಿ ಸುಗಂಧೀನಿ ಮೃದೂನಿ ಚ ॥ ೯ ॥

---

೫. ಯಜ್ಞಪ್ರಯೋಗಗಳನ್ನು ಅರಿತ ಕರ್ಮಿಯು ಶ್ರಾದ್ಧಕಾಲದಲ್ಲಿ ಮಾಡಿರುವ ಯಜ್ಞೋಪವೀತದಾನವು ಸರ್ವವಿಪ್ರರಿಗೆ ಮಾಡಿರುವ ಬ್ರಹ್ಮದಾನಕ್ಕೆ ಸಮಾನವಾಗಿ ಪ್ರಶಸ್ತವಾಗಿರುವುದು.

೬. ಮಧು, ಕ್ಷೀರ, ಆಜ್ಯ ಅಥವಾ ದಧಿ—ಇವುಗಳಿಂದ ಪೂರ್ಣವಾದ ಕಮಂಡಲುವನ್ನು ಶ್ರಾದ್ಧಕಾಲದಲ್ಲಿ ವಿಪ್ರರಿಗೆ ದಾನಮಾಡಿದರೆ ಅಂತಹ ದಾನಸುಕೃತವು ಯಾವಾಗಲೂ ದಾತೃಪುರುಷನನ್ನು ಸೇವಿಸುವುದು.

೭. ತಕ್ರದಿಂದ ಪೂರ್ಣವಾದ ಕಮಂಡಲುವನ್ನು ಶ್ರಾದ್ಧಕಾಲದಲ್ಲಿ ದಾನ ಮಾಡುವುದರಿಂದ ಅನಾಯಾಸವಾಗಿ ಹೆಚ್ಚು ಹಾಲನ್ನು ಕರೆಯುವ, ದಿವ್ಯವಾದ ಹಸುವನ್ನು ಹೊಂದುತ್ತಾನೆ.

೮. ಶ್ರಾದ್ಧದಲ್ಲಿ ಹತ್ತಿ ಮತ್ತು ಪಾದುಕೆಗಳನ್ನು ಯಾವನು ದಾನಮಾಡುವನೊ ಅಂತಹ ಮನುಜನು ಶುಭಕರವಾದ ವಾಹನವನ್ನು ಹೊಂದಿ ಪಾದಗಳಿಗೆ ಸುಖವನ್ನು ಅನುಭವಿಸುವನು.

೯. ಶ್ರಾದ್ಧಕರ್ಮದಲ್ಲಿ ತಾಲವೃಕ್ಷದ ಪರ್ಣಗಳಿಂದ ರಚಿಸಿದ ಬೀಸಣಿಗೆಯನ್ನು ಸತ್ಕಾರಪೂರ್ವಕವಾಗಿ ವಿಪ್ರರಿಗೆ ದಾನಮಾಡುವುದರಿಂದ ಸುವಾಸನೆ ಮತ್ತು ಮೃದುತ್ವ ದಿಂದ ಕೂಡಿದ ಸಮಸ್ತ ಪುಷ್ಪಗಳನ್ನು ಹೊಂದುವನು.

ಶ್ರಾದ್ಧೇ ಹ್ಯುಪಾನಹೌ ದತ್ತ್ವಾ ಬ್ರಾಹ್ಮಣೇಭ್ಯಃ ಸದಾ ಬುಧಃ ।
ದಿವ್ಯಂ ಸ ಲಭತೇ ಯಾನಂ ವಾಜಿಯುಕ್ತಂ ನವಂ ತಥಾ ॥ ೧೦ ॥

ಶ್ರಾದ್ಧೇ ಛತ್ರಂ ತು ಯೋ ದದ್ಯಾತ್ ಪುಷ್ಪಮಾಲಾನ್ವಿತಂ ತಥಾ ।
ಪ್ರಾಸಾದೋ ಹ್ಯುತ್ತಮೋ ಭೂತ್ವಾ ಗಚ್ಛಂತಮನುಗಚ್ಛತಿ ॥ ೧೧ ॥

ಶರಣಂ ರತ್ನಸಂಪೂರ್ಣಂ ಸಶಯ್ಯಾಭೋಜನಂ ಬುಧಃ ।
ಶ್ರಾದ್ಧೇ ದತ್ತ್ವಾ ಯತಿಭ್ಯಸ್ತು ನಾಕಪೃಷ್ಠೇ ಮಹೀಯತೇ ॥ ೧೨ ॥

ಮುಕ್ತಾವೈಡೂರ್ಯವಾಸಾಂಸಿ ರತ್ನಾನಿ ವಿವಿಧಾನಿ ಚ ।
ವಾಹನಾನಿ ಚ ದಿವ್ಯಾನಿ ಪ್ರಯುತಾನ್ಯರ್ಬುದಾನಿ ಚ ॥ ೧೩ ॥

ಸುಮಹದ್ವ್ಯೋಮಗಂ ಪುಣ್ಯಂ ಸರ್ವಕಾಮಸಮನ್ವಿತಮ್ ।
ಚಂದ್ರಸೂರ್ಯನಿಭಂ ದಿವ್ಯಂ ವಿಮಾನಂ ಲಭತೇಽಕ್ಷಯಮ್ ॥ ೧೪ ॥

---

೧೦. ಜ್ಞಾನಿಯು ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಪಾದರಕ್ಷೆಯನ್ನು ದಾನಮಾಡಿದ ಮಹಿಮೆಯಿಂದ ದಿವ್ಯವೂ ಅಶ್ವಗಳಿಂದ ಕೂಡಿರುವುದೂ ಮತ್ತು ಹೊಸದೂ ಆದ ವಾಹನವನ್ನು ಯಾವಾಗಲೂ ಹೊಂದುವನು.

೧೧. ಪುಷ್ಪಮಾಲೆಗಳಿಂದ ಅಲಂಕರಿಸಿ ಶ್ರಾದ್ಧದಲ್ಲಿ ಮಾಡಿರುವ ಛತ್ರ ದಾನವು ಉತ್ತಮವಾದ ಪ್ರಾಸಾದರೂಪವಾಗಿ ಪರಿಣಮಿಸಿ ಅಂತಹ ಫಲವು ದಾತೃವನ್ನು ಹೋದ ಕಡೆಯಲ್ಲಿ ಎಲ್ಲ ಹಿಂಬಾಲಿಸುವುದು.

೧೨. ರತ್ನ, ಶಯ್ಯಾ, ಭೋಜನಾದಿ ಸಾಮಗ್ರಿಗಳಿಂದ ಕೂಡಿದ ಗೃಹವನ್ನು ಶ್ರಾದ್ಧದಲ್ಲಿ ಯತಿಗಳಿಗೆ ದಾನಮಾಡಿದ ವಿದ್ವಾಂಸನು ಅಂತಹ ದಾನಫಲವನ್ನು ಸ್ವರ್ಗಲೋಕದಲ್ಲಿ ಅನುಭವಿಸುತ್ತಾನೆ.

೧೩. ಹಿಂದೆ ಹೇಳಿದ ಗೃಹದಾನ ಮಹಿಮೆಯ ಫಲವಾಗಿ ದಿವ್ಯವೂ ಪ್ರಯುತ-ಅರ್ಬುದ ಮುಂತಾದ ಅಧಿಕಸಂಖ್ಯೆಯಿಂದ ಕೂಡಿರುವುದೂ ಆದ ಮುತ್ತು, ವೈಡೂರ್ಯ, ವಸ್ತ್ರ, ವಿವಿಧ ರತ್ನ ಮತ್ತು ವಾಹನಗಳನ್ನು ಅನುಭವಿಸುವನು.

೧೪. ಮತ್ತು ಅತಿವಿಶಾಲವೂ, ಗಗನಗಾಮಿಯೂ, ಪವಿತ್ರವೂ, ಸಕಲ ಕಾಮ್ಯ ವಸ್ತುಗಳಿಂದ ಪೂರ್ಣವೂ, ಚಂದ್ರ-ಸೂರ್ಯರಿಗೆ ಸಮಾನವೂ ಮತ್ತು ದಿವ್ಯವೂ ಆದ ವಿಮಾನವನ್ನು ನಿರಂತರವಾಗಿ ಹೊಂದುತ್ತಾನೆ.

ಅಪ್ಸರೋಭಿಃ ಪರಿವೃತಂ ಕಾಮಗಂ ಸುಮನೋಜವವಮ್ ।
ವಸೇತ್ಸ ತು ವಿಮಾನಾಗ್ರೇ ಸ್ತೂಯಮಾನಃ ಸಮಂತತಃ ॥ ೧೫ ॥

ದಿವ್ಯೈಃ ಪುಷ್ಪೈಶ್ಚಿತಶ್ಚಾಹುರ್ದಾನಾನಾಂ ಪರಮಂ ಬುಧಾಃ ।
ಸುಶ್ಲಕ್ಷ್ಣಾನಿ ಸುವರ್ಣಾನಿ ಶ್ರಾದ್ಧೇ ಪಾತ್ರಾಣಿ ದಾಪಯೇತ್ ॥ ೧೬ ॥

ರಸಾಸ್ತಮುಪತಿಷ್ಠಂತಿ ಭಕ್ಷ್ಯಂ ಸೌಭಾಗ್ಯಮೇವ ಚ ।
ತಿಲಾನಿಕ್ಷೂಂಸ್ತಥಾ ಶ್ರಾದ್ಧೇ ದ್ವಿಜೇಭ್ಯಃ ಸಂಪ್ರಯಚ್ಛತಿ ॥ ೧೭ ॥

ಮಿತ್ರಾಣಿ ಲಭತೇ ಲೋಕೇ ಸ್ತ್ರೀಷು ಸೌಭಾಗ್ಯಮೇವ ಚ ।
ಯಃ ಪಾತ್ರಂ ತೈಜಸಂ ದದ್ಯಾನ್ಮನೋಜ್ಞಂ ಶ್ರಾದ್ಧಭೋಜನೈಃ ॥ ೧೮ ॥

ಪಾತ್ರಂ ಭವತಿ ಕಾಮಾನಾಂ ರೂಪಸ್ಯ ಚ ಧನಸ್ಯ ಚ ।
ರಾಜತಂ ಕಾಂಚನಂ ವಾಪಿ ಯೋ ದದ್ಯಾಚ್ಛ್ರಾದ್ಧಕರ್ಮಣಿ ॥ ೧೯ ॥

---

೧೫. ಮತ್ತು ಆ ವಿಮಾನವು ಅಪ್ಸರಃಸ್ತ್ರೀಯರಿಂದ ಕೂಡಿರುವುದೂ, ಸ್ವೇಚ್ಛಾಧೀನವಾದ ಸಂಚಾರವುಳ್ಳದ್ದೂ, ಅತಿವೇಗವುಳ್ಳದ್ದೂ ಆಗಿರುವುದು. ಅಂತಹ ವಿಮಾನದಲ್ಲಿ ಸ್ತುತಿಸಲ್ಪಡುವವನಾಗಿ ವಾಸಮಾಡುವನು.

೧೬. ಮತ್ತು ದಿವ್ಯಪುಷ್ಪಗಳಿಂದ ಅಲಂಕರಿಸಲ್ಪಡುವನು, ಬುಧರು ಶ್ರಾದ್ಧದಲ್ಲಿ ಕೋಮಲವೂ ಸುವರ್ಣಮಯವೂ ಆದ ಪಾತ್ರಗಳ ದಾನವನ್ನು ದಾನಗಳಲ್ಲೆಲ್ಲ ಉತ್ತಮವನ್ನಾಗಿ ಹೇಳುವರು.

೧೭. ಅಂತಹ ಸುವರ್ಣಪಾತ್ರ ದಾನದಿಂದ ದಾತೃವಿಗೆ ಇಷ್ಟವಾದ ದಿವ್ಯರಸ, ಭಕ್ಷ್ಯ ಮತ್ತು ಸೌಭಾಗ್ಯ ಫಲಗಳು ಲಭಿಸುವುವು. ಹಾಗೆ ಶ್ರಾದ್ಧದಲ್ಲಿ ಎಳ್ಳು, ಮತ್ತು ಕಬ್ಬು—ಇವುಗಳನ್ನು ದ್ವಿಜರಿಗೆ ದಾನಮಾಡುವುದು ಪ್ರಶಸ್ತವು.

೧೮. ಆ ದಾನದಿಂದ ಲೋಕದಲ್ಲಿ ಹೆಚ್ಚಿನ ಮಿತ್ರರನ್ನೂ ಸ್ತ್ರೀಯರಲ್ಲಿ ಸೌಭಾಗ್ಯವನ್ನೂ ಆರ್ಜಿಸುತ್ತಾನೆ. ಶ್ರಾದ್ಧಕರ್ಮದ ಭೋಜನ ಸಮಯದಲ್ಲಿ ಸುವರ್ಣ-ರಜತಾದಿ ತೈಜಸಪಾತ್ರವನ್ನು ದಾನಮಾಡಬೇಕು.

೧೯. ಅಂತಹ ದಾನವನ್ನು ಆಚರಿಸಿದವನು ಕಾಮ-ರೂಪ ಮತ್ತು ಧನಗಳಿಗೆ ಪಾತ್ರನಾಗುವನು. ಆದ್ದರಿಂದ ರಜತ ಅಥವಾ ಸುವರ್ಣಮಯ ಪಾತ್ರಗಳನ್ನು ಶ್ರಾದ್ಧಯಜ್ಞದಲ್ಲಿ ದಾನಮಾಡಬೇಕು.

ದಾನಾತ್ತು ಲಭತೇ ಕಾಮಾನ್ ಪ್ರಾಕಾಶ್ಯಂ ಧನಮೇವ ಚ ।
ಧೇನುಂ ಶ್ರಾದ್ಧೇ ತು ಯೋ ದದ್ಯಾದ್ಗೃಷ್ಟಿಂ ಕುಂಭಾಪದೋಹಿ
ನೀಮ್ ॥ ೨೦ ॥

ಗಾವಸ್ತಮುಪತಿಷ್ಠಂತಿ ನರಂ ಪುಷ್ಟಿಸ್ತಥೈವ ಚ ।
ದದ್ಯಾದ್ಯಃ ಶಿಶಿರೇ ಚಾಗ್ನಿಂ ಬಹುಕಾಷ್ಠಂ ಪ್ರಯತ್ನತಃ ॥ ೨೧ ॥

ಕಾಯಾಗ್ನಿದೀಪ್ತಿಂ ಪ್ರಾಕಾಶ್ಯಂ ಸೌಭಾಗ್ಯಂ ಲಭತೇ ನರಃ ।
ಇಂಧನಾನಿ ತು ಯೋ ದದ್ಯಾದ್ದ್ವಿಜೇಭ್ಯಃ ಶಿಶಿರಾಗಮೇ ॥ ೨೨ ॥

ನಿತ್ಯಂ ಜಯತಿ ಸಂಗ್ರಾಮೇ ಶ್ರಿಯಾ ಜುಷ್ಟಸ್ತು ಜಾಯತೇ ।
ಸುರಭೀಣಿ ಚ ಮಾಲ್ಯಾನಿ ಗಂಧವಂತಿ ತಥೈವ ಚ ॥ ೨೩ ॥

ಪೂಜಯಿತ್ವಾ ತು ಪಾತ್ರೇಭ್ಯಃ ಶ್ರಾದ್ಧೇ ಸತ್ಕೃತ್ಯ ದಾಪಯೇತ್ ।
ಗಂಧಮಾಲ್ಯಂ ಮಹಾತ್ಮಾನಂ ಸುಖಾನಿ ವಿವಿಧಾನಿ ಚ ॥ ೨೪ ॥

---

೨೦. ಮತ್ತು ಅಂತಹ ದಾನದಿಂದ ಇಷ್ಟಕಾಮಗಳನ್ನೂ ಪ್ರಕಾಶವಾದ ರೂಪವನ್ನೂ ಧನವನ್ನೂ ಹೊಂದುತ್ತಾನೆ. ಹಾಗೆಯೇ ಶ್ರಾದ್ಧದಲ್ಲಿ ಕುಂಭ, ಉಪದೋಹ ಪಾತ್ರಗಳಿಂದ ಕೂಡಿದ ಪ್ರಥಮ ಪ್ರಸೂತವಾದ ಹಸುವನ್ನು ದಾನಮಾಡಬೇಕು.

೨೧. ಗೋದಾನಮಾಡಿದ ಪುರುಷನನ್ನು ಗೋವುಗಳು ಯಾವಾಗಲೂ ಸೇವಿಸುವುವು. ಮತ್ತು ಪುಷ್ಟಿಯೆಂಬ ಫಲವು ಗೋದಾನದಿಂದ ಲಭಿಸುವುದು. ಶಿಶಿರ ಋತುವಿನಲ್ಲಿ ಹೆಚ್ಚು ಕಾಷ್ಠಗಳಿಂದ ಕೂಡಿದ ಅಗ್ನಿಯದಾನವನ್ನು ಪ್ರಯತ್ನಪೂರ್ವಕವಾಗಿ ಆಚರಿಸಬೇಕು.

೨೨. ಅದರಿಂದ ನರನು ಜಠರಾಗ್ನಿಯ ದೀಪ್ತಿಯನ್ನೂ ಶರೀರಕಾಂತಿಯನ್ನೂ ಸೌಭಾಗ್ಯವನ್ನೂ ಹೊಂದುತ್ತಾನೆ. ಶಿಶಿರ ಋತುವಿನಲ್ಲಿ ದ್ವಿಜರಿಗೆ ಇಂಧನಗಳನ್ನು ದಾನಮಾಡುವುದು ಅತಿ ಪ್ರಶಸ್ತವಾದುದು.

೨೩. ಆ ದಾನ ಮಹಿಮೆಯು ಸಂಗ್ರಾಮದಲ್ಲಿ ಯಾವಾಗಲೂ ಜಯವನ್ನೂ ಸಿರವಧಿಯಾದ ಐಶ್ವರ್ಯವನ್ನೂ ಕೊಡುವುದು, ಶ್ರಾದ್ಧದಲ್ಲಿ ಸುವಾಸನೆಯನ್ನು ಬೀರುವ ಸುಂದರವಾದ ಪುಷ್ಪ ಮಾಲ್ಯಗಳು ದಾನಕ್ಕೆ ಅರ್ಹವಾದುವುಗಳು.

೨೪. ಶ್ರಾದ್ಧದಲ್ಲಿ ಸತ್ಪಾತ್ರದಲ್ಲಿ ಸತ್ಕಾರ ಪೂರ್ವಕವಾಗಿ ಮಾಡಿದ ಪುಷ್ಪ ಮಾಲ್ಯದಾನ ಸುಕೃತದಿಂದ ಗಂಧಮಾಲ್ಯ, ವಿವಿಧ ಸೌಖ್ಯಗಳು ದಾತೃವಾದ ಮಹಾತ್ಮನಿಗೆ ಲಭಿಸುವುವು.

ದಾತಾರಮುಪತಿಷ್ಠಂತಿ ಯುವತ್ಯಶ್ಚ ಪತಿವ್ರತಾಃ ।
ಶಯನಾಸನಯಾನಾನಿ ಭೂಮಯೋ ವಾಹನಾನಿ ಚ ॥ ೨೫ ॥

ಶ್ರಾದ್ಧೇಷ್ವೇತಾನಿ ಯೋ ದದ್ಯಾದಶ್ವಮೇಧಫಲಂ ಲಭೇತ್ ।
ಶ್ರಾದ್ಧಕಾಲೇ ಗುಣವತಿ ವಿಪ್ರೇ ಪ್ರೈ ಸಮುಪಸ್ಥಿತೇ ॥ ೨೬ ॥

ಇಷ್ಟದ್ರವ್ಯಂ ಚ ಯೋ ದದ್ಯಾತ್ ಸ್ಮೃತಿಂ ಮೇಧಾಂ ಚ ವಿಂದತಿ ।
ಸರ್ಪಿಃಪೂರ್ಣಾನಿ ಪಾತ್ರಾಣಿ ಶ್ರಾದ್ಧೇ ಸತ್ಕೃತ್ಯ ದಾಪಯೇತ್ ॥ ೨೭ ॥

ಕುಂಭೋಪದೋಹಗೃಷ್ಟೀನಾಂ ಬಹ್ವೀನಾಂ ಫಲಮಶ್ನುತೇ ।
ಶ್ರಾದ್ಧೇ ಯಥೇಪ್ಸಿತಂ ದತ್ತ್ವಾ ಪುಂಡರೀಕಫಲಂ ಲಭೇತ್ ॥ ೨೮ ॥

ವನಂ ಪುಷ್ಪಫಲೋಪೇತಂ ದತ್ತ್ವಾ ಗೋಸವಮಶ್ನುತೇ ।
ಕೂಪಾರಾಮತಡಾಗಾನಿ ಕ್ಷೇತ್ರಗೋಷ್ಠಗೃಹಾಣಿ ಚ, ॥ ೨೯ ॥

---

೨೫. ಮತ್ತು ಅಂತಹ ದಾತೃಪುರುಷನನ್ನು ಪತಿವ್ರತೆಯರಾದ ತರುಣಿಯರು ಸೇವಿಸುವರು. ಶಯನ, ಆಸನ, ವಾಹನ, ಭೂಮಿ, ಯಾನ ಮುಂತಾದ ಉಪಕರಣ ಗಳನ್ನು ಶ್ರಾದ್ಧದಲ್ಲಿ ದಾನಮಾಡಬೇಕು.

೨೬. ಇಂತಹ ಉಪಕರಣ ವಸ್ತುಗಳ ದಾನದಿಂದ ಅಶ್ವಮೇಧಯಾಗವನ್ನು ಆಚರಿಸಿದ ಪುಣ್ಯಕ್ಕೆ ಭಾಗಿಯಾಗುವನು. ಶ್ರಾದ್ಧಕಾಲದಲ್ಲಿ ಸದ್ಗುಣ ಪೂರ್ಣನಾದ ವಿಪ್ರನು ಬಂದರೆ ಅವನನ್ನು ಗೌರವಿಸಬೇಕು.

೨೭. ಮತ್ತು ಅವನಿಗೆ ಇಷ್ಟವಾದ ದ್ರವ್ಯವನ್ನು ದಾನಮಾಡುವುದರಿಂದ ಸ್ಮೃತಿ-ಮೇಧಾಶಕ್ತಿಗಳನ್ನು ಹೊಂದುತ್ತಾನೆ. ಶ್ರಾದ್ಧದಲ್ಲಿ ಸತ್ಕರಿಸಿ ಘೃತದಿಂದ ಪೂರ್ಣವಾದ ಪಾತ್ರಗಳನ್ನು ದಾನಮಾಡುವುದು ವಿಶೇಷ ಫಲಪ್ರದವು.

೨೮. ಕುಂಭ-ಉಪದೋಹಪಾತ್ರಗಳಿಂದ ಕೂಡಿದ ಧೇನುದಾನ, ಆಯಾಯ ಪಾತ್ರಗಳಲ್ಲಿ ಇಷ್ಟವಾದ ವಸ್ತುದಾನಗಳಿಂದ ಪುಂಡರೀಕಯಜ್ಞಾನುಷ್ಠಾನದ ಫಲ ವನ್ನು ಹೊಂದುತ್ತಾನೆ.

೨೯. ಪುಷ್ಪ-ಫಲಗಳಿಂದ ಅಲಂಕರಿಸಲ್ಪಟ್ಟ ವನವನ್ನು ದಾನಮಾಡಿ ಗೋಸವ ಯಾಗದ ಫಲವನ್ನು ಹೊಂದುತ್ತಾನೆ. ವನದಂತೆ ಕೂಪ, ಆರಾಮ, ತಟಾಕ, ಕ್ಷೇತ್ರ, ಗೋಷ್ಠ ಮತ್ತು ಗೃಹಗಳು ಉತ್ತಮವಾದ ದಾನ ವಸ್ತುಗಳಾಗಿವೆ.

ದತ್ತ್ವಾ ಮೋದಂತಿ ತೇ ಸ್ವರ್ಗೇ ನಿತ್ಯಮಾಚಂದ್ರತಾರಕಮ್ ।
ಸ್ವಾಸ್ತೀರ್ಣಂ ಶಯನಂ ದತ್ತ್ವಾ ಶ್ರಾದ್ಧೇ ರತ್ನವಿಭೂಷಿತಮ್ ॥ ೩೦ ॥

ಪಿತರಸ್ತಸ್ಯ ತುಷ್ಯಂತಿ ಸ್ವರ್ಗಲೋಕಂ ಸಮಶ್ನುತೇ ।
ಅಸ್ಮಿನ್ ಲೋಕೇ ಚ ಸಂಪನ್ನಂ ಸ್ಯಂದನಂ ಚ ಸುವಾಹನೈಃ ॥ ೩೧ ॥

ಅಷ್ಟಾಭಿಃ ಪೂಜ್ಯತೇ ಚಾತ್ರ ಧನಧಾನ್ಯೈಶ್ಚ ವರ್ಧತೇ ।
ಪರ್ಣಕೌಶೇಯಪಟ್ಟೋರ್ಣೈಃ ತಥಾ ಪ್ರಾವಾರಕಂಬಲೌ ॥ ೩೨ ॥

ಅಜಿನಂ ಕಾಂಚನಂ ಪಟ್ಟಂ ಪ್ರವೇಣೀಂ ಮೃಗಲೋಮಕಮ್ ।
ದದ್ಯಾದೇತಾನಿ ವಿಪ್ರಾಣಾಂ ಭೋಜಯಿತ್ವಾ ಯಥಾವಿಧಿ ॥ ೩೩ ॥

ಪ್ರಾಪ್ನೋತಿ ಶ್ರದ್ದಧಾನಸ್ತು ವಾಜಪೇಯಫಲಂ ನರಃ ।
ಬಹುಭಾರ್ಯಾಃ ಸುರೂಪಾಶ್ಚ ಪುತ್ರಾ ಭೃತ್ಯಾಶ್ಚ ಕಿಂಕರಾಃ ॥ ೩೪ ॥

---

೩೦. ಇವುಗಳನ್ನು ದಾನಮಾಡಿದ ಮಹನೀಯರು ಚಂದ್ರ-ತಾರಕೆಗಳು ಇರುವಷ್ಟು ದೀರ್ಘಕಾಲವೂ ಸ್ವರ್ಗದಲ್ಲಿ ಸುಖವನ್ನು ಅನುಭವಿಸುವರು. ಶ್ರಾದ್ಧದಲ್ಲಿ ರತ್ನಗಳಿಂದ ಅಲಂಕರಿಸಲ್ಪಟ್ಟ ವಸ್ತ್ರಾಸ್ತರಣದಿಂದ ಕೂಡಿದ ಶಯನವನ್ನು ದಾನ ಮಾಡಬೇಕು.

೩೧. ಈ ದಾನದಿಂದ ಪಿತೃಗಳು ಸಂತುಷ್ಟರಾಗುವರು, ಮತ್ತು ದಾತೃಪುರುಷನು ಸ್ವರ್ಗವನ್ನು ಹೊಂದುವನು. ಈ ಲೋಕದಲ್ಲಿ ವಾಹನಗಳಿಂದ ಕೂಡಿದ ರಥಾದಿ ಯಾನಗಳ ಸುಖವನ್ನು ಹೊಂದುವನು.

೩೨. ಮತ್ತು ಅಣಿಮಾದಿ ಅಷ್ಟೈಶ್ವರ್ಯಗಳಿಂದಲೂ ಧನ-ಧಾನ್ಯಗಳಿಂದಲೂ ವೃದ್ಧಿಯನ್ನು ಹೊಂದಿ ಪೂಜ್ಯನಾಗುವನು, ನಾರು, ರೇಷ್ಮೆ, ಉಣ್ಣೆ, ಮೃಗರೋಮ ಮುಂತಾದುವುಗಳಿಂದ ಆದ ಅಮೂಲ್ಯವಾದ ಪ್ರಾವರಣ ವಸ್ತ್ರಗಳನ್ನು ಶ್ರಾದ್ಧದಲ್ಲಿ ದಾನಮಾಡಬೇಕು.

೩೩. ಅಜಿನ, ಸುವರ್ಣ, ಪಟ್ಟವಸ್ತ್ರ, ಆಸ್ತರಣ, ಮೃಗರೋಮ ಮಯವಾದ ವಸ್ತ್ರ ಇವುಗಳನ್ನು ಯಥಾವಿಧಿಯಾಗಿ ವಿಪ್ರರನ್ನು ಭೋಜನಮಾಡಿಸಿದ ಅನಂತರದಲ್ಲಿ ಸತ್ಕಾರ ಪೂರ್ವಕವಾಗಿ ದಾನಮಾಡಬೇಕು.

೩೪. ಶ್ರದ್ಧಾವಂತನಾಗಿ ವಿಹಿತವಾದ ಈ ದಾನಗಳನ್ನು ಆಚರಿಸಿದ ಮಾನವನು ವಾಜಪೇಯ ಯಜ್ಞದ ಫಲವನ್ನು ಹೊಂದುತ್ತಾನೆ. ಮತ್ತು ಅವನನ್ನು ರೂಪವತಿಯರಾದ ಅನೇಕ ಭಾರ್ಯೆಯರು, ಪುತ್ರರು, ವಿನೀತರಾದ ಸೇವಕರು ಸೇವಿಸುತ್ತಾರೆ.

ವಶೇ ತಿಷ್ಠಂತಿ ಭೂತಾನಿ ಲೋಕೇ ಚಾಸ್ಮಿನ್ನಿರಾಮಯಮ್ ।
ಕೌಶೇಯಂ ಕ್ಷೌಮಕಾರ್ಪಾಸಂ ದುಕೂಲಂ ಗಹನಂ ತಥಾ ॥ ೩೫ ॥

ಶ್ರಾದ್ಧೇ ಚೈತಾನಿ ಯೋ ದದ್ಯಾತ್ ಕಾಮಾನಾಪ್ನೋತ್ಯನುತ್ತಮಾನ್ ।
ಅಲಕ್ಷ್ಮೀಂ ನಾಶಯಂತ್ಯೇತೇ ತಮಃ ಸೂರ್ಯೋದಯೋ ಯಥಾ॥೩೬॥

ಭ್ರಾಜತೇ ಚ ವಿಮಾನಾಗ್ರೇ ನಕ್ಷತ್ರೇಷ್ವಿವ ಚಂದ್ರಮಾಃ ।
ವಾಸೋ ಹಿ ಸರ್ವದೈವತ್ಯಂ ಸರ್ವದೇವೈರಭಿಷ್ಟುತಮ್ ॥ ೩೭ ॥

ವಸ್ತ್ರಾಭಾವೇ ಕ್ರಿಯಾ ನಾಸ್ತಿ ಯಜ್ಞದಾನತಪಾಂಸಿ ಚ ।
ತಸ್ಮಾದ್ವಸ್ತ್ರಾಣಿ ದೇಯಾನಿ ಶ್ರಾದ್ಧಕಾಲೇ ತು ನಿತ್ಯಶಃ ॥ ೩೮ ॥

ತಾನಿ ಸರ್ವಾಣ್ಯವಾಪ್ನೋತಿ ಶ್ರಾದ್ಧೇ ದತ್ತ್ವಾ ತು ಮಾನವಃ ।
ನಿತ್ಯಶ್ರಾದ್ಧೇ ತು ಯೋ ದದ್ಯಾತ್ ಪ್ರಯತಸ್ತತ್ಪರಾಯಣಃ ॥ ೩೯ ॥

---

೩೫. ಸರ್ವ ಭೂತಗಳೂ ದಾನಿಪುರುಷನಿಗೆ ವಶವರ್ತಿಗಳಾಗುವುವು. ಈ ಲೋಕವಲ್ಲಿ ಆರೋಗ್ಯವೂ ಉಂಟಾಗುವುದು, ರೇಷ್ಮೆ, ಪಟ್ಟೆ ತಂತುರಚಿತವಾದ ದುಕೂಲ ಮುಂತಾದ ಅಮೂಲ್ಯ ವಸ್ತ್ರಗಳು ಶ್ರಾದ್ಧದಲ್ಲಿ ದಾನ ಮಾಡಬೇಕಾದ ಉತ್ತಮ ವಸ್ತುಗಳಾಗಿವೆ.

೩೬. ಈ ವಸ್ತುಗಳನ್ನು ಶ್ರಾದ್ಧದಲ್ಲಿ ದಾನಮಾಡಿದವನು ಸರ್ವೋತ್ತಮವಾದ ಕಾಮ್ಯ ಫಲಗಳನ್ನು ಹೊಂದುತ್ತಾನೆ. ಸೂರ್ಯನ ಉದಯವು ಅಂಧಕಾರವನ್ನು ನಿವಾರಿಸಿದಂತೆ ದಾನಮಾಡಿದ ಈ ವಸ್ತುಗಳು ದಾತೃವಿನ ಅಲಕ್ಷ್ಮಿಯನ್ನು ದೂರ ಮಾಡುತ್ತವೆ.

೩೭. ಮತ್ತು ಈ ದಾನಮಹಿಮೆಯಿಂದ ನಕ್ಷತ್ರಗಣದಲ್ಲಿ ಚಂದ್ರನು ರಾರಾಜಿಸುತ್ತಿರುವಂತೆ ವಿಮಾನಾಗ್ರದಲ್ಲಿ ಪ್ರಕಾಶಿಸುತ್ತಿರುವನು. ಸಮಸ್ತ ದೇವತೆಗಳ ಅಭಿಮಾನಕ್ಕೆ ಪಾತ್ರವಾದ ವಸ್ತ್ರವನ್ನು ಸಕಲ ದೇವತೆಗಳು ಸ್ತೋತ್ರಮಾಡುವರು.

೩೮. ವಸ್ತ್ರವಿಲ್ಲದೆ ಯಜ್ಞ, ದಾನ, ತಪಸ್ಸು ಮುಂತಾದ ಯಾವುದೊಂದು ಸತ್ಕರ್ಮವೂ ನಡೆಯುವುದಿಲ್ಲ. ಆದುದರಿಂದ ಶ್ರೇಷ್ಠವಾದ ವಸ್ತ್ರಗಳನ್ನು ನಿತ್ಯವಾಗಿ ಶ್ರಾದ್ಧಕರ್ಮದಲ್ಲಿ ದಾನಮಾಡಬೇಕು.

೩೯. ಮಾನವನು ಅಂತಹ ವಸ್ತ್ರದಾನವನ್ನು ನೆರವೇರಿಸಿ ಯಜ್ಞಾದಿ ಸತ್ಕರ್ಮಗಳ ಫಲವನ್ನು ಅನುಭವಿಸುತ್ತಾನೆ. ನಿತ್ಯ ಶ್ರಾದ್ಧದಲ್ಲಿಯೂ ಪಿತೃಭಕ್ತಿ ತತ್ಪರನೂ ಪವಿತ್ರನೂ ಆಗಿ ವಸ್ತ್ರವನ್ನು ದಾನಮಾಡುವುದು ಪ್ರಶಸ್ತವು.

ಸರ್ವಕಾಮಾನವಾಪ್ನೋತಿ ರಾಜ್ಯಂ ಸ್ವರ್ಗಂ ತಥೈವ ಚ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ॥ ೪೦ ॥

ಭಕ್ಷ್ಯಜಾತಂ ತು ಸುಕೃತಂ ಸ್ವಸ್ತಿಕಾದ್ಯಂ ಸಶರ್ಕರಮ್ ।
ಕೃಸರಂ ಮಧು ಸರ್ಪಿಶ್ಚ ಪಯಃ ಪಾಯಸಮೇವ ಚ ॥ ೪೧ ॥

ಸ್ನಿಗ್ಧಪ್ರಾಯಾಂಶ್ಚ ಯೋ ದದ್ಯಾದಗ್ನಿಷ್ಟೋಮಫಲಂ ಲಭೇತ್ ।
ದಧಿ ಗವ್ಯಮಸಂಸೃಷ್ಟಂ ಭಕ್ಷ್ಯಾನ್ನಾನಾವಿಧಾಂಸ್ತಥಾ ॥ ೪೨ ॥

ದತ್ತ್ವಾ ನ ಶೋಚತೇ ಶ್ರಾದ್ಧೇ ವರ್ಷಾಸು ಚ ಮಘಾಸು ಚ ।
ಘೃತೇನ ಭೋಜಯೇದ್ವಿಪ್ರಾನ್ ಘೃತಂ ಭೂಮೌ ಸಮುತ್ಸೃಜೇತ್ ॥ ೪೩ ॥

ಛಾಯಾಯಾಂ ಹಸ್ತಿನಶ್ಚೈವ ದತ್ತ್ವಾ ಶ್ರಾದ್ಧೇ ನ ಶೋಚತೇ ।
ಓದನಂ ಪಾಯಸಂ ಸರ್ಪಿರ್ಮಧು ಮೂಲಫಲಾನಿ ಚ ॥ ೪೪ ॥

---

೪೦. ಆ ದಾನ ಪ್ರಭಾವದಿಂದ ರಾಜ್ಯ, ಸ್ವರ್ಗ, ಸರ್ವಕಾಮಾವಾಪ್ತಿಗೆ ಸಾಧನವಾದ ಯಜ್ಞಾನುಷ್ಠಾನದ ಫಲರಾಶಿ, ಮತ್ತು ಸಮಸ್ತ ಕಾಮೋಪಭೋಗಗಳನ್ನು ಹೊಂದುತ್ತಾನೆ.

೪೧. ಚನ್ನಾಗಿ ಮಾಡಿದ, ಸಕ್ಕರೆಯಿಂದ ಕೂಡಿರುವ ಸ್ವಸ್ತಿಕ ಮುಂತಾದ ಬಗೆ ಬಗೆಯ ಭಕ್ಷ್ಯ, ಕೃಸರ, ಮಧು, ಆಜ್ಯ, ಕ್ಷೀರ, ಮತ್ತು ಪಾಯಸ ಮುಂತಾದ ಅನ್ನ ನಿವೇದನವು ವಿಶೇಷವಾಗಿ ಪಿತೃಗಳಿಗೆ ಪ್ರೀತಿಯನ್ನು ಉಂಟುಮಾಡುವುದು.

೪೨. ಕ್ಷೀರಾದಿ ಸ್ನೇಹ ಗರ್ಭಿತವಾದ ವಸ್ತುಗಳನ್ನು ದಾನಮಾಡುವುದರಿಂದ ಅಗ್ನಿಷ್ಟೋಮಯಾಗದ ಫಲವನ್ನು ಅನುಭವಿಸುತ್ತಾನೆ. ಗೋಕ್ಷೀರದಿಂದ ನಿರ್ಮಿಸಿದ ಗಟ್ಟಿಯಾದ ದಧಿಯನ್ನೂ ನಾನಾವಿಧ ಭಕ್ಷ್ಯಗಳನ್ನೂ ಆದರದಿಂದ ಅರ್ಪಿಸಬೇಕು.

೪೩. ವರ್ಷಾಕಾಲ, ಮತ್ತು ಮಘಾನಕ್ಷತ್ರದ ಶ್ರಾದ್ಧಗಳಲ್ಲಿ ದಧಿ ಮುಂತಾದ ದ್ರವ್ಯಗಳನ್ನು ದಾನಮಾಡಿದ್ದರಿಂದ ಯಾವ ವಿಧದ ಶೋಕವನ್ನು ಅನುಭವಿಸುವುದಿಲ್ಲ. ಹೆಚ್ಚಾಗಿ ಘೃತವನ್ನು ಅರ್ಪಿಸಿ ವಿಪ್ರರನ್ನು ಸಂತೋಷವಾಗಿ ಭೋಜನ ಮಾಡಿಸಬೇಕು. ಘೃತವನ್ನು ಭೂಮಿಯಲ್ಲಿ ಬಿಡಬೇಕು.

೪೪. ಹಸ್ತಿಚ್ಛಾಯೆಯಲ್ಲಿ ಶ್ರಾದ್ಧಮಾಡಿ ದಾನವನ್ನು ಮಾಡಿದವನು ಶೋಕಭಾಗಿಯಾಗುವುದಿಲ್ಲ. ಅನ್ನ, ಪಾಯಸ, ಘೃತ, ಮಧು, ಮೂಲ ಮತ್ತು ಫಲಗಳನ್ನು ಶ್ರಾದ್ಧದಲ್ಲಿ ವಿನಿಯೋಗಿಸಬೇಕು.

ಭಕ್ಷ್ಯಾಂಶ್ಚ ವಿವಿಧಾನ್ ದತ್ತ್ವಾ ಪರತ್ರೇಹ ಚ ಮೋದತೇ ।
ಶರ್ಕರಾಕ್ಷೀರಸಂಯುಕ್ತಾಃ ಪೃಥುಕಾ ನಿತ್ಯಮಕ್ಷಯಾಃ ॥ ೪೫ ॥

ಸ್ಯಾತ್ತು ಸಂವತ್ಸರಂ ಪ್ರೀತಿಃ ಶಾಕೈರ್ಮಾಂಸರಸೇನ ಚ ।
ಸಕ್ತುಲಾಜಾಸ್ತಥಾಪೂಪಾಃ ಕುಲ್ಮಾಷಾ ವ್ಯಂಜನೈಃ ಸಹ ॥ ೪೬ ॥

ಸರ್ಪಿಃಸ್ನಿಗ್ಧಾನಿ ಸರ್ವಾಣಿ ದಧ್ನಾ ಸಂಸ್ಕೃತ್ಯ ಭೋಜಯೇತ್ ।
ಶ್ರಾದ್ಧೇಷ್ವೇತಾನಿ ಯೋ ದದ್ಯಾತ್ ಪದ್ಮಂ ಸ ಲಭತೇ ನಿಧಿಮ್ ॥ ೪೭ ॥

ನವಸಸ್ಯಾನಿ ಯೋ ದದ್ಯಾಚ್ಛ್ರಾದ್ಧೇ ಸತ್ಕೃತ್ಯ ಯತ್ನತಃ ।
ಸರ್ವಭೋಗಾನವಾಪ್ನೋತಿ ಪೂಜ್ಯತೇ ಚ ದಿವಂ ಗತಃ ॥ ೪೮ ॥

ಭಕ್ಷ್ಯಭೋಜ್ಯಾನಿ ಪೇಯಾನಿ ಚೋಷ್ಯಲೇಹ್ಯವರಾಣಿ ಚ ।
ಭೋಜನಾಗ್ರಾಸನಂ ದತ್ತ್ವಾ ಅತಿಥಿಭ್ಯಃ ಕೃತಾಂಜಲಿಃ ॥ ೪೯ ॥

---

೪೫. ಮತ್ತು ವಿವಿಧವಾದ ಭಕ್ಷ್ಯಗಳನ್ನು ನಿವೇದಿಸುವುದರಿಂದ ಇಹ–ಪರ ಲೋಕಗಳಲ್ಲಿ ಸುಖವನ್ನು ಹೊಂದುತ್ತಾನೆ. ಸಕ್ಕರೆ, ಕ್ಷೀರಗಳಿಂದ ಕೂಡಿದ ಅವಲಕ್ಕಿ ಎಂಬುದು ಯಾವಾಗಲೂ ಪಿತೃಗಳಿಗೆ ಅಕ್ಷಯಪ್ರೀತಿಯನ್ನುಂಟುಮಾಡುವುದು.

೪೬. ಬಗೆ ಬಗೆಯ ಕಾಯಿ ಪಲ್ಯಗಳಿಂದಲೂ ಮಾಂಸ ಸಂಸ್ಕೃತರಸದಿಂದಲೂ ಪಿತೃಗಳಿಗೆ ಸಂವತ್ಸರ ಕಾಲ ಪ್ರೀತಿಯುಂಟಾಗುವುದು. ಅರಳುಹಿಟ್ಟು, ಅಪೂಪ, ಕುಲ್ಮಾಷ ಮುಂತಾದ ವಸ್ತು ವಿಕಾರವಾದ ಭಕ್ಷ್ಯಗಳು ವ್ಯಂಜನಗಳಿಂದ ಕೂಡಿ ಪಿತೃಪ್ರಿಯವಾಗುವುವು.

೪೭. ಅಂತಹ ಭಕ್ಷ್ಯಗಳನ್ನು ತುಪ್ಪದಲ್ಲಿ ನೆನೆಸಿ ಮೊಸರಿನಿಂದ ಸಂಸ್ಕಾರ ಮಾಡಿ ವಿಪ್ರರಿಗೆ ಅವುಗಳನ್ನು ಭೋಜನಮಾಡಿಸಬೇಕು. ಇವುಗಳನ್ನು ಶ್ರಾದ್ಧದಲ್ಲಿ ದಾನಮಾಡಿದವನು ಉತ್ತಮವಾದ ಪದ್ಮವೆಂಬ ನಿಧಿಯನ್ನು ಆರ್ಜಿಸುತ್ತಾನೆ.

೪೮. ಶ್ರಾದ್ಧದಲ್ಲಿ ವಿಪ್ರರನ್ನು ಸತ್ಕರಿಸಿ ಪ್ರಯತ್ನದಿಂದ ಹೊಸ ಧಾನ್ಯವನ್ನು ಅರ್ಪಿಸಿದವನು ಇಹಲೋಕದಲ್ಲಿ ಸಮಸ್ತ ಭೋಗಗಳನ್ನು ಅನುಭವಿಸಿ ಸ್ವರ್ಗಲೋಕ ದಲ್ಲಿ ಪೂಜಿಸಲ್ಪಡುವನು.

೪೯. ಅತಿಥಿಗಳಿಗೆ ನಮಸ್ಕಾರ ಮಾಡಿ ಅಗ್ರಾಸನವನ್ನು ಕೊಟ್ಟು ಕುಳ್ಳರಿಸಿ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ ಮುಂತಾದ, ಉತ್ತಮವಾದ ಚತುರ್ವಿಧ ಭಕ್ಷ್ಯಗಳನ್ನು ಅರ್ಪಿಸಿ ಭೋಜನ ಮಾಡಿಸುವುದು ಉತ್ತಮವಾದ ಧರ್ಮವು.

ಸರ್ವಯಜ್ಞಕ್ರತೂನಾಂ ಹಿ ಫಲಂ ಪ್ರಾಪ್ನೋತ್ಯನುತ್ತಮಮ್ ।
ಕ್ಷಿಪ್ರಮುತ್ಯುಷ್ಣಮಕ್ಲಿಷ್ಟಂ ದದ್ಯಾದನ್ನಂ ಬುಭುಕ್ಷತೇ ॥ ೫೦ ॥

ಸವ್ಯಂಜನಂ ತಥಾ ಸ್ನಿಗ್ಧಂ ಭಕ್ತ್ಯಾ ಸತ್ಕೃತ್ಯ ಯತ್ನತಃ ।
ತರುಣಾದಿತ್ಯಸಂಕಾಶಂ ವಿಮಾನಂ ಹಂಸವಾಹನಮ್ ॥ ೫೧ ॥

ಅನ್ನದೋ ಲಭತೇ ನಿತ್ಯಂ ಕನ್ಯಾಕೋಟೀಸ್ತಥೈವ ಚ ।
ಅನ್ನದಾನಾತ್ಪರಂ ದಾನಂ ನಾನ್ಯತ್ ಕಿಂಚಿತ್ತು ವಿದ್ಯತೇ ॥ ೫೨ ॥

ಅನ್ನಾದ್ಭೂತಾನಿ ಜಾಯಂತೇ ಜೀವಂತಿ ಪ್ರಭವಂತಿ ಚ ।
ಜೀವದಾನಾತ್ ಪರಂ ದಾನಂ ನಾನ್ಯತ್ ಕಿಂಚನ ವಿದ್ಯತೇ ॥ ೫೩ ॥

ಅನ್ನಾಲ್ಲೋಕಾಃ ಪ್ರತಿಷ್ಠಂತಿ ಲೋಕದಾನಸ್ಯ ತತ್ ಫಲಮ್ ।
ಅನ್ನಂ ಪ್ರಜಾಪತಿಃ ಸಾಕ್ಷಾತ್ತೇನ ಸರ್ವಮಿದಂ ತತಮ್ ॥ ೫೪ ॥

---

೫೦. ಹಸಿವುಳ್ಳ ಮಾನವನಿಗೆ ಬಿಸಿ ಬಿಸಿಯಾದ ಕ್ಲೇಶಹರವಾದ ಉತ್ತಮಾನ್ನವನ್ನು ಶೀಘ್ರವಾಗಿ ಕೊಟ್ಟವನು ಸಮಸ್ತ ಯಜ್ಞ-ಕ್ರತುಗಳ ಅನುಷ್ಠಾನದಿಂದ ಲಭಿಸುವ ಫಲರಾಶಿಯನ್ನು ಅನುಭವಿಸುತ್ತಾನೆ.

೫೧. ಅತಿಥಿಯನ್ನು ಸತ್ಕರಿಸಿ ಪ್ರಯತ್ನ ಪೂರ್ವಕವಾಗಿ ಭಕ್ತಿಯಿಂದ ಸ್ನೇಹ ಗುಣದಿಂದ ಕೂಡಿದ ಮತ್ತು ವ್ಯಂಜನೋಪೇತವಾದ ಅನ್ನವನ್ನು ಕೊಡುವುದರಿಂದ ಪ್ರೌಢ ಸೂರ್ಯನಂತೆ ಉಜ್ವಲವಾದ ಹಂಸವಾಹನದಿಂದ ಕೂಡಿದ ವಿಮಾನವನ್ನು ಹೊಂದುವನು.

೫೨. ವಿಶೇಷವಾಗಿ ಪ್ರತಿನಿತ್ಯವೂ ಅನ್ನದಾನ ಮಾಡಿದ ಮಹಾತ್ಮನು ಕೋಟಿ ಗಟ್ಟಲೆಯಾಗಿ ಕನ್ಯೆಯರನ್ನು ದಾನಮಾಡಿದ ಫಲಭಾಗಿಯಾಗುವನು. ಅನ್ನದಾನಕ್ಕಿಂತಲೂ ಉತ್ತಮವಾದ ಮತ್ತೊಂದು ದಾನವು ಯಾವುದೂ ಇಲ್ಲ.

೫೩. ಅನ್ನದಿಂದ ನಿಖಿಲ ಪ್ರಾಣಿಗಳು ಜನಿಸಿ ಅನ್ನದಿಂದಲೇ ಜೀವಿಸಿ ಅನ್ನದಲ್ಲಿಯೇ ಐಕ್ಯವನ್ನು ಹೊಂದುವುವು. ಆದ್ದರಿಂದ ಅನ್ನವು ಜೀವಪ್ರಾಯವಾಗಿದೆ. ಜೀವದಾನಕ್ಕಿಂತ ಹೆಚ್ಚಿನ ಮತ್ತಾವ ದಾನವೂ ಇಲ್ಲ.

೫೪. ಹೀಗೆಯೇ ಅನ್ನಮೂಲಕವಾಗಿಯೇ ಲೋಕಗಳು ಪ್ರತಿಷ್ಠೆ ಹೊಂದಿರುವುದರಿಂದ ಅನ್ನದಾನವು ಲೋಕದಾನದ ಫಲಕ್ಕೆ ಸಾಧನವಾಗುವುದು, ಅನ್ನವು

ತಸ್ಮಾದನ್ನಸಮಂ ದಾನಂ ನ ಭೂತಂ ನ ಭವಿಷ್ಯತಿ ।
ಯಾನಿ ರತ್ನಾನಿ ಮೇದಿನ್ಯಾಂ ವಾಹನಾನಿ ಸ್ತ್ರಿಯಸ್ತಥಾ ॥ ೫೫ ॥

ಕ್ಷಿಪ್ರಂ ಪ್ರಾಪ್ನೋತಿ ತತ್ ಸರ್ವಂ ಪಿತೃಭಕ್ತಸ್ತು ಯೋ ನರಃ ।
ಪ್ರತಿಶ್ರಯಂ ಚ ಯೋ ದದ್ಯಾದತಿಥಿಭ್ಯಃ ಕೃತಾಂಜಲಿಃ ॥ ೫೬ ॥

ದೇವಾಸ್ತಂ ಸಂಪ್ರತೀಚ್ಛಂತಿ ದಿವ್ಯಾತಿಥ್ಯೈಃ ಸಹಸ್ರಶಃ ।
ಸರ್ವಾಣ್ಯೇತಾನಿ ಯೋ ದದ್ಯಾತ್ ಪೃಥಿವ್ಯಾಮೇಕರಾಡ್ಭವೇತ್ ॥ ೫೭ ॥

ತ್ರಿಭಿರ್ದ್ವಾಭ್ಯಾಮಥೈಕೇನ ದಾನೇನ ತು ಸುಖೀ ಭವೇತ್ ।
ದಾನಾನಿ ಪರಮೋ ಧರ್ಮಃ ಸದ್ಭಿಃ ಸತ್ಕೃತ್ಯ ಪೂಜಿತಃ ॥ ೫೮ ॥

---

ಸಾಕ್ಷಾತ್ ಪ್ರಜಾಪತಿಯ ಸ್ವರೂಪವು, ಪ್ರಜಾಪತಿಯಿಂದ ಪ್ರಪಂಚವೆಲ್ಲ ಆವರಿಸಲ್ಪಟ್ಟಿದೆ.

೫೫. ಆದುದರಿಂದ ಅನ್ನದಾನಕ್ಕೆ ಸಮವಾದ ಮತ್ತೊಂದು ದಾನವು ಹಿಂದೆ ಎಂದೂ ಇರಲಿಲ್ಲ. ಮುಂದೆ ಸಂಭವಿಸುವುದೂ ಇಲ್ಲ. ಇಂತಹ ಅನ್ನದಾನಕ್ಕೆ ಭೂಮಿಯಲ್ಲಿರುವ ಅಮೂಲ್ಯ ವಸ್ತು ವಾಹನ ಮತ್ತು ಸ್ತ್ರೀಯರ ಲಾಭವು ಫಲವಾಗುವುದು.

೫೬. ಪಿತೃಭಕ್ತನಾಗಿ ಇಂತಹ ಅನ್ನ ದಾನಮಾಡಿದ ಮನುಜನು ಅವೆಲ್ಲ ಫಲಗಳನ್ನು ಶೀಘ್ರವಾಗಿ ಹೊಂದುವನು. ಹಾಗೆ ಅತಿಥಿಯನ್ನು ಭಕ್ತಿಯಿಂದ ನಮಸ್ಕರಿಸಿ ಒರಗುಮಣೆ ಮುಂತಾದ ಆಶ್ರಯವನ್ನು ದಾನಮಾಡಬೇಕು.

೫೭. ಹಾಗೆ ಅತಿಥಿ ಸತ್ಕಾರಶೀಲನಾದ ಮನುಜನನ್ನು ದೇವತೆಗಳು ಸಾವಿರಾರು ಬಗೆಯ ದಿವ್ಯವಾದ ಆತಿಥ್ಯಗಳನ್ನು ಅರ್ಪಿಸಿ ಬರಮಾಡಿಕೊಳ್ಳುವರು. ಹಿಂದೆ ಹೇಳಿರುವ ಎಲ್ಲ ವಸ್ತುಗಳನ್ನು ದಾನಮಾಡಿದವನು ಪೃಥಿವಿಯಲ್ಲಿ ಏಕಚ್ಛತ್ರಾಧಿಪತಿಯಾಗುವನು.

೫೮. ಹಿಂದೆ ಹೇಳಿದ ವಸ್ತುಗಳಲ್ಲಿ ಯಾವುದಾದರೂ ಮೂರು, ಎರಡು ಅಥವಾ ಒಂದನ್ನಾದರೂ ದಾನವನ್ನು ಕೊಟ್ಟವನು ಸುಖಿಯಾಗುವನು. ಧರ್ಮಗಳಲ್ಲೆಲ್ಲ ದಾನವೆಂಬ ಶ್ರೇಷ್ಠಧರ್ಮವು ಸಾಧುಗಳಿಂದ ಸತ್ಕಾರಪೂರ್ವಕವಾಗಿ ಶ್ಲಾಘಿಸಲ್ಪಟ್ಟಿದೆ.

ತ್ರೈಲೋಕ್ಯಸ್ಯಾಧಿಪತ್ಯಂ ಹಿ ದಾನೇನೈವ ಧ್ರುವಂ ಸ್ಥಿತಮ್ ।
ಅರಾಜಾ ಲಭತೇ ರಾಜ್ಯಮಧನಶ್ಚೋತ್ತಮಂ ಧನಮ್ ।
ಕ್ಷೀಣಾಯುರ್ಲಭತೇ ಚಾಯುಃ ಪಿತೃಭಕ್ತಃ ಸದಾ ನರಃ ॥ ೫೯ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತರಾರ್ಧೇ ಷೋಡಶೋಽಧ್ಯಾಯಃ

---

೫೯. ಲೋಕತ್ರಯದ ಆಧಿಪತ್ಯವು ದಾನಪ್ರಭಾವದಿಂದ ಶಾಶ್ವತವಾಗಿ ನಿಲ್ಲುವುದು, ಮಾನವನು ಪಿತೃಭಕ್ತನಾಗಿ ಮಾಡಿದ ದಾನ ಮಹಿಮೆಯಿಂದ ರಾಜನಲ್ಲದವನು ರಾಜ್ಯಾಧಿಕಾರವನ್ನೂ, ಧನವಿಲ್ಲದವನು ಅತಿಶಯವಾದ ಧನವನ್ನೂ, ಕ್ಷೀಣವಾದ ಆಯುಷ್ಯವುಳ್ಳವನು ದೀರ್ಘಾಯುಷ್ಯವನ್ನೂ ಹೊಂದುವನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹದಿನಾರನೆಯ
ಅಧ್ಯಾಯವು ಸಮಾಪ್ತವು.

## ಸಪ್ತದಶೋಽಧ್ಯಾಯಃ

ಬೃಹಸ್ಪತಿರುವಾಚ :—

ಅತ ಊರ್ಧ್ವಂ ಪ್ರವಕ್ಷ್ಯಾಮಿ ಶ್ರಾದ್ಧಕರ್ಮಣಿ ಪೂಜಿತಮ್ ।
ಕಾಮ್ಯಂ ನೈಮಿತ್ತಿಕಾಜಸ್ರಂ ಶ್ರಾದ್ಧಕರ್ಮಣಿ ನಿತ್ಯಶಃ ॥ ೧ ॥

ಪುತ್ರದಾರನಿಮಿತ್ತಾಃ ಸ್ಯುರಷ್ಟಕಾಸ್ತಿಸ್ರ ಏವ ತು ।
ಕೃಷ್ಣಪಕ್ಷೇ ವರಿಷ್ಠಾ ಹಿ ಪೂರ್ವಾಖಂಡಲದೇವತಾ ॥ ೨ ॥

ಪ್ರಾಜಾಪತ್ಯಾ ದ್ವಿತೀಯಾ ಸ್ಯಾತ್ ತೃತೀಯಾ ವೈಶ್ವದೇವಿಕಾ ।
ಆದ್ಯಾಪೂಪೈಃ ಸದಾ ಕಾರ್ಯಾ ಮಾಂಸೈರನ್ಯಾ ಸದಾ ಭವೇತ್ ॥ ೩ ॥

ಶಾಕೈಃ ಕಾರ್ಯಾ ತೃತೀಯಾ ಸ್ಯಾದೇವಂ ದ್ರವ್ಯಗತೋ ವಿಧಿಃ ।
ಅತ್ರಾಪೀಷ್ಟಂ ಪಿತೄಣಾಂ ವೈ ನಿತ್ಯಮೇವ ವಿಧೀಯತೇ ॥ ೪ ॥

---

೧. ಬೃಹಸ್ಪತಿಯು ಇಂತೆಂದನು :—ಇನ್ನು ಮುಂದೆ ಶ್ರಾದ್ಧಕರ್ಮಗಳಲ್ಲಿ ಪ್ರಶಸ್ತವಾದ ಕರ್ಮವನ್ನು ನಿರೂಪಿಸುವೆನು. ಶ್ರಾದ್ಧಕರ್ಮಗಳಲ್ಲಿ ಕಾಮ್ಯಶ್ರಾದ್ಧ, ನೈಮಿತ್ತಿಕಶ್ರಾದ್ಧ ಮತ್ತು ನಿತ್ಯ ಆಚರಿಸಬೇಕಾದ ಶ್ರಾದ್ಧವೆಂದು ನಾನಾ ವಿಧವಾಗಿವೆ.

೨. ಇವುಗಳಲ್ಲಿ ಅಷ್ಟಕಾ ಶ್ರಾದ್ಧವೆಂಬುದು ಪುತ್ರ-ಭಾರ್ಯಾದಿ ಪ್ರಾಪ್ತಿಗೆ ನಿಮಿತ್ತವಾಗಿ ಮೂರು ಬಗೆಯಾಗಿರುವುದು. ಇದು ಕೃಷ್ಣಪಕ್ಷದಲ್ಲಿ ಮಾಡುವ ಪ್ರಶಸ್ತ ಕರ್ಮವು, ಮೂರರಲ್ಲಿ ಮೊದಲನೆಯ ಕರ್ಮವು ಇಂದ್ರದೇವತೆಯಿಂದ ಕೂಡಿದೆ.

೩. ಪ್ರಜಾಪತಿ ದೇವತೆಯಿಂದ ಎರಡನೆಯ ಅಷ್ಟಕಾಕರ್ಮವೂ ವಿಶ್ವೇದೇವ ದೇವತೆಯಿಂದ ಮೂರನೆಯ ಅಷ್ಟಕಾ ಕರ್ಮವೂ ಕೂಡಿವೆ. ಮೊದಲನೆಯ ಕರ್ಮವನ್ನು ಅಪೂಪಹವಿಸ್ಸಿನಿಂದಲೂ ಮತ್ತೊಂದನ್ನು ಮಾಂಸಹವಿಸ್ಸಿನಿಂದಲೂ ಆಚರಿಸಬೇಕು.

೪. ಮೂರನೆಯ ಅಷ್ಟಕಾ ಕರ್ಮವನ್ನು ಶಾಕದ್ರವ್ಯದಿಂದ ಮಾಡಬೇಕು. ಈ ರೀತಿಯಾಗಿ ಅಷ್ಟಕಾ ಕರ್ಮದಲ್ಲಿ ಉಪಯೋಗಿಸುವ ದ್ರವ್ಯ ವಿಷಯದಲ್ಲಿ ವಿಧಿಯು ಇದೆ. ಇದರಲ್ಲಿಯೂ ಪಿತೃಗಳಿಗೆ ಇಷ್ಟವಾದುದನ್ನು ಯಾವಾಗಲೂ ಆಚರಿಸಬೇಕೆಂದು ವಿಧಿಯಿರುವುದು.

ಯಾ ಚಾಪ್ಯನ್ಯಾ ಚತುರ್ಥೀ ಸ್ಯಾತ್ತಾಂ ಚ ಕುರ್ಯಾದ್ವಿಶೇಷತಃ ।
ಆಸು ಶ್ರಾದ್ಧಂ ಬುಧಃ ಕುರ್ವನ್ ಸರ್ವಸ್ವೇನಾಪಿ ನಿತ್ಯಶಃ ॥ ೫ ॥

ಕ್ಷಿಪ್ರಮಾಪ್ನೋತಿ ಹಿ ಶ್ರೇಯಃ ಪರತ್ರೇಹ ಚ ಮೋದತೇ ।
ಪಿತರಃ ಪರ್ವಕಾಲೇಷು ತಿಥಿಕಾಲೇಷು ದೇವತಾಃ ॥ ೬ ॥

ಸರ್ವೇಷು ಪುರುಷಾ ಯಾಂತಿ ನಿಪಾತಮಿವ ಧೇನವಃ ।
ಮಾಸಾಂತೇ ಪ್ರತಿಗಚ್ಛೇಯುರಷ್ಟಕಾಸು ಹ್ಯಪೂಜಿತಾಃ ॥ ೭ ॥

ಮೋಘಾಸ್ತಸ್ಯ ಭವಂತ್ಯಾಶಾಃ ಪರತ್ರೇಹ ಚ ಸರ್ವಶಃ ।
ಪೂಜಕಾನಾಂ ಸಮುತ್ಕರ್ಷೋ ನಾಸ್ತಿಕಾನಾಮಧೋಗತಿಃ ॥ ೮ ॥

ದೇವಾಂಸ್ತು ದಾಯಿನೋ ಯಾಂತಿ ತಿರ್ಯಗ್ಗಚ್ಛಂತ್ಯದಾಯಿನಃ ।
ಪುಷ್ಟಿಂ ಪ್ರಜಾಂ ಸ್ಮೃತಿಂ ಮೇಧಾಂ ಪುತ್ರಾನೈಶ್ವರ್ಯಮೇವ ಚ॥ ೯ ॥

---

೫. ಇವುಗಳಲ್ಲದೆ ನಾಲ್ಕನೆಯದಾಗಿರುವ ಅಷ್ಟಕಾ ಕರ್ಮವನ್ನು ವಿಶೇಷವಾಗಿ ಆಚರಿಸಬೇಕು. ಅಷ್ಟಕೆಗಳಲ್ಲಿ ಪಂಡಿತನು ತಪ್ಪದೆಯೇ ಸರ್ವಸ್ವವನ್ನಾದರೂ ವ್ಯಯ ಮಾಡಿ ಶ್ರಾದ್ಧಕರ್ಮವನ್ನು ಆಚರಿಸಬೇಕು.

೬. ಅದರಿಂದ ಶೀಘ್ರವಾಗಿ ಶ್ರೇಯಸ್ಸನ್ನು ಹೊಂದಿ ಇಹ ಮತ್ತು ಪರಲೋಕ ಗಳಲ್ಲಿ ಆನಂದವನ್ನು ಅನುಭವಿಸುತ್ತಾನೆ. ಸಾಮಾನ್ಯವಾಗಿ ಪರ್ವಕಾಲದಲ್ಲಿ ಪಿತೃಗಳೂ ತಿಥಿ ಕಾಲಗಳಲ್ಲಿ ದೇವತೆಗಳೂ ತೃಪ್ತಿ ಹೊಂದುವರು.

೭. ಅತಿಥಿಪುರುಷರು ತೃಪ್ತಿಗೋಸ್ಕರ ಸರ್ವಕಾಲಗಳಲ್ಲಿ ಹಸುಗಳು ಪಾನ ತೀರ್ಥ ಸ್ಥಳವನ್ನು ಸೇರಿದಂತೆ ಸೇರುವರು. ತೃಪ್ತಿಯನ್ನು ನಿರೀಕ್ಷಿಸಿರುವ ಪಿತೃಗಳು ಅಷ್ಟಕೆಗಳಲ್ಲಿ ಪೂಜಿಸಲ್ಪಡದೇ ಇದ್ದರೆ, ಮಾಸಾಂತದಲ್ಲಿ ಹೊರಟುಹೋಗುವರು.

೮. ಹೀಗಿರುವುದರಿಂದ ಯಜಮಾನನ ಇಹಪರಗಳ ಆಶೆಗಳೆಲ್ಲವೂ ಪಿತೃ ಆಶಾ ಭಂಗದಿಂದ ಭಂಗವನ್ನು ಹೊಂದುವುವು. ಒಟ್ಟಾಗಿ ಪಿತೃ ಪೂಜಕರಿಗೆ ಫಲಾತಿಶಯವೂ ನಾಸ್ತಿಕರಿಗೆ ಅಧೋಗತಿಯೂ ಉಂಟಾಗುವುವು.

೯. ವಿಹಿತ ಕಾಲಗಳಲ್ಲಿ ದ್ರವ್ಯದಾನವನ್ನು ಮಾಡಿದವರು ದೇವಜನ್ಮವನ್ನು ಹೊಂದುವರು. ದಾನ ಕರ್ಮರಹಿತರು ತಿರ್ಯಕ್ ಜನ್ಮವನ್ನು ಎತ್ತುವರು. ಮತ್ತು ಈ ಸತ್ಕರ್ಮದಿಂದ ಪುಷ್ಟಿ, ಪ್ರಜಾ, ಸ್ಮೃತಿ, ಮೇಧಾ, ಪುತ್ರ ಹಾಗು ಐಶ್ವರ್ಯವೆಂಬ ಫಲರಾಶಿಯನ್ನು ಹೊಂದುವರು.

ಕುರ್ವಾಣಃ ಪೂಜನಂ ಚಾಸು ಸರ್ವಂ ಪೂರ್ಣಂ ಸಮಶ್ನುತೇ ।
ಪ್ರತಿಪದ್ಧನಲಾಭಾಯ ಲಬ್ಧಂ ಚಾಸ್ಯ ನ ನಶ್ಯತಿ ॥ ೧೦ ॥

ದ್ವಿತೀಯಾಯಾಂ ತು ಯಃ ಕುರ್ಯಾದ್ದ್ವಿಪದಾಧಿಪತಿರ್ಭವೇತ್ ।
ವರಾರ್ಥಿನಾಂ ತೃತೀಯಾ ತು ಶತ್ರುಘ್ನೀ ಪಾಪನಾಶಿನೀ ॥ ೧೧ ॥

ಚತುರ್ಥ್ಯಾಂ ತು ಪ್ರಕುರ್ವಾಣಃ ಶತ್ರುಚ್ಛಿದ್ರಾಣಿ ಪಶ್ಯತಿ।
ಪಂಚಮ್ಯಾಂ ಚಾಪಿ ಕುರ್ವಾಣಃ ಪ್ರಾಪ್ನೋತಿ ಮಹತೀಂ ಶ್ರಿಯಮ್ ॥ ೧೨ ॥

ಷಷ್ಠ್ಯಾಂ ಶ್ರಾದ್ಧಾನಿ ಕುರ್ವಾಣಃ ಸಂಪೂಜ್ಯಃ ಸ್ಯಾತ್ ಪ್ರಯತ್ನತಃ ।
ಕುರುತೇ ಯಸ್ತು ಸಪ್ತಮ್ಯಾಂ ಶ್ರಾದ್ಧಾನಿ ಸತತಂ ನರಃ ॥ ೧೩ ॥

ಮಹೀಶತ್ವಮವಾಪ್ನೋತಿ ಗಣಾನಾಂ ಚಾಧಿಪೋ ಭವೇತ್ ।
ಸಂಪೂರ್ಣಾಮೃದ್ಧಿಮಾಪ್ನೋತಿ ಯೋಽಷ್ಟಮ್ಯಾಂ ಕುರುತೇ ನರಃ ॥೧೪॥

---

೧೦. ಇವುಗಳಲ್ಲಿ ಪಿತೃಪೂಜೆಯನ್ನು ಮಾಡಿದವನು ಸಮಸ್ತ ಫಲಗಳನ್ನು ಪೂರ್ಣವಾಗಿ ಅನುಭವಿಸುವನು. ಪ್ರತಿಪತ್ತಿಥಿಯಲ್ಲಿನ ಕರ್ಮದಿಂದ ಧನಲಾಭವುಂಟಾಗುವುದು. ಲಬ್ಧ ದ್ರವ್ಯವು ನಾಶಹೊಂದುವುದಿಲ್ಲ.

೧೧. ದ್ವಿತೀಯಾತಿಥಿಯಲ್ಲಿ ಆಚರಿಸಿದ ಕರ್ಮದಿಂದ ದ್ವಿಪಾತ್ ಪ್ರಾಣಿಗಳಿಗೆ ಅಧಿಪತಿಯಾಗುವನು. ವರಾಕಾಂಕ್ಷೆಯಿಂದ ಕರ್ಮಾನುಷ್ಠಾತೃಗಳಿಗೆ ತೃತೀಯಾ ತಿಥಿಯು ವಿಹಿತವಾಗಿದೆ. ಆ ತಿಥಿಯು ಶತ್ರು ಮತ್ತು ಪಾಪಗಳನ್ನು ಸಂಹರಿಸುವುದು ಆಗಿದೆ.

೧೨. ಚತುರ್ಥಿ ಶ್ರಾದ್ಧಾಚರಣೆಯಿಂದ ಮಾನವನು ತನ್ನ ಶತ್ರುಗಳ ರಹಸ್ಯ ಚ್ಛಿದ್ರಗಳನ್ನು ಅರಿಯುತ್ತಾನೆ. ಪಂಚಮಿ ತಿಥಿಯ ಕರ್ಮದಿಂದ ಅತಿಶಯವಾದ ಸಂಪತ್ತನ್ನು ಹೊಂದುವನು.

೧೩. ಷಷ್ಠೀ ತಿಥಿಯಲ್ಲಿ ಶ್ರಾದ್ಧಕರ್ಮವನ್ನು ಪ್ರಯತ್ನದಿಂದ ಆಚರಿಸಿದವನು ವಿಶೇಷವಾಗಿ ಪೂಜ್ಯನಾಗುವನು. ಹೀಗೆಯೇ ಸಪ್ತಮಿಯಲ್ಲಿ ಸಂತತವಾಗಿ ನರನು ಫಲ ಪ್ರಾಪ್ತಿಗೆ ಶ್ರಾದ್ಧವನ್ನು ಆಚರಿಸಬೇಕು.

೧೪. ಆ ಶ್ರಾದ್ಧದಿಂದ ಭೂಮಿಯ ಆಧಿಪತ್ಯವನ್ನು ಹೊಂದುವನು. ಮತ್ತು ಅವನು ಅನೇಕ ಗಣಗಳಿಗೆ ಪ್ರಭುವು ಆಗುತ್ತಾನೆ. ಅಷ್ಟಮಿ ತಿಥಿಯಲ್ಲಿ ಶ್ರಾದ್ಧವನ್ನು ಆಚರಿಸಿದವನು ಸಮಸ್ತ ಐಶ್ವರ್ಯಾಭ್ಯುದಯವನ್ನು ಹೊಂದುತ್ತಾನೆ.

ಶ್ರಾದ್ಧಂ ನವಮ್ಯಾಂ ಕರ್ತವ್ಯಮೈಶ್ವರ್ಯಂ ಸ್ತ್ರೀಶ್ಚ ಕಾಂಕ್ಷತಾ ।
ಕುರ್ವನ್ ದಶಮ್ಯಾಂ ತು ನರೋ ಬ್ರಾಹ್ಮೀಂ ಶ್ರಿಯಮವಾಪ್ನುಯಾತ್ ॥ ೧೫ ॥

ವೇದಾಂಶ್ಚೈವಾಪ್ನುಯಾತ್ ಸರ್ವಾನ್ ವಿಪ್ರಾಣಾಂ ಸಮತಾಂ ವ್ರಜೇತ್
ಏಕಾದಶ್ಯಾಂ ಪರಂ ದಾನಮೈಶ್ವರ್ಯಂ ಸತತಂ ತಥಾ ॥ ೧೬ ॥

ದ್ವಾದಶ್ಯಾಂ ಜಯಲಾಭಂ ಚ ರಾಜ್ಯಮಾಯುರ್ವಸೂನಿ ಚ ।
ಪ್ರಜಾವೃದ್ಧಿಂ ಪಶೂನ್ ಮೇಧಾಂ ಸ್ವಾತಂತ್ರ್ಯಂ ಪುಷ್ಟಿಮುತ್ತಮಾಮ್ ॥ ೧೭ ॥

ದೀರ್ಘಮಾಯುರಥೈಶ್ವರ್ಯಂ ಕುರ್ವಾಣಸ್ತು ತ್ರಯೋದಶೀಮ್ ।
ಯುವಾನಶ್ಚ ಗೃಹೇ ಯಸ್ಯ ಮೃತಾಸ್ತೇಭ್ಯಃ ಪ್ರದಾಪಯೇತ್ ॥ ೧೮ ॥

ಶಸ್ತ್ರೇಣ ವಾ ಹತಾ ಯೇ ಚ ತೇಷಾಂ ದದ್ಯಾಚ್ಚತುರ್ದಶೀಮ್ ।
ಅಮಾವಾಸ್ಯಾಂ ಪ್ರಯತ್ನೇನ ಶ್ರಾದ್ಧಂ ಕುರ್ಯಾತ್ ಸದಾ ಶುಚಿಃ ॥ ೧೯ ॥

---

೧೫. ಐಶ್ವರ್ಯ ಅಥವಾ ನಾರಿಯರನ್ನು ಆಕಾಂಕ್ಷಿಸುವವನು ನವಮಿಯಲ್ಲಿ ಶ್ರಾದ್ಧವನ್ನು ಮಾಡಬೇಕು. ದಶಮಿ ತಿಥಿಯಲ್ಲಿ ಶ್ರಾದ್ಧವನ್ನು ಆಚರಿಸಿದ ನರನು ಬ್ರಾಹ್ಮೀ ಸಂಪತ್ತನ್ನು ಹೊಂದುವನು.

೧೬. ಅಂತಹ ಬ್ರಹ್ಮಸಂಪತ್ತಿನಿಂದ ನಿಖಿಲ ವೇದಗಳನ್ನು ಹೊಂದಿ ವಿಪ್ರೋತ್ತಮರಿಗೆ ಸಮಾನನಾಗುವನು. ಏಕಾದಶೀ ತಿಥಿಯಲ್ಲಿ ಶ್ರಾದ್ಧ ದಾನದಿಂದ ಸಂತತವೂ ಅವಿಚ್ಛಿನ್ನವಾದ ಐಶ್ವರ್ಯವನ್ನು ಹೊಂದುವನು.

೧೭. ದ್ವಾದಶೀ ತಿಥಿಯ ಕರ್ಮಾಚರಣೆಯಿಂದ ವಿಜಯ, ರಾಜ್ಯ, ಆಯುಷ್ಯ ಮತ್ತು ಸಂಪತ್ತುಗಳನ್ನು ಅತಿಶಯವಾಗಿ ಹೊಂದುವನು. ಹಾಗು ಪ್ರಜಾ, ಪಶು, ಮೇಧಾ, ಸ್ವಾತಂತ್ರ್ಯ, ಉತ್ತಮವಾದ ಪುಷ್ಟಿಯೆಂಬ ಫಲಾಭಿವೃದ್ಧಿಗೆ ಭಾಗಿಯಾಗುವನು.

೧೮. ತ್ರಯೋದಶೀ ತಿಥಿಯನ್ನು ಲಕ್ಷಿಸಿ ಶ್ರಾದ್ಧವನ್ನು ಆಚರಿಸಿ ದೀರ್ಘಾಯುಷ್ಯ ಮತ್ತು ಐಶ್ವರ್ಯಗಳನ್ನು ಅನುಭವಿಸುತ್ತಾನೆ. ವಿಶೇಷವಾಗಿ ಮನೆಯಲ್ಲಿ ಯುವಕರಾಗಿದ್ದು ಮೃತರಾದವರಿಗೆ ಈ ತಿಥಿಯಲ್ಲಿ ಶ್ರಾದ್ಧದಾನವನ್ನು ಮಾಡಬೇಕು.

೧೯. ಶಸ್ತ್ರದಿಂದ ಸಂಹರಿಸಲ್ಪಟ್ಟವರನ್ನು ಉದ್ದೇಶಿಸಿ ಚತುರ್ದಶಿಯಲ್ಲಿ ಶ್ರಾದ್ಧವನ್ನು ಮಾಡಬೇಕು. ಸರ್ವಕಾಲದಲ್ಲಿಯೂ ಮಾನವನು ಪವಿತ್ರನಾಗಿ ಅಮಾವಾಸ್ಯಾ ತಿಥಿಯಲ್ಲಿ ಪ್ರಯತ್ನದಿಂದ ಶ್ರಾದ್ಧವನ್ನು ಆಚರಿಸಬೇಕು.

**ಸರ್ವಕಾಮಾನವಾಪ್ನೋತಿ ಸ್ವರ್ಗಂ ಚಾನಂತಮಶ್ನುತೇ ।**
**ತಥಾ ವಿಷಮಜಾತಾನಾಂ ಯಮಲಾನಾಂ ಚ ಸರ್ವಶಃ ॥ ೨೦ ॥**

**ಶ್ರಾದ್ಧಂ ದದ್ಯಾದಮಾವಾಸ್ಯಾಂ ಸರ್ವಕಾಮಾನವಾಪ್ನುಯಾತ್ ।**
**ಮಘಾಸು ಕುರ್ವನ್ ಶ್ರಾದ್ಧಾನಿ ಸರ್ವಕಾಮಾನವಾಪ್ನುಯಾತ್ ॥ ೨೧ ॥**

**ಪ್ರತ್ಯಕ್ಷಮರ್ಚಿತಾಸ್ತೇನ ಭವಂತಿ ಪಿತರಸ್ತದಾ ।**
**ಪಿತೃದೇವಾ ಮಘಾ ಯಸ್ಮಾತ್ ತಸ್ಮಾತ್ತಾಸ್ವಕ್ಷಯಂ ಸ್ಮೃತಮ್ ॥ ೨೨ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಸಪ್ತದಶೋಽಧ್ಯಾಯಃ**

---

೨೦. ಅಮಾವಾಸ್ಯಾ ತಿಥಿಯ ಕರ್ಮ ಮಹಿಮೆಯಿಂದ ಸಮಸ್ತ ಕಾಮಗಳನ್ನೂ ಅಕ್ಷಯವಾದ ಸ್ವರ್ಗವನ್ನೂ ಹೊಂದುತ್ತಾನೆ. ಹಾಗೆ ವಿಷಮವಾಗಿ ಜನ್ಮ ಎತ್ತಿದ ಮತ್ತು ಯಮಳ ಮುಂತಾದರಿಗೆ ಎಲ್ಲ ಅಮಾವಾಸ್ಯೆಯು ಶ್ರಾದ್ಧ ಕಾಲವಾಗಿದೆ.

೨೧. ಅಂತಹವರಿಗೆ ಅಮಾವಾಸ್ಯೆಯಲ್ಲಿ ಮಾಡಿದ ಶ್ರಾದ್ಧದಿಂದ ಸಮಸ್ತ ಕಾಮಗಳನ್ನು ಹೊಂದುತ್ತಾನೆ. ಹಾಗೆಯೇ ಮಘಾಷ್ಟಕೆಗಳಲ್ಲಿ ಶ್ರಾದ್ಧವನ್ನು ಅನುಷ್ಠಾನ ಮಾಡಿ ಸರ್ವ ಕಾಮಗಳನ್ನು ಹೊಂದುತ್ತಾನೆ.

೨೨. ಅಂತಹ ಮಘಾಶ್ರಾದ್ಧದಿಂದ ಪಿತೃಗಳು ಪ್ರತ್ಯಕ್ಷವಾಗಿ ಅರ್ಚಿಸಲ್ಪಟ್ಟಂತೆ ಆಗುವರು. ಮಘಾತಿಥಿಯು ಪಿತೃದೇವತೆಯಿಂದ ಕೂಡಿರುವುದು. ಆದುದರಿಂದ ಆ ಕಾಲದಲ್ಲಿ ಮಾಡಿದ ಕರ್ಮವು ಅಕ್ಷಯ ಫಲವನ್ನು ಕೊಡುವುದು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಹದಿನೇಳನೆಯ
ಅಧ್ಯಾಯವು ಸಮಾಪ್ತವು.

---

## ಅಷ್ಟಾದಶೋಽಧ್ಯಾಯಃ

ಬೃಹಸ್ಪತಿರುವಾಚ :—

ಯಮಸ್ತು ಯಾನಿ ಶ್ರಾದ್ಧಾನಿ ಪ್ರೋವಾಚ ಶಶಬಿಂದವೇ ।
ತಾನಿ ಮೇ ಶೃಣು ಕಾರ್ಯಾಣಿ ನಕ್ಷತ್ರೇಷು ಪೃಥಕ್ ಪೃಥಕ್ ॥ ೧ ॥

ಶ್ರಾದ್ಧಂ ಯಃ ಕೃತ್ತಿಕಾಯೋಗಂ ಕುರುತೇ ಸತತಂ ನರಃ ।
ಅಗ್ನೀನಾಧಾಯ ಸ ಸ್ವರ್ಗೇ ರಾಜತೇ ಸುದೃಢವ್ರತಃ ॥ ೨ ॥

ಅಪತ್ಯಕಾಮೋ ರೋಹಿಣ್ಯಾಂ ಸೌಮ್ಯೇ ತೇಜಸ್ವಿತಾ ಭವೇತ್ ।
ಪ್ರಾಯಶಃ ಕ್ರೂರಕರ್ಮಾಣಿ ಆರ್ದ್ರಾಯಾಂ ಶ್ರಾದ್ಧಮಾಚರನ್ ॥ ೩ ॥

ಕ್ಷೇತ್ರಭಾಗೀ ಭವೇತ್ ಪುತ್ರೀ ಶ್ರಾದ್ಧಂ ಕೃತ್ವಾ ಪುನರ್ವಸೌ ।
ಪುಷ್ಟಿಕಾಮಃ ಪುನಸ್ತಿಷ್ಯೇ ಶ್ರಾದ್ಧಂ ಕುರ್ವೀತ ಮಾನವಃ ॥ ೪ ॥

---

೧. ಬೃಹಸ್ಪತಿಯು ಈ ರೀತಿಯಾಗಿ ಹೇಳಿದನು :—ಯಮಧರ್ಮರಾಜನು ಶಶಬಿಂದು ಎಂಬುವನಿಗೆ ಹೇಳಿರುವ ಆಯಾಯ ನಕ್ಷತ್ರಗಳಲ್ಲಿ ಬೇರೆ ಬೇರೆಯಾಗಿ ಮಾಡಬೇಕಾದ ಶ್ರಾದ್ಧ ವಿಶೇಷಗಳನ್ನು ಪ್ರತಿಪಾದಿಸುತ್ತೇನೆ. ನನ್ನ ವಚನವನ್ನು ಲಾಲಿಸು.

೨. ಕೃತ್ತಿಕಾ ನಕ್ಷತ್ರದ ಸಂಬಂಧದಿಂದ ಯಾವ ನರನು ಸಂತತವಾಗಿ ಶ್ರಾದ್ಧ ವನ್ನು ಆಚರಿಸುವನೋ ಅವನು ಅಗ್ನ್ಯಾಧಾನ ಕರ್ಮವನ್ನು ಮಾಡಿ ದೃಢವಾದ ವ್ರತನಿಯಮವುಳ್ಳವನಾಗಿ ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಾನೆ.

೩. ಪ್ರಜಾ ಕಾಮನಾದವನು ರೋಹಿಣೀ ನಕ್ಷತ್ರದಲ್ಲಿ ಶ್ರಾದ್ಧವನ್ನು ಆಚರಿಸ ಬೇಕು, ಮೃಗಶೀರ್ಷ ನಕ್ಷತ್ರದ ಶ್ರಾದ್ಧದಿಂದ ತೇಜಸ್ವಿಯಾಗುವನು. ಪ್ರಾಯಶ ವಾಗಿ ಕ್ರೂರ ಕರ್ಮಸಾಧನೆಯನ್ನು ಆರ್ದ್ರಾ ನಕ್ಷತ್ರ ಶ್ರಾದ್ಧದಿಂದ ಹೊಂದಬೇಕು.

೪. ಪುನರ್ವಸು ನಕ್ಷತ್ರ ಶ್ರಾದ್ಧದಿಂದ ಕ್ಷೇತ್ರ-ಪುತ್ರ ಕಾಮನೆಯುಳ್ಳವರು ಆಯಾಯ ಫಲಗಳನ್ನು ಹೊಂದುವರು. ಪುಷ್ಟಿ ಫಲವನ್ನು ಬಯಸುವ ಮಾನವನು ಪುಷ್ಯ ನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡಬೇಕು.

ಆಶ್ಲೇಷಾಸು ಪಿತೄನರ್ಚನ್ ವೀರಾನ್ ಪುತ್ರಾನವಾಪ್ನುಯಾತ್ ।
ಜಾತೀನಾಂ ಭವತಿ ಶ್ರೇಷ್ಠೋ ಮಘಾಸು ಶ್ರಾದ್ಧಮಾಚರನ್ ॥ ೫ ॥

ಫಾಲ್ಗುನೀಷು ಪಿತೄನರ್ಚನ್ ಸೌಭಾಗ್ಯಂ ಲಭತೇ ನರಃ ।
ಪ್ರದಾನಶೀಲಃ ಸಾಪತ್ಯ ಉತ್ತರಾಸು ಕರೋತಿ ಯಃ ॥ ೬ ॥

ಸಂಸತ್ಸು ಮುಖ್ಯೋ ಭವತಿ ಹಸ್ತೇಽಭ್ಯರ್ಚ್ಯ ಪಿತೄನಪಿ ।
ಚಿತ್ರಾಯಾಂ ಚೈವ ಯಃ ಕುರ್ಯಾತ್ ಪಶ್ಯೇದ್ರೂಪವತಃ ಸುತಾನ್ ॥ ೭ ॥

ಸ್ವಾತಿನಾ ಚೈವ ಯಃ ಕುರ್ಯಾದ್ವಾಣಿಜ್ಯೇ ಲಾಭಮಾಪ್ನುಯಾತ್ ।
ಪುತ್ರಾರ್ಥೀ ತು ವಿಶಾಖಾಸು ಶ್ರಾದ್ಧಮೀಹೇತ ಮಾನವಃ ॥ ೮ ॥

ಅನುರಾಧಾಸು ಕುರ್ವಾಣೋ ನರಶ್ಚಕ್ರಂ ಪ್ರವರ್ತಯೇತ್ ।
ಆಧಿಪತ್ಯಂ ಭವೇಚ್ಛ್ರೇಷ್ಠಂ ಜ್ಯೇಷ್ಠಾಯಾಂ ಸತತಂ ತು ಯಃ ॥ ೯ ॥

---

೫. ಆಶ್ಲೇಷಾ ನಕ್ಷತ್ರದಲ್ಲಿ ಪಿತೃಗಳನ್ನು ಅರ್ಚಿಸಿದವನು ವೀರರಾದ ಪುತ್ರರನ್ನು ಹೊಂದುವನು. ಮಘಾ ನಕ್ಷತ್ರದಲ್ಲಿ ಶ್ರಾದ್ಧವನ್ನು ಆಚರಿಸಿದವನು ಆಯಾಯ ಜಾತಿಗಳಲ್ಲಿ ಉತ್ತಮನಾಗುವನು.

೬. ಹುಬ್ಬ ನಕ್ಷತ್ರದಲ್ಲಿ ಪಿತೃಗಳನ್ನು ಆರಾಧಿಸಿದ ನರನು ಸೌಭಾಗ್ಯ ಫಲವನ್ನು ಅನುಭವಿಸುತ್ತಾನೆ. ಉತ್ತರಾ ನಕ್ಷತ್ರದಲ್ಲಿ ಶ್ರಾದ್ಧ ದಾನ ಮಾಡುವ ಶೀಲವಂತನು ಪ್ರಜಾವೃದ್ಧಿಯುಳ್ಳವನಾಗುವನು.

೭. ಹಸ್ತ ನಕ್ಷತ್ರದ ಶ್ರಾದ್ಧದಿಂದ ಪಿತೃಗಳನ್ನು ಅರ್ಚಿಸಿ ಸಭೆಗಳಲ್ಲಿ ಮುಖ್ಯನಾಗುವನು. ಚಿತ್ತಾ ನಕ್ಷತ್ರ ಶ್ರಾದ್ಧವನ್ನು ಆಚರಿಸಿದವನು ಸುಂದರ ರೂಪವುಳ್ಳ ಪುತ್ರರನ್ನು ನೋಡುತ್ತಾನೆ.

೮. ಸ್ವಾತೀ ನಕ್ಷತ್ರ ಶ್ರಾದ್ಧದಲ್ಲಿ ಪಿತೃ ಪೂಜೆಯನ್ನು ಮಾಡಿ ವ್ಯಾಪಾರದಲ್ಲಿ ಲಾಭವನ್ನು ಗಳಿಸುವನು. ಪುತ್ರಾಕಾಂಕ್ಷೆಯುಳ್ಳ ಮಾನವನು ವಿಶಾಖಾ ನಕ್ಷತ್ರದಲ್ಲಿ ಶ್ರಾದ್ಧಮಾಡಲು ಯತ್ನಿಸಬೇಕು.

೯. ಅನೂರಾಧಾ ನಕ್ಷತ್ರದಲ್ಲಿ ಶ್ರಾದ್ಧ ಮಾಡಿದವನು ರಾಷ್ಟ್ರವನ್ನು ಆಳುವನು. ಜ್ಯೇಷ್ಠಾ ನಕ್ಷತ್ರದಲ್ಲಿ ಶ್ರಾದ್ಧ ಮಾಡಿದ ನರನಿಗೆ ಉತ್ತಮವಾದ ಆಧಿಪತ್ಯವು ಪ್ರಾಪ್ತವಾಗುವುದು.

ಮೂಲೇನಾರೋಗ್ಯಮಿಚ್ಛಂತಿ ಹ್ಯಾಷಾಢಾಸು ಮಹದ್ಯಶಃ ॥
ಉತ್ತರಾಸು ಚ ಕುರ್ವಾಣೋ ವೀತಶೋಕೋ ಭವೇನ್ನರಃ ॥ ೧೦ ॥

ಶ್ರವಣೇನ ತು ಲೋಕೇಷು ಪ್ರಾಪ್ನುಯಾತ್ ಪರಮಾಂ ಗತಿಮ್ ॥
ರಾಜ್ಯಭಾಗೀ ಧನಿಷ್ಠಾಸು ಪ್ರಾಪ್ನುಯಾತ್ ವಿಪುಲಂ ಧನಮ್ ॥ ೧೧ ॥

ಶ್ರಾದ್ಧನಿರ್ಜಿತಲೋಕಶ್ಚ ವೇದಾನ್ ಸಾಂಗಾನವಾಪ್ನುಯಾತ್ ।
ನಕ್ಷತ್ರೈರ್ವಾರುಣೈಃ ಕುರ್ವನ್ ಭಿಷಕ್ಸಿದ್ಧಿಮವಾಪ್ನುಯಾತ್ ॥ ೧೨ ॥

ಪೂರ್ವಪ್ರೋಷ್ಠಪದೇ ಕುರ್ವನ್ ವಿಂದೇತಾಜೀವಿಕಾನ್ ಬಹೂನ್ ।
ಉತ್ತರಾಸ್ವತಿಕ್ರಮ್ಯ ವಿಂದೇದ್ಗಾ ವೈ ಸಹಸ್ರಶಃ ॥ ೧೩ ॥

ಬಹುಕುಪ್ಯಕೃತಂ ದ್ರವ್ಯಂ ವಿಂದೇತ್ ಕುರ್ವನ್ ಸುರೇವತೀಮ್ ।
ಅಶ್ವಾನಶ್ವಯುಜಾಭಕ್ತೋ ಭರಣ್ಯಾಂ ಸಾಧುಸತ್ತಮಃ ॥ ೧೪ ॥

---

೧೦. ಮೂಲ ನಕ್ಷತ್ರ ಶ್ರಾದ್ಧದಿಂದ ಆರೋಗ್ಯವನ್ನೂ ಪೂರ್ವಾಷಾಢಾ ನಕ್ಷತ್ರ ಶ್ರಾದ್ಧದಿಂದ ಮಹಾಕೀರ್ತಿಯನ್ನೂ ಹೊಂದುವನು, ಉತ್ತರಾಷಾಢಾ ನಕ್ಷತ್ರದಲ್ಲಿ ಶ್ರಾದ್ಧದಾನ ಶೀಲವುಳ್ಳ ನರನು ಶೋಕರಹಿತನಾಗುವನು.

೧೧. ಶ್ರವಣ ನಕ್ಷತ್ರದ ಶ್ರಾದ್ಧವಿಧಾನದಿಂದ ಶ್ರೇಷ್ಠವಾದ ಸದ್ಗತಿಯನ್ನು ಹೊಂದುತ್ತಾನೆ. ಧನಿಷ್ಠಾ ನಕ್ಷತ್ರದಲ್ಲಿ ಶ್ರಾದ್ಧಪ್ರಯೋಗದಿಂದ ರಾಜ್ಯವನ್ನೂ ವಿಸ್ತಾರವಾದ ಸಂಪತ್ತನ್ನೂ ಹೊಂದುತ್ತಾನೆ.

೧೨. ಮತ್ತು ಶ್ರಾದ್ಧದಿಂದ ಪುಣ್ಯಲೋಕಗಳನ್ನು ಜಯಿಸುವವನೂ ಸಾಂಗ ವೇದಾಧ್ಯಯನ ಮಾಡುವನೂ ಆಗುತ್ತಾನೆ. ಶತತಾರಾ ನಕ್ಷತ್ರದ ಶ್ರಾದ್ಧದಾನದ ಮಹಿಮೆಯಿಂದ ವೈದ್ಯ ಸಿದ್ಧಿಯನ್ನು ಹೊಂದುವನು.

೧೩. ಪೂರ್ವಾಭಾದ್ರಾ ನಕ್ಷತ್ರದ ಶ್ರಾದ್ಧದಿಂದ ಅನೇಕ ಜೀವನೋಪಾಯಗಳನ್ನು ಹೊಂದುತ್ತಾನೆ. ಉತ್ತರಾಭಾದ್ರಾ ನಕ್ಷತ್ರದಲ್ಲಿ ಶ್ರಾದ್ಧಾಚರಣೆಯಿಂದ ಸಾವಿರಾರು ಗೋವುಗಳನ್ನು ಹೊಂದುತ್ತಾನೆ.

೧೪. ಉತ್ತಮವಾದ ರೇವತೀ ನಕ್ಷತ್ರದಲ್ಲಿ ಶ್ರಾದ್ಧಮಾಡಿದವನು ಅನೇಕ ಅನ್ನ ವಸ್ತ್ರಾದಿ ದ್ರವ್ಯಗಳನ್ನು ಹೊಂದುವನು. ಅಶ್ವಿನೀ ನಕ್ಷತ್ರದ ಕರ್ಮದಲ್ಲಿ ಭಕ್ತ್ಯಾದರವುಳ್ಳವನು ಅಶ್ವಗಳನ್ನು ಹೊಂದುವನು. ಭರಣೀ ನಕ್ಷತ್ರದ ಶ್ರಾದ್ಧವಿಧಿಯಿಂದ ಅತಿಶಯವಾಗಿ ಸಾಧುವಾಗುವನು.

ಇಮಂ ಶ್ರಾದ್ಧವಿಧಿಂ ಕುರ್ವನ್ ಶಶಬಿಂದುರ್ಮಹೀಮಿಮಾಮ್ ।
ಕೃತ್ಸ್ನಾಂ ಬಲೇನ ಸೋಽಕ್ಲಿಷ್ಟೋ ಲಬ್ಧ್ವಾ ಚ ಪ್ರಶಶಾಸ ಹ ॥ ೧೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಅಷ್ಟಾದಶೋಽಧ್ಯಾಯಃ

---

೧೫. ಯಮನಿಂದ ಉಪದೇಶಿಸಲ್ಪಟ್ಟ ಈ ಸಂಪೂರ್ಣ ಶ್ರಾದ್ಧವಿಧಿಯನ್ನು ಶಶಬಿಂದುರಾಜನು ಆಚರಿಸಿ, ಅದರ ಮಹಿಮೆಯಿಂದ ಸಮಸ್ತ ಭೂಮಿಯನ್ನು ಜಯಿಸಿ ವಶಪಡಿಸಿಕೊಂಡು ಅನಾಯಾಸದಿಂದ ಆಳಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹದಿನೆಂಟನೆಯ
ಅಧ್ಯಾಯವು ಸಮಾಪ್ತವು.

---

# ಏಕೋನವಿಂಶತಿತಮೋಽಧ್ಯಾಯಃ

**ಶಂಯುರುವಾಚ :**

ಕಿಂಸ್ವಿದ್ದತ್ತಂ ಪಿತೃಣಾಂ ತು ತೃಪ್ತಿದಂ ವದತಾಂ ವರ ।
ಕಿಂಸ್ವಿತ್ ಸ್ಯಾಚ್ಚಿರರಾತ್ರಾಯ ಕಿಂ ವಾನಂತ್ಯಾಯ ಕಲ್ಪತೇ ॥ ೧ ॥

**ಬೃಹಸ್ಪತಿರುವಾಚ :—**

ಹವೀಂಷಿ ಶ್ರಾದ್ಧಕಲ್ಪೇ ತು ಯಾನಿ ಶ್ರಾದ್ಧವಿದೋ ವಿದುಃ ।
ತಾನಿ ಮೇ ಶೃಣು ಸರ್ವಾಣಿ ಫಲಂ ಚೈಷಾಂ ಯಥಾತಥಮ್ ॥ ೨ ॥

ತಿಲೈರ್ವ್ರೀಹಿಯವೈರ್ಮಾಷೈರದ್ಭಿರ್ಮೂಲಫಲೈಸ್ತಥಾ ।
ದತ್ತೇನ ಮಾಸಂ ಪ್ರೀಯಂತೇ ಶ್ರಾದ್ಧೇನ ಹಿ ಪಿತಾಮಹಾಃ ॥ ೩ ॥

ಮತ್ಸ್ಯೈಃ ಪ್ರೀಣಂತಿ ದ್ವೌ ಮಾಸೌ ತ್ರೀನ್ ಮಾಸಾನ್ ಹಾರಿಣೇನ ತು ।
ಶಾಶೇನ ಚತುರೋ ಮಾಸಾನ್ ಪಂಚ ಪ್ರೀಣಾತಿ ಶಾಕುನೈಃ ॥ ೪ ॥

---

೧. ಶಂಯುವು ಮತ್ತೆ ಪ್ರಶ್ನಿಸಿದನು :—ವಾಗ್ಮಿ ಶ್ರೇಷ್ಠನಾದ ಗುರುವೆ! ಪಿತೃಗಳಿಗೆ ದತ್ತವಾದ ಯಾವ ದ್ರವ್ಯವು ಬಹುಕಾಲ ಪಿತೃ ತೃಪ್ತಿಯನ್ನು ಉಂಟುಮಾಡಿ ಅನಂತವಾದ ಫಲಪ್ರಾಪ್ತಿಗೆ ಸಾಧನವಾಗುವುದು ?

೨. ಬೃಹಸ್ಪತಿಯು ಪ್ರತ್ಯುತ್ತರವಿತ್ತನು :—ಶ್ರಾದ್ಧಕಲ್ಪವನ್ನು ಅರಿತಪ್ರಾಜ್ಞರು ಶ್ರಾದ್ಧ ಪ್ರಯೋಗಗಳಲ್ಲಿ ಅರ್ಪಿಸಬೇಕಾದ ಹವಿಸ್ಸುಗಳನ್ನೂ ಆಯಾಯ ಹವಿಸ್ಸಿನಿಂದ ಪ್ರಾಪ್ತವ್ಯವಾದ ಫಲಗಳನ್ನೂ ಯಥಾವತ್ತಾಗಿ ಹೇಳಿರುವರು. ಅದನ್ನು ವಿವರಿಸುವ ನನ್ನ ವಚನವನ್ನು ಕೇಳು.

೩. ಶ್ರಾದ್ಧಯಜ್ಞದಲ್ಲಿ ತಿಲ, ವ್ರೀಹಿ, ಯವ, ಮಾಷ, ಜಲ, ಮೂಲ, ಫಲ ರೂಪವಾದ ಹವಿಸ್ಸನ್ನು ಅರ್ಪಿಸುವುದರಿಂದ ಪಿತೃಗಳು ಒಂದು ತಿಂಗಳು ವರೆಗೆ ಸುಪ್ರೀತರಾಗುವರು.

೪. ಮತ್ತು ಮತ್ಸ್ಯ ಮಾಂಸದಿಂದ ಮಾಸದ್ವಯವೂ, ಹರಿಣಮೃಗದ ಮಾಂಸದಿಂದ ಮೂರು ಮಾಸಗಳೂ, ಮೊಲದ ಮಾಂಸದಿಂದ ನಾಲ್ಕು ಮಾಸಗಳೂ ಹಾಗು ಪಕ್ಷಿ ಮಾಂಸದಿಂದ ಪಂಚ ಮಾಸಗಳೂ ಸುಪ್ರೀತರಾಗುವರು.

ವಾರಾಹೇಣ ತು ಷಣ್ಮಾಸಾನ್ ಛಾಗಲಂ ಸಪ್ತಮಾಸಿಕಮ್ ।
ಅಷ್ಟಮಾಸಿಕಮಿತ್ಯುಕ್ತಂ ಯಚ್ಚ ಪಾರ್ವತಕಂ ಭವೇತ್ ॥ ೫ ॥

ರೌರವೇಣ ತು ಪ್ರೀಯಂತೆ ನವ ಮಾಸಾನ್ ಪಿತಾಮಹಾಃ ।
ಗವಯಸ್ಯ ತು ಮಾಂಸೇನ ತೃಪ್ತಿಃ ಸ್ಯಾದ್ದಶಮಾಸಿಕೀ ॥ ೬ ॥

ಔರಭ್ರೇಣ ಚ ಮಾಂಸೇಸ ಮಾಸಾನೇಕಾದಶೈವ ತು ।
ಶ್ರಾದ್ಧೇ ಚ ತೃಪ್ತಿದಂ ಗವ್ಯಂ ಪಯಃ ಸಂವತ್ಸರಂ ದ್ವಿಜಾಃ ॥ ೭ ॥

ಆನಂತ್ಯಾಯ ಭವೇತ್ತದ್ವತ್ ಖಡ್ಗಮಾಂಸಂ ಪಿತೃಕ್ಷಯೇ ।
ಪಾಯಸಂ ಮಧುಸರ್ಪಿಭ್ಯಾಂ ಛಾಯಾಯಾಂ ಕುಂಜರಸ್ಯ ಚ ॥ ೮ ॥

ಕೃಷ್ಣಚ್ಛಾಗಸ್ಯ ಮಾಂಸೇನ ತೃಪ್ತಿರ್ಭವತಿ ಶಾಶ್ವತೀ ।
ಅತ್ರ ಗಾಥಾಃ ಪಿತೃಗೀತಾಃ ಕೀರ್ತಯಂತಿ ಪುರಾವಿದಃ ॥ ೯ ॥

---

೫. ವರಾಹ ಮಾಂಸದ ಹವಿಸ್ಸು ಷಣ್ಮಾಸ ತೃಪ್ತಿಯನ್ನು, ಮೇಕೆಯ ಮಾಂಸವು ಸಪ್ತಮಾಸ ತೃಪ್ತಿಯನ್ನು, ಪರ್ವತವೆಂಬ ಮೃಗ ವಿಶೇಷದ ಮಾಂಸದ ಹವಿಸ್ಸು ಅಷ್ಟಮಾಸ ತೃಪ್ತಿಯನ್ನು ಉಂಟುಮಾಡುವುವು.

೬. ರುರು ಮೃಗದ ಮಾಂಸಮಯ ಹವಿಸ್ಸಿನಿಂದ ಪಿತೃಗಳು ನವಮಾಸಗಳ ವರೆಗೆ ತೃಪ್ತಿಯನ್ನು ಹೊಂದುವರು. ಗವಯ ಮಾಂಸದ ಹವಿಸ್ಸಿನ ಅರ್ಪಣದಿಂದ ದಶಮಾಸಗಳ ವರೆಗೆ ಪಿತೃ ತೃಪ್ತಿಯಾಗುವುದು.

೭. ದ್ವಿಜರೆ! ಟಗರಿನ ಮಾಂಸದಿಂದ ಏಕಾದಶ ಮಾಸಗಳ ವರೆಗೆ ಪಿತೃ ತೃಪ್ತಿಯಾಗುವುದು. ಗೋವಿನ ಕ್ಷೀರವನ್ನು ಶ್ರಾದ್ಧದಲ್ಲಿ ಅರ್ಪಿಸುವುದರಿಂದ ಒಂದು ಸಂವತ್ಸರ ಪೂರ್ತಿಯಾಗಿ ಪಿತೃಗಳಿಗೆ ತೃಪ್ತಿಯನ್ನು ಕೊಡುವುದು.

೮. ಹಾಗೆಯೇ ಪಿತೃ ತಿಥಿಯಲ್ಲಿ ಖಡ್ಗ ಮೃಗದ ಮಾಂಸ ಹವಿರ್ದಾನವು ಅನಂತ ಫಲಪ್ರಾಪ್ತಿಗೆ ಸಾಧನವಾಗುವುದು. ಮತ್ತು ಮಧು, ಆಜ್ಯ, ಹಸ್ತಿಚ್ಛಾಯಾ ಮತ್ತು ಪಾಯಸಗಳು ಅನಂತ ಫಲಗಳನ್ನು ಕೊಡುವುವು.

೯. ಕೃಷ್ಣವಾದ ಛಾಗ ಮಾಂಸದಿಂದ ಪಿತೃಗಳಿಗೆ ಶಾಶ್ವತವಾದ ತೃಪ್ತಿಯು ಲಭಿಸುವುದು. ಈ ವಿಷಯದಲ್ಲಿ ಪುರಾಣಜ್ಞರು ಪಿತೃಗಳಿಂದ ಗಾನಮಾಡಲ್ಪಟ್ಟ ಗಾಥಾ ಶ್ಲೋಕಗಳನ್ನು ಹೇಳುವರು.

ತಾಸ್ತೇಽಹಂ ಕೀರ್ತಯಿಷ್ಯಾಮಿ ಯಥಾವತ್ಸನ್ನಿಬೋಧ ಮೇ ।
ಅಪಿ ನಃ ಸ ಕುಲೇ ಯಾಯಾದ್ಯೋ ನೋ ದದ್ಯಾತ್ತ್ರಯೋದಶೀಮ್ ॥ ೧೦ ॥

ಆಜೇನ ಸರ್ವಲೋಹೇನ ವರ್ಷಾಸು ಚ ಮಘಾಸು ಚ ।
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್
ಗೌರೀಂ ವಾಪ್ಯುದ್ವಹೇದ್ಭಾರ್ಯಾಂ ನೀಲಂ ವಾ ವೃಷಮುತ್ಸೃಜೇತ್ ॥ ೧೧ ॥

ಶಂಯುರುವಾಚ :—

ಗಯಾದೀನಾಂ ಫಲಂ ತಾತ ಬ್ರೂಹಿ ಮೇ ಪರಿಪೃಚ್ಛತಃ ।
ದಾತೄಣಾಂ ಚೈವ ಯತ್ಪುಣ್ಯಂ ನಿಖಿಲೇನ ಬ್ರವೀಹಿಮೇ ॥ ೧೨ ॥

ಬೃಹಸ್ಪತಿರುವಾಚ :—

ಗಯಾಯಾಮಕ್ಷಯಂ ಶ್ರಾದ್ಧಂ ಜಪಹೋಮತಪಾಂಸಿ ಚ ।
ಪಿತೃಕ್ಷಯೇ ಹಿ ತತ್ಪುತ್ರ ತಸ್ಮಾತ್ತತ್ರಾಕ್ಷಯಂ ಸ್ಮೃತಮ್ ॥ ೧೩ ॥

---

೧೦. ಅಂತಹ ಗಾಥಾ ಪದ್ಯಗಳನ್ನು ನಾನು ಯಥಾವತ್ತಾಗಿ ಕೀರ್ತಿಸುವೆನು. ಅವುಗಳನ್ನು ಕೇಳು, ಯಾವನು ತ್ರಯೋದಶೀ ತಿಥಿಯಲ್ಲಿ ಶ್ರಾದ್ಧಹವಿಸ್ಸನ್ನು ಆದರದಿಂದ ನಮಗೆ ಅರ್ಪಿಸುವನೋ ಅಂತಹ ಸುಕೃತಿಯು ನಮ್ಮ ಕುಲಕ್ಕೆ ಬರುವನೆ!

೧೧. ವರ್ಷಋತು—ಮಘಾಷ್ಟಕಾ ಮುಂತಾದ ವಿಹಿತ ಸಮಯಗಳಲ್ಲಿ ಅಜ ಮಾಂಸ-ಸರ್ವಲೋಹಗಳ ದಾನವನ್ನು ಮಾಡುವವನು ನಮ್ಮ ಕುಲದಲ್ಲಿ ಜನಿಸುವನೆ! ಮಾನವನು ಅನೇಕ ಮಂದಿ ಪುತ್ರರನ್ನು ಆಕಾಂಕ್ಷಿಸಬೇಕು. ಒಬ್ಬನಾದರೂ ಗಯಾ ಕ್ಷೇತ್ರದಲ್ಲಿ ಶ್ರಾದ್ಧಮಾಡಿ, ಅಥವಾ ಅಷ್ಟವರ್ಷ ವಯಸ್ಸಿನ ಕನ್ಯೆಯನ್ನು ವಿವಾಹ ಮಾಡಿಕೊಂಡು, ಅಥವಾ ನೀಲವಾದ ವೃಷವನ್ನು ಉತ್ಸರ್ಗಮಾಡಿ ಪಿತೃ ಪ್ರೀತಿಯನ್ನು ಮಾಡಬಹುದು.

೧೨. ಇದನ್ನು ಕೇಳಿದ ಶಂಯುವೆಂಬ ಶಿಷ್ಯನು ಕೇಳಿದನು :—ಗುರುವೆ! ವಿನಯದಿಂದ ಪ್ರಶ್ನಿಸುವ ನನಗೆ ಗಯಾ ಮುಂತಾದ ಕ್ಷೇತ್ರಗಳ ಮಹಿಮೆಯ ಫಲವನ್ನು ವರ್ಣಿಸು, ಅಲ್ಲಿ ದಾನಮಾಡಿದವರಿಗೆ ಉಂಟಾಗುವ ಪುಣ್ಯವಿಶೇಷವನ್ನು ಸಮಗ್ರವಾಗಿ ಹೇಳು.

೧೩. ಬೃಹಸ್ಪತಿಯು ಪ್ರತ್ಯುತ್ತರವಿತ್ತನು :—ಪಿತೃ ಮರಣಾನಂತರದಲ್ಲಿ ಗಯೆಯಲ್ಲಿ ಹೋಗಿ ಶ್ರಾದ್ಧಮಾಡುವಿಕೆಯು ಮತ್ತು ಜಪ-ಹೋಮ-ತಪಸ್ಸು ಮುಂತಾದ ಸತ್ಕರ್ಮಗಳು ಅಕ್ಷಯವಾಗುವುವು. ಪುತ್ರನೆ! ಆ ಕ್ಷೇತ್ರದಲ್ಲಿ ಮಾಡಿದ ಸತ್ಕರ್ಮಗಳ ಫಲವು ಅಕ್ಷಯವಾದುದು.

ಪೂರ್ಣಾಯಾಮೇಕವಿಂಶಂ ತು ಗೌರ್ಯಾಮುತ್ಪಾದಿತಃ ಸುತಃ ।
ಮಹಾಮುಖಾಂಶ್ಚ ಜುಹುಯಾದಿತಿ ತಸ್ಯ ಫಲಂ ಸ್ಮೃತಮ್ ।
ಫಲಂ ವೃಷಸ್ಯ ವಕ್ಷ್ಯಾಮಿ ಗದತೋ ಮೇ ನಿಬೋಧತ ॥ ೧೪ ॥

ವೃಷೋತ್ಸೃಷ್ಟಾ ಪುನಾತ್ಯೇವ ದಶಾತೀತಾನ್ ದಶಾವರಾನ್ ॥ ೧೫ ॥

ಯತ್ಕಿಂಚಿತ್ ಸ್ಪೃಶತೇ ತೋಯಮವತೀರ್ಣೋ ನದೀಜಲೇ ।
ವೃಷೋತ್ಸರ್ಗಾತ್ ಪಿತೄಣಾಂ ತು ಹ್ಯಕ್ಷಯಂ ಸಮುದಾಹೃತಮ್ ॥ ೧೬ ॥

ಯೇನ ಯೇನ ಸ್ಪೃಶೇತ್ತೋಯಂ ಲಾಂಗೂಲಾದಿಭಿರಂಗಶಃ ।
ಸರ್ವಂ ತದಕ್ಷಯಂ ತಸ್ಯ ಪಿತೄಣಾಂ ನಾತ್ರ ಸಂಶಯಃ ॥ ೧೭ ॥

ಶೃಂಗೈಃ ಖುರೈರ್ವಾ ಭೂಮಿಂ ಯಾಮುಲ್ಲಿಖತ್ಯನಿಶಂ ವೃಷಃ ।
ಮಧುಕುಲ್ಯಾಃ ಪಿತೄಂಸ್ತಸ್ಯ ಹ್ಯಕ್ಷಯಾಶ್ಚ ಭವಂತಿ ವೈ ॥ ೧೮ ॥

---

೧೪. ಮತ್ತು ಗಯಾ ಶ್ರಾದ್ಧಕರ್ತೃವಿಗೆ ಆ ಕರ್ಮಪ್ರಭಾವದಿಂದ ಗೌರೀ ಎಂಬ ಸಂಕೇತಿತಳಾದ ನಿಖಿಲಗುಣ ಪರಿಪೂರ್ಣಳೂ ಸುಮಾರು ಇಪ್ಪತ್ತು ವರ್ಷ ಪ್ರಾಯದವಳೂ ಆದ ಕನ್ಯೆಯಲ್ಲಿ ಹುಟ್ಟಿದ ಸತ್ಪುತ್ರನು ಮಹಾಯಜ್ಞಗಳನ್ನು ಆಚರಿಸುವನು, ಎಂಬುದು ಗಯಾ ಶ್ರಾದ್ಧಫಲವು. ಇನ್ನು ಮುಂದೆ ವೃಷೋತ್ಸರ್ಗದ ಮಹಿಮೆಯನ್ನು ವರ್ಣಿಸುವೆನು, ಕೇಳು.

೧೫. ಯಥಾ ವಿಧಿಯಾಗಿ ವೃಷೋತ್ಸರ್ಗವನ್ನು ಆಚರಿಸಿದವನು ತನ್ನ ವಂಶದ ಹತ್ತು ಮಂದಿ ಪೂರ್ವೀಕರನ್ನೂ ಮತ್ತೆ ಹತ್ತು ಮಂದಿ ಮುಂದಿನವರನ್ನೂ ಪವಿತ್ರರನ್ನಾಗಿ ಮಾಡಿ ಉದ್ಧಾರಮಾಡುವನು.

೧೬. ಪಿತೃಗಳನ್ನು ಉದ್ದೇಶಿಸಿ ತ್ಯಜಿಸಿದ ವೃಷವು ನದಿಯ ಜಲದಲ್ಲಿ ಇಳಿದು ಅಲ್ಪನೀರನ್ನು ಮುಟ್ಟಿದರೆ ಅದೆಲ್ಲವೂ ಪಿತೃಗಳಿಗೆ ಅಕ್ಷಯವಾಗಿ ಹೋಗಿ ತೃಪ್ತಿಯನ್ನು ಕೊಡುವುದು ಎಂದು ಹೇಳಲ್ಪಟ್ಟಿದೆ.

೧೭. ಮತ್ತು ಆ ವೃಷವು ಬಾಲವೇ ಮುಂತಾದ ಯಾವ ಯಾವ ಅವಯವದಿಂದ ಜಲವನ್ನು ಸ್ಪರ್ಶಿಸಿದರೂ ಆ ಎಲ್ಲ ಜಲವು ವೃಷೋತ್ಸರ್ಗ ಕರ್ಮವನ್ನು ಮಾಡಿದ ಯಜಮಾನನ ಪಿತೃಗಳಿಗೆ ಅಕ್ಷಯವಾಗಿ ಸೇರುವುದು. ಇದರಲ್ಲಿಸಂದೇಹವಿಲ್ಲ.

೧೮. ತ್ಯಜಿಸಿದ ವೃಷವು ಕೊಂಬು ಅಥವಾ ಗೊರಸುಗಳಿಂದ ಯಾವಾಗಲೂ ಭೂಮಿಯಲ್ಲಿ ಗೀರಿದ ಸ್ಥಳಗಳಲ್ಲೆಲ್ಲ ಅವನ ಪಿತೃಗಳಿಗೆ ಅಕ್ಷಯವಾದ ಮಧು ಪ್ರವಾಹಗಳಾಗಿ ಪರಿಣಮಿಸುತ್ತವೆ.

**ಸಹಸ್ರನಲ್ವಮಾತ್ರೇಣ ತಡಾಗೇನ ಯಥಾಸ್ಮೃತಿಃ ।**
**ತೃಪ್ತಿಸ್ತು ಯಾ ಪಿತೄಣಾಂ ವೈ ಸಾ ವೃಷೇಣೇಹ ಕಲ್ಪತೇ　　॥ ೧೯ ॥**

**ಯೋ ದದಾತಿ ಗುಡೋನ್ಮಿಶ್ರತಿಲಾನಿ ಶ್ರಾದ್ಧ ಕರ್ಮಣಿ ।**
**ಮಧು ವಾ ಮಧುಮಿಶ್ರಂ ವಾ ಸರ್ವಮೇವಾಕ್ಷಯಂ ಭವೇತ್ ॥ ೨೦ ॥**

**ನ ಬ್ರಾಹ್ಮಣಂ ಪರೀಕ್ಷೇತ ಸದಾ ದೇಯಂ ಹಿ ಮಾನವೈಃ ।**
**ದೈವೇ ಕರ್ಮಣಿ ಪಿತ್ರ್ಯೇ ಚ ಶ್ರೂಯತೇ ವೈ ಪರೀಕ್ಷಣಮ್ ॥ ೨೧ ॥**

**ಸರ್ವವೇದವ್ರತಸ್ನಾತಾಃ ಪಂಕ್ತೀನಾಂ ಪಾವನಾ ದ್ವಿಜಾಃ ।**
**ಯೇ ಚ ಭಾಷಾವಿದಃ ಕೇಚಿದ್ಯೇ ಚ ವ್ಯಾಕರಣೇ ರತಾಃ　　॥ ೨೨ ॥**

**ಅಧೀಯತೇ ಪುರಾಣಂ ವೈ ಧರ್ಮಶಾಸ್ತ್ರಮಥಾಪಿ ಚ ।**
**ತ್ರಿಣಾಚಿಕೇತಃ ಪಂಚಾಗ್ನಿಃ ಸಸೌಪರ್ಣಃ ಷಡಂಗವಿತ್　　॥ ೨೩ ॥**

---

೧೯. ಒಂದು ಸಹಸ್ರ ನಲ್ವವೆಂಬ ಪರಿಮಾಣದ ಮಹಾ ಸರೋವರವನ್ನು ನಿರ್ಮಿಸಿ ಅದರ ತೀರ್ಥೋದಕ ಸೇಚನದಿಂದ ಪಿತೃಗಳಿಗೆ ಲಭಿಸುವ ತೃಪ್ತಿಯು ವೃಷದಿಂದ ಲಭಿಸುವುದು.

೨೦. ಯಾವ ಮಾನವನು ಶ್ರಾದ್ಧಕರ್ಮದಲ್ಲಿ ಗುಡದಿಂದ ಮಿಶ್ರವಾದ ತಿಲ ಗಳನ್ನು, ಜೇನುತುಪ್ಪವನ್ನು ಅಥವಾ ಮಧುಮಿಶ್ರವಾದ ಯಾವುದಾದರೊಂದು ಭಕ್ಷ್ಯವನ್ನು ದಾನಮಾಡುವನೋ, ಅವನ ಆ ದಾನ ವಸ್ತುವು ಎಲ್ಲ ಅಕ್ಷಯ ಪ್ರೀತಿ ಯನ್ನು ಕೊಡುವುದು.

೨೧. ಮಾನವರು ನಿತ್ಯದಾನವನ್ನು ಆಚರಿಸುವಾಗ ಬ್ರಾಹ್ಮಣನನ್ನು ಪರೀಕ್ಷಿಸದೆ ಹಾಗೆಯೇ ದಾನಮಾಡಬೇಕು. ದೈವ ಅಥವಾ ಪಿತ್ರ್ಯಕರ್ಮಗಳಲ್ಲಿ ಮಾತ್ರ ಕರ್ಮ ಭ್ರಂಶ ಭೀತಿಯಿಂದ ಪರೀಕ್ಷೆಯು ವಿಹಿತವಾಗಿದೆ.

೨೨. ಸಮಸ್ತ ವೇದಗಳನ್ನು ಪಠಿಸಿ ಸಮಾವರ್ತನ ಸಂಸ್ಕಾರವನ್ನು ನಡೆಸಿದ ವರು, ಭಾಷಾಭಿಜ್ಞರು ಮತ್ತು ವ್ಯಾಕರಣಶಾಸ್ತ್ರದಲ್ಲಿ ನಿಷ್ಣಾತರು—ಇಂತಹ ವಿಪ್ರರು ಪಂಕ್ತಿಯನ್ನು ಪಾವನಮಾಡುವ ಮಹಿಮೆಯುಳ್ಳವರು.

೨೩. ಪುರಾಣ, ಧರ್ಮಶಾಸ್ತ್ರಗಳನ್ನು ಅಧ್ಯಯನಮಾಡಿ, ನಾಚಿಕೇತಾಗ್ನಿಯನ್ನು ಮೂರು ಆವೃತ್ತಿ ಆಚರಿಸಿದವರು, ಪಂಚಾಗ್ನಿ ಉಪಾಸಕರು, ಸುಪರ್ಣಸೂಕ್ತ-ಷಡಂಗ ಗಳನ್ನು ಅರಿತವರು—ಇವರೆಲ್ಲರೂ ಪಂಕ್ತಿಪಾವನರೆಂದು ಅರಿಯಬೇಕು.

ಬ್ರಹ್ಮದೇವಸುತಶ್ಚೈವ ಛಂದೋಗೋ ಜ್ಯೇಷ್ಠ ಸಾಮಗಃ ।
ಪುಣ್ಯೇಷು ಯಶ್ಚ ತೀರ್ಥೇಷು ಕೃತಸ್ನಾನಃ ಕೃತವ್ರತಃ ॥ ೨೪ ॥

ಮಖೇಷು ಯೇ ಚ ಸರ್ವೇಷು ಭವಂತ್ಯವಭೃಥಪ್ಲುತಾಃ ।
ಯೇ ಚ ಸತ್ಯವ್ರತಾ ನಿತ್ಯಂ ಸ್ವಧರ್ಮನಿರತಾಶ್ಚ ಯೇ ॥ ೨೫ ॥

ಅಕ್ರೋಧನಾಲೋಭಪರಾಸ್ತಾನ್ ಶ್ರಾದ್ಧೇಷು ನಿಮಂತ್ರಯೇತ್ ।
ಏತೇಭ್ಯೋ ದತ್ತಮಕ್ಷಯ್ಯಮೇತೇ ವೈ ಪಂಕ್ತಿಪಾವನಾಃ ॥ ೨೬ ॥

ಶ್ರಾದ್ಧೀಯಾ ಬ್ರಾಹ್ಮಣಾ ಯೇ ತು ಯೋಗವ್ರತಸುನಿಷ್ಠಿತಾಃ ।
ತ್ರಯೋಽಪಿ ಪೂಜಿತಾಸ್ತೇನ ಬ್ರಹ್ಮವಿಷ್ಣುಮಹೇಶ್ವರಾಃ ॥ ೨೭ ॥

ಪಿತೃಭಿಃ ಸಹ ಲೋಕಾಶ್ಚ ಯೋ ಹ್ಯೇತಾನ್ ಪೂಜಯೇನ್ನರಃ ।
ಪವಿತ್ರಾಣಾಂ ಪವಿತ್ರಂ ಚ ಮಂಗಲಾನಾಂ ಚ ಮಂಗಲಮ್ ॥ ೨೮ ॥

---

೨೪. ಛಂದೋಗಾನಮಾಡುವ ಸಾಮವೇದಾಧ್ಯಾಯಿಯು ಬ್ರಹ್ಮದೇವನಿಗೆ ಪ್ರಿಯನಾದ ಜ್ಯೇಷ್ಠ ಪುತ್ರನೆಂದು ಭಾವಿಸಬೇಕು. ಅವನು ಮತ್ತು ಸಕಲ ಪುಣ್ಯ ತೀರ್ಥಗಳಲ್ಲಿ ವ್ರತೋಪವಾಸ ಸಹಿತನಾಗಿ ಸ್ನಾನಮಾಡಿದವನು ಪಂಕ್ತಿ ಪಾವನ ರಾಗಿರುವರು.

೨೫. ಯಾರು ಸಮಸ್ತ ಯಜ್ಞಗಳನ್ನು ಆಚರಿಸಿ, ಅವಭೃಥ ಸ್ನಾನದಿಂದ ಸಂಸ್ಕೃತರಾಗಿರುವರೋ, ಯಾರು ಸತ್ಯವನ್ನು ವ್ರತವನ್ನಾಗಿ ಆಚರಿಸುತ್ತ ಸ್ವಧರ್ಮ ದಲ್ಲಿ ಅಭಿರುಚಿಯುಳ್ಳವರಾಗಿರುವರೊ, ಅವರೆಲ್ಲರೂ ಪಾವನರು.

೨೬. ಕ್ರೋಧ ಶೀಲವರ್ಜಿತರು, ಶೌಚವಿಧಾನಗಳಲ್ಲಿ ಆಸಕ್ತಿಯುಳ್ಳವರು– ಇಂತಹ ಸಾಧುಗಳನ್ನು ಶ್ರಾದ್ಧದಲ್ಲಿ ನಿಮಂತ್ರಣಮಾಡಬೇಕು. ಇವರಿಗೆ ದಾನ ಮಾಡಿರುವುದು ಅಕ್ಷಯವಾಗುವುದು. ಇವರು ಪಂಕ್ತಿ ಪಾವನರು.

೨೭. ಯೋಗಾಭ್ಯಾಸ ತತ್ಪರರಾದ ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ಸತ್ಕರಿಸಿದ ಮಾನವನು ಬ್ರಹ್ಮ-ವಿಷ್ಣು-ಈಶ್ವರರೆಂಬ ತ್ರಿಮೂರ್ತಿಗಳನ್ನು ಸಾಕ್ಷಾತ್ತಾಗಿ ಅರ್ಚಿಸಿದ ಫಲಕ್ಕೆ ಭಾಗಿಯಾಗುವನು.

೨೮. ಮತ್ತು ಯೋಗ್ಯವಿಪ್ರರನ್ನು ಅರ್ಚಿಸುವುದರಿಂದ ಪಿತೃಗಳನ್ನೂ ಲೋಕ ಗಳನ್ನೂ ಪೂಜಿಸಿದಂತೆ ಆಗುವುದು. ಯೋಗವ್ರತವೆಂಬುದು ಪವಿತ್ರಕರ್ಮಗಳಲ್ಲಿ ಪವಿತ್ರವೂ ಮಂಗಲ ವಸ್ತುಗಳಲ್ಲಿ ಅತಿಮಂಗಲಕರವೂ ಆಗಿರುವುದು.

ಪ್ರಥಮಃ ಸರ್ವಧರ್ಮಾಣಾಂ ಯೋಗಧರ್ಮೋ ನಿಗದ್ಯತೇ
ಅಪಾಂಕ್ತ್ಯೇಯಾನ್ ಪ್ರವಕ್ಷ್ಯಾಮಿ ಗದತೋ ಮೇ ನಿಬೋಧತ ॥ ೨೯ ॥

ಕಿತವೋ ಮದ್ಯಪೋ ಯಶ್ಚ ಪಶುಪಾಲೋ ನಿರಾಕೃತಃ ।
ಗ್ರಾಮಪ್ರೇಷ್ಯೋ ವಾರ್ಧುಷಿಕೋ ಹ್ಯಾಪಣೋ ವಣಿಜಸ್ತಥಾ ॥ ೩೦ ॥

ಅಗಾರದಾಹೀ ಗರದೋ ವೃಷಲೋ ಗ್ರಾಮಯಾಜಕಃ ।
ಕಾಂಡಪೃಷ್ಠೋಽಥ ಕುಂಡಾಶೀ ಮಧುಪಃ ಸೋಮವಿಕ್ರಯೀ ॥ ೩೧ ॥

ಸಮುದ್ರಾಂತರಿತೋ ಭೃತ್ಯಃ ಪಿಶುನಃ ಕೂಟಸಾಕ್ಷಿಕಃ ।
ಪಿತ್ರಾ ವಿವದಮಾನಶ್ಚ ಯಸ್ಯ ಚೋಪಪತಿರ್ಗೃಹೇ ॥ ೩೨ ॥

ಅಭಿಶಸ್ತಸ್ತಥಾ ಸ್ತೇನಃ ಶಿಲ್ಪಂ ಯಶ್ಚೋಪಜೀವತಿ ।
ಸ್ತವಕಃ ಸೂಪಕಾರಶ್ಚ ಯಶ್ಚ ಮಿತ್ರಾಣಿ ನಿಂದತಿ ॥ ೩೩ ॥

---

೨೯. ಸಮಸ್ತ ಧರ್ಮಗಳಲ್ಲಿ ಯೋಗಧರ್ಮವು ಶ್ರೇಷ್ಠವೆಂದು ಗಣಿಸಲ್ಪಟ್ಟಿದೆ. ಇನ್ನು ಅಪಾಂಕ್ತೇಯರಾದ ಜನರನ್ನು ವರ್ಣಿಸುತ್ತೇನೆ. ನನ್ನ ವಚನವನ್ನು ಕೇಳು.

೩೦. ವಂಚಕ, ಮದ್ಯಪಾನ ಮಾಡುವವನು, ಪಶುಪಾಲಕ, ಸಮಾಜದಿಂದ ನಿರಾಕರಿಸಲ್ಪಟ್ಟವನು, ಗ್ರಾಮಸೇವಕ, ವೃದ್ಧಿಯಿಂದ ಜೀವಿಸುವವನು ಮತ್ತು ಕ್ರಯ ವಿಕ್ರಯ ವ್ಯವಹಾರವುಳ್ಳ ವರ್ತಕ–ಇವರು ಅಪಾಂಕ್ತೇಯರೆಂದು ಭಾವಿಸಬೇಕು.

೩೧. ಹಾಗೆ ಗೃಹವನ್ನು ದಹಿಸಿದವನು, ವಿಷವನ್ನು ಪ್ರಯೋಗಿಸಿದವನು, ವೃಷಲ, ಗ್ರಾಮಪುರೋಹಿತ, ಕಾಂಡಪೃಷ್ಠನೆಂಬ ರೋಗಿ, ಜಾರಜಾನ್ನ ಭೋಜಿ, ಮದ್ಯಪಾನ ಮಾಡುವವನು ಮತ್ತು ಸೋಮವನ್ನು ವಿಕ್ರಯಮಾಡುವವನು–ಇವರು ಅಪಾಂಕ್ತೇಯರು.

೩೨. ಸಮುದ್ರದಿಂದ ದೂರವಾದವನು, ಸೇವಕ, ಚಾಡಿಗಾರ, ಕೂಟಸಾಕ್ಷಿವನ್ನು ನುಡಿಯುವವನು, ಪಿತೃವಿನ ಸಂಗಡ ವಿವಾದ ಮಾಡುವವನು ಮತ್ತು ಉಪಪತಿಯನ್ನು ಸಂಗಡವಿರಿಸಿದ ಗೃಹಪತಿ–ಇವರು ಅಪಾಂಕ್ತೇಯರಾಗಿರುವರು.

೩೩. ಅಪವಾದಗ್ರಸ್ತ, ಚೋರ, ಶಿಲ್ಪವಿದ್ಯೆಯಿಂದ ಉಪಜೀವಿಸುವವನು, ಸ್ತೋತ್ರಕಾರ, ಪಾಚಕ ಮತ್ತು ತನ್ನ ಮಿತ್ರರನ್ನು ನಿಂದಿಸುವವನು–ಇವರೆಲ್ಲರೂ ಅಪಾಂಕ್ತೇಯರೆಂದು ತಿಳಿಯಬೇಕು.

ಕಾಣಶ್ಚ ಖಂಜಕಶ್ಚೈವ ನಾಸ್ತಿಕೋ ವೇದವರ್ಜಿತಃ ।
ಉನ್ಮತ್ತೋಽಸ್ಯಥ ಷಂಢಶ್ಚ ಭ್ರೂಣಹಾ ಗುರುತಲ್ಪಗಃ ॥ ೩೪ ॥

ಭಿಷಗ್ಜೀವೀ ಪ್ರಾಶ್ನಿಕಃ ಪರಸ್ತ್ರೀಂ ಯಶ್ಚ ಸೇವತೇ ।
ವಿಕ್ರೀಣಾತಿ ಚ ಯೋ ಬ್ರಹ್ಮ ವ್ರತಾನಿ ನಿಯಮಾಂಸ್ತಥಾ ॥ ೩೫ ॥

ನಷ್ಟಂ ಸ್ಯಾನ್ನಾಸ್ತಿಕೇ ದತ್ತಂ ವ್ರತಘ್ನೇ ಚಾಪವರ್ಜಿತಮ್ ।
ಯಚ್ಚ ವಾಣಿಜಕೇ ದತ್ತಂ ನೇಹ ನಾಮುತ್ರ ಸಂಭವೇತ್ ॥ ೩೬ ॥

ನಿಕ್ಷೇಪಹಾರಕೇ ಚೈವ ಕೃತಘ್ನೇ ವೇದವರ್ಜಿತೇ ।
ತಥಾ ಪಾಣವಿಕೇ ಚೈ ವ ಕಾರುಕೇ ಧರ್ಮವರ್ಜಿತೇ ॥ ೩೭ ॥

ಕ್ರೀಣಾತಿ ಯೋ ಹ್ಯಪಣ್ಯಾನಿ ವಿಕ್ರೀಣಾತಿ ಪ್ರಶಂಸತಿ ।
ಅನ್ಯತ್ರಾಸ್ಯ ಸಮಾಭಾಸಂ ನ ವಣಿಕ್ ಶ್ರಾದ್ಧಮರ್ಹತಿ ॥ ೩೮ ॥

---

೩೪. ಕುರುಡ, ಕುಂಟ, ನಾಸ್ತಿಕ, ವೇದಾಭ್ಯಾಸ ವರ್ಜಿತ, ಉನ್ಮತ್ತ, ನಪುಂಸಕ, ಭ್ರೂಣಹತ್ಯೆಯನ್ನು ಆಚರಿಸಿದವನು, ಗರುಪತ್ನೀಸಮಾಗಮ ಮಾಡಿದವನು–ಇಂತಹ ಪಾಪಿಗಳು ಅಪಾಂಕ್ತೇಯರು.

೩೫. ವೈದ್ಯವೃತ್ತಿಯಿಂದ ಜೀವಿಸುವವನು, ಪ್ರಾಶ್ನಿಕನು, ಪರಸ್ತ್ರೀ ಸೇವಕ, ಮತ್ತು ವೇದವ್ರತಗಳನ್ನೂ ನಿಯಮಗಳನ್ನೂ ವಿಕ್ರಯಮಾಡುವ ಪಾಪಿಗಳನ್ನು ಅಪಾಂಕ್ತೇಯರೆಂದು ಭಾವಿಸಬೇಕು.

೩೬. ನಾಸ್ತಿಕನಲ್ಲಿ ಮಾಡಿದ ದಾನವು ನಷ್ಟವಾಗುವುದು, ವ್ರತಗಳನ್ನು ಭಂಗಪಡಿಸುವ ಶೀಲವುಳ್ಳವನಿಗೆ ಮಾಡಿದ ದಾನವು ಬಿಟ್ಟುಹೋಗುವುದು, ವಾಣಿಜ್ಯ ವೃತ್ತಿಯಲ್ಲಿದ್ದವನಿಗೆ ಕೊಟ್ಟ ದಾನವು ಐಹಿಕ–ಆಮುಷ್ಮಿಕಗಳಲ್ಲಿ ಒಂದನ್ನೂ ಕೊಡುವುದಿಲ್ಲ.

೩೭. ನ್ಯಾಸವನ್ನು ಅಪಹರಿಸಿದವನು, ಕೃತಘ್ನ, ವೇದಾಭ್ಯಾಸರಹಿತ, ಮರ್ದಲವಿದ್ಯಾಕುಶಲ, ಶಿಲ್ಪೀ ಮತ್ತು ಧರ್ಮಾನುಷ್ಠಾನರಹಿತ—ಇವರೆಲ್ಲರಲ್ಲಿ ಕೊಟ್ಟ ದಾನವು ನಿಷ್ಫಲವಾಗುವುದು.

೩೮. ಅಗಣ್ಯವಸ್ತುವನ್ನು ಕ್ರಯಮಾಡುವವನು, ವಿಕ್ರಯಿಸುವವನು, ಅದನ್ನು ಪ್ರಶಂಸಿಸುವವನು, ಬೇರೊಂದು ನಿಜಾಂಶವನ್ನು ಮರೆಮಾಚುವನು ಇಂತಹ ವೈಶ್ಯವೃತ್ತಿಯುಳ್ಳ ಪುರುಷನು ಶ್ರಾದ್ಧ ಭೋಜನಕ್ಕೆ ಅರ್ಹನಲ್ಲ.

ಭಸ್ಮನೀವ ಹುತಂ ಹವ್ಯಂ ದತ್ತಂ ಪೌನರ್ಭವೇ ದ್ವಿಜ ।
ಷಷ್ಟಿಂ ಕಾಣಃ ಶತಂ ಷಂಢಃ ಶ್ವಿತ್ರೀ ಪಂಚ ಶತಾನ್ಯಪಿ ।　　|| ೩೯ ||

ಪಾಪರೋಗೀ ಸಹಸ್ರಂ ವೈ ದಾತುರ್ನಾಶಯತೇ ಫಲಮ್ ।
ಭ್ರಶ್ಯೇದ್ಧಿ ಸಫಲಾತ್ತಸ್ಮಾತ್ ಪ್ರದಾತಾ ಯಸ್ತು ಬಾಲಿಶಃ　　|| ೪೦ ||

ಯದ್ವೇಷ್ಟಿತಶಿರಾ ಭುಂಕ್ತೇ ಯದ್ಭುಂಕ್ತೇ ದಕ್ಷಿಣಾಮುಖಃ ।
ಸೋಪಾನತ್ಕಶ್ಚ ಯದ್ಭುಂಕ್ತೇ ಯಚ್ಚ ದತ್ತಮಸತ್ಕೃತಮ್　　|| ೪೧ ||

ಸರ್ವಂ ತದಸುರೇಂದ್ರಾಯ ಬ್ರಹ್ಮಾ ಭಾಗಮಕಲ್ಪಯತ್ ।
ಶ್ವಾ ಚೈವ ಬ್ರಹ್ಮಹಾ ಚೈವ ನಾವೇಕ್ಷೇತ ಕಥಂ ಚನ　　|| ೪೨ ||

ತಸ್ಮಾತ್ ಪರಿವೃತೈರ್ದದ್ಯಾತ್ತಿಲೈಶ್ಚಾನ್ನಂ ವಿಕೀರ್ಯ ಚ ।
ರಾಕ್ಷಸಾನಾಂ ತಿಲಾಃ ಪ್ರೋಕ್ತಾಃ ಶುನಾಂ ಪರಿವೃತಾಸ್ತಥಾ　　|| ೪೩ ||

---

೩೯. ದ್ವಿಜನೇ! ಪುನರ್ವಿವಾಹವನ್ನು ಹೊಂದಿದ ಸ್ತ್ರೀಯಲ್ಲಿ ಜನಿಸಿದವನಲ್ಲಿ ಕೊಟ್ಟ ಹವ್ಯವು ಭಸ್ಮದಲ್ಲಿ ಹೋಮಮಾಡಿದಂತೆ ವ್ಯರ್ಥವಾಗುವುದು, ಪ್ರತಿಗ್ರಹಭಾಗಿಯಾದ ಕುರುಡನು ದಾತೃವಿನ ಅರವತ್ತು ಪುಣ್ಯಫಲಗಳನ್ನೂ ನಪುಂಸಕನು ಒಂದು ನೂರನ್ನೂ ಶ್ವೇತರೋಗವುಳ್ಳವನು ಐದುನೂರು ಫಲಗಳನ್ನೂ ನಾಶಮಾಡುವನು.

೪೦. ಪಾಪಸೂಚಕ ರೋಗವುಳ್ಳವನು ದಾತೃವಿನ ಸಹಸ್ರ ಪುಣ್ಯಫಲಗಳನ್ನು ನಾಶಮಾಡುವನು, ಮೂರ್ಖನಾದ ದಾತೃಪುರುಷನು ಮಾಡಿದ ಅಂತಹ ಮಹಾದಾನದ ಫಲದಿಂದ ಭ್ರಷ್ಟನಾಗುವನು.

೪೧. ವಸ್ತ್ರದಿಂದ ವೇಷ್ಟಿಸಿದ ಶಿರಸ್ಸುಳ್ಳವನಾಗಿ, ದಕ್ಷಿಣದಿಕ್ಕಿಗೆ ಅಭಿಮುಖನಾಗಿ ಅಥವಾ ಪಾದರಕ್ಷೆಗಳನ್ನು ಧರಿಸಿದವನಾಗಿ ಭೋಜನಮಾಡಿದ ಮತ್ತು ಸತ್ಕಾರವಿಲ್ಲದೆ ದಾನಮಾಡಿದ ಭಾಗವು ರಾಕ್ಷಸರ ಪಾಲಿಗೆ ಸೇರುವುದು.

೪೨. ವಿಧಿನಿಂದಿತವಾದ, ಹಿಂದೆ ಹೇಳಿರುವ ಎಲ್ಲ ಭಾಗಗಳನ್ನು ಬ್ರಹ್ಮದೇವನು ರಾಕ್ಷಸರಿಗೆ ಕಲ್ಪಿಸಿರುವನು, ನಾಯಿ ಮತ್ತು ಬ್ರಹ್ಮಹತ್ಯೆ ಮಾಡಿದ ಪುರುಷನು ಯಾವಾಗಲೂ ಶ್ರಾದ್ಧಕರ್ಮವನ್ನು ನೋಡಬಾರದು.

೪೩. ಆದ್ದರಿಂದ ಪರಿವೃತ್ತ, ತಿಲ ಇವುಗಳನ್ನು ಭೂಮಿಯಲ್ಲಿ ಚಲ್ಲಿ ಪಿತೃಗಳಿಗೆ ಅನ್ನದಾನವನ್ನು ಮಾಡಬೇಕು, ರಾಕ್ಷಸರ ದೃಷ್ಟಿಯನ್ನು ತಿಲಗಳೂ, ನಾಯಿಗಳ ದೃಷ್ಟಿಯನ್ನು ಪರಿವೃತ ಧಾನ್ಯಗಳೂ ನಿವಾರಿಸುವುವು.

ದರ್ಶನಾತ್ಸೂಕರೋ ಹಂತಿ ಪಕ್ಷವಾತೇನ ಕುಕ್ಕುಟಃ ।
ರಜಸ್ವಲಾ ತು ಸ್ಪರ್ಶೇನ ಕ್ರುದ್ಧೋ ಯಶ್ಚ ಪ್ರಯಚ್ಛತಿ ॥ ೪೪ ॥

ನದೀತೀರೇಷು ರಮ್ಯೇಷು ಸರಿತ್ಸು ಚ ಸರಸ್ಸು ಚ ।
ವಿವಿಕ್ತೇಷು ಚ ಪ್ರೀಯಂತೇ ದತ್ತೇನೇಹ ಪಿತಾಮಹಾಃ ॥ ೪೫ ॥

ನಾಸವ್ಯಂ ಪಾತಯೇಜ್ಜಾನು ನ ಯುಕ್ತೋ ವಾಚಮೀರಯೇತ್ ।
ತಸ್ಮಾತ್ ಪರಿವೃತೇನೇಹ ವಿಧಿವದ್ದರ್ಭಪಾಣಿನಾ । ॥ ೪೬ ॥

ಪಿತ್ರೋರಾರಾಧನಂ ಕಾರ್ಯಮೇವಂ ಪ್ರೀಣಯತೇ ಪಿತೄನ್ ।
ಅನುಮಾನ್ಯ ದ್ವಿಜಾನ್ ಪೂರ್ವಮಗ್ನೌ ಕುರ್ಯಾದ್ಯಥಾವಿಧಿ ॥ ೪೭ ॥

ಪಿತೄಣಾಂ ನಿರ್ವಪೇದ್ಭೂಮೌ ಸೂರ್ಯೇ ವಾ ದರ್ಭಸಂಸ್ತರೇ ।
ಶುಕ್ಲಪಕ್ಷೇ ಚ ಪೂರ್ವಾಹ್ಣೇ ಶ್ರಾದ್ಧಂ ಕುರ್ಯಾದ್ಯಥಾವಿಧಿ ॥ ೪೮ ॥

---

೪೪. ವರಾಹವು ದರ್ಶನದಿಂದಲೂ, ಕೋಳಿಯು ರೆಕ್ಕೆಗಳ ಗಾಳಿಯಿಂದಲೂ, ರಜಸ್ವಲೆಯಾದ ನಾರಿಯು ಸ್ಪರ್ಶದೋಷದಿಂದಲೂ ಮತ್ತು ಕ್ರೋಧವುಳ್ಳ ಮಾನವನು ತಾನು ಮಾಡಿದ ಸಹಾಯದಿಂದಲೂ ಕರ್ಮವನ್ನು ಭಂಗಪಡಿಸುವರು.

೪೫. ನದಿಯತೀರ ಭೂಮಿ, ರಮ್ಯವಾದ ನದೀ—ಸರೋವರ, ನಿರ್ಜನವಾದ ಪ್ರದೇಶ-ಇಂತಹ ವಿಹಿತ ಪುಣ್ಯಸ್ಥಳಗಳಲ್ಲಿ ಕೊಟ್ಟ ಶ್ರಾದ್ಧೀಯಹವಿಸ್ಸಿನಿಂದ ಪಿತೃಗಳು ಸುಪ್ರೀತರಾಗುವರು.

೪೬. ಬಲಭಾಗದ ಮಂಡಿಯನ್ನು ನೆಲದಲ್ಲಿರಿಸಬಾರದು, ಮತ್ತು ಕರ್ಮಯೋಗದಲ್ಲಿ ನಿಯತವಾದ ಚಿತ್ತವಿರುವ ಸಮಯದಲ್ಲಿ ಮಾತನ್ನು ಆಡಬಾರದು, ಆದುದರಿಂದ ಕರ್ಮಸ್ಥಳದಲ್ಲಿ ಆಸಕ್ತನಾಗಿ ಪಾಣಿಯಲ್ಲಿ ದರ್ಭಗಳನ್ನು ಧರಿಸಿ ಕರ್ಮವನ್ನು ಆಚರಿಸಬೇಕು.

೪೭. ಯಥಾವಿಧಿಯಾಗಿ ಪಿತೃಗಳ ಆರಾಧನೆಯನ್ನು ಮಾಡಬೇಕು. ಇದರಿಂದ ಪಿತೃಗಳನ್ನು ತೃಪ್ತಿಪಡಿಸುವನು, ಮೊದಲು ದ್ವಿಜರ ಅನುಮತಿಯನ್ನು ಸ್ವೀಕರಿಸಿ ಅನಂತರದಲ್ಲಿ ಶಾಸ್ತ್ರವಿಧಿಯಂತೆ ಅಗ್ನೌಕರಣ ಕರ್ಮವನ್ನು ಮಾಡಬೇಕು.

೪೮. ಪಿತೃಗಳಿಗೆ ಪಿಂಡನಿರ್ವಪಣವನ್ನು ಭೂಮಿಯಲ್ಲಿ ಅಥವಾ ಆಸ್ತರಿಸಿದ ದರ್ಭರಾಶಿಯಲ್ಲಿ ಮಾಡಬೇಕು. ಶುಕ್ಲಪಕ್ಷದಲ್ಲಿ ಪೂರ್ವಾಹ್ಣದಲ್ಲಿ ಯಥಾವಿಧಿಯಾಗಿ ಶ್ರಾದ್ಧವನ್ನು ಮಾಡಬೇಕು.

ಕೃಷ್ಣಪಕ್ಷೇಽಪರಾಹ್ಣೇ ತು ರೌಹಿಣಂ ವೈ ನ ಲಂಘಯೇತ್ ।
ಏವಮೇತೇ ಮಹಾತ್ಮಾನೋ ಮಹಾಯೋಗಾ ಮಹೌಜಸಃ ॥ ೪೯ ॥

ಸದಾ ವೈ ಪಿತರಃ ಪೂಜ್ಯಾಃ ಸಂಪ್ರಾಪ್ತೌ ದೇಶಕಾಲಯೋಃ ।
ಪಿತೃಭಕ್ತ್ಯೈವ ತು ನರೋ ಯೋಗಂ ಪ್ರಾಪ್ನೋತಿ ದುರ್ಲಭಮ್ ॥ ೫೦ ॥

ಧ್ಯಾನೇನ ಮೋಕ್ಷಂ ಗಚ್ಛೇದ್ಧಿ ಹಿತ್ವಾ ಕರ್ಮ ಶುಭಾಶುಭಮ್ ।
ಯಜ್ಞಹೇತೋಸ್ತದುದ್ಧೃತ್ಯ ಮೋಹಯಿತ್ವಾ ಜಗತ್ತಥಾ ॥ ೫೧ ॥

ಗುಹಾಯಾಂ ನಿಹಿತಂ ಬ್ರಹ್ಮ ಕಶ್ಯಪೇನ ಮಹಾತ್ಮನಾ ।
ಅಮೃತಂ ಗುಹ್ಯಮುದ್ಧೃತ್ಯ ಯೋಗೋ ಯೋಗವಿದಾಂ ವರಾಃ ॥ ೫೨ ॥

ಪ್ರೋಕ್ತಃ ಸನತ್ಕುಮಾರೇಣ ಮಹತೋ ಬ್ರಹ್ಮಣಃ ಪದಮ್ ।
ದೇವಾನಾಂ ಪರಮಂ ಗುಹ್ಯಂ ಋಷೀಣಾಂ ಚ ಪರಾಯಣಮ್ ॥ ೫೩ ॥

---

೪೯. ಕೃಷ್ಣಪಕ್ಷದಲ್ಲಿ ಅಪರಾಹ್ಣ ಕಾಲದಲ್ಲಿಯೇ ಶ್ರಾದ್ಧವನ್ನು ಆಚರಿಸಬೇಕು, ರೌಹಿಣ ಸಮಯವನ್ನುಲ್ಲಂಘಿಸಬಾರದು. ಮಹಾತ್ಮರೂ ಮಹಾಯೋಗೇಶ್ವರ ಸ್ವರೂಪರೂ ಮತ್ತು ಮಹಾ ಓಜಸ್ವಿಗಳೂ ಆದ ಪಿತೃಗಳು ಪೂಜ್ಯರಾಗಿರುವರು.

೫೦. ಆಯಾಯ ವಿಹಿತವಾದ ದೇಶ–ಕಾಲಗಳು ಸಿಕ್ಕಿದಾಗ ಯಾವಾಗಲೂ ಪಿತೃಗಳನ್ನು ಪೂಜಿಸಬೇಕು. ಪಿತೃಭಕ್ತಿಯಿಂದ ಮಾನವನು ಉತ್ತಮವೂ ದುರ್ಲಭವೂ ಆದ ಮಹಾಯೋಗ ಫಲವನ್ನು ಹೊಂದುತ್ತಾನೆ.

೫೧. ಧ್ಯಾನಯೋಗದಿಂದ ಶುಭಾಶುಭ ಕರ್ಮಬಂಧವನ್ನು ತ್ಯಜಿಸಿಕ್ರಮವಾಗಿ ಮುಕ್ತಿಯನ್ನು ಹೊಂದುವನು. ಧ್ಯಾನಯೋಗಕ್ಕೆ ವಿಷಯವಾದ ಬ್ರಹ್ಮವಸ್ತುವು ಯಜ್ಞಕರ್ಮಾಚರಣೆಯು ಪ್ರಸರಿಸುವುದಕ್ಕೋಸ್ಕರ ಜಗತ್ತನ್ನು ಮೋಹಪಡಿಸಿ ತಿರೋಹಿತವಾಗಿರುವುದು.

೫೨. ಮಹಾತ್ಮನಾದ ಕಶ್ಯಪಮುನಿಯಿಂದ ಬ್ರಹ್ಮವಸ್ತುವು ಗುಹೆಯಲ್ಲಿ ಗೋಪ್ಯವಾಗಿ ಇರಿಸಲ್ಪಟ್ಟಿತು. ಅಂತಹ ಗುಹ್ಯವಾದ ಅಮೃತವಸ್ತುವು ಯೋಗಿಶ್ರೇಷ್ಠರಿಂದ ಯೋಗಸಾಧನ ಮಾರ್ಗದಿಂದ ಲಭ್ಯವಾಗಿ ಪ್ರಕಾಶಪಡಿಸಲ್ಪಟ್ಟಿದೆ.

೫೩. ದೇವತೆಗಳಿಗೆ ಪರಮಗುಹ್ಯ ರೂಪವಾಗಿಯೂ ಋಷಿಗಳಿಗೆ ಪರಮಗತಿ ಸ್ವರೂಪವಾಗಿಯೂ ಇರುವ ಅಪರಿಚ್ಛಿನ್ನವಾದ ಬ್ರಹ್ಮವಸ್ತುವಿನ ಪದವು ಸನತ್ಕುಮಾರ ಮುನಿಯಿಂದ ಪ್ರಚುರಗೊಳಿಸಲ್ಪಟ್ಟಿದೆ.

ಪಿತೃಭಕ್ತ್ಯಾ ಪ್ರಯತ್ನೇನ ಪ್ರಾಪ್ಯತೇ ತನ್ಮನೀಷಿಭಿಃ ।
ಪಿತೃಭಕ್ತಿಃ ಸಮಾಸೇನ ಪಿತೃಪೂರ್ವಪರಶ್ಚ ಯಃ ।
ಅಯತ್ನಾತ್ ಪ್ರಾಪ್ನುಯಾದೇವ ಸರ್ವಮೇತನ್ನ ಸಂಶಯಃ ॥ ೫೪ ॥

ಬೃಹಸ್ಪತಿರುವಾಚ :—
ಯಸ್ಮೈ ಶ್ರಾದ್ಧಾನಿ ದೇಯಾನಿ ಯಚ್ಚ ದತ್ತಂ ಮಹತ್ಫಲಮ್ ।
ಯೇಷು ಚಾಪ್ಯಕ್ಷಯಂ ಶ್ರಾದ್ಧಂ ತೀರ್ಥೇಷು ಚ ಗುಹಾಸು ಚ ॥ ೫೫ ॥

ಯೇಷು ಸ್ವರ್ಗಮವಾಪ್ನೋತಿ ತತ್ತೇ ಪ್ರೋಕ್ತಂ ಸಸಂಗ್ರಹಮ್ ।
ಶ್ರುತ್ವೇಮಂ ಶ್ರಾದ್ಧಕಲ್ಪಂ ಚ ನ ಕುರ್ಯಾದ್ಯಸ್ತು ಮಾನವಃ ॥ ೫೬ ॥

ಸ ಮಜ್ಜೇನ್ನರಕೇ ಘೋರೇ ನಾಸ್ತಿಕಸ್ತಮಸಾ ವೃತೇ ।
ಪರಿವಾದೋ ನ ಕರ್ತವ್ಯೋ ಯೋಗಿನಾಂ ತು ವಿಶೇಷತಃ ॥ ೫೭ ॥

---

೫೪. ಅಂತಹ ಬ್ರಹ್ಮವಸ್ತುವು ಜ್ಞಾನಿಗಳಿಂದ ಪಿತೃಭಕ್ತಿಯೆಂಬ ಉತ್ತಮ ಸಾಧನದಿಂದ ಹೊಂದಲ್ಪಡುತ್ತದೆ. ಪಿತೃಗಳನ್ನೇ ಕಾರಣ-ಕಾರ್ಯ ಮುಂತಾದ ಸರ್ವಾತ್ಮಕರೆಂದು ಎಣಿಸಿ ತತ್ಪರನಾಗಿರುವ ಪಿತೃಭಕ್ತನು ಅಯತ್ನದಿಂದ ಈ ಎಲ್ಲ ಪುರುಷಾರ್ಥಗಳನ್ನು ನಿಸ್ಸಂಶಯವಾಗಿ ಹೊಂದುವನು.

೫೫. ಬೃಹಸ್ಪತಿಯು ಮುಂದುವರಿಸಿ ಮಾತನಾಡಿದನು :-ಇದುವರೆಗೆ ನನ್ನಿಂದ ಹೇಳಲ್ಪಟ್ಟ ವಿಷಯಗಳಲ್ಲಿ ಯಾರಿಗೆ ಶ್ರಾದ್ಧವನ್ನು ಕೊಡಬೇಕು, ಯಾವ ಶ್ರಾದ್ಧ ವಿಧಾನವು ಮಹಾಫಲವನ್ನು ಕೊಡುವುದು, ಯಾವ ತೀರ್ಥ, ಪುಣ್ಯಗುಹೆಗಳಲ್ಲಿ ಮಾಡಿದ ಶ್ರಾದ್ಧವು ಅಕ್ಷಯವಾಗುವುದು, ಎಂಬೀ ವಿಷಯಗಳು ಸೇರಿವೆ.

೫೬. ಮತ್ತು ಎಲ್ಲಿ ಶ್ರಾದ್ಧಾಚರಣೆಯಿಂದ ಸ್ವರ್ಗವು ಲಭಿಸುವುದು, ಇದೆಲ್ಲವೂ ಸಂಗ್ರಹವಾಗಿ ನಿನಗೆ ಹೇಳಲ್ಪಟ್ಟಿತು. ಮಾನವನು ಈ ಶ್ರಾದ್ಧಕಲ್ಪವನ್ನು ಶ್ರವಣ ಮಾಡಿ ಯಥಾವಿಧಿಯಾಗಿ ಶ್ರಾದ್ಧವನ್ನು ಆಚರಿಸಬೇಕು.

೫೭. ಅದನ್ನು ಅತಿಕ್ರಮಿಸಿದವನು ಅಂಧಕಾರದಿಂದ ವ್ಯಾಪಿಸಲ್ಪಟ್ಟ ಘೋರ ನರಕದಲ್ಲಿ ಮುಳುಗುವನು. ವಿಶೇಷವಾಗಿ ಯೊಗಿಗಳ ವಿಷಯದಲ್ಲಿ ನಿಂದೆಯನ್ನು ಮಾಡಲಾಗದು.

ಪರಿವಾದಾತ್ ಕ್ರಿಮಿರ್ಭೂತ್ವಾತತ್ರೈವ ಪರಿವರ್ತತೇ ।
ಯೋಗಾನ್ ಪರಿವದೇದ್ಯಸ್ತು ಧ್ಯಾನಿನೋ ಮೋಕ್ಷಕಾಂಕ್ಷಿಣಃ ॥ ೫೮ ॥

ಸ ಗಚ್ಛೇನ್ನರಕಂ ಘೋರಂ ಶ್ರೋತಾಪ್ಯಸ್ಯ ನ ಸಂಶಯಃ ।
ಆವೃತಂ ತಮಸಾ ಸರ್ವಂ ನರಕಂ ಘೋರದರ್ಶನಮ್ ॥ ೫೯ ॥

ಯೋಗೀಶ್ವರಪರೀವಾದಾನ್ನ ಸ್ವರ್ಗಂ ಯಾತಿ ಮಾನವಃ ।
ಯೋಗೇಶ್ವರಾಣಾಮಾಕ್ರೋಶಂ ಶೃಣುಯಾದ್ಯೋ ಯತಾತ್ಮನಾಮ್
॥ ೬೦ ॥

ಸ ಹಿ ಕಾಲಂ ಚಿರಂ ಮಜ್ಜೇನ್ನರಕೇ ನಾತ್ರ ಸಂಶಯಃ ।
ಕುಂಭೀಪಾಕೇಷು ಪಚ್ಯಂತೇ ಜಿಹ್ವಾಚ್ಛೇದೇ ಪುನಃ ಪುನಃ ॥ ೬೧ ॥

ಸಮುದ್ರೇ ಚ ಯಥಾ ಲೋಷ್ಟಸ್ತದ್ವತ್ ಸೀದಂತಿ ತೇ ನರಾಃ ।
ಮನಸಾ ಕರ್ಮಣಾ ವಾಚಾ ದ್ವೇಷಂ ಯೋಗೇಷು ವರ್ಜಯೇತ್
ಪ್ರೇತ್ಯಾನಂತಂ ಫಲಂ ಭುಂಕ್ತ ಇಹ ವಾಪಿ ನ ಸಂಶಯಃ ॥ ೬೨ ॥

---

೫೮. ಯೋಗಿ ನಿಂದೆಯಿಂದ ಕ್ರಿಮಿ ಜನ್ಮವನ್ನು ಹೊಂದಿ ಆ ಕ್ಷಣದಲ್ಲಿ ಅಲ್ಲಿಯೇ ಚಲಿಸುವನು, ಮೋಕ್ಷಾಕಾಂಕ್ಷೆಯಿಂದ ಇರುವ ಧ್ಯಾನಮಾರ್ಗದಲ್ಲಿರುವ ಯೋಗಿಗಳನ್ನು ಸರ್ವಥಾ ನಿಂದಿಸಬಾರದು.

೫೯. ನಿಂದಾಪರನಾದ ಮನುಜನು ಮತ್ತು ಅದನ್ನು ಶ್ರವಣಮಾಡಿದವನು ಅಂಧಕಾರದಿಂದ ಮುಚ್ಚಲ್ಪಟ್ಟಿರುವ ಘೋರವಾದ ದರ್ಶನವುಳ್ಳ ನಾನಾವಿಧ ನರಕ ವಾಸವನ್ನು ಹೊಂದುವನು.

೬೦. ಮಾನವನು ಸುಕೃತಶಾಲಿಯಾದರೂ ಯೋಗೇಶ್ವರರ ನಿಂದೆಯಿಂದ ಸ್ವರ್ಗವನ್ನು ಹೊಂದದೆ ಭ್ರಷ್ಟನಾಗುವನು, ಜಿತೇಂದ್ರಿಯರಾದ ಯೋಗೇಶ್ವರರ ನಿಂದೆಯನ್ನು ಶ್ರವಣಮಾಡಲಾಗದು.

೬೧. ಶ್ರವಣಮಾಡಿದ ಪಾಪಿಯು ಕುಂಭೀಪಾಕ, ಜಿಹ್ವಾಚ್ಛೇದವೆಂಬ ಮಹಾ ನರಕಗಳಲ್ಲಿ ಮತ್ತೆ ಮತ್ತೆ ದಹಿಸಲ್ಪಡುತ್ತ ಬಹುಕಾಲದ ವರೆಗೆ ನಿಸ್ಸಂಶಯವಾಗಿ ಘೋರ ನರಕದಲ್ಲಿ ಮುಳುಗುವನು.

೬೨. ಸಮುದ್ರದಲ್ಲಿ ಎಸೆದ ಮಣ್ಣಿನ ಹೆಂಟೆಯಂತೆ ಪಾಪಿಗಳು ನರಕದಲ್ಲಿ ಲಯಹೊಂದುವರು. ಯೋಗಿಗಳನ್ನು ಮನಸ್ಸು, ಕರ್ಮ ಮತ್ತು ವಾಕ್ಕುಗಳಿಂದ ದ್ವೇಷಿಸಬಾರದು. ಅವರನ್ನು ಗೌರವಿಸಿದುದರಿಂದ ಇಹಲೋಕದಲ್ಲಿ ಅನೇಕ ಸುಖಗಳನ್ನು ಹೊಂದಿ ಮರಣಾಂನಂತರದಲ್ಲಿ ಅನಂತ ಸೌಖ್ಯಗಳನ್ನು ಅನುಭವಿಸುತ್ತಾನೆ.

ನ ಪಾರಗೋ ವಿಂದತಿ ಪಾರಮಾತ್ಮನ—
ಸ್ತ್ರಿಲೋಕಮಧ್ಯೇ ಚರತಿ ಸ್ವಕರ್ಮಭಿಃ ।
ಋಚೋ ಯಜುಃ ಸಾಮ ತದಂಗಪಾರಗೋ-
ವಿಕಾರಮೇತಂ ಹ್ಯನವಾಪ್ಯ ಸೀದತಿ ॥ ೬೩ ॥

ವಿಕಾರಪಾರಂ ಪ್ರಕೃತೇಶ್ಚ ಪಾರಗ—
ಸ್ತ್ರಯಿಗುಣಾನಾಂ ತ್ರಿಗುಣಸ್ಯ ಪಾರಗಃ ।
ಯಃ ಸ್ಯಾಚ್ಚತುರ್ವಿಂಶತಿತತ್ತ್ವಪಾರಗಃ
ಸ ಪಾರಗೋ ನಾಧ್ಯಯನಸ್ಯ ಪಾರಗಃ ॥ ೬೪ ॥

ಕೃತ್ಸ್ನಂ ಯಥಾವತ್ ಸಮುಪೈತಿ ತತ್ಫಲ—
ಸ್ತಥೈವ ಭೂಯಃ ಪ್ರಲಯತ್ವಮಾತ್ಮನಃ ।
ಪ್ರತ್ಯಾಹರೇದ್ಯೋಗಪಥಂ ನ ಯೋ ದ್ವಿಜೋ
ನ ಸರ್ವಪಾರಕ್ರಮಪಾರಗೋಚರಃ ॥ ೬೫ ॥

---

೬೩. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ವೇದಾಂಗಗಳಲ್ಲಿ ಪಾರಂಗತನಾದ ಮಾತ್ರಕ್ಕೆ ಪರಮಾತ್ಮನ ಪಾರವನ್ನು ಅವನು ಹೊಂದಲಾರನು. ಶಾಸ್ತ್ರೀಯ ಕರ್ಮದಿಂದ ಬದ್ಧನಾಗಿ ತ್ರಿಲೋಕಗಳಲ್ಲಿ ಸುತ್ತುತ್ತಲಿರುವನು. ಆದ್ದರಿಂದ ನಿರ್ವಿಕಾರವಾದ ಆತ್ಮವನ್ನು ಅವನು ತಿಳಿಯದೆ ನಾಶಹೊಂದುತ್ತಿರುವನು.

೬೪. ವಿಕಾರವಸ್ತುಗಳನ್ನು ತ್ಯಜಿಸಿ ಪ್ರಕೃತಿಯ ಪಾರವನ್ನು ಮುಟ್ಟಿದವನೂ ವೇದತ್ರಯ ಸಾಧ್ಯವಾದ ಗುಣಗಳನ್ನು ತ್ಯಜಿಸಿ ಸತ್ತ್ವಾದಿ ಗುಣತ್ರಯದ ಪಾರವನ್ನು ಹೊಂದಿದವನೂ, ಚತುರ್ವಿಂಶತಿ ತತ್ತ್ವಗಳ ಪಾರಗಾಮಿಯೂ ಆದ ಮನುಷ್ಯನು ನಿಜವಾಗಿ ಪಾರಂಗತನೆ ಹೊರತು ವೇದ-ವೇದಾಂಗ ಜ್ಞಾನಿಯು ಪಾರಂಗತನಲ್ಲ.

೬೫. ಯೋಗಮಾರ್ಗವನ್ನು ಸಾಧಿಸಿ ಸರ್ವವಸ್ತು ಪಾರದಲ್ಲಿ ಸಂಚರಿಸುವ, ಉತ್ತಮಪಥವನ್ನು ಲಕ್ಷಿಸದಿರುವ ಮಾನವನು ವೇದಾದಿವಿಹಿತ ಧರ್ಮಾಚರಣೆಯ ಫಲವನ್ನು ಸಮಗ್ರವಾಗಿ ಅನುಭವಿಸಿ ಕರ್ಮಬದ್ಧನಾಗಿ ಮತ್ತೆ ಅಲ್ಲಿಂದ ಪ್ರಲಯವನ್ನು ಹೊಂದುವನು.

ವೇದಸ್ಯ ವೇದಿತವ್ಯಂ ಚ ವೇದ್ಯಂ ವಿಂದತಿ ಯೋಗವಿತ್ ।
ತಂ ವೈ ವೇದವಿದಃ ಪ್ರಾಹುಸ್ತಮಾಹುರ್ವೇದಪಾರಗಮ್ ॥ ೬೬ ॥

ವೇದಂ ಚ ವೇದಿತವ್ಯಂ ಚ ವಿದಿತ್ವಾ ವೈ ಯಥಾಸ್ಥಿತಃ ।
ಏನಂ ವೇದವಿದಃ ಪ್ರಾಹುರನ್ಯಂ ವೈ ವೇದಪಾರಗಮ್ ॥ ೬೭ ॥

ಯಜ್ಞಾನ್ ವೇದಾಂಸ್ತಥಾ ಕಾಮಾಂಸ್ತಪಾಂಸಿ ವಿವಿಧಾನಿ ಚ ।
ಪ್ರಾಪ್ನೋತ್ಯಾಯುಃ ಪ್ರಜಾಶ್ಚೈವ ಪಿತೃಭಕ್ತೋ ನ ಸಂಶಯಃ ॥ ೬೮ ॥

ಶ್ರದ್ಧಯಾ ಶ್ರಾದ್ಧಕಲ್ಪಂ ತು ಯಸ್ತ್ವಿಮಂ ನಿಯತಃ ಪಠೇತ್ ।
ಸರ್ವಾಣ್ಯೇತಾನಿ ಪ್ರಾಪ್ನೋತಿ ತೀರ್ಥದಾನಫಲಾನಿ ಚ ॥ ೬೯ ॥

ಸ ಪಂಕ್ತಿಪಾವನಶ್ಚೈವ ದ್ವಿಜಾನಾಮಗ್ರಭುಗ್ಭವೇತ್ ।
ಆಶ್ರಾವ್ಯ ಚ ದ್ವಿಜಾನ್ ಸೋಽಥ ಸರ್ವಕಾಮಾನವಾಪ್ನುಯಾತ್ ॥ ೭೦ ॥

ಯಶ್ಚೈತಚ್ಛೃಣುಯಾನ್ನಿತ್ಯಮನ್ಯಾಂಶ್ಚ ಶ್ರಾವಯೇದ್ದ್ವಿಜಃ ।
ಅನಸೂಯುರ್ಜಿತಕ್ರೋಧೋ ಲೋಭಮೋಹವಿವರ್ಜಿತಃ ॥ ೭೧ ॥

---

೬೬. ಯೋಗವನ್ನು ಅರಿತವನು ವೇದಗಳಿಂದ ವೇದ್ಯವಾದ ವಸ್ತುತತ್ತ್ವವನ್ನು ಅರಿಯುವನು. ಯೋಗಜ್ಞನನ್ನು ವೇದಜ್ಞಾನಿಯೆಂದೂ ವೇದಪಾರಂಗತನೆಂದೂ ಪ್ರಾಜ್ಞರು ಕರೆಯುವರು.

೬೭. ವೇದ ಮತ್ತು ಅದರಿಂದ ವೇದ್ಯತತ್ತ್ವವನ್ನು ಅರಿತವನು ಅಜ್ಞಾನದಿಂದ ಪೂರ್ವಸ್ಥಿತಿಯಲ್ಲಿ ಇರುವನು. ಪರಮಾರ್ಥಜ್ಞರು ಯೋಗಜ್ಞನನ್ನು ಅಪೂರ್ವವೇದ ಜ್ಞಾನಿಯೆಂದೂ ವೇದಪಾರಗನೆಂದೂ ಕರೆಯುವರು.

೬೮. ಪಿತೃಭಕ್ತನಾದ ನರನು ಯಜ್ಞ, ವೇದ, ಕಾಮ, ವಿವಿಧ ತಪಸ್ಸು ಮುಂತಾದ ಕರ್ಮಗಳನ್ನು ಸಾಧಿಸಿದಂತೆ ಆಯುಷ್ಯ, ಪ್ರಜಾ ಮುಂತಾದ ಸಕಲ ಫಲಗಳನ್ನು ನಿಸ್ಸಂಶಯವಾಗಿ ಹೊಂದುವನು.

೬೯. ನಿಯಮದಿಂದ ಕೂಡಿ ಶ್ರದ್ಧೆಯಿಂದ ಈ ಶ್ರಾದ್ಧಕಲ್ಪವನ್ನು ಪಠಿಸಿದ ದ್ವಿಜನು ಸಮಸ್ತತೀರ್ಥ, ದಾನಗಳ ಸಂಪೂರ್ಣ ಫಲಗಳನ್ನು ಹೊಂದುತ್ತಾನೆ.

೭೦. ಮತ್ತು ಅಂತಹ ನರನು ಪಂಕ್ತಿ ಪಾವನನೂ ಭೋಜನದಲ್ಲಿ ಅಗ್ರಾಸನಕ್ಕೆ ಅರ್ಹನೂ ಆಗುವನು. ಉತ್ತಮ ದ್ವಿಜರಿಗೆ ಈ ಶ್ರಾದ್ಧಕಲ್ಪವನ್ನು ಶ್ರವಣಮಾಡಿಸಿದವನು ಸಮಸ್ತ ಕಾಮಗಳನ್ನು ಹೊಂದುತ್ತಾನೆ.

೭೧. ಅಸೂಯಾ, ಕ್ರೋಧ, ಲೋಭ, ಮೋಹ ಮುಂತಾದ ನಿಖಿಲಮಾನಸ

**ತೀರ್ಥಾದೀನಾಂ ಫಲಂ ಪ್ರಾಪ್ಯ ದಾನಾದೀನಾಂ ಚ ಸರ್ವಶಃ ।**
**ಮೋಕ್ಷೋಪಾಯಂ ಲಭೇಚ್ಛ್ರೇಷ್ಠಂ ಸ್ವರ್ಗೋಪಾಯಂ ನ ಸಂಶಯಃ**
**ಇಹ ಚಾಪಿ ಪರಾ ಪುಷ್ಟಿಸ್ತಸ್ಮಾತ್ ಕುರ್ವೀತ ನಿತ್ಯಶಃ ॥ ೭೨ ॥**

**ಇಮಂ ವಿಧಿಂ ಯೋ ಹಿ ಪಠೇದತಂದ್ರಿತಃ**
**ಸಮಾಹಿತಃ ಸಂಸದಿ ಪರ್ವಸಂಧಿಷು ।**
**ಅಪತ್ಯಭಾಗೀ ಚ ಪರೇಣ ತೇಜಸಾ**
**ದಿವೌಕಸಾಂ ಸ ವ್ರಜತೇ ಸಲೋಕತಾಮ್ ॥ ೭೩ ॥**

**ಯೇನ ಪ್ರೋಕ್ತಸ್ತ್ವಯಂ ಕಲ್ಪೋ ನಮಸ್ತಸ್ಮೈ ಸ್ವಯಂಭುವೇ ।**
**ಮಹಾಯೋಗೇಶ್ವರೇಭ್ಯಶ್ಚ ಸದಾ ಚ ಪ್ರಣತೋಽಸ್ಮ್ಯಹಮ್ ॥ ೭೪ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕೋನವಿಂಶತಿತಮೋಽಧ್ಯಾಯಃ**

---

ದೋಷಗಳನ್ನು ಜಯಿಸಿ ಈ ಶ್ರಾದ್ಧಕಲ್ಪವನ್ನು ಪ್ರತಿದಿನವು ಶ್ರವಣಮಾಡುವುದು ಮತ್ತು ಅನ್ಯದ್ವಿಜರಿಗೆ ಶ್ರವಣಮಾಡಿಸುವುದು ಶ್ರೇಯಸ್ಕರವು.

೭೨. ಇದರಿಂದ ಸಮಸ್ತ ತೀರ್ಥಾಟನ ಫಲವು ದೊರೆಯುವುದು ; ಸಮಸ್ತ ದಾನಗಳ ಫಲವು ಸಂಭವಿಸುವುದು ; ಮತ್ತು ಈ ಸಾಧನದಿಂದ ಸ್ವರ್ಗವನ್ನು ಅನುಭವಿಸಿ ಅಂತದಲ್ಲಿ ಶ್ರೇಷ್ಠವಾದ ಮುಕ್ತಿಸಾಧನವನ್ನು ಹೊಂದುವನು. ಇಹಲೋಕದಲ್ಲಿ ಉತ್ತಮವಾದ ವೃದ್ಧಿಯುಂಟಾಗುವುದು, ಆದ್ದರಿಂದ ಇದರ ಶ್ರವಣಾದಿಗಳನ್ನು ಆಚರಿಸಬೇಕು.

೭೩. ಆಲಸ್ಯ ರಹಿತನಾಗಿಯೂ ಸಮಾಹಿತ ಚಿತ್ತನಾಗಿಯೂ ಇರುವ ಮಾನವನು ಪರ್ವಸಂಧಿ ಕಾಲದಲ್ಲಿ ಈ ವಿಧಿಯನ್ನು ಸಭೆಯಲ್ಲಿ ಪಠನ ಮಾಡಿ ಪ್ರಜೆಯನ್ನು ಹೊಂದಿ ಉತ್ತಮವಾದ ತೇಜಃ ಪುಂಜದಿಂದ ದೇವತಾ ಸಾಲೋಕ್ಯವನ್ನು ಹೊಂದುವನು.

೭೪. ಈ ಶ್ರಾದ್ಧಕಲ್ಪವನ್ನು ವಿಸ್ತಾರವಾಗಿ ಹೇಳಿದ ಸ್ವಯಂಭುವಾದ ಬ್ರಹ್ಮನಿಗೆ ನಮಸ್ಕಾರವು. ಮತ್ತು ನಾನು ಮಹಾಯೋಗೇಶ್ವರರಿಗೂ ಸರ್ವಕಾಲದಲ್ಲಿಯೂ ನಮಸ್ಕರಿಸುವೆನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

## ವಿಂಶತಿತಮೋಽಧ್ಯಾಯಃ

ಬೃಹಸ್ಪತಿರುವಾಚ :—

ಇತ್ಯೇತೇ ಪಿತರೋ ದೇವಾ ದೇವಾನಾಮಪಿ ದೇವತಾಃ ।
ಸಪ್ತಸ್ವೇತೇ ಸ್ಥಿತಾ ನಿತ್ಯಂ ಸ್ಥಾನೇಷು ಪಿತರೋಽವ್ಯಯಾಃ ॥ ೧ ॥

ಪ್ರಜಾಪತಿಸುತಾ ಹ್ಯೇತೇ ಸರ್ವೇಷಾಂ ತು ಮಹಾತ್ಮನಾಮ್ ।
ಆದ್ಯೋ ಗಣಸ್ತು ಯೋಗಾನಾಮನುಯೋಗವಿವರ್ಧನಃ ॥ ೨ ॥

ದ್ವಿತೀಯೋ ದೇವತಾನಾಂ ತು ತೃತೀಯೋ ದಾನವಾದಿನಾಮ್ ।
ಶೇಷಾಸ್ತು ವರ್ಣಿನಾಂ ಜ್ಞೇಯಾ ಇತಿ ಸರ್ವೇ ಪ್ರಕೀರ್ತಿತಾಃ ॥ ೩ ॥

ದೇವಾಶ್ಚೈತಾನ್ ಯಜಂತೇ ವೈ ಸರ್ವಜ್ಞಾನೇಷ್ವವಸ್ಥಿತಾನ್ ।
ಆಶ್ರಮಾಶ್ಚ ಯಜಂತ್ಯೇನಾಂಶ್ಚತ್ವಾರಸ್ತು ಯಥಾಕ್ರಮಮ್ ॥ ೪ ॥

---

೧. ಬೃಹಸ್ಪತಿಯು ಈ ರೀತಿಯಾಗಿ ಹೇಳಿದನು:—ಈ ರೀತಿಯಾಗಿ ಉಪದೇಶಿಸಲ್ಪಟ್ಟ ಪಿತೃಗಳು ದೇವತೆಗಳಿಗೂ ದೇವತಾ ಸ್ವರೂಪರಾಗಿರುವರು. ಶಾಶ್ವತರಾದ ಪಿತೃದೇವತೆಗಳು ಸಪ್ತಗಣಗಳಲ್ಲಿ ನಿತ್ಯವೂ ಇರುವರು.

೨. ಇವರೆಲ್ಲರೂ ಸಾಕ್ಷಾತ್ತಾಗಿ ಪ್ರಜಾಪತಿಯ ಪುತ್ರರಾಗಿರುವರು. ಈ ಎಲ್ಲ ಮಹಾತ್ಮರಲ್ಲಿ ಮೊದಲನೆಯ ಗಣವು ಯೋಗೇಶ್ವರರಿಗೆ ಪೂಜ್ಯವಾಗಿ ಯೋಗಕ್ಷೇಮಾದಿಗಳನ್ನು ವೃದ್ಧಿಪಡಿಸುವುದು.

೩. ದೇವತೆಗಳಿಗೆ ಎರಡನೆಯ ಗಣವೂ ದಾನವಾದಿಗಳಿಗೆ ಮೂರನೆಯ ಗಣವೂ ಚಾತುರ್ವರ್ಣ್ಯದ ಪಂಗಡಗಳಿಗೆ ಕ್ರಮವಾಗಿ ಮತ್ತೆ ನಾಲ್ಕು ಗಣಗಳೂ ಪೂಜ್ಯವೆಂದು ಕೀರ್ತಿಸಲ್ಪಟ್ಟಿವೆ.

೪. ಸಮಸ್ತ ಜ್ಞಾನದಿಂದ ಪರಿಪೂರ್ಣರಾದ ಈ ಪಿತೃಗಣಗಳನ್ನು ದೇವತೆಗಳು ಪೂಜಿಸುತ್ತಾರೆ. ಮತ್ತು ನಾಲ್ಕು ಆಶ್ರಮಿಗಳು ಯಥಾ ಕ್ರಮವಾಗಿ ಪಿತೃಗಣಗಳನ್ನು ಅರ್ಚಿಸುತ್ತಾರೆ.

ಸರ್ವೇ ವರ್ಣಾ ಯಜಂತ್ಯೇನಾಂಶ್ಚತ್ವಾರಸ್ತು ಯಥಾಗಮಮ್ ।
ತಥಾ ಸಂಕರಜಾತ್ಯಶ್ಚ ಮ್ಲೇಚ್ಛಾಶ್ಚಾಪಿ ಯಜಂತಿ ವೈ ॥ ೫ ॥

ಪಿತ್ರ್ಯಾಂಸ್ತು ಯೋ ಯಜೇದ್ಭಕ್ತ್ಯಾ ಪಿತರಃ ಪ್ರೀಣಯಂತಿ ತೇ ।
ಪಿತರಃ ಪುಷ್ಟಿಕಾಮಸ್ಯ ಪ್ರಜಾಕಾಮಸ್ಯ ವಾ ಪುನಃ ॥ ೬ ॥

ಪುಷ್ಟಿಂ ಪ್ರಜಾಂ ತು ಸ್ವರ್ಗಂ ಚ ಪ್ರಯಚ್ಛಂತಿ ಪಿತಾಮಹಾಃ ।
ದೇವಕಾರ್ಯಾದಪಿ ತಥಾ ಪಿತೃಕಾರ್ಯಂ ವಿಶಿಷ್ಯತೇ ॥ ೭ ॥

ದೇವತಾನಾಂ ಹಿ ಪಿತರಃ ಪೂರ್ವಮಾಪ್ಯಾಯನಂ ಸ್ಮೃತಾಃ ।
ನ ಹಿ ಯೋಗಗತಿಃ ಸೂಕ್ಷ್ಮಾ ಪಿತೄಣಾಂ ಜ್ಞಾಯತೇ ನರೈಃ ॥ ೮ ॥

ತಪಸಾ ಹಿ ಪ್ರಸಿದ್ಧೇನ ಕಿಂ ಪುನರ್ಮಾಂಸಚಕ್ಷುಷಾ ।
ಸರ್ವೇಷಾಂ ರಾಜತಂ ಪಾತ್ರಮಥವಾ ರಜತಾನ್ವಿತಮ್ ॥ ೯ ॥

---

೫. ಹಾಗೆಯೇ ವಿಧಿಯನ್ನು ಅನುಸರಿಸಿ ನಾಲ್ಕು ವರ್ಣಗಳೂ, ಸಂಕರ ಜಾತಿಯವರೂ ಮತ್ತು ಮ್ಲೇಚ್ಛ ಜಾತಿಯವರೂ ಕೂಡ ವಿವಿಧರೂಪದಿಂದ ಈ ಪಿತೃಗಣಗಳನ್ನು ಕ್ರಮವಾಗಿ ಪೂಜಿಸುತ್ತಾರೆ.

೬. ಭಕ್ತಿಯಿಂದ ಪಿತೃಗಳನ್ನು ಆರಾಧಿಸಿದವನಿಗೆ ಪಿತೃಗಳು ಪ್ರಸನ್ನರಾಗಿ ಪ್ರಜಾ-ಪುಷ್ಟಿ ಮುಂತಾದ ಫಲಗಳಿಂದ ಅವನ ಆಕಾಂಕ್ಷೆಯನ್ನು ಪೂರ್ತಿಗೊಳಿಸಿ ಸಂತೋಷಪಡಿಸುವರು.

೭. ಪಿತೃದೇವತೆಗಳು ಪ್ರಸನ್ನರಾಗಿ ಪುಷ್ಟಿ, ಪ್ರಜಾ, ಸ್ವರ್ಗ ಮುಂತಾದ ಫಲಗಳನ್ನು ಅರ್ಪಿಸುತ್ತಾರೆ. ದೇವಕಾರ್ಯಕ್ಕಿಂತಲೂ ಪಿತೃಕಾರ್ಯವು ವಿಶೇಷವಾಗಿ ಶ್ರೇಯಃಸಾಧನವು.

೮. ದೇವತೆಗಳಿಗೆ ಮೊದಲು ವೃದ್ಧಿಪ್ರದರಾಗಿ ಆಪ್ಯಾಯನ ಸ್ವರೂಪರಾಗಿ ಪಿತೃಗಳಿದ್ದರು ಎಂದು ಸ್ಮರಿಸಲ್ಪಟ್ಟಿವ. ಪಿತೃಗಳ ಸೂಕ್ಷ್ಮವಾದ ಯೋಗಾತ್ಮಕವಾದ ಗತಿಯು ಮಾನವರಿಂದ ತಿಳಿಯುವುದು ಸುಲಭವಲ್ಲ.

೯. ಪಿತೃದೇವರ ಗತಿವಿಶೇಷವನ್ನು ಪ್ರಸಿದ್ಧವಾದ ತಪಃಸಿದ್ಧಿಯಿಂದಲೂ ನೋಡುವುದು ದುರ್ಲಭವು. ಮಾಂಸಮಯ ದೃಷ್ಟಿಯಿಂದ ನೋಡಲಾದೀತೆ? ಸರ್ವ ಪಿತೃಗಳಿಗೆ ರಜತದ ಅಥವಾ ರಜತ ಸಂಬಂಧವುಳ್ಳ ಪಾತ್ರವು ಪ್ರೀತಿಕರವು.

ಪಾವನಂ ಹ್ಯುತ್ತಮಂ ಪ್ರೋಕ್ತಂ ದೇವಾನಾಂ ಪಿತೃಭಿಃ ಸಹ ।
ಯೇಷಾಂ ದಾಸ್ಯಂತಿ ಪಿಂಡಾಂಸ್ತ್ರೀನ್ ಬಾಂಧವಾ ನಾಮಗೋತ್ರತಃ
॥ ೧೦ ॥

ಭೂಮೌ ಕುಶೋತ್ತರಾಯಾಂ ಚ ಅಪಸವ್ಯವಿಧಾನತಃ ।
ಸರ್ವತ್ರ ವರ್ತಮಾನಾಸ್ತೇ ಪಿಂಡಾಃ ಪ್ರೀಣಂತಿ ವೈ ಪಿತೄನ್ ॥ ೧೧ ॥

ಯದಾಹಾರೋ ಭವೇಜ್ಜಂತುರಾಹಾರಃ ಸೋಽಸ್ಯ ಜಾಯತೇ ।
ಯಥಾ ಗೋಷ್ಠೇ ಪ್ರಣಷ್ಟಾಂ ವೈ ವತ್ಸೋ ವಿಂದತಿ ಮಾತರಮ್
॥ ೧೨ ॥

ತಥಾ ತಂ ನಯತೇ ಮಂತ್ರೋ ಜಂತುರ್ಯತ್ರಾವತಿಷ್ಠತಿ ।
ನಾಮ ಗೋತ್ರಂ ಚ ಮಂತ್ರಂ ಚ ದತ್ತಮನ್ನಂ ನಯಂತಿ ತಮ್
॥ ೧೩ ॥

ಅಪಿ ಯೋನಿಶತಂ ಪ್ರಾಪ್ತಾಸ್ತೃಪ್ತಿಸ್ತಾನನುಗಚ್ಛತಿ ।
ಏವ ಮೇಷಾ ಸ್ಥಿತಾ ಸತ್ತಾ ಬ್ರಹ್ಮಣಾ ಪರಮೇಷ್ಠಿನಾ ॥ ೧೪ ॥

---

೧೦. ಪಿತೃಗಳೊಂದಿಗೆ ದೇವತೆಗಳಿಗೂ ಕೂಡ ರಜತಪಾತ್ರವು ಪಾವನ ಮತ್ತು ಪ್ರೀತಿಕರವೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿದೆ. ಪಿತೃಗಳಿಗೆ ಬಾಂಧವರು ನಾಮ-ಗೋತ್ರಗಳನ್ನು ಉಚ್ಚರಿಸಿ ಮೂರು ಪಿಂಡಗಳನ್ನು ಪ್ರದಾನಮಾಡುವರು.

೧೧. ದರ್ಭಗಳನ್ನು ಹಾಸಿರುವ ಭೂಮಿಯಲ್ಲಿ ಅಪಸವ್ಯದಿಂದ ಪಿಂಡಗಳನ್ನು ಇರಿಸಬೇಕು. ಆ ಪಿಂಡಗಳು ಎಲ್ಲಕಡೆಗಳಲ್ಲಿ ಇರುವ ಪಿತೃಗಳನ್ನು ಹೊಂದಿ ತೃಪ್ತಿಪಡಿಸುವುವು.

೧೨. ಜಂತುವು ಜನ್ಮಾಂತರದಲ್ಲಿ ಯಾವ ಆಹಾರದಿಂದಿರುವುದೋ ಪಿಂಡಗಳು ಆ ಆಹಾರರೂಪವನ್ನುಹೊಂದಿ ಸೇರುವುವು. ಗೋಶಾಲೆಯಲ್ಲಿ ಅಗಲಿಹೋದ ತಾಯಿಯನ್ನು ಕರುವು ಹುಡುಕಿಕೊಂಡು ಹೋಗಿ ಸೇರುವುದಲ್ಲವೆ!

೧೩. ಹಾಗೆ ಪಿಂಡದಾನಕಾಲದಲ್ಲಿ ಉಚ್ಚರಿಸಿದ ನಾಮ-ಗೋತ್ರ ಮತ್ತು ಮಂತ್ರಗಳು ದತ್ತವಾದ ಪಿಂಡಾನ್ನವನ್ನು ಜಂತುವು ಇರುವಸ್ಥಳಕ್ಕೆ ಅವರ ಆಹಾರ ರೂಪದಿಂದ ತಲುಪಿಸುತ್ತದೆ.

೧೪. ನೂರಾರು ಜನ್ಮವನ್ನು ಹೊಂದಿದ್ದರೂ ಅಂತಹ ಜಂತುವನ್ನು ಪಿಂಡಾನ್ನವು ತೃಪ್ತಿಗೊಳಿಸುವುದು. ಈ ರೀತಿಯಾದ ಒಂದು ವ್ಯವಸ್ಥೆಯು ಪರಮಸ್ಥಾನದಲ್ಲಿರುವ ಬ್ರಹ್ಮನಿಂದ ಕಲ್ಪಿಸಲ್ಪಟ್ಟಿದೆ.

ಪಿತೄಣಾಮಾದಿಸರ್ಗೇ ತು ಲೋಕಾನಾಮಕ್ಷಯಾರ್ಥಿನಾಮ್ ।
ಇತ್ಯೇತೇ ಪಿತರಶ್ಚೈವ ಲೋಕಾ ದುಹಿತರಸ್ತಥಾ ॥ ೧೫ ॥

ದೌಹಿತ್ರಾ ಯಜಮಾನಾಶ್ಚ ಪ್ರೋಕ್ತಾಶ್ಚೈವ ಮಯಾನಘ ।
ಕೀರ್ತಿತಾಃ ಪಿತರಸ್ತೇ ವೈ ತವ ಪುತ್ರ್ಯ ಯಥಾಕ್ರಮಮ್ ॥ ೧೬ ॥

ಶಂಯುರುವಾಚ :—
ಅಹೋ ದಿವ್ಯಸ್ತ್ವಯಾ ತಾತ ಪಿತೃಸರ್ಗಸ್ತು ಕೀರ್ತಿತಃ ।
ಲೋಕಾ ದುಹಿತರಶ್ಚೈವ ದೌಹಿತ್ರಾಶ್ಚ ಶ್ರುತಾಸ್ತಥಾ ॥ ೧೭ ॥

ದಾನಾನಿ ಸಹ ಶೌಚೇನ ಕೀರ್ತಿತಾನಿ ಫಲಾನಿ ಚ ।
ಅಕ್ಷಯ್ಯತ್ವಂ ದ್ವಿಜಾಂಶ್ಚೈವ ಸರ್ವಮೇತದುದಾಹೃತಮ್ ।
ಅದ್ಯಪ್ರಭೃತಿ ಕರ್ತಾಸ್ಮಿ ಸರ್ವಮೇತದ್ಯಥಾತಥಮ್ ॥ ೧೮ ॥

ಬೃಹಸ್ಪತಿರುವಾಚ :—
ಇತ್ಯೇತದಂಗಿರಾಃ ಪೂರ್ವಮೃಷೀಣಾಮುಕ್ತವಾನ್ ಪ್ರಭುಃ ।
ಪೃಷ್ಟಶ್ಚ ಸಂಶಯಾನ್ ಸರ್ವಾನೃಷೀನಾಹ ನೃಸಂಸದಿ ॥ ೧೯ ॥

---

೧೫. ಅಕ್ಷಯ ಫಲಪ್ರಾಪ್ತಿಯನ್ನು ಆಕಾಂಕ್ಷಿಸುವವರಿಗೆ ಆದಿ ಸರ್ಗದಲ್ಲಿ ಆ ಫಲಪ್ರಾಪ್ತಿಗೋಸ್ಕರ ಈ ವ್ಯವಸ್ಥೆಯು ಕಲ್ಪಿತವಾಗಿರುವುದು. ಈ ರೀತಿಯಾಗಿ ಪಿತೃಗಳು, ಲೋಕಗಳು, ಮಾನಸ ಕನ್ಯೆಯರು— ಮುಂತಾದ ವಿಸ್ತಾರವು ಹೇಳಲ್ಪಟ್ಟಿತು.

೧೬. ನಿಷ್ಕಲಂಕನಾದ ಶಿಷ್ಯನೆ! ಹಾಗೆಯೇ ದೌಹಿತ್ರ, ಯಜಮಾನ ಮುಂತಾದ ಸಕಲ ಪರಿಕರಗಳೊಂದಿಗೆ ಪಿತೃಗಣವು ನನ್ನಿಂದ ಯಥಾಕ್ರಮವಾಗಿ ನಿನಗೆ ಕೀರ್ತಿಸಲ್ಪಟ್ಟಿರುವುದು.

೧೭. ಶಂಯು ಶಿಷ್ಯನು ಇಂತೆಂದನು :—ಗುರುವೆ! ದಿವ್ಯವಾದ ಪಿತೃಸರ್ಗವು ನಿನ್ನಿಂದ ಉಪದೇಶಿಸಲ್ಪಟ್ಟಿತು. ಅತ್ಯಾಶ್ಚರ್ಯವು! ಹಾಗೆ ಲೋಕ, ಕನ್ಯಾ, ದೌಹಿತ್ರ ಮುಂತಾದ ವಿಶೇಷಗಳು ಕೀರ್ತಿಸಲ್ಪಟ್ಟವು.

೧೮. ಹಾಗೆಯೇ ಶೌಚವಿಧಿಯಿಂದ ಕೂಡಿ ಸಮಸ್ತ ದಾನಪ್ರಕಾರಗಳು ವರ್ಣಿಸಲ್ಪಟ್ಟವು. ದ್ವಿಜರಿಗೆ ಇದೊಂದು ದೊಡ್ಡ ಅಕ್ಷಯ ಫಲಸಾಧನವು ಉದಾಹರಿಸಲ್ಪಟ್ಟಿದೆ. ಇಂದಿನಿಂದ ನಾನು ಯಥಾವತ್ತಾಗಿ ಇದೆಲ್ಲವನ್ನು ಆಚರಿಸುವೆನು.

೧೯. ಬೃಹಸ್ಪತಿಯು ಇಂತೆಂದನು:—ಇದೆಲ್ಲವನ್ನೂ ಪೂರ್ವದಲ್ಲಿ ಮುನಿಗಳಿಂದ ಪ್ರಶ್ನಿಸಲ್ಪಟ್ಟ ಪ್ರಭುವಾದ ಅಂಗಿರಮುನಿಯು ಅನೇಕ ಮುನಿಜನ ಸಭೆಯಲ್ಲಿ ಹೇಳಿ ಅವರ ಸಂಶಯವನ್ನು ಪರಿಹಾರಮಾಡಿರುವನು.

**ಸತ್ರೇ ತು ವಿತತೇ ಪೂರ್ವಂ ತಥಾ ವರ್ಷಸಹಸ್ರಕೇ ।**
**ಯಸ್ಮಿನ್ ಸದಸ್ಪತಿಃ ಸ್ನಾತೋ ಬ್ರಹ್ಮಾಸೀದ್ದೇವತಾಪ್ರಭುಃ ॥ ೨೦ ॥**

**ಗತಾನಿ ತತ್ರ ವರ್ಷಾಣಾಂ ಪಂಚಾಶಚ್ಚ ಶತಾನಿ ವೈ ।**
**ಶ್ಲೋಕಾಶ್ಚಾತ್ರ ಪುರಾ ಗೀತಾ ಋಷಿಭಿರ್ಬ್ರಹ್ಮವಾದಿಭಿಃ ॥ ೨೧ ॥**

**ದೀಕ್ಷಿತಸ್ಯ ಪುರಾ ಸತ್ರೇ ಬ್ರಹ್ಮಣಃ ಪರಮಾತ್ಮನಃ ।**
**ತತ್ರೈವ ದತ್ತಮನ್ನಾಗ್ರಂ ಪಿತೄಣಾಮಕ್ಷಯಾರ್ಥಿನಾಮ್ ।**
**ಲೋಕಾನಾಂ ಚ ಹಿತಾರ್ಥಾಯ ಬ್ರಹ್ಮಣಾ ಪರಮೇಷ್ಠಿನಾ ॥ ೨೨ ॥**

**ಸೂತ ಉವಾಚ :—**
**ಏವಂ ಬೃಹಸ್ಪತಿಃ ಪೂರ್ವಂ ಪೃಷ್ಟಃ ಪುತ್ರೇಣ ಧೀಮತಾ ।**
**ಪ್ರೋವಾಚ ಪಿತೃಸರ್ಗಂ ತು ಯಶ್ಚೈವ ಸಮುದಾಹೃತಃ ॥ ೨೩ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ವಿಂಶತಿತಮೋಽಧ್ಯಾಯಃ**

---

೨೦. ಪೂರ್ವದಲ್ಲಿ ಒಂದು ಸಹಸ್ರವರ್ಷ ದೀರ್ಘಕಾಲ ನಡೆದಿರುವ ವಿಸ್ತಾರವಾದ ಮಹಾ ಸತ್ರಯಾಗದಲ್ಲಿ ಈ ಪ್ರಸಂಗವು ನಡೆಯಿತು. ಆ ಸತ್ರದಲ್ಲಿ ದೇವೇಶ್ವರನಾದ ಬ್ರಹ್ಮನು ಸದಸ್ಸಿಗೆ ಪತಿಯಾಗಿದ್ದನು.

೨೧. ಈ ಪುರಾಣ ಕಥಾ ಪ್ರಸಂಗದಿಂದ ಐವತ್ತು-ನೂರು ಮುಂತಾದ ಅನೇಕ ಸಂಖ್ಯೆಯ ವರ್ಷಗಳು ಕಳೆದುಹೋದುವು. ಈ ವಿಷಯದಲ್ಲಿ ಬ್ರಹ್ಮವಾದಿಗಳಾದ ಮುನಿಗಳಿಂದ ಗಾಥಾರೂಪವಾದ ಶ್ಲೋಕಗಳು ರಚಿಸಲ್ಪಟ್ಟಿವೆ.

೨೨. ಪೂರ್ವದಲ್ಲಿ ದೀಕ್ಷಿತನಾದ, ಪರಮಾತ್ಮನಾದ ಬ್ರಹ್ಮನ ಆ ಸತ್ರಯಾಗದಲ್ಲಿ ಪರಮೇಷ್ಠಿಯಾದ ಬ್ರಹ್ಮದೇವನಿಂದ ಅಕ್ಷಯಾರ್ಥಿಗಳಾದ ಪಿತೃಗಳ ಹಿತಕ್ಕೋಸ್ಕರ ಮತ್ತು ಲೋಕಗಳ ಹಿತಕ್ಕೋಸ್ಕರ ಅಲ್ಲಿಯೇ ಅನ್ನ ಆದಿಯಾದ ವಸ್ತುವು ಕೊಡಲ್ಪಟ್ಟಿತು.

೨೩. ಸೂತಮುನಿಯು ಇಂತೆಂದನು :—ಈ ರೀತಿಯಾಗಿ ಜ್ಞಾನಿಯಾದ ಶಂಯು ಎಂಬ ಪುತ್ರನಿಂದ ಪ್ರಶ್ನಿಸಲ್ಪಟ್ಟ ಬೃಹಸ್ಪತಿಯು ಪೂರ್ವದಲ್ಲಿ ಇಲ್ಲ ಹಿಂದೆ ಹೇಳಿರುವಂತೆ ಪಿತೃಸರ್ಗವನ್ನು ಪ್ರವಚನಮಾಡಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತನೆಯ
ಅಧ್ಯಾಯವು ಮುಗಿದುದು.

# ಏಕವಿಂಶತಿತಮೋಽಧ್ಯಾಯಃ

ವಸಿಷ್ಠ ಉವಾಚ :—

ಇತ್ಥಂ ಪ್ರವರ್ತಮಾನಸ್ಯ ಜಮದಗ್ನೇರ್ಮಹಾತ್ಮನಃ ।
ವರ್ಷಾಣಿ ಕತಿಚಿದ್ರಾಜನ್ ವ್ಯತೀಯುರಮಿತೌಜಸಃ ॥ ೧ ॥

ರಾಮೋಽಪಿ ನೃಪಶಾರ್ದೂಲ ಸರ್ವಧರ್ಮಭೃತಾಂ ವರಃ ।
ವೇದವೇದಾಂಗತತ್ತ್ವಜ್ಞಃ ಸರ್ವಶಾಸ್ತ್ರವಿಶಾರದಃ ॥ ೨ ॥

ಪಿತ್ರೋಶ್ಚಕಾರ ಶುಶ್ರೂಷಾಂ ವಿನೀತಾತ್ಮಾ ಮಹಾಮತಿಃ ।
ಪ್ರೀತಿಂ ಚ ನಿಜಚೇಷ್ಟಾಭಿರನ್ವಹಂ ಪರ್ಯವರ್ತಯತ್ ॥ ೩ ॥

ಇತ್ಥಂ ಪ್ರವರ್ತಮಾನಸ್ಯ ವರ್ಷಾಣಿ ಕತಿಚಿನ್ನೃಪ ।
ಪಿತ್ರೋಃ ಶುಶ್ರೂಷಯಾನೈಷೀದ್ರಾಮೋ ಮತಿಮತಾಂ ವರಃ ॥ ೪ ॥

---

೧. ವಸಿಷ್ಠಮುನಿಯು ಈ ರೀತಿಯಾಗಿ ಹೇಳಿದನು:—ರಾಜನೆ! ಮಹಾ ಓಜಸ್ವಿಯೂ ಮಹಾತ್ಮನೂ ಆದ ಜಮದಗ್ನಿ ಮುನಿಯು ಈ ರೀತಿಯಾಗಿ ನಡೆದುಕೊಳ್ಳುತ್ತಿರಲಾಗಿ ಕೆಲವು ವರ್ಷಗಳು ಹಾಗೆಯೇ ಕಳೆದುವು.

೨. ರಾಜಶ್ರೇಷ್ಠನೆ! ಜಮದಗ್ನಿ ಪುತ್ರನಾದ ರಾಮನು ಧರ್ಮಾಚರಣ ತತ್ಪರರಲ್ಲಿ ಶ್ರೇಷ್ಠನೂ ವೇದ-ವೇದಾಂಗಗಳ ತತ್ತ್ವವನ್ನು ತಿಳಿದವನೂ ಮತ್ತು ಸಮಸ್ತ ಶಾಸ್ತ್ರಗಳಲ್ಲಿ ವಿಶಾರದನೂ ಆಗಿದ್ದನು.

೩. ಮಹಾಜ್ಞಾನಿಯೂ ವಿನಯವಂತನೂ ಆದ ರಾಮನು ಮಾತಾಪಿತೃಗಳ ಶುಶ್ರೂಷೆಯನ್ನು ಸಂತತವಾಗಿ ಮಾಡುತ್ತ ತನ್ನ ಅಸಾಧಾರಣ ಲೀಲೆಗಳಿಂದ ಪ್ರತಿದಿನವೂ ಪ್ರೀತಿಯನ್ನು ಬೆಳೆಸುತ್ತ ಬಂದನು.

೪. ರಾಜನೆ! ಹೀಗೆ ಕೆಲವು ವರ್ಷಗಳು ಹೀಗೆಯೇ ಕಳೆಯುತ್ತಿರಲಾಗಿ ಬುದ್ಧಿಶಾಲಿಗಳಲ್ಲಿ ಶ್ರೇಷ್ಠನಾದ ರಾಮನು ಮಾತಾಪಿತೃಗಳ ಶುಶ್ರೂಷೆಯಿಂದ ಆ ಕಾಲವನ್ನು ಕಳೆದನು.

ಸ ಕದಾಚಿನ್ಮಹಾತೇಜಾಃ ಪಿತಾಮಹಗೃಹಂ ಪ್ರತಿ ।
ಗಂತುಂ ವ್ಯವಸಿತೋ ರಾಜನ್ ದೈವೇನ ಚ ನಿಯೋಜಿತಃ ॥ ೫ ॥

ನಿಪೀಡ್ಯ ಶಿರಸಾ ಪಿತ್ರೋಶ್ಚರಣೌ ಭೃಗುಪುಂಗವಃ ।
ಉವಾಚ ಪ್ರಾಂಜಲಿರ್ಭೂತ್ವಾ ಸಪ್ರಶ್ರಯಮಿದಂ ವಚಃ ॥ ೬ ॥

ಕಂಚಿದರ್ಥಮಹಂ ತಾತ ಮಾತರಂ ತ್ವಾಂ ಚ ಸಾಂಪ್ರತಮ್ ।
ವಿಜ್ಞಾಪಯಿತುಮಿಚ್ಛಾಮಿ ಮಮ ತಚ್ಛ್ರೋತು ಮರ್ಹಥಃ ॥ ೭ ॥

ಪಿತಾಮಹಮಹಂ ದ್ರಷ್ಟುಮುತ್ಕಂಠಿತಮನಾಶ್ಚಿರಮ್ ।
ತಸ್ಮಾತ್ ತತ್ಪಾರ್ಶ್ವಮಧುನಾ ಗಮಿಷ್ಯೇ ವಾಮನುಜ್ಞಯಾ ॥ ೮ ॥

ಆಹೂತಶ್ಚಾಸಕೃತ್ತಾತ ಸೋತ್ಕಂಠಂ ಪ್ರೀಯಮಾಣಯಾ ।
ಪಿತಾಮಹ್ಯಾ ಬಹುಮುಖೈರಿಚ್ಛಂತ್ಯಾ ಮಮ ದರ್ಶನಮ್ ॥ ೯ ॥

---

೫. ರಾಜನೆ! ಮಹಾ ತೇಜಸ್ವಿಯಾದ ಆ ರಾಮನು ದೈವಬಲದಿಂದ ಪ್ರೇರೇಪಿಸಲ್ಪಟ್ಟವನಾಗಿ ತನ್ನ ತಾತನ ಮನೆಗೆ ಹೋಗಲು ಒಂದಾನೊಂದು ಸಮಯದಲ್ಲಿ ಯತ್ನಿಸಿದನು.

೬. ಭೃಗುವಂಶದವರಲ್ಲಿ ಶ್ರೇಷ್ಠನಾದ ರಾಮನು ಮಾತಾಪಿತೃಗಳ ಚರಣದಲ್ಲಿ ತನ್ನ ಶಿರವನ್ನಿಟ್ಟು ನಮಸ್ಕರಿಸಿ ಅಂಜಲಿ ಬದ್ಧನಾಗಿ ನಿಂತು ವಿನಯಪೂರ್ವಕವಾಗಿ ಈ ವಚನಗಳನ್ನು ಆಡಿದನು.

೭. ತಂದೆಯೆ! ನಾನು ಈಗ ನಿನ್ನಲ್ಲಿಯೂ ಜನನಿಯಲ್ಲಿಯೂ ಒಂದು ವಿಷಯವನ್ನು ಅರಿಕೆಮಾಡಲು ಇಷ್ಟವುಳ್ಳವನಾಗಿದ್ದೇನೆ. ನನ್ನ ಅರಿಕೆಯನ್ನು ನೀವು ಕೇಳಲು ಅರ್ಹರಾಗಿದ್ದೀರಿ.

೮. ನಾನು ನನ್ನ ತಾತನನ್ನು ನೋಡಲು ಬಹುಕಾಲದಿಂದ ಕುತೂಹಲಪಡುತ್ತಿರುವ ಚಿತ್ತವುಳ್ಳವನಾಗಿದ್ದೇನೆ. ಆದುದರಿಂದ ನಿಮ್ಮ ಅನುಜ್ಞೆಯನ್ನು ಸ್ವೀಕರಿಸಿ ಪಿತಾಮಹನ ಸಮೀಪಕ್ಕೆ ಈಗ ಹೋಗುವೆನು.

೯. ತಂದೆಯೆ! ನನ್ನನ್ನು ನೋಡಲು ಬಯಸುತ್ತಿರುವ ಪಿತಾಮಹಿಯಿಂದ ಅನೇಕ ಜನರ ಮೂಲಕವಾಗಿ ಕುತೂಹಲ ಮತ್ತು ಅತ್ಯಾದರಗಳಿಂದ ನಾನು ಕರೆಯಲ್ಪಟ್ಟಿರುವೆನು.

ಪಿತ್ರ್ಯಾನ್ ಪಿತಾಮಹಸ್ಯಾಪಿ ಪ್ರಿಯಮೇವ ಪ್ರದರ್ಶನಮ್ ।
ಮದೀಯಂ ತೇನ ತತ್ಪಾರ್ಶ್ವಂ ಗಂತುಂ ಮಾಮನುಜಾನತ ॥ ೧೦ ॥

ವಸಿಷ್ಠ ಉವಾಚ :—

ಇತಿ ತಸ್ಯ ವಚಃ ಶ್ರುತ್ವಾ ಸಂಭ್ರಾಂತಂ ಸಮುದೀರಿತಮ್ ।
ಹರ್ಷೇಣ ಮಹತಾ ಯುಕ್ತೌ ಸಾಶ್ರುನೇತ್ರೌ ಬಭೂವತುಃ ॥ ೧೧ ॥

ತಮಾಲಿಂಗ್ಯ ಮಹಾಭಾಗಂ ಮೂರ್ಧ್ನ್ಯಾಘ್ರಾಯ ಸಾದರಮ್ ।
ಅಭಿಸಂಧ್ಯಾಶಿಷಾ ತಾತ ಹ್ಯುಭೌ ತಾವಿದಮಾಹತುಃ ॥ ೧೨ ॥

ಪಿತಾಮಹಗೃಹಂ ತಾತ ಪ್ರಯಾಹಿ ತ್ವಂ ಯಥಾಸುಖಮ್ ।
ಪಿತಾಮಹಪಿತಾಮಹ್ಯೋಃ ಪ್ರೀತಯೇ ದರ್ಶನಾಯ ಚ ॥ ೧೩ ॥

ತತ್ರ ಗತ್ವಾ ಯಥಾನ್ಯಾಯಂ ತಂ ಶುಶ್ರೂಷಾಪರಾಯಣಃ ।
ಕಂಚಿತ್ಕಾಲಂ ತಯೋರ್ವತ್ಸ ಪ್ರೀತಯೇ ವಸ ತದ್ಗೃಹೇ ॥ ೧೪ ॥

---

೧೦. ನನಗೆ ಪಿತಾಮಹನ ತಂದೆ (ಮುತ್ತಾತ)ಯ ದರ್ಶನವು ಅತ್ಯಂತ ಪ್ರೀತಿಕರವಾಗಿದೆ. ಮುತ್ತಾತನಿಗೆ ನನ್ನ ದರ್ಶನವು ಇಷ್ಟವಾಗಿದೆ. ಆದುದರಿಂದ ಪ್ರಪಿತಾಮಹ ಸಮೀಪಕ್ಕೆ ಹೋಗಲು ನನಗೆ ಅನುಜ್ಞೆಯನ್ನು ಕೊಡಿರಿ.

೧೧. ವಸಿಷ್ಠಮುನಿಯು ಮುಂದುವರಿಸಿ ಈ ರೀತಿಯಾಗಿ ಹೇಳಿದನು :— ಸಂಭ್ರಮದಿಂದ ರಾಮನು ಹೇಳಿರುವ ಈ ವಚನವನ್ನು ಕೇಳಿ ಮಾತಾಪಿತೃಗಳು ಅತಿ ಸಂತೋಷಪಟ್ಟವರಾಗಿ ಕಣ್ಣುಗಳಲ್ಲಿ ಆನಂದಬಾಷ್ಪದಿಂದ ಪೂರ್ಣರಾದರು.

೧೨. ಆಗ ಮಾತಾಪಿತೃಗಳು ಮಹಾಭಾಗನಾದ ರಾಮನನ್ನು ಆಲಿಂಗಿಸಿ ಶಿರಸ್ಸಿನಲ್ಲಿ ಆಘ್ರಾಣಮಾಡಿ ಆದರಪೂರ್ವಕವಾಗಿ ಆಶೀರ್ವಚನಗಳಿಂದ ಅಭಿನಂದಿಸಿ ಪುತ್ರನನ್ನು ಕುರಿತು ಈ ಮಾತನ್ನು ಹೇಳಿದರು.

೧೩. ವತ್ಸನೆ! ನೀನು ಪಿತಾಮಹ-ಪಿತಾಮಹಿಯರ ದರ್ಶನಕ್ಕೋಸ್ಕರ ಮತ್ತು ಅವರಿಗೆ ಪ್ರೀತಿಯನ್ನುಂಟುಮಾಡುವುದಕ್ಕೋಸ್ಕರ ಸುಖವಾಗಿ ಪಿತಾಮಹ ಗೃಹಕ್ಕೆ ಪ್ರಯಾಣಮಾಡು.

೧೪. ವತ್ಸನೆ! ಅಲ್ಲಿಗೆ ಹೋಗಿ ನ್ಯಾಯಸಮ್ಮತವಾಗಿ ಅವರನ್ನು ಶುಶ್ರೂಷೆ ಮಾಡುತ್ತಾ ಕೆಲವು ಕಾಲ ಅವರಿಗೆ ಆನಂದವನ್ನು ಕೊಟ್ಟು ಅವರ ಮನೆಯಲ್ಲಿ ವಾಸಮಾಡು.

ಸ್ಥಿತ್ವಾ ನಾತಿಚಿರಂ ಕಾಲಂ ತಯೋರ್ಭರ್ೂಯೋಽಪ್ಯನುಜ್ಞಯಾ ।
ಅತ್ರಾಗಚ್ಛ ಮಹಾಭಾಗ ಕ್ಷೇಮೇಣಾಸ್ಮದ್ದಿದೃಕ್ಷಯಾ ॥ ೧೫ ॥

ಕ್ಷಣಾರ್ಧಮಪಿ ಶಕ್ತಾಃ ಸ್ಮೋ ನ ವಿನಾ ಪುತ್ರದರ್ಶನಮ್ ।
ತಸ್ಮಾತ್ ಪಿತಾಮಹಗೃಹೇ ನ ಚಿರಾತ್ ಸ್ಥಾತುಮರ್ಹಸಿ ॥ ೧೬ ॥

ತದಾಜ್ಞಯಾಥವಾ ಪುತ್ರ ಪ್ರಪಿತಾಮಹಸನ್ನಿಧಿಮ್ ।
ಗತೋಽಪಿ ಶೀಘ್ರಮಾಗಚ್ಛ ಕ್ರಮೇಣ ತದನುಜ್ಞಯಾ ॥ ೧೭ ॥

ವಸಿಷ್ಠ ಉವಾಚ :—

ಇತ್ಯುಕ್ತಸ್ತೌ ಪರಿಕ್ರಮ್ಯ ಪ್ರಣಮ್ಯ ಚ ಮಹಾಮತಿಃ ।
ಪಿತರಾವಪ್ಯನುಜ್ಞಾಪ್ಯ ಪಿತಾಮಹಗೃಹಂ ತತಃ ॥ ೧೮ ॥

ಸ ಗತ್ವಾ ಭೃಗುವರ್ಯಸ್ಯ ಋಚೀಕಸ್ಯ ಮಹಾತ್ಮನಃ ।
ಪ್ರವಿವೇಶಾಶ್ರಮಂ ರಾಮೋ ಮುನಿಶಿಷ್ಯೋಪಶೋಭಿತಮ್ ॥ ೧೯ ॥

---

೧೫. ಮಹಾ ಭಾಗ್ಯವಂತನೆ! ಅತಿ ಸ್ವಲ್ಪಕಾಲ ಮಾತ್ರ ಅಲ್ಲಿ ವಾಸಮಾಡಿ ಮತ್ತೆ ಅವರ ಅನುಜ್ಞೆಯನ್ನು ತೆಗೆದುಕೊಂಡು ನಮ್ಮನ್ನು ನೋಡುವ ಕುತೂಹಲದಿಂದ ಕ್ಷೇಮವಾಗಿ ಇಲ್ಲಿಗೆ ಹಿಂತಿರುಗಿ ಬಾ.

೧೬. ನಾವು ಪುತ್ರನನ್ನು ಸಂದರ್ಶಿಸದೇ ಅರ್ಧ ಕ್ಷಣವಾದರೂ ಇರಲಾರೆವು. ಆದುದರಿಂದ ಪಿತಾಮಹ ಗೃಹದಲ್ಲಿ ಚಿರಕಾಲ ನಮ್ಮನ್ನು ಬಿಟ್ಟು ವಾಸಮಾಡಲಾಗದು.

೧೭. ಪುತ್ರನೆ! ಒಂದುವೇಳೆ ಪಿತಾಮಹನ ಆಜ್ಞೆಯಂತೆ ಪ್ರಪಿತಾಮಹನ ಸನ್ನಿಧಿಗೆ ನೀನು ಹೋದರೂ ಕ್ರಮವಾಗಿ ಅವರ ಅಪ್ಪಣೆಯನ್ನು ಪಡೆದು ಅಲ್ಲಿಂದ ಶೀಘ್ರವಾಗಿ ಹಿಂತಿರುಗಿ ಬರಬೇಕು.

೧೮. ವಸಿಷ್ಠಮುನಿಯು ಮುಂದೆ ಇಂತೆಂದನು :—ಈ ರೀತಿಯಾಗಿ ಮಾತಾಪಿತೃಗಳಿಂದ ಆಜ್ಞಾಪಿಸಲ್ಪಟ್ಟ ಬುದ್ಧಿಶಾಲಿಯಾದ ರಾಮನು ಅವರನ್ನು ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡಿ ಅವರಿಂದ ಅನುಜ್ಞೆಪಡೆದು ಪಿತಾಮಹನ ಗೃಹಕ್ಕೆ ತೆರಳಿದನು.

೧೯. ರಾಮನು ಪ್ರಯಾಣಮಾಡಿ ಹೋಗಿ ಭೃಗುವಂಶಶ್ರೇಷ್ಠನೂ ಮಹಾತ್ಮನೂ ಆದ ಋಚೀಕಮುನಿಯ, ಮುನಿಶಿಷ್ಯರಿಂದ ಶೋಭಿಸಲ್ಪಟ್ಟಿರುವ ಆಶ್ರಮವನ್ನು ಪ್ರವೇಶಮಾಡಿದನು.

ಸ್ವಾಧ್ಯಾಯಘೋಷೈರ್ವಿಪುಲೈಃ ಸರ್ವತಃ ಪ್ರತಿನಾದಿತಮ್ ।
ಪ್ರಶಾಂತವೈರಸತ್ತ್ವಾಢ್ಯಂ ಸರ್ವಸತ್ತ್ವಮನೋಹರಮ್ ॥ ೨೦ ॥

ಸ ಪ್ರವಿಶ್ಯಾಶ್ರಮಂ ರಮ್ಯಮೃಚೀಕಂ ಸ್ಥಿತಮಾಸನೇ ।
ದದರ್ಶ ರಾಮೋ ರಾಜೇಂದ್ರ ಸ ಪಿತಾಮಹಮಗ್ರತಃ ॥ ೨೧ ॥

ಜಾಜ್ವಲ್ಯಮಾನಂ ತಪಸಾ ಧಿಷ್ಣ್ಯಸ್ಥಮಿವಪಾವಕಮ್ ।
ಉಪಾಸಿತಂ ಸತ್ಯವತ್ಯಾ ಯಥಾ ದಕ್ಷಿಣಯಾಧ್ವರಮ್ ॥ ೨೨ ॥

ಸ್ವಸಮೀಪಮುಪಾಯಾಂತಂ ರಾಮಮಾಲೋಕ್ಯ ತೌ ನೃಪ ।
ಸುಚಿರಂ ತಂ ವಿಮರ್ಶೇತಾಂ ಸಮಾಜ್ಞಾಪೂರ್ವದರ್ಶನೌ ॥ ೨೩ ॥

ಕೋಽಯಮೇಷ ತಪೋರಾಶಿಃ ಸರ್ವಲಕ್ಷಣಪೂಜಿತಃ ।
ಬಾಲೋಽಯಂ ಬಲವಾನ್ ಭಾತಿ ಗಾಂಭೀರ್ಯಾತ್ ಪ್ರಶ್ರಯೇಣ ಚ ॥ ೨೪ ॥

---

೨೦. ಆಗ ಆ ಆಶ್ರಮವು ವಿಪುಲವಾದ ವೇದಾಭ್ಯಾಸ ಘೋಷದಿಂದ ಎಲ್ಲ ಕಡೆಯಲ್ಲಿಯೂ ಪ್ರತಿಧ್ವನಿಗೈಯ್ಯುತ್ತಿದ್ದಿತು. ಮತ್ತು ಪರಸ್ಪರವೈರವನ್ನು ಬಿಟ್ಟ ಪ್ರಾಣಿಗಳಿಂದ ಕೂಡಿರುವುದೂ ಸರ್ವಪ್ರಾಣಿಗಳಿಂದ ಮನೋಹರವೂ ಆಗಿದ್ದಿತು.

೨೧. ರಾಜೇಂದ್ರನೇ! ಆ ರಾಮನು ರಮ್ಯವಾದ ಆಶ್ರಮವನ್ನು ಪ್ರವೇಶಿಸಿ ಮುಂದುಗಡೆ ಆಸನದಲ್ಲಿ ಕುಳಿತಿರುವ ಪಿತಾಮಹನಾದ ಋಚೀಕಮುನಿಯನ್ನು ಸಂದರ್ಶಿಸಿದನು.

೨೨. ಆಗ ಋಚೀಕಮುನಿಯು ಧಿಷ್ಣ್ಯಸ್ಥಾನದಲ್ಲಿರುವ ಅಗ್ನಿಯಂತೆ ತೇಜಸ್ಸಿನಿಂದ ಜಾಜ್ವಲ್ಯಮಾನನಾಗಿಯೂ ದಕ್ಷಿಣಾದೇವಿಯಿಂದ ಯಜ್ಞಮೂರ್ತಿಯು ಸೇವಿಸಲ್ಪಡುತ್ತಿರುವಂತೆ ಸತ್ಯವತೀ ದೇವಿಯಿಂದ ಸೇವಿಸಲ್ಪಡುವವನಾಗಿಯೂ ಇದ್ದನು.

೨೩. ರಾಜನೇ! ಆ ಪಿತಾಮಹ ಪಿತಾಮಹಿಯರಿಬ್ಬರು ತಮ್ಮ ಸಮೀಪಕ್ಕೆ ಬರುತ್ತಿದ್ದ ರಾಮನನ್ನು ನೋಡಿ ಅದೇ ಮೊದಲಾದ ರಾಮದರ್ಶನವುಳ್ಳವರಾದ್ದರಿಂದ ಬಹಳ ಹೊತ್ತು ವಿಚಾರಮಾಡಿದರು.

೨೪. ತಪಸ್ಸುಗಳ ರಾಶಿಸ್ವರೂಪನೂ ಸರ್ವ ಶುಭಲಕ್ಷಣಗಳಿಂದ ಕೂಡಿದವನೂ ಆದ ಇವನು ಯಾರು! ಇವನು ಬಾಲಕನಾದರೂ ಗಾಂಭೀರ್ಯ-ವಿನಯ ಗುಣಗಳಿಂದ ಬಹು ಬಲಿಷ್ಠನಾಗಿ ತೋರುವನು.

ಏವಂ ತಯೋಶ್ಚಿಂತಯತೋಃ ಸಹರ್ಷಂ ಹೃದಿ ಕೌತುಕಾತ್ ।
ಆಸಸಾದ ಶನೈ ರಾಮಃ ಸಮೀಪೇ ವಿನಯಾನ್ವಿತಃ ॥ ೨೫ ॥

ಸ್ವನಾಮಗೋತ್ರೇ ಮತಿಮಾನುಕ್ತ್ವಾ ಪಿತ್ರೋರ್ಮುದಾನ್ವಿತಃ ।
ಸಂಸ್ಪೃಶಂಶ್ಚರಣೌ ಮೂರ್ಧ್ನಾ ಹಸ್ತಾಭ್ಯಾಂ ಚಾಭ್ಯವಾದಯತ್ ॥೨೬॥

ತತಸ್ತೌ ಪ್ರೀತಮನಸೌ ಸಮುತ್ಥಾಪ್ಯ ಚ ಸತ್ತಮಮ್ ।
ಆಶೀರ್ಭಿರಭಿನಂದೇತಾಂ ಪೃಥಕ್ ಪೃಥಗುಭಾವಪಿ ॥ ೨೭ ॥

ತಮಾಶ್ಲಿಷ್ಯಾಂಕಮಾರೋಪ್ಯ ಹರ್ಷಾಶ್ರುಪ್ಲುತಲೋಚನೌ ।
ವೀಕ್ಷಂತೌ ತನ್ಮುಖಾಂಭೋಜಂ ಪರಂ ಹರ್ಷಮವಾಪತುಃ ॥ ೨೮ ॥

ತತಃ ಸುಖೋಪವಿಷ್ಟಂ ತಮಾತ್ಮವಂಶಸಮುದ್ವಹಮ್ ।
ಅನಾಮಯಮಪೃಚ್ಛೇತಾಂ ತಾವುಭೌ ದಂಪತೀ ತದಾ ॥ ೨೯ ॥

---

೨೫. ಈ ರೀತಿಯಾಗಿ ಮನಸ್ಸಿನಲ್ಲಿ ಕೌತುಕದಿಂದಲೂ ಆನಂದದಿಂದಲೂ ಅವರು ಚಿಂತಿಸುತ್ತಿರುವಷ್ಟರಲ್ಲಿ ರಾಮನು ವಿನಯಪೂರ್ಣನಾಗಿ ಮೆಲ್ಲಗೆ ಅವರ ಸಮೀಪಕ್ಕೆ ಬಂದನು.

೨೬. ಪ್ರಜ್ಞಾವಂತನಾದ ರಾಮನು ಸಂತೋಷದಿಂದ ಕೂಡಿ ತನ್ನ ನಾಮ-ಗೋತ್ರಗಳನ್ನು ಉಚ್ಚರಿಸಿ ತಂದೆತಾಯಿಗಳ ಪಾದಕಮಲಗಳನ್ನು ಶಿರಸ್ಸಿನಿಂದ ವಂದಿಸಿ ಹಸ್ತಗಳಿಂದ ಅಭಿವಾದನಮಾಡಿದನು.

೨೭. ಅನಂತರದಲ್ಲಿ ತಾಯಿತಂದೆಗಳು ಇಬ್ಬರು ಸುಪ್ರೀತವಾದ ಮಾನಸವುಳ್ಳವರಾಗಿ ಸಾಧುಶ್ರೇಷ್ಠನಾಗಿರುವ ರಾಮನನ್ನು ಮೇಲಕ್ಕೆ ಎಬ್ಬಿಸಿ ಬೇರೆ ಬೇರೆಯಾಗಿ ಆಶೀರ್ವಾದಗಳಿಂದ ಅಭಿನಂದಿಸಿದರು.

೨೮. ಆ ರಾಮನನ್ನು ಆಲಿಂಗಿಸಿಕೊಂಡು ತಮ್ಮ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಪುತ್ರವಾತ್ಸಲ್ಯದಿಂದ ಹುಟ್ಟಿದ ಆನಂದಾಶ್ರುವಿನಿಂದ ಪೂರ್ಣವಾದ ಕಣ್ಣುಗಳಿಂದ ಅವನ ಮುಖಕಮಲವನ್ನು ಸಂದರ್ಶಿಸುತ್ತ ಆನಂದದ ಎಲ್ಲೆಯನ್ನು ಮುಟ್ಟಿದರು.

೨೯. ಅನಂತರದಲ್ಲಿ ತಮ್ಮ ವಂಶವನ್ನು ಬೆಳಗುವ ಆ ರಾಮನು ಸುಖವಾಗಿ ಕುಳಿತುಕೊಂಡಿರುವ ಸಮಯದಲ್ಲಿ ಆ ದಂಪತಿಗಳಿಬ್ಬರು ಅವನನ್ನು ಕುರಿತು ಆರೋಗ್ಯವನ್ನು ಪ್ರಶ್ನಿಸಿದರು.

**ಪಿತರೌ ತೇ ಕುಶಲಿನೌ ವತ್ಸ ಕಿಂ ಭ್ರಾತರಸ್ತಥಾ ।**
**ಅನಾಯಾಸೇನ ತೇ ವೃತ್ತಿರ್ವರ್ತತೇ ಚಾಥ ಕರ್ಹಿಚಿತ್ ॥ ೩೦ ॥**

**ಸಮಸ್ತಾಭ್ಯಾಂ ತತೋ ರಾಜನ್ನಾಚಚಕ್ಷೇ ಯಥೋದಿತಃ ।**
**ತಥಾ ಸ್ವಾನುಗತಂ ಪಿತ್ರೋರ್ಭ್ರಾತೄಣಾಂ ಚೈವ ಚೇಷ್ಟಿತಮ್॥ ೩೧ ॥**

**ಏವಂ ತಯೋರ್ಮಹಾರಾಜ ಸತ್ಪ್ರೀತಿಜನಿತೈರ್ಗುಣೈಃ ।**
**ಪ್ರೀಯಮಾಣೋಽವಸದ್ರಾಮಃ ಪಿತುಃ ಪಿತ್ರೋರ್ನಿವೇಶನೇ ॥ ೩೨ ॥**

**ಸ ತಸ್ಮಿನ್ ಸರ್ವಭೂತಾನಾಂ ಮನೋನಯನನಂದನಃ ।**
**ಉವಾಸ ಕತಿಚಿನ್ಮಾಸಾಂಸ್ತಚ್ಛುಶ್ರೂಷಾಪರಾಯಣಃ ॥ ೩೩ ॥**

**ಅಥಾನುಜ್ಞಾಪ್ಯ ತೌ ರಾಜನ್ ಭೃಗುವರ್ಯೋ ಮಹಾಮನಾಃ ।**
**ಪಿತಾಮಹಗುರೋರ್ಗಂತುಮಿಯೇಷಾಶ್ರಯಮಾಶ್ರಮಮ್ ॥ ೩೪ ॥**

---

೩೦. ವತ್ಸನೆ! ನಿನ್ನ ತಾಯಿ ಮತ್ತು ತಂದೆಯು ಕ್ಷೇಮವಂತರಾಗಿರುವಷ್ಟೆ? ಹಾಗೆಯೇ ನಿನ್ನ ಸಹೋದರರಿಗೆ ಕ್ಷೇಮವೆ? ಯಾವುದಾದರೊಂದು ಬಗೆಯ ನಿನ್ನ ವೃತ್ತಿಯು ನಿನಗೆ ಅನಾಯಾಸಕರವಾಗಿದೆಯೆ?

೩೧. ರಾಜನೇ! ಅನಂತರದಲ್ಲಿ ಇಬ್ಬರಿಂದಲೂ ಈ ರೀತಿಯಾಗಿ ಪ್ರಶ್ನಿಸಲ್ಪಟ್ಟ ರಾಮನು ಕ್ರಮವಾಗಿ ತನ್ನ ಜನನೀಜನಕರ, ಸಹೋದರರ ಮತ್ತು ತನ್ನ ಕ್ಷೇಮವನ್ನೂ ಅನಾಯಾಸಕರವೃತ್ತಿಯನ್ನೂ ತಿಳಿಸಿದನು.

೩೨. ಮಹಾರಾಜನೇ! ಈ ರೀತಿಯಾಗಿ ಪಿತಾಮಹ-ಪಿತಾಮಹಿಯರಿಬ್ಬರ ಉತ್ತಮ ಪ್ರೀತಿಸಹಿತವಾದ ಗುಣಗಳಿಂದ ಸಂತೋಷಿಸುತ್ತ ರಾಮನು ಅವರ ಗೃಹದಲ್ಲಿ ವಾಸಮಾಡಿದನು.

೩೩. ರಾಮನು ಆ ಆಶ್ರಮದಲ್ಲಿ ಸರ್ವ ಪ್ರಾಣಿಗಳ ಮಾನಸ ಮತ್ತು ನೇತ್ರಗಳಿಗೆ ಆನಂದವನ್ನೀಯುತ್ತ ಆ ದಂಪತಿಗಳ ಶುಶ್ರೂಷೆಯನ್ನು ಆದರದಿಂದ ಮಾಡುತ್ತ ಕೆಲವು ಮಾಸಗಳವರೆಗೆ ಅಲ್ಲಿಯೇ ವಾಸಮಾಡಿದನು.

೩೪. ಭೂಪತಿಯೆ! ಅನಂತರದಲ್ಲಿ ಉದಾರವಾದ ಚಿತ್ತವುಳ್ಳ ಭೃಗುವಂಶ ತಿಲಕನಾದ ರಾಮನು ಅವರ ಅನುಜ್ಞೆಯನ್ನು ಪಡೆದು ಪಿತಾಮಹನ ಜನಕನು ವಾಸ ಮಾಡುವ ಆಶ್ರಮಕ್ಕೆ ಹೋಗಲು ಇಷ್ಟವುಳ್ಳವನಾದನು.

ಸ ತಾಭ್ಯಾಂ ಪ್ರೀತಿಯುಕ್ತಾಭ್ಯಾಮಾಶೀರ್ಭಿರಭಿನಂದಿತಃ ।
ಯಥಾ ಚಾಭ್ಯಾಂ ಪ್ರದಿಷ್ಟೇನ ಯಯಾವೌರ್ವಾಶ್ರಮಂ ಪ್ರತಿ ॥ ೩೫ ॥

ತಂ ನಮಸ್ಕೃತ್ಯ ವಿಧಿವಚ್ಚ್ಯವನಂ ಚ ಮಹಾತಪಾಃ ।
ಸಪ್ರಹರ್ಷಂ ತದಾಜ್ಞಾತಃ ಪ್ರಯಯಾವಾಶ್ರಮಂ ಭೃಗೋಃ ॥ ೩೬ ॥

ಸ ಗತ್ವಾ ಮುನಿಮುಖ್ಯಸ್ಯ ಭೃಗೋರಾಶ್ರಮಮಂಡಲಮ್ ।
ದದರ್ಶ ಶಾಂತಚೇತೋಭಿರ್ಮುನಿಭಿಃ ಸರ್ವತೋ ವೃತಮ್ ॥ ೩೭ ॥

ಸುಸ್ನಿಗ್ಧಶೀತಲಚ್ಛಾಯೈಃ ಸರ್ವರ್ತುಕಗುಣಾನ್ವಿತೈಃ ।
ತರುಭಿಃ ಸಂವೃತಂ ಪ್ರೀತಃ ಫಲಪುಷ್ಪೋತ್ತರಾನ್ವಿತೈಃ ॥ ೩೮ ॥

ನಾನಾಖಗಕುಲಾರಾವೈರ್ಮನಃಶ್ರೋತ್ರಸುಖಾವಹೈಃ ।
ಬ್ರಹ್ಮಘೋಷೈಶ್ಚ ವಿವಿಧೈಃ ಸರ್ವತಃ ಪ್ರತಿನಾದಿತಮ್ ॥ ೩೯ ॥

---

೩೫. ಆಗ ಪ್ರೇಮಪರಿಪೂರ್ಣರಾದ ಅವರಿಬ್ಬರಿಂದ ಅನೇಕಾಶೀರ್ವಾದಗಳಿಂದ ಅಭಿನಂದಿಸಲ್ಪಟ್ಟ ಕುಮಾರನಾದ ರಾಮನು ಅವರಿಂದ ಉಪದಿಷ್ಟಮಾರ್ಗವನ್ನು ಅವಲಂಬಿಸಿ ಔರ್ವ ಮುನಿಯ ಆಶ್ರಮಕ್ಕೆ ಹೋದನು.

೩೬. ಮಹಾತಪಸ್ವಿಯಾದ ರಾಮನು ಅಲ್ಲಿರುವ ಚ್ಯವನಮುನಿಯನ್ನು ಯಥಾ ವಿಧಿಯಾಗಿ ಪ್ರಣಾಮಮಾಡಿ ಹರ್ಷದಿಂದ ಆ ಮುನಿಯಿಂದ ಆದಿಷ್ಟನಾಗಿ ಭೃಗು ಮುನಿಯ ಆಶ್ರಮಕ್ಕೆ ತೆರಳಿದನು.

೩೭. ಹಾಗೆಯೇ ಪ್ರಯಾಣಮಾಡಿ ಬಂದ ರಾಮನು ಶಾಂತವಾದ ಮನೋ ವೃತ್ತಿಯುಳ್ಳ ಮುನಿಗಳಿಂದ ತುಂಬಿರುವ ಮಹರ್ಷಿಶ್ರೇಷ್ಠನಾದ ಭೃಗುಮುನಿಯ ಆಶ್ರಮಭೂಮಿಯನ್ನು ಕಂಡನು.

೩೮. ಅಲ್ಲಿ ರಾಮನು ನಿಬಿಡವೂ ಶೀತಲವೂ ಆದ ಛಾಯೆಯಿಂದಲೂ ಸರ್ವ ಋತು ಸಾಧಾರಣವಾದ ಗುಣಗಳಿಂದಲೂ, ಮತ್ತು ಅನೇಕ ಫಲ-ಪುಷ್ಪಸಮೃದ್ಧಿ ಯಿಂದಲೂ ಶೋಭಿಸುವ ವೃಕ್ಷಗಳಿಂದ ತುಂಬಿದ ಆ ಆಶ್ರಮ ದರ್ಶನವನ್ನು ಪ್ರೀತಿಸಿ ದನು.

೩೯. ಆಶ್ರಮವು ಮನಸ್ಸು ಮತ್ತು ಕಿವಿಗಳಿಗೆ ಸುಖವನ್ನು ಉಂಟುಮಾಡುವ ಅನೇಕ ಬಗೆಯ ಪಕ್ಷಿಗಳ ಧ್ವನಿಗಳಿಂದಲೂ ವಿವಿಧವಾದ ವೇದಘೋಷಗಳಿಂದಲೂ ಸುತ್ತಲೂ ಪ್ರತಿಧ್ವನಿಗೈಯ್ಯುತ್ತಲಿತ್ತು.

ಸಮಂತ್ರಾಹುತಿಹೋಮೋತ್ಥಧೂಮಗಂಧೇನ ಸರ್ವತಃ ।
ನಿರಸ್ತನಿಖಿಲಾಘೌಘಂ ವನಾಂತರವಿಸರ್ಪಿಣಾ ॥ ೪೦ ॥

ಸಮಿತ್ಕುಶಾಹರೈರ್ದಂಡಮೇಖಲಾಜಿನಮಂಡಿತೈಃ ।
ಅಭಿತಃ ಶೋಭಿತಂ ರಾಜನ್ ರಮ್ಯೈರ್ಮುನಿಕುಮಾರಕೈಃ ॥ ೪೧ ॥

ಪ್ರಸೂನಜಲಸಂಪೂರ್ಣಪಾತ್ರಹಸ್ತಾಭಿರಂತರಾ ।
ಶೋಭಿತಂ ಮುನಿಕನ್ಯಾಭಿಶ್ಚರಂತೀಭಿರಿತಸ್ತತಃ ॥ ೪೨ ॥

ಸಪೋತಹರಿಣೀಯೂಥೈರ್ವಿಸ್ರಂಭಾದವಿಶಂಕಿಭಿಃ ।
ಉಟಜಾಂಗಣಪರ್ಯಂತತರುಚ್ಛಾಯಾಸ್ವಧಿಷ್ಠಿತಮ್ ॥ ೪೩ ॥

ರೋಮಂಥತಃ ಪರಾಮೃಷ್ಟಿಯೂಥಸಾಕ್ಷಿಕಮುತ್ಪ್ರದೈಃ ।
ಪ್ರಾರಬ್ಧತಾಂಡವಂ ಕೇಕೀಮಯೂರೈರ್ಮಧುರಸ್ವರೈಃ ॥ ೪೪ ॥

---

೪೦. ಮತ್ತು ವನಭೂಮಿಯನ್ನು ವ್ಯಾಪಿಸುವ, ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಕೊಟ್ಟ ಆಹುತಿ ಹೋಮದಿಂದುಂಟಾದ ಧೂಮಗಂಧದಿಂದ ಎಲ್ಲ ಕಡೆಯಲ್ಲಿಯೂ ಸಮಸ್ತ ಪಾಪಪುಂಜವನ್ನು ದೂರಮಾಡಿ ಪಾವನ ಮಾಡುತ್ತಲಿತ್ತು

೪೧. ರಾಜನೆ! ಸಮಿತ್ತು, ದರ್ಭೆಗಳನ್ನು ತರುತ್ತಲಿದ್ದ, ದಂಡ-ಮೇಖಲಾ-ಅಜಿನಗಳಿಂದ ಅಲಂಕರಿಸಲ್ಪಟ್ಟ, ಮತ್ತು ರಮ್ಯರಾದ ಮುನಿಕುಮಾರರಿಂದ ಎರಡು ಪಾರ್ಶ್ವಗಳಲ್ಲಿಯೂ ಶೋಭಿಸಲ್ಪಟ್ಟಿತ್ತು.

೪೨. ಕೆಲವರು ಪುಷ್ಪಪೂರ್ಣಪಾತ್ರಗಳನ್ನೂ ಮತ್ತೆ ಕೆಲವರು ಜಲಪೂರ್ಣ ಪಾತ್ರಗಳನ್ನೂ ಪಾಣಿಯಲ್ಲಿ ಧರಿಸಿ ಇಲ್ಲಿಂದಲ್ಲಿಗೆ ಸಂಚರಿಸುತ್ತಲಿದ್ದ ಮುನಿಕನ್ಯೆಯರಿಂದ ಒಂದು ಕಡೆ ಆ ಆಶ್ರಮವು ಶೋಭಿತವಾಗಿತ್ತು.

೪೩. ಮತ್ತು ಮರಿಗಳಿಂದ ಕೂಡಿದ ಜಿಂಕೆಗಳ ಸಮೂಹವು ವಿಶ್ವಾಸದಿಂದ ಸ್ವಲ್ಪವೂ ಶಂಕಿಸದೆ ಆಶ್ರಮದ ಬಳಿ ಇರುವ ಅಂಗಣದ ವೃಕ್ಷಛಾಯೆಯಲ್ಲಿ ಮಲಗಿಕೊಂಡು ಆಶ್ರಮವನ್ನು ಮಂಡಿಸುತ್ತಿತ್ತು.

೪೪. ಪಾಣಿತಲದಿಂದ ಸ್ಪರ್ಶಿಸುವಾಗ ಅತಿಶಯವಾದ ಸ್ಪರ್ಶಸೌಖ್ಯವನ್ನುಂಟು ಮಾಡುತ್ತ ಮೆಲುಕುಹಾಕುತ್ತಿರುವ ಮೃಗಗಳಿಂದಲೂ ಮಧುರಧ್ವನಿಯನ್ನು ಮಾಡುವ ನವಿಲುಗಳು ಉಪಕ್ರಮಿಸಿದ ನರ್ತನದಿಂದಲೂ ಆಶ್ರಮವು ರಮಣೀಯವಾಗಿತ್ತು.

ಪ್ರವಿಕೀರ್ಣಕಣೋದ್ದೇಶಂ ಮೃಗಶಬ್ದೈಃ ಸಮೀಪಗೈಃ ।
ಅನಾಲೀಢಾತಪಚ್ಛಾಯಾಶುಷ್ಯನ್ನೀವಾರರಾಶಿಭಿಃ ॥ ೪೫ ॥

ಹೂಯಮಾನಾನಲಂ ಕಾಲೇ ಪೂಜ್ಯಮಾನಾತಿಥಿವ್ರಜಮ್ ।
ಅಭ್ಯಸ್ಯಮಾನಚ್ಛಂದೌಘಂ ಚಿಂತ್ಯಮಾನಾಗಮೋದಿತಮ್ ॥ ೪೬ ॥

ಪಠ್ಯಮಾನಾಖಿಲಸ್ಮಾರ್ತಂ ಶ್ರೌತಾರ್ಥಪ್ರವಿಚಾರಣಮ್ ।
ಪ್ರಾರಬ್ಧಪಿತೃದೇವೇಜ್ಯಂ ಸರ್ವಭೂತಮನೋಹರಮ್ ॥ ೪೭ ॥

ತಪಸ್ವಿಜನಭೂಯಿಷ್ಠಮುಕಾಪುರುಷಸೇವಿತಮ್ ।
ತಪೋವೃದ್ಧಿಕರಂ ಪುಣ್ಯಂ ಸರ್ವಸತ್ತ್ವಸುಖಾಸ್ಪದಮ್ ॥ ೪೮ ॥

ತಪೋಧನಾನಂದಕರಂ ಬ್ರಹ್ಮಲೋಕಮಿವಾಪರಮ್ ।
ಪ್ರಸೂನಸೌರಭಭ್ರಾಮ್ಯನ್ಮಧುಪಾರಾವನಾದಿತಮ್ ॥ ೪೯ ॥

---

೪೫. ಮತ್ತು ರಕ್ಷಕರ ಶಬ್ದಕ್ಕೆ ಬೆದರಿ ಸಮೀಪವಿದ್ದ ಮೃಗಗಳಿಂದ ತಿನ್ನಲ್ಪಡದೆ ಬಿಸಲಿನಲ್ಲಿ ಒಣಗಿಸಲು ಇಟ್ಟಿರುವ ನೀವಾರಧಾನ್ಯರಾಶಿಯ ಕಣಗಳಿಂದ ವ್ಯಾಪ್ತವಾದ ಪ್ರದೇಶವುಳ್ಳದ್ದಾಗಿತ್ತು.

೪೬. ಮತ್ತು ಆ ಆಶ್ರಮದಲ್ಲಿ ಸಕಾಲದಲ್ಲಿ ಅಗ್ನಿಯಲ್ಲಿ ಹೋಮ ಕರ್ಮಗಳೂ, ಅತಿಥಿ ವೃಂದಕ್ಕೆ ಯಥಾವಿಧಿಯಾದ ಸತ್ಕಾರವೂ, ಶಿಷ್ಯ ವೃಂದದ ವೇದಾಭ್ಯಾಸಗಳೂ ಮತ್ತು ಉಜ್ವಲವಾದ ಆಗಮಾರ್ಥ ವಿಚಾರಗಳೂ ನಡೆಯುತ್ತಿದ್ದುವು.

೪೭. ಮತ್ತು ಅಖಿಲ ಸ್ಮಾರ್ತ ಪ್ರಯೋಗಪಠನ, ಶ್ರೌತವಿಧಾನಾರ್ಥವಿಚಾರ, ಪಿತೃ-ದೇವತಾ ಸಮಾರಾಧನೆಗಳ ಉಪಕ್ರಮ-ಇವುಗಳಿಂದ ಆಶ್ರಮವು ಸರ್ವ ಪ್ರಾಣಿಗಳಿಗೆ ಮನೋಹರವಾಗಿತ್ತು.

೪೮. ಮಹೋದಾತ್ತರಾದ ಅನೇಕ ಮಂದಿ ತಪಸ್ವಿ ಜನರಿಂದ ಸೇವಿಸಲ್ಪಟ್ಟದ್ದಾಗಿಯೂ, ತಪೋವೃದ್ಧಿಯನ್ನು ಉಂಟುಮಾಡುವುದಾಗಿಯೂ, ಸರ್ವ ಪ್ರಾಣಿಗಳಿಗೆ ಆನಂದದಾಯಕವಾಗಿಯೂ, ಮತ್ತು ಪವಿತ್ರವಾಗಿಯೂ ಇತ್ತು.

೪೯. ಮತ್ತೊಂದು ಬ್ರಹ್ಮಲೋಕವೋ ಎಂಬಂತೆ ತಪೋಧನರಿಗೆ ಪರಮಾನಂದವನ್ನು ಉಂಟು ಮಾಡುತ್ತಲಿತ್ತು; ಹಾಗು ಪುಷ್ಪಗಳ ಸುವಾಸನೆಯಿಂದ ಸುತ್ತುತ್ತಲಿರುವ ದುಂಬಿಗಳ ಝೇಂಕಾರದಿಂದ ರಮ್ಯವಾಗಿತ್ತು.

ಸರ್ವತೋ ವೀಜ್ಯಮಾನೇನ ವಿವಿಧೇನ ನಭಸ್ವತಾ ।
ಏವಂವಿಧಗುಣೋಪೇತಂ ಪಶ್ಯನ್ನಾಶ್ರಮಮುತ್ತಮಮ್ ॥ ೫೦ ॥

ಪ್ರವಿವೇಶ ವಿನೀತಾತ್ಮಾ ಸುಕೃತೀವಾಮರಾಲಯಮ್ ।
ಸಂಪ್ರವಿಶ್ಯಾಶ್ರಮೋಪಾಂತಂ ರಾಮಃ ಸ್ವಪ್ರಪಿತಾಮಹಮ್ ॥ ೫೧ ॥

ದದರ್ಶ ಪರಿತೋ ರಾಜನ್ ಮುನಿಶಿಷ್ಯಶತಾವೃತಮ್ ।
ವ್ಯಾಖ್ಯಾನವೇದಿಕಾಮಧ್ಯೇ ನಿವಿಷ್ಟಂ ಕುಶವಿಷ್ಟರೇ ।
ಸಿತಶ್ಮಶ್ರುಜಟಾಕೂರ್ಚಬ್ರಹ್ಮಸೂತ್ರೋಪಶೋಭಿತಮ್ ॥ ೫೨ ॥

ವಾಮೇತರೋರುಮಧ್ಯಾಸ್ತವಾಮಜಂಘೇನ ಜಾನುನಾ ॥ ೫೩ ॥

ಯೋಗಪಟ್ಟೇನ ಸಂವೀತಸ್ವದೇಹಮೃಷಿಪುಂಗವಮ್ ।
ವ್ಯಾಖ್ಯಾನಮುದ್ರಾವಿಲಸತ್ಸವ್ಯಪಾಣಿತಲಾಂಬುಜಮ್ ॥ ೫೪ ॥

---

೫೦. ಮತ್ತು ವಿವಿಧ ಸೌಗಂಧ್ಯಾದಿಗುಣಗಳಿಂದ ಕೂಡಿದ ಗಾಳಿಯು ಸುತ್ತಲೂ ಬೀಸುತ್ತಲಿತ್ತು; ಹೀಗೆ ನಾನಾವಿಧ ಗುಣಗಳಿಂದ ಕೂಡಿದ ಉತ್ತಮವಾದ ಆಶ್ರಮವನ್ನು ರಾಮನು ನೋಡಿದನು.

೫೧. ಸುಕೃತವಂತನು ಸ್ವರ್ಗವನ್ನು ಪ್ರವೇಶಿಸಿದಂತೆ ವಿನಯದಿಂದ ಶೋಭಿಸುವ ಪ್ರಸನ್ನಚಿತ್ತವುಳ್ಳ ರಾಮನು ಅಂತಹ ಆಶ್ರಮಭೂಮಿಯನ್ನು ಪ್ರವೇಶಮಾಡಿ ತನ್ನ ಪ್ರಪಿತಾಮಹನನ್ನು ಕಂಡನು.

೫೨. ರಾಜನೆ ! ನೂರಾರು ಶಿಷ್ಯ ಮಂಡಲಿಯಿಂದ ಸುತ್ತುವರಿಯಲ್ಪಟ್ಟು ವ್ಯಾಖ್ಯಾನ ವೇದಿಕೆಯ ಮಧ್ಯದಲ್ಲಿ ಹಾಸಿರುವ ದರ್ಭಾಸನದಲ್ಲಿ ಕುಳಿತುಕೊಂಡಿರುವ, ಭೃಗುಮುನಿಯು ಬೆಳ್ಳಗಿರುವ ಮೀಸೆ, ಜಟೆ, ಹುಬ್ಬುಗಳ ನಡು, ಮತ್ತು ಬ್ರಹ್ಮಸೂತ್ರಗಳಿಂದ ಅಲಂಕರಿಸಲ್ಪಟ್ಟಿದ್ದನು.

೫೩. ಬಲಭಾಗದ ತೊಡೆಯ ಮಧ್ಯದಲ್ಲಿ ಎಡಭಾಗದ ಜಂಘಾ-ಜಾನುಗಳನ್ನು ಇರಿಸಿ ಅದೊಂದು ಬಗೆಯ ಆಸನದಲ್ಲಿ ಕುಳಿಕೊಂಡಿದ್ದನು.

೫೪. ಮತ್ತು ಆ ಋಷಿ ಪುಂಗವನು ಯೋಗಪಟ್ಟದಿಂದ ತನ್ನ ದೇಹವನ್ನು ಸಂಪೂರ್ಣವಾಗಿ ಸುತ್ತಿಕೊಂಡವನಾಗಿಯೂ ಕಮಲದಂತಿರುವ ತನ್ನ ವಾಮಪಾಣಿತಲದಿಂದ ವ್ಯಾಖ್ಯಾನಮುದ್ರೆಯನ್ನು ಧರಿಸಿದವನಾಗಿಯೂ ರಾಜಿಸುತ್ತಿದ್ದನು.

**ಯೋಗಪಟ್ಟೋಽಪರಿನ್ಯಸ್ತವಿಭ್ರಾಜದ್ವಾಮಪಾಣಿಕಮ್ ।**
**ಸಮ್ಯಗಾರಣ್ಯವಾಕ್ಯಾನಾಂ ಸೂಕ್ಷ್ಮತತ್ತ್ವಾರ್ಥಸಂಹತಿಮ್ ॥ ೫೫ ॥**

**ವಿವೃತ್ಯ ಮುನಿಮುಖ್ಯೇಭ್ಯಃ ಶ್ರಾವಯಂತಂ ತಪೋನಿಧಿಮ್ ।**
**ಪಿತುಃ ಪಿತಾಮಹಂ ದೃಷ್ಟ್ವಾ ರಾಮಸ್ತಸ್ಯ ಮಹಾತ್ಮನಃ ॥ ೫೬ ॥**

**ಶನೈರಿವ ಮಹಾರಾಜ ಸಮೀಪಂ ಸಮುಪಾಗಮತ್ ।**
**ತಮಾಗತಮುಪಾಲಕ್ಷ್ಯ ತತ್ಪ್ರಭಾವಪ್ರಧರ್ಷಿತಾಃ ॥ ೫೭ ॥**

**ಶಂಕಾಮವಾಪುರ್ಮುನಯೋ ದೂರಾದೇವಾಖಿಲಾ ನೃಪ ।**
**ತಾವದ್ಭೃಗುರಮೇಯಾತ್ಮಾ ತದಾಗಮನತೋಷಿತಃ ॥ ೫೮ ॥**

**ನಿವೃತ್ತಾನ್ಯಕಥಾಲಾಪಸ್ತಂ ಪಶ್ಯನ್ನಾಸ ಪಾರ್ಥಿವ ।**
**ರಾಮೋಽಪಿ ತಮುಪಾಗಮ್ಯ ವಿನಯಾವನತಾನನಃ ।**
**ಅವಂದತ ಯಥಾನ್ಯಾಯಮುಪೇಂದ್ರ ಇವ ವೇಧಸಮ್ ॥ ೫೯ ॥**

---

೫೫. ಯೋಗಪಟ್ಟದ ಮೇಲುಭಾಗದಲ್ಲಿ ಇರಿಸಿ ಅಲಂಕರಿಸುತ್ತಿರುವ ವಾಮಪಾಣಿಯುಳ್ಳವನಾಗಿಯೂ ಆರಣ್ಯಕ ವಾಕ್ಯಗಳ ಸೂಕ್ಷ್ಮ ತತ್ತ್ವಾರ್ಥಗಳನ್ನು ಸ್ಪಷ್ಟವಾಗಿ ವಿವರಿಸುವನಾಗಿಯೂ ಇದ್ದನು.

೫೬. ಶ್ರೇಷ್ಠರಾದ ಮುನಿಗಳ ಸಂಘಕ್ಕೆ ಆರಣ್ಯಕ ವಾಕ್ಯಾರ್ಥವನ್ನು ವಿವರಿಸಿ ಉಪದೇಶಿಸುತ್ತಲಿದ್ದ, ತಪೋನಿಧಿಯಾದ ಮತ್ತು ಮಹಾತ್ಮನಾದ ತನ್ನ ತಂದೆಯ ತಾತನನ್ನು ರಾಮನು ಸಂದರ್ಶಿಸಿದನು.

೫೭. ಮಹಾರಾಜನೆ! ಹಾಗೆಯೆ ಮೆಲ್ಲಗೆ ರಾಮನು ಆ ಮುನಿಯ ಸಮೀಪಕ್ಕೆ ಹೋದನು. ಆಗ ಬಂದಿರುವ ರಾಮನನ್ನು ನೋಡಿದ ಮುನಿಗಳು ರಾಮನ ಪ್ರಭಾವಕ್ಕೆ ದಿಗ್ಭ್ರಮೆಗೊಂಡರು.

೫೮. ರಾಜನೆ! ಸಮಸ್ತ ಮುನಿಗಳು ದೂರದಿಂದಲೆ ರಾಮನ ವಿಷಯದಲ್ಲಿ ಸಂದೇಹಗ್ರಸ್ತರಾದರು, ಅಷ್ಟರಲ್ಲಿ ಅನಿರ್ವಚನೀಯವಾದ ಮಹಿಮೆಯುಳ್ಳ ಭೃಗುಮುನಿಯು ರಾಮಾಗಮನದಿಂದ ಆನಂದವುಳ್ಳವನಾದನು.

೫೯. ಪಾರ್ಥಿವನೆ! ಭೃಗುಮುನಿಯು ಬೇರೆ ವೃತ್ತಾಂತವನ್ನು ಬಿಟ್ಟು ಆ ರಾಮನನ್ನು ನೋಡುತ್ತ ಕುಳಿತುಕೊಂಡನು, ರಾಮನೂ ಕೂಡ ವಿನಯದಿಂದ ನಮ್ರವಾದ ಮುಖವುಳ್ಳವನಾಗಿ ಉಪೇಂದ್ರನು ಬ್ರಹ್ಮದೇವನ ಸಮೀಪಕ್ಕೆ ಬಂದಂತೆ ಮುನಿಯ ಸಮೀಪಕ್ಕೆ ಬಂದು ಶಾಸ್ತ್ರನ್ಯಾಯವನ್ನು ಅನುಸರಿಸಿ ವಂದಿಸಿದನು.

27

ಅಭಿನಾದ್ಯ ಯಥಾನ್ಯಾಯಂ ಖ್ಯಾತಿಂ ಚ ವಿನಯಾನ್ವಿತಃ ॥ ೬೦ ॥

ತಾಂಶ್ಚ ಸಂಭಾವಯಾಮಾಸ ಮುನೀನ್ ರಾಮೋ ಯಥಾವಯಃ ।
ತೈಶ್ಚ ಸರ್ವೈರ್ಮುದೋಪೇತೈರಾಶೀರ್ಭಿರಭಿವರ್ಧಿತಃ ॥ ೬೧ ॥

ಉಪಾವಿವೇಶ ಮೇಧಾವೀ ಭೂಮೌ ತೇಷಾಮನುಜ್ಞಯಾ ।
ಉಪವಿಷ್ಟಂ ತತೋ ರಾಮಮಾಶೀರ್ಭಿರಭಿನಂದಿತಮ್ ॥ ೬೨ ॥

ಪ್ರಪಚ್ಛ ಕುಶಲಪ್ರಶ್ನಂ ತಮಾಲೋಕ್ಯ ಭೃಗುಸ್ತದಾ ।
ಕುಶಲಂ ಖಲು ತೇ ವತ್ಸ ಪಿತ್ರೋಶ್ಚ ಕಿಮನಾಮಯಮ್ ॥ ೬೩ ॥

ಭ್ರಾತ್ರೂಣಾಂ ಚೈವ ಭವತಃ ಪಿತುಃ ಪಿತ್ರೋಸ್ತಥೈವ ಚ ।
ಕಿಮರ್ಥಮಾಗತೋಽತ್ರ ತ್ವಮಧುನಾ ಮಮ ಸನ್ನಿಧಿಮ್ ॥ ೬೪ ॥

---

೬೦. ಮತ್ತು ವಿನಯ ಪರಿಪೂರ್ಣನಾಗಿ ತನ್ನ ನಾಮ-ಗೋತ್ರಗಳ ಆಖ್ಯಾನ ಪೂರ್ವಕವಾಗಿ ಶಾಸ್ತ್ರ ವಿಧಿಯನ್ನು ಅತಿಕ್ರಮಿಸದೆ ಅಭಿವಾದನ ಮಾಡಿದನು.

೬೧. ಮತ್ತು ರಾಮನು ಆ ಎಲ್ಲ ಮುನಿಗಳನ್ನು ವಯಸ್ಸಿಗೆ ತಕ್ಕ ಕ್ರಮದಿಂದ ನಮಸ್ಕರಿಸಿ ಗೌರವಿಸಿದನು, ಅವರೆಲ್ಲರೂ ಸಂತೋಷಗೊಂಡವರಾಗಿ ರಾಮನನ್ನು ಆಶೀರ್ವದಿಸಿ ಅಭಿನಂದಿಸಿದರು.

೬೨. ಮತ್ತು ಮೇಧಾವಿಯಾದ ರಾಮನು ಆ ಮುನಿಜನರ ಅನುಜ್ಞೆಯಂತೆ ಭೂಮಿಯಲ್ಲಿ ಕುಳಿತುಕೊಂಡನು, ಆಗ ರಾಮನು ಕುಳಿತುಕೊಂಡನಂತರ ಮೊದಲು ಮುನಿಯು ಅವನನ್ನು ಆಶೀರ್ವಾದಗಳಿಂದ ಅಭಿನಂದಿಸಿದನು.

೬೩. ಆಗ ಭೃಗುಮುನಿಯು ಆ ರಾಮನನ್ನು ನೋಡುತ್ತ ಕುಶಲ ಪ್ರಶ್ನವನ್ನು ಮಾಡಿದನು, ವತ್ಸನೆ! ನಿನಗೆ ಕ್ಷೇಮವೆ? ನಿನ್ನ ಮಾತಾಪಿತೃಗಳು ಆರೋಗ್ಯವಂತರಾಗಿರುವರೆ ?

೬೪. ನಿನ್ನ ಸಹೋದರರು, ನಿನ್ನ ತಂದೆಯ ತಾಯಿತಂದೆಗಳು-ಇವರೆಲ್ಲರೂ ಕ್ಷೇಮದಿಂದಿರುವರೆ? ನೀನು ಈಗ ನನ್ನ ಸಮೀಪಕ್ಕೆ ಏತಕ್ಕೆ ಬಂದಿರುತ್ತೀ?

ಕೇನಾಪಿ ವಾ ತ್ವಮಾದಿಷ್ಟಃ ಸ್ವಯಮೇವಾಥವಾಗತಃ ।
ತತೋ ರಾಮೋ ಯಥಾನ್ಯಾಯಂ ತಸ್ಮೈ ಸರ್ವಮಶೇಷತಃ ॥ ೬೫ ॥

ಕಥಯಾಮಾಸ ಯತ್ಪೃಷ್ಟಂ ತದಾ ತೇನ ಮಹಾತ್ಮನಾ ।
ಪಿತುರ್ಮಾತುಶ್ಚ ವೃತ್ತಾಂತಂ ಭ್ರಾತೄಣಾಂ ಚ ಮಹಾತ್ಮನಾಮ್ ॥ ೬೬ ॥

ಪಿತುಃ ಪಿತ್ರೋಶ್ಚ ಕೌಶಲ್ಯಂ ದರ್ಶನಂ ಚ ತಯೋರ್ನೃಪ ।
ಏತದನ್ಯಚ್ಚ ಸಕಲಂ ಭೃಗೋಃ ಸಪ್ರಶ್ರಯಂ ಮುದಾ ॥ ೬೭ ॥

ನ್ಯವೇದಯದ್ಯಥಾನ್ಯಾಯಮಾತ್ಮನಶ್ಚ ಸಮೀಹಿತಮ್ ।
ಶ್ರುತ್ವೈತದಖಿಲಂ ರಾಜನ್ ರಾಮೇಣ ಸಮುದೀರಿತಮ್ ॥ ೬೮ ॥

ತಂ ಚ ದೃಷ್ಟ್ವಾ ವಿಶೇಷೇಣ ಭೃಗುಃ ಪ್ರೀತೋಽಭ್ಯನಂದತ ।
ಏವಂ ತಸ್ಯ ಪ್ರಿಯಂ ಕುರ್ವನ್ ಉತ್ಕೃಷ್ಟೈರಾತ್ಮಕರ್ಮಭಿಃ ॥ ೬೯ ॥

---

೬೫. ಯಾರಿಂದಲಾದರೂ ಆಜ್ಞಪ್ತನಾಗಿ ಬಂದಿರುವಿಯೊ ? ಅಥವಾ ಸ್ವತಂತ್ರವಾಗಿ ಬಂದಿದ್ದೀಯೋ ? ಅನಂತರದಲ್ಲಿ ರಾಮನು ನ್ಯಾಯಾನುಸಾರವಾಗಿ ಅವನಿಗೆ ಎಲ್ಲವನ್ನೂ ಸಂಪೂರ್ಣವಾಗಿ ನಿವೇದಿಸಿದನು.

೬೬. ಆಗ ರಾಮನು ಮಹಾತ್ಮನಾದ ಮುನಿಯಿಂದ ಕೇಳಲ್ಪಟ್ಟ ತನ್ನ ಮಾತಾಪಿತೃಗಳ, ಭ್ರಾತೃಗಳ ಮತ್ತು ಮಹಾತ್ಮರಾದ ಪಿತಾಮಹ ಪಿತಾಮಹಿಯರ ಎಲ್ಲರ ವೃತ್ತಾಂತವನ್ನೂ ಹೇಳಿದನು.

೬೭. ರಾಜನೆ ! ಪಿತಾಮಹ ಪಿತಾಮಹಿಯರ ಕುಶಲವೃತ್ತಾಂತವನ್ನೂ ತಾನು ಅವರ ಸಂದರ್ಶನ ಪಡೆದಿರುವುದನ್ನೂ ಇತರ ಸಮಸ್ತ ವೃತ್ತಾಂತವನ್ನೂ ರಾಮನು ಸಂತೋಷದಿಂದ ವಿನಯಪೂರ್ವಕವಾಗಿ ಭೃಗುಮುನಿಗೆ ಹೇಳಿದನು.

೬೮. ರಾಮನು ಇದೆಲ್ಲವನ್ನೂ ಯಥಾನ್ಯಾಯವಾಗಿ ವಿಜ್ಞಾಪಿಸಿ ತನ್ನ ಇಷ್ಟವನ್ನು ಅರಿಕೆ ಮಾಡಿಕೊಂಡನು, ರಾಜನೆ! ಮುನಿಯು ರಾಮನಿಂದ ಹೇಳಲ್ಪಟ್ಟ ಅಖಿಲ ಸಮಾಚಾರವನ್ನು ಶ್ರವಣಮಾಡಿದನು.

೬೯. ಮತ್ತು ವಿಶೇಷವಾಗಿ ರಾಮನನ್ನು ನೋಡುತ್ತ ಭೃಗುಮುನಿಯು ಅತ್ಯಾನಂದಭರಿತನಾದನು. ಆಗ ರಾಮನು ಪ್ರಶಸ್ತವಾದ ತನ್ನ ಶುಶ್ರೂಷಾದಿ ಕರ್ಮಗಳಿಂದ ಮುನಿಯ ಪ್ರಿಯವನ್ನು ಸಂಪಾದಿಸಿಕೊಂಡಿದ್ದನು.

ತತ್ರಾಶ್ರಮೇಽವಸದ್ರಾಮೋ ದಿನಾನಿ ಕತಿಚಿನ್ನೃಪ ।
ತತಃ ಕದಾಚಿದೇಕಾಂತೇ ರಾಮಂ ಮುನಿವರೋತ್ತಮಃ ॥ ೭೦ ॥

ವತ್ಸಾಗಚ್ಛೇತಿ ತಂ ರಾಜನ್ನುಪಾಹ್ವಯದುಪಹ್ವರೇ ।
ಸೋಽಭಿಗಮ್ಯ ತಮಾಸೀನಮಭಿವಾದ್ಯ ಕೃತಾಂಜಲಿಃ ॥ ೭೧ ॥

ತಸ್ಥೌ ತತ್ಪುರತೋ ರಾಮಃ ಸುಪ್ರೀತೇನಾಂತರಾತ್ಮನಾ ।
ಆಶೀರ್ಭಿರಭಿನಂದ್ಯಾಥ ಭೃಗುಸ್ತಂ ಪ್ರೀತಮಾನಸಃ ॥ ೭೨ ॥

ಪ್ರಾಹ ನಾಧಿಗತಾಶಂಕಂ ರಾಮಮಾಲೋಕ್ಯ ಸಾದರಮ್ ।
ಶೃಣು ವತ್ಸ ವಚೋ ಮಹ್ಯಂ ಯತ್ತ್ವಾಂ ವಕ್ಷ್ಯಾಮಿ ಸಾಂಪ್ರತಮ್ ॥ ೭೩ ॥

ಹಿತಾರ್ಥಂ ಸರ್ವಲೋಕಾನಾಂ ತವ ಚಾಸ್ಮಾಕಮೇವ ಚ ।
ಗಚ್ಛ ಪುತ್ರ ಮಮಾದೇಶಾದ್ಧಿಮವಂತಂ ಮಹಾಗಿರಿಮ್ ॥ ೭೪ ॥

---

೭೦. ರಾಜನೆ! ರಾಮನು ಆ ಆಶ್ರಮದಲ್ಲಿ ಹಾಗೆಯೇ ಕೆಲವುದಿನಗಳವರೆಗೆ ವಾಸಮಾಡಿದನು. ಅನಂತರದಲ್ಲಿ ಒಂದು ಸಮಯದಲ್ಲಿ ಮುನಿಶ್ರೇಷ್ಠನಾದ ಭೃಗು ಮಹರ್ಷಿಯು ಏಕಾಂತದಲ್ಲಿ ರಾಮನಕೂಡ ಸಂಭಾಷಿಸಿದನು.

೭೧. ರಾಜನೆ! ವತ್ಸ! ಸಮೀಪಕ್ಕೆಬಾ ಎಂದು ರಾಮನನ್ನು ಏಕಾಂತದಲ್ಲಿ ಕರೆದನು, ಆಗ ರಾಮನು ಸಮೀಪಬಂದು ಕುಳಿತುಕೊಂಡಿರುವ ಮುನಿಯನ್ನು ವಂದಿಸಿ ಅಂಜಲಿಯನ್ನು ಕಟ್ಟಿಕೊಂಡನು.

೭೨. ಮತ್ತು ಪ್ರೀತಿಗೊಂಡಿರುವ ಅಂತಃಕರಣದಿಂದ ರಾಮನು ಭೃಗುಮುನಿಯ ಮುಂಭಾಗದಲ್ಲಿ ನಿಂತುಕೊಂಡನು. ಮುನಿಯು ಸುಪ್ರೀತವಾದ ಮಾನಸವುಳ್ಳವನಾಗಿ ಅವನನ್ನು ಆಶೀರ್ವಚನಗಳಿಂದ ಅಭಿನಂದಿಸಿದನು.

೭೩. ಮತ್ತು ನಿಃಶಂಕನಾಗಿ ನಿಂತಿರುವ ರಾಮನನ್ನು ಕಂಡು ಆದರದಿಂದ ಹೇಳಿದನು ; ವತ್ಸನೆ! ನಿನಗೆ ಈಗ ನಾನು ಹೇಳುವ ಯುಕ್ತವಾದ ವಚನವನ್ನು ಕೇಳು.

೭೪. ಸಮಸ್ತ ಲೋಕಗಳಿಗೂ ನಿನಗೂ ನಮ್ಮೆಲ್ಲರಿಗೂ ಹಿತಕರವಾಗಿರುವ ನನ್ನ ವಚನವನ್ನು ಕೇಳು, ವತ್ಸನೆ! ನನ್ನ ಆಜ್ಞೆಯಂತೆ ನೀನು ಹಿಮಾಲಯ ವೆಂಬ ಮಹಾಗಿರಿಗೆ ಹೊರಟುಹೋಗು.

ಅಥುನೈವಾಶ್ರಮಾದಸ್ಮಾತ್ ತಪಸೇ ಧೃತಮಾನಸಃ ।
ತತ್ರ ಗತ್ವಾ ಮಹಾಭಾಗ ಕೃತ್ವಾಶ್ರಮಪದಂ ಸುಖಮ್ ॥ ೭೫ ॥

ಆರಾಧಯ ಮಹಾದೇವಂ ತಪಸಾತ್ತಿನಿಯಮೇನ ಚ ।
ಪ್ರೀತಿಮುತ್ಪಾದ್ಯ ತಸ್ಯ ತ್ವಂ ಭಕ್ತ್ಯಾನನ್ಯಗಯಾ ಚಿರಾತ್ ॥ ೭೬ ॥

ಶ್ರೇಯೋ ಮಹದವಾಪ್ನೋಷಿ ನಾತ್ರ ಕಾರ್ಯಾ ವಿಚಾರಣಾ ।
ತರಸಾ ತವ ಭಕ್ತ್ಯಾ ಚ ಪ್ರೀತೋ ಭವತಿ ಶಂಕರಃ ॥ ೭೭ ॥

ಕರಿಷ್ಯತಿ ಚ ತೇ ಸರ್ವಂ ಮನಸಾ ಯದ್ಯದಿಚ್ಛಸಿ ।
ತುಷ್ಟೇ ತಸ್ಮಿನ್ ಜಗನ್ನಾಥೇ ಶಂಕರೇ ಭಕ್ತವತ್ಸಲೇ ॥ ೭೮ ॥

ಅಸ್ತ್ರಗ್ರಾಮಮಶೇಷಂ ತ್ವಂ ವೃಣುಪುತ್ರ ಯಥೇಪ್ಸಿತಮ್ ।
ತ್ವಯಾ ಹಿತಾರ್ಥಂ ದೇವಾನಾಂ ಕರಣೀಯಂ ಸುದುಷ್ಕರಮ್ ॥ ೭೯ ॥

---

೭೫. ತಪಸ್ಸನ್ನು ಆಚರಿಸಲು ದೃಢಪಡಿಸಿದ ಮಾನಸವುಳ್ಳವನಾಗಿ ಈ ಆಶ್ರಮದಿಂದ ಈಗ ಪ್ರಯಾಣಮಾಡು, ಮಹಾಭಾಗ್ಯವಂತನೆ! ಅಲ್ಲಿಗೆ ಹೋಗಿ ಮಂಗಲಪ್ರದವಾದ ಒಂದು ಆಶ್ರಮವನ್ನು ಕಲ್ಪಿಸು.

೭೬. ಮತ್ತು ಅಲ್ಲಿ ತಪಸ್ಸು, ನಿಯಮಗಳಿಂದ ಮಹಾದೇವನನ್ನು ಮತ್ತೊಂದರಲ್ಲಿಲ್ಲದ ಅಸಾಧಾರಣ ಭಕ್ತಿಯಿಂದ ಚಿರಕಾಲ ಆರಾಧಿಸಿ ಮಹಾದೇವನಿಗೆ ಪ್ರೀತಿಯನ್ನು ಉಂಟುಮಾಡು.

೭೭. ಅದರಿಂದ ನೀನು ಮಹತ್ತಾದ ಶ್ರೇಯಸ್ಸನ್ನು ಹೊಂದುತ್ತೀ, ಈ ವಿಷಯದಲ್ಲಿ ಇನ್ನೇನೂ ವಿಚಾರವಮಾಡಬೇಡ, ಶಂಕರನು ನಿನ್ನ ಶಕ್ತಿ-ಭಕ್ತಿಗಳಿಂದ ಶೀಘ್ರವಾಗಿ ಪ್ರೀತನಾಗುವನು.

೭೮. ಮತ್ತು ನೀನು ನಿನ್ನ ಮನದಲ್ಲಿ ಕೋರುವ ಸಕಲ ಕಾಮಗಳನ್ನೂ ಪ್ರೀತನಾದ ಶಂಕರನು ಅನುಗ್ರಹಿಸುವನು. ಭಕ್ತವತ್ಸಲನೂ ಜಗತ್ತಿಗೆಲ್ಲ ಪ್ರಭುವೂ ಆದ ಶಂಕರನು ನಿನ್ನಲ್ಲಿ ಸಂತುಷ್ಟನಾಗುವನು.

೭೯. ಪುತ್ರನೆ! ಆಗ ನೀನು ನಿನ್ನ ಇಷ್ಟಾನುಸಾರ ಸಂಪೂರ್ಣ ಅಸ್ತ್ರವಿದ್ಯೆಯನ್ನು ವರವನ್ನಾಗಿ ಕೇಳು, ಅದನ್ನು ಹೊಂದಿ ನೀನು ದೇವತೆಗಳ ಹಿತಕ್ಕೋಸ್ಕರ ದುಷ್ಕರ ಕರ್ಮವನ್ನು ಆಚರಿಸಬೇಕು.

ವಿದ್ಯತೇಽಭ್ಯಧಿಕಂ ಕರ್ಮ ಶಸ್ತ್ರಸಾಧ್ಯಮನೇಕಶಃ ।
ತಸ್ಮಾತ್ತ್ವಂ ದೇವದೇವೇಶಂ ಸಮಾರಾಧಯ ಶಂಕರಮ್ ॥ ೮೦ ॥

ಭಕ್ತ್ಯಾ ಪರಮಯಾ ಯುಕ್ತಸ್ತತೋಽಭೀಷ್ಟಮವಾಪ್ಸ್ಯಸಿ ॥ ೮೧ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕವಿಂಶತಿತಮೋಽಧ್ಯಾಯಃ

---

೮೦. ಶಸ್ತ್ರಗಳಿಂದ ಸಾಧ್ಯವಾದ ದುಷ್ಕರಕರ್ಮಗಳು ಅನೇಕವಾಗಿ ನಿನ್ನಿಂದ ಆಗಬೇಕಾಗಿವೆ, ಆದ್ದರಿಂದ ದೇವೋತ್ತಮನಾದ ಶಂಕರನನ್ನು ನೀನು ಆರಾಧಿಸು.

೮೧. ಪರಮ ಭಕ್ತಿಯಿಂದ ಕೂಡಿ ನೀನು ಮಾಡಿದ ಶಂಕರನ ಆರಾಧನೆಯಿಂದ ಅನುಗ್ರಹವನ್ನು ಹೊಂದಿ ನಿನ್ನ ಸಕಲ ಇಷ್ಟಾರ್ಥಗಳನ್ನು ಹೊಂದುತ್ತೀ.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

---

# ದ್ವಾವಿಂಶತಿತಮೋಽಧ್ಯಾಯಃ

ವಸಿಷ್ಠ ಉವಾಚ :—

ಇತ್ಯೇವಮುಕ್ತೋ ಭೃಗುಣಾ ತಥೇತ್ಯುಕ್ತ್ವಾ ಪ್ರಣಮ್ಯ ತಮ್ ।
ರಾಮಸ್ತೇನಾಭ್ಯನುಜ್ಞಾತಶ್ಚಕಾರ ಗಮನೇ ಮನಃ ॥ ೧ ॥

ಭೃಗುಂ ಖ್ಯಾತಿಂ ಚ ವಿಧಿವತ್ಪರಿಕ್ರಮ್ಯ ಪ್ರಣಮ್ಯ ಚ ।
ಪರಿಷ್ವಕ್ತಸ್ತಥಾ ತಾಭ್ಯಾಮಾಶೀರ್ಭಿರಭಿನಂದಿತಃ ॥ ೨ ॥

ಮುನೀಂಶ್ಚ ತಾನ್ನಮಸ್ಕೃತ್ಯ ತೈಃ ಸರ್ವೈರನುಮೋದಿತಃ ।
ನಿಶ್ಚಕ್ರಾಮಾಶ್ರಮಾತ್ತಸ್ಮಾತ್ತಪಸೇ ಕೃತನಿಶ್ಚಯಃ ॥ ೩ ॥

ತತೋ ಗುರುನಿಯೋಗೇನ ತದುಕ್ತೇನೈವ ವರ್ತ್ಮನಾ ।
ಹಿಮವಂತಂ ಗಿರಿವರಂ ಯಯೌ ರಾಮೋ ಮಹಾಮನಾಃ ॥ ೪ ॥

---

೧. ವಸಿಷ್ಠಮುನಿಯು ಈ ರೀತಿಯಾಗಿ ಹೇಳಿದನು :—ಈ ರೀತಿಯಾಗಿ ಭೃಗು ಮುನಿಯಿಂದ ಹೇಳಲ್ಪಟ್ಟ ರಾಮನು ಹಾಗೇಆಗಲಿ ಎಂದು ಆ ವಚನವನ್ನು ಅಂಗೀ ಕರಿಸಿ ಮುನಿಯನ್ನು ನಮಸ್ಕರಿಸಿ ಸಮ್ಮತಿಯನ್ನು ಪಡೆದು ಪ್ರಯಾಣಮಾಡಲು ಮನವನ್ನು ಸ್ಥಿರ ಪಡಿಸಿದನು.

೨. ಭೃಗುಮುನಿ ಮತ್ತು ಖ್ಯಾತಿದೇವಿಯರನ್ನು ಯಥಾವಿಧಿಯಾಗಿ ಪ್ರದಕ್ಷಿಣ ನಮಸ್ಕಾರಮಾಡಿ ಹಾಗೆಯೇ ಅವರಿಬ್ಬರಿಂದ ಆಲಿಂಗಿಸಲ್ಪಟ್ಟವನಾಗಿ ಆಶೀರ್ವಚನ ಗಳಿಂದ ಅಭಿನಂದಿಸಲ್ಪಟ್ಟನು.

೩. ಮತ್ತು ಆ ಎಲ್ಲ ಮುನಿಗಳನ್ನು ನಮಸ್ಕರಿಸಿ ಅವರೆಲ್ಲರಿಂದಲೂ ಅನುಮೋ ದಿಸಲ್ಪಟ್ಟವನಾಗಿ ತಪಶ್ಚರ್ಯೆಗೆ ಹೋಗುವುದನ್ನು ನಿಶ್ಚಯಿಸಿಕೊಂಡು ಆ ಭೃಗುಮು ನಿಯ ಆಶ್ರಮದಿಂದ ಹೊರಟನು.

೪. ಅನಂತರದಲ್ಲಿ ಮಹಾಮಾನಿಯಾದ ರಾಮನು ಗುರುವಿನ ಆದೇಶದಂತೆ ಗುರುವು ತೋರಿಸಿರುವ ಮಾರ್ಗದಿಂದ ಹಿಮಾಲಯವೆಂಬ ಶ್ರೇಷ್ಠ ಪರ್ವತವನ್ನು ಕುರಿತು ಪ್ರಯಾಣಮಾಡಿದನು.

ಸೋಽತೀತ್ಯ ವಿವಿಧಾನ್ ದೇಶಾನ್ ಪರ್ವತಾನ್ ಸರಿತಸ್ತಥಾ ।
ವನಾನಿ ಮುನಿಮುಖ್ಯಾನಾಮಾವಾಸಾಂಶ್ಚಾತ್ಯಗಾಚ್ಛನೈಃ ॥ ೫ ॥

ತತ್ರ ತತ್ರ ನಿವಾಸೇಷು ಮುನೀನಾಂ ನಿವಸನ್ ಪಥಿ ।
ತೀರ್ಥೇಷು ಕ್ಷೇತ್ರಮುಖ್ಯೇಷು ನಿವಸನ್ ವಾ ಯಯೌ ಶನೈಃ ॥ ೬ ॥

ಅತೀತ್ಯ ಸುಬಹೂನ್ ದೇಶಾನ್ ಪಶ್ಯನ್ನಪಿ ಮನೋರಮಾನ್ ।
ಆಸಸಾದಾಚಲಶ್ರೇಷ್ಠಂ ಹಿಮವಂತಮನುತ್ತಮಮ್ ॥ ೭ ॥

ಸ ಗತ್ವಾ ಪರ್ವತವರಂ ನಾನಾದ್ರುಮಲತಾನ್ವಿತಮ್ ।
ದದರ್ಶ ವಿಪುಲೈಃ ಶೃಂಗೈರುಲ್ಲಿಖಂತಮಿವಾಂಬರಮ್ ॥ ೮ ॥

ನಾನಾಧಾತುವಿಚಿತ್ರೈಶ್ಚ ಪ್ರದೇಶೈರುಪಶೋಭಿತಮ್ ।
ರತ್ನೌಷಧೀಭಿರಭಿತಃ ಸ್ಫುರದ್ಭಿರಭಿಶೋಭಿತಮ್ ॥ ೯ ॥

---

೫. ರಾಮನು ಮಧ್ಯದಲ್ಲಿ ನಾನಾವಿಧವಾದ ದೇಶಗಳನ್ನೂ ಪರ್ವತಗಳನ್ನೂ ನದಿಗಳನ್ನೂ ವನಗಳನ್ನೂ ಮತ್ತು ಮುನಿಗಳು ವಾಸಮಾಡುವ ಅನೇಕ ಆಶ್ರಮಗಳನ್ನೂ ಅತಿಕ್ರಮಿಸಿ ಮೆಲ್ಲಗೆ ಪ್ರಯಾಣಮಾಡಿದನು.

೬. ದಾರಿಯಲ್ಲಿ ಆಯಾಯ ಮುನಿಗಳ ಆಶ್ರಮಗಳಲ್ಲಿ ವಾಸಮಾಡುತ್ತ ಅನೇಕ ತೀರ್ಥಗಳಲ್ಲಿಯೂ ಉತ್ತಮಕ್ಷೇತ್ರಭೂಮಿಗಳಲ್ಲಿಯೂ ಇಳಿದುಕೊಳ್ಳುತ್ತ ಮೆಲ್ಲಗೆ ಪ್ರಯಾಣಮಾಡಿದನು.

೭. ಹೀಗೆಯೇ ಮನೋಹರವಾದ ಅನೇಕ ದೇಶಗಳನ್ನು ನೋಡಿ ಆನಂದಿಸುತ್ತ ಅವುಗಳನ್ನು ಕಳೆದು ಗಿರಿಗಳಲ್ಲಿ ಉತ್ತಮವೂ ನಿರುಪಮವೂ ಆದ ಹಿಮಾಚಲ ಪರ್ವತವನ್ನು ಸಮೀಪಿಸಿದನು.

೮. ಅವನು ಗಿರಿಯ ಸಮೀಪಕ್ಕೆ ಹೋಗಿ ಅನೇಕ ವೃಕ್ಷಗಳಿಂದಲೂ ಲತೆಗಳಿಂದಲೂ ಆಶ್ರಯಿಸಲ್ಪಟ್ಟ ಮತ್ತು ವಿಸ್ತಾರವಾದ ಶಿಖರಗಳಿಂದ ಆಕಾಶವನ್ನು ಮುಟ್ಟುವಂತೆ ಅತ್ಯುನ್ನತವಾದ ಹಿಮಾಚಲವನ್ನು ಕಂಡನು.

೯. ಆ ಗಿರಿಯು ಅನೇಕ ವರ್ಣದ ಧಾತುಗಳಿಂದ ವಿಚಿತ್ರವಾಗಿ ಕಾಣುತ್ತಿರುವ ಪ್ರದೇಶಗಳು ಮತ್ತು ಎರಡು ಪಾರ್ಶ್ವಗಳಲ್ಲಿಯೂ ಜ್ವಲಿಸುವ ಉತ್ತಮರತ್ನಮಯವಾದ ಜ್ಯೋತಿರ್ಲತೆ ಇವುಗಳಿಂದ ಶೋಭಿತವಾಗಿತ್ತು.

ಮರುತ್ಸಂಘಟ್ಟನಾಘೃಷ್ಟನೀರಸಾಂಘ್ರಿಪಜನ್ಮನಾ ।
ಸಾನಿಲೇನಾನಲೇನೋಚ್ಚೈರ್ದಹ್ಯಮಾನಂ ವನಂ ಕ್ವಚಿತ್ ॥ ೧೦ ॥

ಕ್ವಚಿದ್ರವಿಕರಾಮರ್ಶಜ್ವಲದರ್ಕೋಪಲಾಗ್ನಿಭಿಃ ।
ದ್ರವದ್ಧಿಮಶಿಲಾಜಾತಜಲಶಾಂತದವಾನಲಮ್ ॥ ೧೧ ॥

ಸ್ಫಟಿಕಾಂಜನದುರ್ವರ್ಣಸ್ವರ್ಣರಾಶಿಪ್ರಭಾಕರೈಃ ।
ಸ್ಫುರತ್ಪರಸ್ಪರಚ್ಛಾಯಾಕಿರ ದ್ದೀಪ್ತಿವನಂ ಕ್ವಚಿತ್ ॥ ೧೨ ॥

ಉಪತ್ಯಕಾಶಿಲಾಪೃಷ್ಠಬಾಲಾತಪನಿಷೇವಿಭಿಃ ।
ತುಷಾರಕ್ಲಿನ್ನಸಿದ್ಧೌಘೈರುದ್ಭಾಸಿತವನಂ ಕ್ವಚಿತ್ ॥ ೧೩ ॥

ಕ್ವಚಿದರ್ಕಾಂಶುಸಂಭಿನ್ನಶ್ಚಾಮೀಕರಶಿಲಾಶ್ರಿತೈಃ ।
ಯಕ್ಷೌಘೈರ್ಭಾಸಿತೋಪಾಂತಂ ವಿಶದ್ಭಿರಿವ ಪಾವಕಮ್ ॥ ೧೪ ॥

---

೧೦. ಮತ್ತು ಕೆಲವೆಡೆಯಲ್ಲಿ ಗಾಳಿಯಹೊಡೆತದಿಂದ ಘರ್ಷಣೆಯಾಗಿ ಒಣಗಿದ ಗಿಡ ಮರಗಳಿಂದ ಹುಟ್ಟಿದ ವಾಯುವಿನ ಸಹಾಯದಿಂದ ಹೆಚ್ಚಾಗಿ ಉರಿಯುವ ಅಗ್ನಿಯಿಂದ ಅರಣ್ಯಗಳು ಸುಡಲ್ಪಡುತ್ತಲಿದ್ದುವು.

೧೧. ಮತ್ತೊಂದು ಕಡೆಯಲ್ಲಿ ಸೂರ್ಯಕಿರಣಗಳ ಸಂಪರ್ಕದಿಂದ ಜ್ವಲಿಸುವ ಸೂರ್ಯಕಾಂತ ಶಿಲೆಗಳ ಅಗ್ನಿಯಿಂದ ಸುಡಲ್ಪಡುವುದೂ, ಬೇರೊಂದುಕಡೆಯಲ್ಲಿ ಕರಗುತ್ತಲಿರುವ ಮಂಜಿನಗಡ್ಡೆಗಳ ಜಲರಾಶಿಯಿಂದ ಆರಿಹೋಗುವ ಕಾಡುಕಿಚ್ಚಿನ ಶಾಂತಿಯುಳ್ಳದ್ದೂ ಆಗಿತ್ತು.

೧೨. ಒಂದು ಭಾಗದಲ್ಲಿ ಸ್ಫಟಿಕಮಣಿ, ಅಂಜನ, ರಜತ, ಸುವರ್ಣಗಳ ಪ್ರಭಾಪುಂಜಗಳಿಂದ ಅನ್ಯೋನ್ಯ ವಿಲಕ್ಷಣಕಾಂತಿ ಸಂಪರ್ಕದಿಂದ ಚಿತ್ರವರ್ಣದ ದೀಪ್ತಿಯಿಂದ ಶೋಭಿತವಾಗಿತ್ತು.

೧೩. ಒಂದು ಪ್ರದೇಶದಲ್ಲಿ ಬೆಟ್ಟದ ಊರ್ಧ್ವಭಾಗದ ಶಿಲಾಗ್ರಗಳಲ್ಲಿ ಬಾಲಾತಪವನ್ನು ಸೇವಿಸುತ್ತ ಕುಳಿತು ಮಂಜಿನ ಶೀತಬಾಧೆಯನ್ನು ನಿವಾರಿಸುತ್ತಲಿದ್ದ ಸಿದ್ಧಸಂಘವು ವಾಸಮಾಡುವ ವನಗಳಿಂದ ಪೂರ್ಣವಾಗಿತ್ತು.

೧೪. ಬೇರೊಂದು ಕಡೆಯಲ್ಲಿ ಸೂರ್ಯಕಿರಣಗಳಿಂಥ ದೀಪ್ತವಾದ ಸುವರ್ಣಮಯ ಶಿಲೆಗಳನ್ನು ಆಶ್ರಯಿಸುತ್ತಿರುವುದರಿಂದ ಅಗ್ನಿಪ್ರವೇಶವನ್ನು ಮಾಡುತ್ತಿರುವಂತೆ ಕಾಣುವ ಯಕ್ಷಸಂಘದಿಂದ ಸೇವಿಸಲ್ಪಟ್ಟ ಪ್ರಾಂತಭೂಮಿಯುಳ್ಳದ್ದಾಗಿತ್ತು.

ದರೀಮುಖವಿನಿಷ್ಕ್ರಾಂತ ತರಕ್ಷೂತ್ಪತನಾಕುಲೈಃ ।
ಮೃಗಯೂಥಾರ್ತಸನ್ನಾದೈರಾಪೂರಿತಗುಹಂ ಕ್ವಚಿತ್ ॥ ೧೫॥

ಯುದ್ಧ್ಯದ್ವರಾಹಶಾರ್ದೂಲಯೂಥಪೈರಿತರೇತರಮ್ ।
ಪ್ರಸಭೋನ್ಮೃಷ್ಟಕಾಂತೋರುಶಿಲಾತರುತಟಂ ಕ್ವಚಿತ್ ॥ ೧೬ ॥

ಕಲಭೋನ್ಮೇಷಣಾಕೃಷ್ಟಕರಿಣೀಭಿರನುದ್ರುತೈಃ ।
ಗವಯೈಃ ಖುರಸಂಕ್ಷುಣ್ಣಶಿಲಾಪ್ರಸ್ಥತಟಂ ಕ್ವಚಿತ್ ॥ ೧೭ ॥

ವಾಸಿತಾರ್ಥೇಽಭಿಸಂವೃದ್ಧಮದೋನ್ಮತ್ತಮತಂಗಜೈಃ ।
ಯುದ್ಧ್ಯದ್ಭಿಶ್ಚೂರ್ಣಿತಾನೇಕಗಂಡಶೈಲವನಂ ಕ್ವಚಿತ್ ॥ ೧೮ ॥

ಬೃಂಹಿತಶ್ರವಣಾಮರ್ಷಾನ್ಮಾತಂಗಾನಭಿಧಾವತಾಮ್ ।
ಸಿಂಹಾನಾಂ ಚರಣಕ್ಷುಣ್ಣನಖಭಿನ್ನೋಪಲಂ ಕ್ವಚಿತ್ ॥ ೧೯ ॥

---

೧೫. ಒಂದು ಭಾಗದಲ್ಲಿ ಗುಹಾದ್ವಾರದಿಂದ ಹೊರಹೊರಡುತ್ತಿರುವ ವ್ಯಾಘ್ರಗಳು ಮೇಲೆ ಬೀಳುವುವೆಂಬ ಗಾಬರಿಯಿಂದ ಕೂಡಿದ ಜಿಂಕೆಗಳ ಆರ್ತನಾದದಿಂದ ತುಂಬಿದ ಗವಿಗಳಿಂದ ಪ್ರಕಾಶಿತವಾಗಿದ್ದಿತು.

೧೬. ಇನ್ನೊಂದು ಸ್ಥಳದಲ್ಲಿ ಅನ್ಯೋನ್ಯವಾಗಿ ವರಾಹ ಮತ್ತು ವ್ಯಾಘ್ರಯೂಥಪತಿಗಳು ಯುದ್ಧವಾಡಿ ಬಲಾತ್ಕಾರವಾಗಿ ಕಿತ್ತೊಗೆದಿರುವ ಸುಂದರವೂ ವಿಶಾಲವೂ ಆದ ಶಿಲಾತಟದ ವೃಕ್ಷಗಳಿಂದ ರಮ್ಯವಾಗಿತ್ತು.

೧೭. ತರುಣಗಜಗಳ ಬಡಿವಾರದಿಂದ ಆಕರ್ಷಿಸಲ್ಪಟ್ಟ ಹೆಣ್ಣಾನೆಗಳಿಂದ ಭಯಗೊಂಡು ಧಾವಿಸುತ್ತಿರುವ ಗವಯ ಮೃಗಗಳಿಂದ ಕಾಲುಗೊರಸುಗಳಿಂದ ಪುಡಿಯಾದ ತಪ್ಪಲುಗಳಲ್ಲಿರುವ ಅನೇಕ ಶಿಲೆಗಳಿಂದ ಪ್ರಕಾಶಿಸುತ್ತಲಿತ್ತು.

೧೮. ಸುಗಂಧಪೂರ್ಣವಾದ ಮದೋದಕವನ್ನು ಸುರಿಸುತ್ತಿರುವ ಮದ್ದಾನೆಗಳು ಪರಸ್ಪರವಾಗಿ ಯುದ್ಧಮಾಡಿ ಪುಡಿಮಾಡಲ್ಪಟ್ಟ ಅರಣ್ಯಭೂಮಿಯಲ್ಲಿರುವ ಅನೇಕ ಗಂಡಶೈಲಗಳಿಂದ ಶೋಭಿಸಲ್ಪಟ್ಟಿತ್ತು.

೧೯. ಆನೆಗಳ ಬೃಂಹಿತಧ್ವನಿಯನ್ನು ಕೇಳಿ ಅಸಹನೆಯಿಂದ ಅಂತಹ ಆನೆಗಳನ್ನು ಎದುರಿಸುತ್ತಿರುವ ಸಿಂಹಗಳ ಪಾದಾಘಾತದಿಂದ ನಖಾಗ್ರದಿಂದ ಭೇದಿಸಲ್ಪಟ್ಟ ಶಿಲಾಸಂಘದಿಂದ ಕೂಡಿಕೊಂಡಿತ್ತು.

ಸಹಸಾ ನಿಪತತ್ಸಿಂಹನಖನಿರ್ಭಿನ್ನಮಸ್ತಕೈಃ ।
ಗಜೈರಾಕ್ರಂದನಾದೇನ ಪೂರ್ಯಮಾಣಂ ವನಂ ಕ್ವಚಿತ್ ॥ ೨೦ ॥

ಅಷ್ಟಪಾದಬಲಾಕೃಷ್ಟಕೇಸರೀಂದ್ರಮುಹಾ ನ್ವೈಃ ।
ಭೇದ್ಯಮಾನಾಖಿಲಶಿಲಾಗಂಭೀರಕಂದರಂ ಕ್ವಚಿತ್ ॥ ೨೧ ॥

ಸಂರಬ್ಧಾನೇಕಶಬರಪ್ರಸಕ್ತೈರ್ಋಕ್ಷಯೂಥಪೈಃ ।
ಇತರೇತರಸಂಮರ್ದವಿಪ್ರಭಗ್ನದೃಷತ್ ಕ್ವಚಿತ್ ॥ ೨೨ ॥

ಗಿರಿಕುಂಜೇಷು ಸಂಕ್ರೀಡತ್ಕರಿಣೀಮುದ್ದ್ವಿಪಂ ಕ್ವಚಿತ್ ।
ಕರೇಣುಮಾದ್ರವನ್ಮತ್ತಗಜಾಕಲಿತಕಾನನಮ್ ॥ ೨೩ ॥

ಸ್ವಪತ್ಸಿಂಹಮುಖಶ್ವಾಸಮರುತ್ಪೂರ್ಣದರೀಶತಮ್ ।
ಗಹನೇಷು ಗುರುತ್ರಾಸಸಾಶಂಕವಿಹರನ್ಮೃಗಮ್ ॥ ೨೪ ॥

---

೨೦. ಆಕಸ್ಮಿಕವಾಗಿ ಮೇಲೆರಗುತ್ತಿರುವ ಸಿಹ್ಮಗಳ ನಖಾಗ್ರಗಳಿಂದ ಭೇದಿಸಲ್ಪಟ್ಟ ಶಿರಗಳುಳ್ಳ ಗಜಗಳ ಆಕ್ರಂದನ ಧ್ವನಿಯಿಂದ ವ್ಯಾಪಿಸಲ್ಪಟ್ಟ ವನಭೂಮಿಯಿಂದ ರಮ್ಯವಾಗಿತ್ತು.

೨೧. ಶರಭ ಮೃಗಗಳಿಂದ ಬಲಾತ್ಕಾರಪೂರ್ವಕವಾಗಿ ಸೆಳೆಯಲ್ಪಟ್ಟ ಸಿಹ್ಮಗಳ ಭಯಂಕರ ಗರ್ಜನಗಳಿಂದ ಭೇದಿಸಲ್ಪಡುವ ಗುಹೆಗಳಲ್ಲಿರುವ ಅನೇಕ ಶಿಲೆಗಳಿಂದ ಗಂಭೀರವಾಗಿತ್ತು.

೨೨. ಮತ್ತೊಂದು ಕಡೆ ಸಂರಂಭದಿಂದ ಕೂಡಿದ ಅನೇಕ ವ್ಯಾಧರಿಂದ ಲಕ್ಷಿಸಲ್ಪಟ್ಟ ಭಾರಿಯಾದ ಕರಡಿಗಳಿಂದ ಪರಸ್ಪರ ಘರ್ಷಣದಿಂದ ಭಂಗಹೊಂದಿದ ಶಿಲಾಸಂಘಾತದಿಂದ ಕೂಡಿಕೊಂಡಿತ್ತು.

೨೩. ಪರ್ವತದ ಪೊದೆಗಳಲ್ಲಿ ವಿಹರಿಸುತ್ತಿರುವ ಹೆಣ್ಣಾನೆಗಳ ಲೀಲಾವಶವಾದ ಆನೆಗಳಿಂದಲೂ ಹೆಣ್ಣಾನೆಯನ್ನು ಹಿಂಬಾಲಿಸಿ ಧಾವಿಸುತ್ತಿರುವ ಮತ್ತಗಜಗಳಿಂದಲೂ ತುಂಬಿದ ಅರಣ್ಯಗಳನ್ನೊಳಗೊಂಡಿತ್ತು.

೨೪. ನಿದ್ರೆ ಮಾಡುತ್ತಲಿದ್ದ ಸಿಂಹಗಳ ಶ್ವಾಸವಾಯುವಿನಿಂದ ನೂರಾರು ಗುಹೆಗಳು ಪೂರ್ಣವಾಗಿದ್ದುವು. ಗಹನವಾದ ಅರಣ್ಯಗಳಲ್ಲಿ ಅತ್ಯಂತ ಭೀತಿಯಿಂದ ಸಾಶಂಕವಾಗಿ ಮೃಗಗಳು ವಿಹರಿಸುತ್ತಲಿದ್ದುವು.

ಕಂಟಕಶ್ಲಿಷ್ಟಲಾಂಗೂಲಲೋಮತ್ರುಟನಕಾತರೈಃ ।
ಕ್ರೀಡಿತಂ ಚಮರೀಯೂಥೈರ್ಮಂದಮಂದವಿಚಾರಿಭಿಃ || ೨೫ ||

ಗಿರಿಕಂದರಸಂಸಕ್ತಕಿನ್ನರೀಸಮುದೀರಿತೈಃ ।
ಸತಾಲನಾದೈರುದಿತೈರ್ಭೃತಾಶೇಷದಿಶಾಮುಖಮ್ || ೨೬ ||

ಅರಣ್ಯದೇವತಾನಾಂ ಚ ಚರಂತೀನಾಮಿತಸ್ತತಃ ।
ಅಲಕ್ತಕರಸಕ್ಲಿನ್ನಚರಣಾಂಕಿತಭೂತಲಮ್ || ೨೭ ||

ಮಯೂರಕೇಕಿನೀವೃಂದೈಃ ಸಂಗೀತಮಧುರಸ್ವರೈಃ ।
ಪ್ರವೃತ್ತನೃತ್ತಂ ಪರಿತೋ ವಿತತೋದಗ್ರಬರ್ಹಿಭಿಃ || ೨೮ ||

ಜಲಸ್ಥಲರುಹಾನೇಕಕುಸುಮೋತ್ಕರವರ್ಷಿಭಿಃ ।
ಗಾತ್ರಾಹ್ಲಾದಕರೈರ್ಮಂದಂ ವೀಜ್ಯಮಾನಂ ವನಾನಿಲೈಃ || ೨೯ ||

---

೨೫. ಮುಳ್ಳುಗಳಲ್ಲಿ ಅಂಟಿಕೊಂಡಿರುವ ಬಾಲದ ಕೂದಲು ಕತ್ತರಿಸಿಹೋಗುವ ಭೀತಿಯಿಂದ ಮೆಲ್ಲಮೆಲ್ಲಗೆ ಸಂಚರಿಸುವ ಚಮರ ಮೃಗಗಳ ವೃಂದವು ಕ್ರೀಡಿಸುತ್ತಲಿತ್ತು.

೨೬. ಪರ್ವತದ ಗವಿಗಳಲ್ಲಿ ಕುಳಿತುಕೊಂಡು ಕಿನ್ನರಾಂಗನೆಯರಿಂದ ಗಾನ ಮಾಡಲ್ಪಟ್ಟ ತಾಲಸಹಿತವಾದ ಉಚ್ಚಗೀತ ಧ್ವನಿಗಳಿಂದ ಅಶೇಷದಿಗಂತಗಳು ತುಂಬಿದ್ದವು.

೨೭. ಲಾಕ್ಷಾರಸ ರಂಜನದಿಂದ ಅಲಂಕರಿಸಿದ ಆರ್ದ್ರಚರಣಗಳಿಂದ ಇಲ್ಲಿಂದಲ್ಲಿಗೆ ಸಂಚರಿಸುತ್ತಲಿರುವ ವನದೇವತೆಗಳ ಹೆಜ್ಜೆಯ ಗುರುತುಗಳಿಂದ ವನಭೂಮಿಯು ಭೂಷಿತವಾಗಿತ್ತು.

೨೮. ಹೆಣ್ಣು ಮತ್ತು ಗಂಡು ನವಿಲುಗಳ ಗುಂಪಿನಿಂದ ಸಂಗೀತದಂತೆ ಮಧುರವಾದ ಸ್ವರದಿಂದ ಕೂಡಿ ಚಿತ್ರವರ್ಣದ ಗರಿಗಳನ್ನು ಮೇಲುಗಡೆಯಲ್ಲಿ ವಿಸ್ತರಿಸಿಕೊಂಡು ನರ್ತನವು ಉಪಕ್ರಮಿಸಲ್ಪಟ್ಟಿತ್ತು.

೨೯. ಅರಣ್ಯದ ಮಾರುತಗಳು ಜಲಸ್ಥಳಗಳಲ್ಲಿ ಬೆಳೆಯುವ ಅನೇಕ ಕುಸುಮವೃಷ್ಟಿಯನ್ನು ವರ್ಷಿಸುತ್ತ ದೇಹಕ್ಕೆ ಆನಂದವನ್ನುಂಟುಮಾಡುವಂತೆ ಮಂದವಾಗಿ ಬೀಸುತ್ತಲಿದ್ದವು.

ಭೂತಾರ್ತವರಸಾಸ್ವಾದಮಾದ್ಯತ್ಪುಂಸ್ಕೋಕಿಲಾರವೈಃ ।
ಆಕುಲೀಕೃತಪರ್ಯಂತಸಹಕಾರವನಾಂತರಮ್ ॥ ೩೦ ॥

ನಾನಾಪುಷ್ಪಾಸವೋನ್ಮಾದ್ಯದ್ಭೃಂಗಸಂಗೀತಸಾದಿತಮ್ ।
ಅನೇಕವಿಹಗಾರಾವಬಧಿರೀಕೃತಕಾನನಮ್ ॥ ೩೧ ॥

ಮಧುದ್ರವಾರ್ದ್ರಾವಿರಲಪ್ರತ್ಯಗ್ರಕುಸುಮೋತ್ಕರೈಃ ।
ವನಾಂತಮಾರುತಾಕೀರ್ಣೈರಲಂಕೃತಮಹೀತಲಮ್ ॥ ೩೨ ॥

ಉಪರಿಷ್ಟಾನ್ನಿಪತತಾಂ ವಿಷಮೋಪಲಸಂಕಟೇ ।
ನಿರ್ಝರಾಣಾಂ ಮಹಾರಾವೈಃ ಸಮಂತಾದ್ಬಧಿರೀಕೃತಮ್ ॥ ೩೩ ॥

ವಿತತಾನೇಕಸಂಸಕ್ತಶಾಖಾಗ್ರಾವಿರಲಚ್ಛದೈಃ ।
ಪಾಟಲೈರ್ವಿಟಪಚ್ಛಾಯೈರುಪಶಲ್ಯಸಮುತ್ಥಿತೈಃ ॥ ೩೪ ॥

---

೩೦. ಮಾವಿನಗಿಡಗಳ ವನ ಮಧ್ಯದಲ್ಲಿ ಆಯಾಯ ಋತು ಸಂಬಂಧದಿಂದುಂಟಾದ ಮಾವಿನ ಹೂ ಗೊಂಚಲುಗಳ ರಸಾಸ್ವಾದದಿಂದ ಮದಿಸಿದ ಪುಂಸ್ಕೋಕಿಲಗಳ ಧ್ವನಿಗಳಿಂದ ಪ್ರಾಂತಭೂಮಿಯು ಪೂರ್ಣವಾಗಿತ್ತು

೩೧. ಮತ್ತು ಅನೇಕವಿಧವಾದ ಪುಷ್ಪಗಳ ಮಕರಂದರಸದ ಪಾನದಿಂದ ಮದಿಸಿದ ದುಂಬಿಗಳ ಝೇಂಕಾರದಿಂದಲೂ ಅನೇಕ ಪಕ್ಷಿಗಳ ಧ್ವನಿಯಿಂದಲೂ ವನಭೂಮಿಯು ಕಿವುಡಾಗಿ ಮಾಡಲ್ಪಟ್ಟಿತ್ತು.

೩೨. ಮಧುರಸದಿಂದ ಆರ್ದ್ರವಾದ, ನಿಬಿಡವಾದ ಮತ್ತು ನೂತನವಾದ ಪುಷ್ಪಗಳ ವೃಷ್ಟಿಯನ್ನು ಸುರಿಸುವ ವನಭೂಮಿಯ ಮಾರುತಗಳಿಂದ ಹೂಗಳನ್ನು ಎರಚಿ ವೃಕ್ಷಗಳ ತಲವು ಅಲಂಕರಿಸಲ್ಪಟ್ಟಿತ್ತು.

೩೩. ಎತ್ತರವಾದ ಸ್ಥಳದಿಂದ ಬಂಡೆಗಳ ವಿಷಮಪ್ರದೇಶಗಳಲ್ಲಿ ಬೀಳುವ ಜಲಪಾತಗಳ ಉಗ್ರಧ್ವನಿಯಿಂದ ಸುತ್ತಮುತ್ತ ಪ್ರದೇಶಗಳು ಕಿವುಡಾಗಿ ಮಾಡಲ್ಪಟ್ಟಿದ್ದುವು.

೩೪. ವಿಸ್ತಾರವಾಗಿಯೂ ಒಂದರಲ್ಲಿ ಒಂದು ಅಂಟಿಕೊಂಡಿರುವುದಾಗಿಯೂ ಇರುವ ಶಾಖೆಗಳ ಅಗ್ರಭಾಗದಲ್ಲಿ ನಿಬಿಡವಾದ ಎಲೆಗಳಿಂದ ಕೂಡಿರುವ, ಛಾಯಾಪ್ರದವಾದ ರೆಂಬೆಗಳುಳ್ಳ ಪಾಟಲ ವೃಕ್ಷಗಳು ಪರ್ವತದ ಪ್ರಾಂತಭೂಮಿಯಲ್ಲಿ ಅನೇಕವಾಗಿ ಹುಟ್ಟಿದ್ದುವು.

ಕದಂಬನಿಂಬಹಿಂತಾಲಸರ್ಜಬಂಧೂಕತಿಂದುಕೈಃ ।
ಕಪಿತ್ಥಪನಸಾಶೋಕಸಹಕಾರೇಂಗುದಾಸನೈಃ ॥ ೩೫ ॥

ನಾಗಚಂಪಕಪುನ್ನಾಗಕೋವಿದಾರಪ್ರಿಯಂಗುಭಿಃ ।
ಪ್ರಿಯಾಲನೀಪಬಕುಲಬಂಧೂಕಾಕ್ಷತಮಾಲಕೈಃ ॥ ೩೬ ॥

ದ್ರಾಕ್ಷಾಮಧೂಕಾಮಲಕಜಂಬೂಕಂಕೋಲಜಾತಿಭಿಃ ।
ಬಿಲ್ವಾರ್ಜುನಕರಂಜಾಮ್ರಬೀಜಪೂರಾಂಘ್ರಿಪೈರಪಿ ॥ ೩೭ ॥

ಪಿಚುಲಾಂಬಷ್ಠಕನಕವೈಕಂಕತಶಮೀಧವೈಃ ।
ಪುತ್ರಜೀವಾಭಯಾರಿಷ್ಟಲೋಹೋದುಂಬರಪಿಪ್ಪಲೈಃ ॥ ೩೮ ॥

ಅನ್ಯೈಶ್ಚ ವಿವಿಧೈರ್ವೃಕ್ಷೈಃ ಸಮಂತಾದುಪಶೋಭಿತಮ್ ।
ನಿರಂತರತಮಚ್ಛಾಯಾಸುದೂರವಿನಿವಾರಿತೈಃ ॥ ೩೯ ॥

---

೩೫. ಮತ್ತು ಆಯಾಯ ಅನೇಕ ಸ್ಥಳಗಳಲ್ಲಿ ಕದಂಬ, ನಿಂಬ, ಹಿಂತಾಲ, ಸರ್ಜ, ಬಂಧೂಕ, ತಿಂದುಕ, ಕಪಿತ್ಥ, ಪನಸ, ಅಶೋಕ, ಸಹಕಾರ, ಇಂಗುದ ಮತ್ತು ಅಸನ ಎಂಬ ನಾನಾಜಾತಿಯ ವೃಕ್ಷಗಳು ಬೆಳೆದಿದ್ದುವು.

೩೬. ಮತ್ತು ನಾಗಚಂಪಕ, ಪುನ್ನಾಗ, ಕೋವಿದಾರ, ಪ್ರಿಯಂಗು, ಪ್ರಿಯಾಲ, ನೀಪ, ವಕುಲ, ಬಂಧೂಕ, ಅಕ್ಷ ಹಾಗು ತಮಾಲ ಎಂಬ ಜಾತಿಯ ವೃಕ್ಷಗಳು ಅನೇಕವಾಗಿ ಹುಟ್ಟಿದ್ದುವು.

೩೭. ದ್ರಾಕ್ಷಾ, ಮಧೂಕ, ಆಮಲಕ, ಜಂಬೂ, ಕಂಕೋಲ, ಜಾತಿ, ಬಿಲ್ವ, ಅರ್ಜುನ, ಕರಂಜ, ಆಮ್ರ, ಬೀಜಪೂರ ಮುಂತಾದ ಅನೇಕ ವೃಕ್ಷಗಳಿಂದ ಪರ್ವತ ಭೂಮಿಯು ಮನಸ್ಸನ್ನು ಆಕರ್ಷಿಸುತ್ತಲಿತ್ತು.

೩೮. ಮತ್ತು ಪಿಚುಲ, ಅಂಬಷ್ಠ, ಕನಕ, ವೈಕಂಕತ, ಶಮೀ, ಧವ, ಪುತ್ರ ಜೀವ, ಅಭಯಾರಿಷ್ಟ, ಲೋಹ, ಉದುಂಬರ ಮತ್ತು ಪಿಪ್ಪಲ ಎಂಬ ಜಾತಿಯ ವೃಕ್ಷಗಳು ಅನೇಕವಾಗಿ ಬೆಳೆದಿದ್ದುವು.

೩೯. ಇವಲ್ಲದೆ ಇನ್ನು ಅನೇಕವಿಧದ ರಮ್ಯವೃಕ್ಷಗಳಿಂದ ಸುತ್ತಲೂ ಶೋಭಿಸಲ್ಪಟ್ಟಿತ್ತು, ಹಾಗು ದಟ್ಟವಾಗಿ ಬೆಳೆದ ವೃಕ್ಷಶ್ರೇಣಿಗಳ ಛಾಯೆಯಿಂದ ಪರ್ವತ ಪ್ರದೇಶವು ಶೀತಲವಾಗಿತ್ತು.

ಸಮಂತಾದರ್ಕಕಿರಣೈರನಾಸಾದಿತಭೂತಲಮ್ ।
ನಾನಾಪಕ್ವಫಲಾಸ್ವಾದಬಲಪುಷ್ಟೈಃ ಪ್ಲವಂಗಮೈಃ ॥ ೪೦ ॥

ಆಕ್ರಾಂತಚಕಿತಾನೇಕವನಪಂಕ್ತಿಶತಾಕುಲಮ್ ।
ತತ್ರ ತತ್ರಾತಿರಮ್ಯೈಶ್ಚ ಶಿಲಾಕುಹರನಿರ್ಗತೈಃ ॥ ೪೧ ॥

ಪ್ರಪಾತವಿಷಮೈ ರಾಜನ್ ಹ್ರಾಸ್ಯಮಾನಂ ಸರಿಚ್ಛತೈಃ ।
ಸರೋವರೈಶ್ಚ ವಿಪುಲೈಃ ಕುಮುದೋತ್ಪಲಮಂಡಿತೈಃ ॥ ೪೨ ॥

ನಾನಾವಿಹಗಸಂಘುಷ್ಟೈಃ ಸಮಂತಾದುಪಶೋಭಿತಮ್ ।
ಸಮಾಸಾದ್ಯಾಥ ಶೈಲೇಂದ್ರಂ ತುಷಾರಶಿಶಿರಂ ಗಿರಿಮ್ ॥ ೪೩ ॥

ಆರುರೋಹ ಭೃಗುಶ್ರೇಷ್ಠಸ್ತರಸಾ ತಂ ಮುದಾನ್ವಿತಃ ।
ತಸ್ಯ ಪ್ರವಿಶ್ಯ ಗಹನಂ ವನಂ ರಾಮೋ ಮಹಾಮನಾಃ ॥ ೪೪ ॥

---

೪೦. ವೃಕ್ಷಛ್ಛಾಯೆಯಿಂದ ಸೂರ್ಯಕಿರಣಗಳು ತಡೆಯಲ್ಪಟ್ಟಿದ್ದರಿಂದ ಭೂಮಿಯನ್ನು ಮುಟ್ಟುತ್ತಿರಲಿಲ್ಲ. ಕಪಿಗಳು ಅನೇಕಬಗೆಯ ಪಕ್ವಫಲಗಳ ರಸಾಸ್ವಾದ ಬಲದಿಂದ ಪುಷ್ಟಗಳಾಗಿದ್ದುವು.

೪೧. ಅಂತಹ ಕಪಿಗಳ ಆಕ್ರಮಣ-ಸಂಭ್ರಮಗಳಿಂದ ನೂರಾರು ವನಪಂಕ್ತಿಗಳು ವ್ಯಾಪಿಸಲ್ಪಟ್ಟಿದ್ದುವು. ಅಲ್ಲಲ್ಲ ಅನೇಕ ರಮ್ಯವಾದ ಜಲಪಾತಗಳು ಶಿಲಾಮಯವಾದ ಕಂದರಗಳಿಂದ ಹೊರಡುತ್ತಲಿದ್ದುವು.

೪೨. ವಿಷಮವಾದ ಜಲಪಾತಗಳಿಂದ ಕೂಡಿದ ನೂರಾರು ನದಿಗಳಿಂದಲೂ ಕನ್ನೈದಿಲೆ, ತಾವರೆ ಮುಂತಾದ ಹೂವುಗಳಿಂದ ಶೋಭಿಸಲ್ಪಟ್ಟ ಸರೋವರಗಳಿಂದಲೂ ಜಲಮಯವಾದುದರಿಂದ ಸ್ಥಳವು ಸಂಕುಚಿತವಾಗುತ್ತಲಿತ್ತು.

೪೩. ಅನೇಕ ಬಗೆಯ ಪಕ್ಷಿಜಾತಿಯ ಧ್ವನಿಯಿಂದ ಶೋಭಿತವಾಗಿತ್ತು, ಇಂತಹ ಹಿಮಶೀತಲವಾದ ಮತ್ತು ಗಿರಿರಾಜನಾದ ಹಿಮವಂತನನ್ನು ಭಾರ್ಗವರಾಮನು ಹೊಂದಿದನು.

೪೪. ಭೃಗುವಂಶ ಶ್ರೇಷ್ಠನೂ, ಉದಾರಚಿತ್ತವುಳ್ಳವನೂ ಆದ ರಾಮನು ಸಂತೋಷದಿಂದ ಕೂಡಿದವನಾಗಿ ತನ್ನ ಶಕ್ತಿ ವಿಶೇಷದಿಂದ ಆ ಗಿರಿಯನ್ನು ಹತ್ತಿದನು, ಅನಂತರದಲ್ಲಿ ಅದರ ಗಹನವಾದ ವನವನ್ನು ಪ್ರವೇಶಿಸಿದನು.

ವಿಚಚಾರ ಶನೈ ರಾಜನ್ನುಪಶಲ್ಯಮಹೀರುಹಮ್ ।
ಸ ತತ್ರ ವಿಚರನ್ ದಿಕ್ಷು ಹರಿಣೀಭಿಃ ಸಮಂತತಃ ॥ ೪೫ ॥

ವೀಕ್ಷ್ಯಮಾಣೋ ಮುದಂ ಲೇಭೇ ಸಾಶಂಕಂ ಮುಗ್ಧದೃಷ್ಟಿಭಿಃ ।
ಸ ತತ್ರ ಕುಸುಮಾನೋದಗಂಧಿಭಿರ್ವನವಾಯುಭಿಃ ॥ ೪೬ ॥

ವೀಜ್ಯಮಾನೋ ಜಹರ್ಷೇ ಸ ವೀಕ್ಷ್ಯೋದಾರಾಂ ವನಶ್ರಿಯಮ್ ।
ವಿವಿಧಾಶ್ಚ ಸ್ಥಲೀಃ ಸೂಕ್ಷ್ಮಮುಪರಿಕ್ರಮ್ಯ ಭಾರ್ಗವಃ ॥ ೪೭ ॥

ದ್ವಂದ್ವಾಂಶ್ಚ ಧಾತೂನ್ ವಿವಿಧಾನ್ ಪಶ್ಯನ್ನೇವಮತರ್ಕಯತ್ ।
ಅಹೋಽಯಂ ಸರ್ವಶೈಲಾನಾಮಾಧಿಪತ್ಯೇಽಭಿಷೇಚಿತಃ ॥ ೪೮ ॥

ಬ್ರಹ್ಮಣಾ ಯಜ್ಞಭಾಕ್ ಚೈವ ಸ್ಥಾನೇ ಸಂಪ್ರತಿಪಾದಿತಃ ।
ಅಸ್ಯ ಶೈಲಾಧಿರಾಜತ್ವಂ ಸುವ್ಯಕ್ತಮಭಿಲಕ್ಷ್ಯತೇ ॥ ೪೯ ॥

---

೪೫. ರಾಜನೆ! ಅಲ್ಲಿ ರಾಮನು ಪರ್ವತದ ಪ್ರಾಂತಭೂಮಿಯನ್ನೆಲ್ಲ ಮೆಲ್ಲಗೆ ಸಂಚರಿಸಿದನು. ಅವನು ಸಂಚರಿಸಿದ ಸ್ಥಳದ ಸುತ್ತಲೂ ಹೆಣ್ಣು ಜಿಂಕೆಗಳು ಓಡಾಡುತ್ತಿದ್ದುವು.

೪೬. ಶಂಕೆಯಿಂದ ಕೂಡಿ ಮುಗ್ಧದೃಷ್ಟಿಯುಳ್ಳ ಜಿಂಕೆಗಳಿಂದ ನೋಡಲ್ಪಡುತ್ತಿದ್ದ ರಾಮನು ಅತ್ಯಾನಂದವನ್ನು ಹೊಂದಿದನು, ಮತ್ತು ಅಲ್ಲಿ ಪುಷ್ಪಗಳ ಸುಗಂಧದಿಂದ ಕೂಡಿ ಬೀಸುವ ಗಾಳಿಯನ್ನು ಸೇವಿಸಿದನು.

೪೭. ಮಂದಮಾರುತದಿಂದ ಸೇವಿಸಲ್ಪಡುತ್ತ ಉದಾರವಾದ ವನಲಕ್ಷ್ಮಿಯನ್ನು ನೋಡಿ ಆನಂದಚಕಿತನಾದನು. ಅನೇಕ ರಮ್ಯಸ್ಥಳಗಳನ್ನು ಸೂಕ್ಷ್ಮವಾಗಿ ವಿಮರ್ಶಿಸುತ್ತ ಭಾರ್ಗವರಾಮನು ಅದರಮೇಲೆ ಸಂಚರಿಸಿದನು.

೪೮. ಪರಸ್ಪರ ವಿರುದ್ಧವರ್ಣ ರಂಜಿತವಾದ ದ್ವಂದ್ವರೂಪವಾದ ಧಾತುಗಳಿಂದ ಉಂಟಾದ ಶೋಭೆಯನ್ನು ನೋಡಿ ರಾಮನು ಈ ರೀತಿಯಾಗಿ ಊಹಿಸಿದನು, ಈ ಪರ್ವತವು ನಿಖಿಲ ಪರ್ವತಗಳ ಆಧಿಪತ್ಯದಲ್ಲಿ ಪಟ್ಟಾಭಿಷಿಕ್ತವಾಗಿದೆ ; ಆಶ್ಚರ್ಯ.

೪೯, ಮತ್ತು ಈ ಪರ್ವತವು ಯಜ್ಞದಲ್ಲಿ ಹವಿಸ್ಸಿನ ಅಂಶಕ್ಕೆ ಭಾಗಿಯಾಗಿ ಬ್ರಹ್ಮನಿಂದ ಕಲ್ಪಿಸಲ್ಪಟ್ಟಿದೆ. ಅದು ಯುಕ್ತವಾದುದು. ಇದರಲ್ಲಿರುವ ಗಿರಿರಾಜತ್ವವು ಸ್ಪಷ್ಟವಾಗಿ ಕಾಣುತ್ತಲಿದೆ.

ರಮ್ಯೈಃ ಕೀಚಕವೇಣೂನಾಂ ಮಧುರೀಕೃತಕಾನನಃ ।
ನಿತಂಬಸ್ಥಲಸಂಸಕ್ತತುಷಾರನಿಚಯೈರಯಮ್ ॥ ೫೦ ॥

ವಿಭಾತೀವಾಹಿತಸ್ವಚ್ಛಪರೀತಧವಲಾಂಶುಕಃ ।
ನಿಬಿಡಶ್ರಿತನೀಹಾರನಿಕರೇಣ ತಥೋಪರಿ ॥ ೫೧ ॥

ನಾನಾವರ್ಣೋತ್ತರಾಸಂಗಾವೃತಾಂಗ ಇವ ಲಕ್ಷ್ಯತೇ ।
ಚಂದನಾಗುರುಕರ್ಪೂರಕಸ್ತೂರೀಕುಂಕುಮಾದಿಭಿಃ ॥ ೫೨ ॥

ಅಲಂಕೃತಾಂಗಃ ಸುವ್ಯಕ್ತಂ ದೃಶ್ಯತೇಽಹೋ ವಿಲಾಸಿವತ್ ।
ಮೃಗೇಂದ್ರಾಹತದಂತೀಂದ್ರಕುಂಭಸ್ಥಲಪರಿಚ್ಯುತೈಃ ॥ ೫೩ ॥

ಸ್ಥೂಲಮುಕ್ತೋತ್ಕರೈರೇಷ ವಿಭಾತಿ ಪರಿತೋ ಗಿರಿಃ ।
ನಾನಾವೃಕ್ಷಲತಾವಲ್ಲೀಪುಷ್ಪಾಲಂಕೃತಮೂರ್ಧಜಃ ॥ ೫೪ ॥

---

೫೦. ಕೀಚಕವೆಂಬ ವಂಶವಾದ್ಯಗಳ ಧ್ವನಿಯಿಂದ ಅರಣ್ಯಾಭೂಮಿಯನ್ನು ಮಧುರವನ್ನಾಗಿಮಾಡಿಕೊಂಡಿದೆ. ಮತ್ತು ಇದರ ನಿತಂಬಸ್ಥಳಗಳಲ್ಲಿ ಮಂಜಿನ ರಾಶಿಯು ಕಲ್ಲಿನಂತೆ ಬಿದ್ದು ಶೋಭಿಸುತ್ತಲಿದೆ.

೫೧. ಅಂತಹ ಹಿಮರಾಶಿಯಿಂದ ಸ್ವಚ್ಛವಾದ ಶುಭ್ರವಸ್ತ್ರವನ್ನು ಧರಿಸಿರುವಂತೆ ಗಿರಿಯು ಪ್ರಕಾಶಿಸುತ್ತಿದೆ. ಹೀಗೆ ಪರ್ವತದ ಮೇಲುಭಾಗದಲ್ಲಿ ಮಂಜಿನ ರಾಶಿಯು ದಟ್ಟವಾಗಿ ಆಶ್ರಯಿಸಿಕೊಂಡಿದೆ.

೫೨. ಚಂದನ, ಅಗುರು, ಕರ್ಪೂರ, ಕಸ್ತೂರೀ ಮತ್ತು ಕುಂಕುಮ ಮುಂತಾದ ನಾನಾವರ್ಣದ ಧಾತುಗಳಿಂದ ನಾನಾವರ್ಣದ ಉತ್ತರೀಯ ಪ್ರಾವರಣ ವಸ್ತ್ರದಿಂದ ಅಂಗವನ್ನು ಆಚ್ಛಾದಿಸಿ ಕೊಂಡಿರುವಂತೆ ತೋರುತ್ತಿದೆ.

೫೩. ಸಿಂಹಗಳಿಂದ ಸಂಹರಿಸಲ್ಪಟ್ಟ ಗಜೇಂದ್ರಗಳ ಕುಂಭ ಸ್ಥಳಗಳಿಂದ ಚೆಲ್ಲಿ ರುವ ಮುತ್ತುಗಳು ಸುತ್ತಲೂ ಹರಡಿರುವುದರಿಂದ ವಿಲಾಸಿ ಪುರುಷನಂತೆ ಅಂಗವನ್ನು ಅಲಂಕರಿಸಿಕೊಂಡಂತೆ ತೋರುತ್ತಿದೆ.

೫೪. ಈ ಗಿರಿಯು ಗಜ ಕುಂಭಸ್ಥಲದಿಂದ ಬಿದ್ದಿರುವ ಸ್ಥೂಲವಾದ ಮುತ್ತು ಗಳಿಂದ ಸುತ್ತಲೂ ರಮ್ಯವಾಗಿ ಪ್ರಕಾಶಿಸುತ್ತಿದೆ. ಮತ್ತು ಅನೇಕ ವಿಧವಾದ ವೃಕ್ಷ, ಲತಾ ಮತ್ತು ವಲ್ಲಿಗಳ ಹೂಗಳಿಂದ ಅಲಂಕರಿಸಲ್ಪಟ್ಟ ಕೂದಲುಳ್ಳದ್ದರಂತೆ ಶೋಭಿ ಸುತ್ತಿದೆ.

ನೀರಂಧ್ರಾಂಚಿತಮೇಘೌಘವಿತಾನಸಮಲಂಕೃತಃ ।
ನಾನಾಧಾತುವಿಚಿತ್ರಾಂಗಃ ಸರ್ವರತ್ನವಿಭೂಷಿತಃ ॥ ೫೫ ॥

ಕೈಲಾಸವ್ಯಾಜವಿಲಸತ್ಸಿತಚ್ಛತ್ರವಿರಾಜಿತಃ ।
ಗಜಾಶ್ವಮುಖಯೂಥೈಶ್ಚ ಸಮಂತಾತ್ಪರಿವಾರಿತಃ ॥ ೫೬ ॥

ರತ್ನದೀಪಮಹಾದ್ವಾರಶಿಲಾಕಂದರಮಂದಿರಃ ।
ವಿವಿಕ್ತಗಹ್ವರಾಸ್ಥಾನಮಧ್ಯಸಿಂಹಾಸನಾಶ್ರಯಃ ॥ ೫೭ ॥

ಸಮಂತಾತ್ಪ್ರತಿಸಂಸಕ್ತತರುವೇತ್ರವತಾಂ ಶನೈಃ ।
ದೃಷ್ಟ್ವಾ ಜನೈರನಾಸಾದ್ಯೋ ಮಹಾರಾಜಾಧಿರಾಜವತ್ ॥ ೫೮ ॥

ದೋಧೂಯಮಾನೋ ವಿಚರಚ್ಚಮರೀಚಾರುಚಾಮರೈಃ ।
ಮಯೂರೈರುಪನೃತ್ಯದ್ಭಿರ್ಗಾಯದ್ಭಿಶ್ಚೈವ ಕಿನ್ನರೈಃ ॥ ೫೯ ॥

---

೫೫. ರಂಧ್ರವಿಲ್ಲದಂತೆ ವ್ಯಾಪಿಸಿರುವ ಮೋಡಗಳ ಗುಂಪೆಂಬ ರಮಣೀಯವಾದ ಮೇಲುಛಾವಣಿಯಿಂದ ಅಲಂಕರಿಸಲ್ಪಟ್ಟಿರುವುದು. ಹಾಗು ಅನೇಕ ವರ್ಣ ಧಾತುಗಳಿಂದ ವಿಚಿತ್ರವಾದ ದೇಹವುಳ್ಳದ್ದೂ, ಅನೇಕ ರತ್ನಗಳಿಂದ ಶೃಂಗರಿಸಲ್ಪಟ್ಟಿದ್ದೂ ಆಗಿದೆ.

೫೬. ಬೆಳ್ಳಿಯ ಕೈಲಾಸಪರ್ವತವೆಂಬ ನೆಪದಿಂದ ಶ್ವೇತಚ್ಛತ್ರದಿಂದ ರಾಜಿಸುವುದೂ, ಮತ್ತು ಆನೆ-ಕುದುರೆಗಳ ಗುಂಪೆಂಬ ಗಜಾಶ್ವ ಸೈನ್ಯದಿಂದ ಸುತ್ತಲೂ ಸುತ್ತುವರಿಯಲ್ಪಟ್ಟಿರುವುದೂ ಆಗಿದೆ.

೫೭. ರತ್ನ ದೀಪಗಳಿಂದ ದೀಪ್ತವಾದ ಮಹಾದ್ವಾರಗಳಿಂದ ಕೂಡಿದ ಶಿಲಾಮಯವಾದ ಗವಿಗಳೆಂಬ ಮಂದಿರಗಳನ್ನೂ ವಿಜನವೂ ಗಹನವೂ ಆದ ಸ್ಥಾನವೆಂಬ ಆಸ್ಥಾನ ಮಧ್ಯ ಸಿಂಹಾಸನವನ್ನೂ ಆಶ್ರಯಿಸಿರುವಂತೆ ತೋರುತ್ತಿದೆ.

೫೮. ಮತ್ತು ಗಿರಿಯು ಸುತ್ತಲೂ ಮರಗಳೆಂಬ ದಂಡಧಾರಿಗಳು ಗುಂಪಾಗಿ ನಿಂತಿರುವುದರಿಂದ ಮಹಾರಾಜಾಧಿರಾಜನಂತೆ ಸಾಮಾನ್ಯಜನರಿಂದ ಬಲು ಬೇಗ ಕಂಡು ಸಮೀಪವನ್ನು ಹೊಂದಲು ಅಶಕ್ಯವಾಗಿರುವುದು.

೫೯. ಅಲ್ಲಲ್ಲಿ ಸಂಚರಿಸುವ ಚಮರಮೃಗಗಳ ಸುಂದರವಾದ ಬಾಲವೆಂಬ ಚಾಮರಗಳಿಂದ ಸೇವಿಸಲ್ಪಡುತ್ತಲೂ ಗಾಯನಮಾಡುತ್ತಿರುವ ಕಿನ್ನರರಿಂದಲೂ ನೃತ್ಯ ಮಾಡುತ್ತಲಿದ್ದ ನವಿಲುಗಳಿಂದಲೂ ರಾಜಸೇವೆಯನ್ನು ಸ್ವೀಕರಿಸುತ್ತಲೂ ಇದೆ.

ಸತ್ತ್ವಜಾತೈರನೇಕೈಶ್ಚ ಸೇವ್ಯಮಾನೋ ವಿರಾಜತೇ ।
ವ್ಯಕ್ತಮೇನಾಚಲೇಂದ್ರಾಣಾಮಧಿರಾಜ್ಯಪದೇ ಸ್ಥಿತಃ　　|| ೬೦ ||

ಭುನಕ್ತ್ಯಾಕ್ರಮ್ಯ ವಸುಧಾಂ ಸಮಗ್ರಾಂ ಶ್ರಿಯಮೋಜಸಾ ।
ಏವಂ ಸಂಚಿಂತಯಾನಃ ಸ ಹಿಮಾದ್ರಿವನಗಹ್ವರೇ　　|| ೬೧ ||

ವಿಚಚಾರ ಚಿರಂ ರಾಮೋ ಮುದಾ ಪರಮಯಾ ಯುತಃ ।
ಆಸಸಾದ ವನೇ ತಸ್ಮಿನ್ ವಿಪುಲೇ ಭೃಗುಪುಂಗವಃ　　|| ೬೨ ||

ಸರೋವರಂ ಮಹಾರಾಜ ವಿಪುಲಂ ವಿಮಲೋದಕಮ್ ।
ಕುಮುದೋತ್ಪಲಕಲ್ಹಾರನಿಕರೈರುಪಶೋಭಿತಮ್　　|| ೬೩ ||

ಪಂಕಜೈರುತ್ಪಲೈಶ್ಚೈವ ರಕ್ತಪೀತೈಃ ಸಿತಾಸಿತಃ ।
ಅನ್ಯೈಶ್ಚ ಜಲಜೈರ್ವೃಕ್ಷೈಃ ಸರ್ವತಃ ಸಮಲಂಕೃತಮ್　　|| ೬೪ ||

---

೬೦. ಹೀಗೆಯೇ ಅನೇಕ ಪ್ರಾಣಿಗಳಿಂದ ವಿವಿಧವಾಗಿ ಸೇವಿಸಲ್ಪಡುತ್ತ ಪ್ರಕಾಶಿಸುತ್ತಲಿದೆ. ಆದುದರಿಂದ ಪರ್ವತಗಳಿಗೆಲ್ಲ ಅಧಿರಾಜಪದವಿಯಲ್ಲಿ ಹಿಮವಂತನಿರುವುದೆಂಬುದು ಈ ಚಿಹ್ನಗಳಿಂದ ವ್ಯಕ್ತವಾಗಿ ತೋರುತ್ತಿದೆ.

೬೧. ಈ ಗಿರಿಯು ತನ್ನ ಪ್ರಭಾವ ವ್ಯಾಪ್ತಿಯಿಂದ ಸಂಪೂರ್ಣ ಭೂಮಿಯನ್ನು ವಶೀಕರಿಸಿ ಎಲ್ಲ ಸಂಪತ್ತನ್ನು ಭುಂಜಿಸುತ್ತಿದೆ, ರಾಮನು ಈ ರೀತಿಯಾಗಿ ಹಿಮಾಲಯಪರ್ವತದ ಗಹನವಾದ ವನಗಳಲ್ಲಿ ಚಿಂತಿಸಿದನು.

೬೨. ಚಿಂತಿಸುತ್ತ ಭೃಗುವಂಶತಿಲಕನಾದ ರಾಮನು ಪರಮಾನಂದದಿಂದ ಕೂಡಿ ಬಹುಕಾಲ ಅಲ್ಲಲ್ಲಿ ಸಂಚರಿಸಿದನು, ಮತ್ತು ಅಲ್ಲೊಂದು ವಿಸ್ತಾರವಾದ ವನದಲ್ಲಿ ಸಮಿಾಪಿಸಿದನು.

೬೩. ಮಹಾರಾಜನೆ, ಅಲ್ಲಿ ಕನ್ನೈದಿಲೆ, ತಾವರೆ, ಸೌಗಂಧಿಕ ಮುಂತಾದ ವಿವಿಧ ಪುಷ್ಪಗಳಿಂದ ಶೋಭಿಸಲ್ಪಟ್ಟ, ನಿರ್ಮಲವಾದ ಜಲದಿಂದ ಪೂರ್ಣವಾದ ಮತ್ತು ವಿಸ್ತಾರವಾದ ಒಂದು ಸರೋವರಕ್ಕೆ ಬಂದನು.

೬೪. ಆ ಸರೋವರವು ಕೆಂಪು, ಹಳದಿ, ಕಪ್ಪು, ಬಿಳುಪು ಬಣ್ಣಗಳಿಂದ ಕೂಡಿದ ತಾವರೆ-ನೈದಿಲೆ ಹೂಗಳಿಂದ ಅಲಂಕರಿಸಲ್ಪಟ್ಟಿರುವುದೂ, ಮತ್ತು ನೀರಿನಲ್ಲಿ ಹುಟ್ಟಿದ ಇತರಾನೇಕ ವೃಕ್ಷಗಳಿಂದ ಸುತ್ತಲೂ ರಮಣೀಯವೂ ಆಗಿತ್ತು.

ಹಂಸಸಾರಸದಾತ್ಯೂಹಕಾರಂಡವಶತೈರಪಿ ।
ಜೀವಂಜೀವಕಚಕ್ರಾಹ್ವಕುರರಭ್ರಮರೋತ್ಕರೈಃ ॥ ೬೫ ॥

ಸಂಘುಷ್ಯಮಾಣಂ ಪರಿತಃ ಸೇವಿತಂ ಮಂದವಾಯುನಾ ।
ಶಫರೀಮತ್ಸ್ಯಸಂಘೈಶ್ಚ ವಿಚರದ್ಭಿರಿತಸ್ತತಃ ॥ ೬೬ ॥

ಅಂತರ್ಜನಿತಕಲ್ಲೋಲೈರ್ನೃತ್ಯಮಾನಮಿವಾಭಿತಃ ।
ಆಸಸಾದ ಭೃಗುಶ್ರೇಷ್ಠಸ್ತತ್ಸರೋವರಮುತ್ತಮಮ್ ॥ ೬೭ ॥

ನಾನಾಪತತ್ರಿವಿರುತೈರ್ಮುಖರೀಕೃತದಿಕ್ತಟಮ್ ।
ಸ ತಸ್ಯ ತೀರೇ ವಿಪುಲಂ ಕೃತ್ವಾಶ್ರಮಪದಂ ಶುಭಮ್ ॥ ೬೮ ॥

ರಾಮೋ ಮತಿಮತಾಂ ಶ್ರೇಷ್ಠಸ್ತಪಸೇ ಚ ಮನೋ ದಧೇ ।
ಶಾಕಮೂಲಫಲಾಹಾರೋ ನಿಯತಂ ನಿಯತೇಂದ್ರಿಯಃ ॥ ೬೯ ॥

---

೬೫. ಮತ್ತು ಆ ಸರೋವರದಲ್ಲಿ ಹಂಸ, ಸಾರಸ, ದಾತ್ಯೂಹ, ಕಾರಂಡವ, ಜೀವಂಜೀವಕ, ಚಕ್ರವಾಕ, ಕುರರ, ಮತ್ತು ಭ್ರಮರವೆಂಬ ಬಗೆಬಗೆಯ ನೂರಾರು ಜಲಚರ ಪಕ್ಷಿಗಳು ಇದ್ದುವು.

೬೬. ಆ ಸರೋವರವು ಇಂತಹ ಪಕ್ಷಿಗಳ ಧ್ವನಿಗಳಿಂದ ಘೋಷಿಸಲ್ಪಡುವುದಾಗಿಯೂ ಮಂದವಾಯುವಿನಿಂದ ಸೇವಿಸಲ್ಪಡುವುದಾಗಿಯೂ ಇಲ್ಲಿಂದಲ್ಲಿಗೆ ಚಲಿಸುತ್ತಿದ್ದ ಶಫರೀ ಮುಂತಾದ ಮೀನುಗಳ ಜಾತಿಯಿಂದ ಆಶ್ರಯಿಸಲ್ಪಡುವುದಾಗಿಯೂ ಇತ್ತು.

೬೭. ನೀರಿನ ಒಳಭಾಗದಲ್ಲಿ ಹುಟ್ಟಿದ ಅನೇಕ ತರಂಗ ಮಾಲೆಯಿಂದ ಪಾರ್ಶ್ವಗಳಲ್ಲಿ ನರ್ತನ ಮಾಡುತ್ತಿದೆಯೋ ಎಂಬಂತೆ ತೋರುವ ಆ ಉತ್ತಮವಾದ ಸರೋವರವನ್ನು ಭೃಗೂತ್ತಮನಾದ ರಾಮನು ಹೊಂದಿದನು.

೬೮. ಮತ್ತು ಆ ಪರ್ವತದಲ್ಲಿ ಬಗೆಬಗೆಯ ಪಕ್ಷಿಧ್ವನಿಗಳಿಂದ ದಿಗಂತಗಳು ಕಿವುಡಾಗಿದ್ದುವು. ಆ ರಾಮನು ಆ ಸರೋವರದ ತೀರದಲ್ಲಿ ವಿಸ್ತಾರವೂ ಮಂಗಲಕರವೂ ಆದ ಪರ್ಣಶಾಲೆಯನ್ನು ರಚಿಸಿಕೊಂಡನು.

೬೯. ಬುದ್ಧಿಶಾಲಿಗಳಲ್ಲಿ ಶ್ರೇಷ್ಠನಾದ ರಾಮನು ಅಲ್ಲಿ ತಪಸ್ಸನ್ನು ಮಾಡಲು ಮನಸ್ಸಿಟ್ಟನು. ಮತ್ತು ತಪಸ್ಸಿನಲ್ಲಿ ಶಾಕ-ಮೂಲ ಫಲಗಳ ಆಹಾರವನ್ನೂ ಇಂದ್ರಿಯ ನಿಗ್ರಹವನ್ನೂ ನಿಯತವಾಗಿ ಇರಿಸಿಕೊಂಡನು.

ತಪಶ್ಚಚಾರ ದೇವೇಶಂ ವಿನಿವೇಶ್ಯಾತ್ಮಮಾನಸೇ ।
ಭೃಗೂಪದಿಷ್ಟಮಾರ್ಗೇಣ ಭಕ್ತ್ಯಾ ಪರಮಯಾ ಯುತಃ ॥ ೭೦ ॥

ಪೂಜಯಾಮಾಸ ದೇವೇಶಮೇಕಾಗ್ರಮನಸಾ ನೃಪ ।
ಅನಿಕೇತಃ ಸ ವರ್ಷಾಸು ಶಿಶಿರೇ ಜಲಸಂಶ್ರಯಃ ॥ ೭೧ ॥

ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥಶ್ಚಚಾರೈವಂ ತಪಶ್ಚಿರಮ್ ।
ರಿಪೂನ್ನಿರ್ಜಿತ್ಯ ಕಾಮಾದೀನೂರ್ಮಿಷಟ್ಕಂ ವಿಧೂಯ ಚ ॥ ೭೨ ॥

ದ್ವಂದ್ವೈರನುದ್ವೇಜಿತಧೀಸ್ತಾಪದೋಷೈರನಾಕುಲಃ ।
ಯಮೈಃ ಸನಿಯಮೈಶ್ಚೈವ ಶುದ್ಧದೇಹಃ ಸಮಾಹಿತಃ ॥ ೭೩ ॥

ವಶೀಚಕಾರ ಪವನಂ ಪ್ರಾಣಾಯಾಮೇನ ದೇಹಗಮ್ ।
ಜಿತಪದ್ಮಾಸನೋ ಮೌನೀ ಸ್ಥಿರಚಿತ್ತೋ ಮಹಾಮುನಿಃ ॥ ೭೪ ॥

---

೭೦. ಹೀಗೆ ದೇವೇಶ್ವರನನ್ನು ಅಂತಃಕರಣದಲ್ಲಿ ಇರಿಸಿ ಭೃಗುಮುನಿಯು ಉಪದೇಶವಿತ್ತ ಮಾರ್ಗದಿಂದ ಪರಮಭಕ್ತಿ ಸಮೇತನಾಗಿ ತಪವನ್ನು ಆಚರಿಸಿದನು.

೭೧. ನೃಪತಿಯೆ ! ಏಕಾಗ್ರವಾದ ಮನಸ್ಸಿನಿಂದ ತಪವನ್ನು ಆಚರಿಸುತ್ತ ಮಹಾ ದೇವನನ್ನು ಅರ್ಚಿಸಿದನು. ವರ್ಷಋತುವಿನಲ್ಲಿ ವಸತಿಗೋಸ್ಕರ ನಿಕೇತನವಿಲ್ಲದೆ, ಶಿಶಿರ ಋತುವಿನಲ್ಲಿ ಜಲದಲ್ಲಿ ವಾಸಿಸಿ ತಪಸ್ಸನ್ನು ಮಾಡಿ ಶೀತೋಷ್ಣಗಳನ್ನು ಸಹಿಸಿದನು.

೭೨. ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿ ಕುಳಿತು ತಪಸ್ಸನ್ನು ಮಾಡಿದನು, ಈ ರೀತಿ ಇವನ ತಪಶ್ಚರ್ಯೆಯು ಬಹುಕಾಲ ನಡೆಯಿತು, ಕಾಮ ಮುಂತಾದ ಅಂತಃ ಶತ್ರುಗಳನ್ನು ಜಯಿಸಿದನು, ಹಸಿವು ಮುಂತಾದ ಊರ್ಮಿಗಳನ್ನು ದೂರ ನಿವಾರಿಸಿದನು.

೭೩. ಶೀತೋಷ್ಣದ್ವಂದ್ವಗಳಿಂದ ಉದ್ವೇಗ ಹೊಂದದಿರುವನೂ, ತಾಪತ್ರಯ ದೋಷಗಳಿಂದ ಪೀಡಾವೇದನೆಯನ್ನು ಅರಿಯದವನೂ, ಯಮ-ನಿಯಮಾನುಷ್ಠಾನ ಗಳಿಂದ ಶುದ್ಧವಾದ ದೇಹವುಳ್ಳವನೂ ಆಗಿ ಸಮಾಧಾನವುಳ್ಳ ಚಿತ್ತದಿಂದ ತಪಸ್ಸನ್ನು ಮಾಡಿದನು.

೭೪. ಪ್ರಾಣಾಯಾಮವಿಧಾನದಿಂದ ದೇಹಮಧ್ಯದಲ್ಲಿ ಸಂಚರಿಸುವ ಪ್ರಾಣ ವಾಯುವನ್ನು ನಿಗ್ರಹಿಸಿದನು. ಮಹಾಮುನಿಯಾದ ರಾಮನು ಜಿತವಾದ ಪದ್ಮಾಸನದಿಂದ ಕುಳಿತು ಮೌನದಿಂದ ಮನಸ್ಸನ್ನು ಶಿವನಲ್ಲಿ ಸ್ಥಿರಪಡಿಸಿ ಧ್ಯಾನಮಾಡಿದನು.

ವಶೀಚಕಾರ ಚಾಕ್ಷಾಣಿ ಪ್ರತ್ಯಾಹಾರಪರಾಯಣಃ ।
ಧಾರಣಾಭಿಃ ಸ್ಥಿರೀಚಕ್ರೇ ಮನಶ್ಚಂಚಲಮಾತ್ಮವಾನ್ ॥ ೭೫ ॥

ಧ್ಯಾನೇನ ದೇವದೇವೇಶಂ ದದರ್ಶ ಪರಮೇಶ್ವರಮ್ ।
ಸ್ವಸ್ಥಾಂತಃಕರಣೋ ಮೈತ್ರಃ ಸರ್ವಬಾಧಾವಿವರ್ಜಿತಃ ॥ ೭೬ ॥

ಚಿಂತಯಾಮಾಸ ದೇವೇಶಂ ಧ್ಯಾನೇ ದೃಷ್ಟ್ವಾ ಜಗದ್ಗುರುಮ್ ।
ಧ್ಯೇಯಾವಸ್ಥಿತಚಿತ್ತಾತ್ಮಾ ನಿಶ್ಚಲೇಂದ್ರಿಯದೇಹವಾನ್ ॥ ೭೭ ॥

ಆಕಾಲಾವಧಿ ಸೋಽತಿಷ್ಠನ್ನಿವಾತಸ್ಥಪ್ರದೀಪವತ್ ।
ಜಪಂಶ್ಚ ದೇವದೇವೇಶಂ ಧ್ಯಾಯಂಶ್ಚ ಸ್ವಮನೀಷಯಾ ॥ ೭೮ ॥

ಆರಾಧಯದಮೇಯಾತ್ಮಾ ಸರ್ವಭಾವಸ್ಥಮೀಶ್ವರಮ್ ।
ತತಃ ಸ ನಿಷ್ಕಲಂ ರೂಪಮೈಶ್ವರಂ ಯನ್ನಿರಂಜನಮ್ ॥ ೭೯ ॥

---

೭೫. ಪ್ರತ್ಯಾಹಾರವೆಂಬ ಯೋಗಾಂಗಾಭ್ಯಾಸದಿಂದ ಇಂದ್ರಿಯಗಳನ್ನು ವಶಪಡಿಸಿಕೊಂಡನು. ಧಾರಣಾಭ್ಯಾಸದಿಂದ ಪ್ರಮಾದವಿಲ್ಲದವನಾಗಿ ಚಂಚಲವಾದ ಮನಸ್ಸನ್ನು ಸ್ಥಿರಮಾಡಿದನು.

೭೬. ಮತ್ತು ದೇವೋತ್ತಮನಾದ ಪರಮಶಿವನನ್ನು ಧ್ಯಾನದೃಷ್ಟಿಯಿಂದ ಸಾಕ್ಷಾತ್ಕರಿಸಿದನು, ಮತ್ತು ಸ್ವಸ್ಥವಾದ ಅಂತಃಕರಣವುಳ್ಳವನೂ, ಸರ್ವ ಪ್ರಾಣಿಗಳಲ್ಲಿ ಪ್ರಧಾನವಾಗಿ ಮೈತ್ರಿಯನ್ನು ಬೆಳೆಸಿದವನೂ, ಸರ್ವ ಪ್ರಾಣಿಗಳಲ್ಲಿ ಅಹಿಂಸಾಪರಾಯಣನೂ, ಆದನು.

೭೭. ಮತ್ತು ಅಚಂಚಲವಾದ ದೇಹ-ಮಾನಸಗಳಿಂದ ಕೂಡಿ ಮಾನಸವನ್ನು ಧ್ಯೇಯ ವಸ್ತುವಿನ ಆಕಾರದಲ್ಲಿರಿಸಿ ದೇವೋತ್ತಮನೂ, ಜಗದ್ಗುರುವೂ ಆದ ಶಂಕರನನ್ನು ಧ್ಯಾನಕಾಲದಲ್ಲಿ ಚಿಂತಿಸಿದನು.

೭೮. ತನ್ನ ಮಾನಸ ವ್ಯಾಪಾರದಿಂದ ದೇವ ದೇವೋತ್ತಮನಾದ ಶಿವನನ್ನು ಧ್ಯಾನಮಾಡುತ್ತಲೂ ಜಪಿಸುತ್ತಲೂ ಧ್ಯಾನಕಾಲವು ಸಮಗ್ರವಾಗಿ ಮುಗಿಯುವವರೆಗೆ ನಿರ್ವಾತಪ್ರದೇಶದಲ್ಲಿದ್ದ ದೀಪದಂತೆ ಅಚಂಚಲನಾಗಿದ್ದನು.

೭೯. ಅಗಣನೀಯವಾದ ಮನಸ್ಸುಳ್ಳವನಾಗಿ ಸರ್ವಭಾವ ವಸ್ತುಗಳನ್ನು ವ್ಯಾಪಿಸಿರುವ, ನಿಷ್ಕಲ, ನಿರಂಜನವಾದ ಐಶ್ವರರೂಪದಿಂದ ಕೂಡಿರುವ ಮಹೇಶ್ವರನನ್ನು ಆರಾಧಿಸಿದನು.

**ಪರಂ ಜ್ಯೋತಿರಚಿಂತ್ಯಂ ಯದ್ಯೋಗಿಧ್ಯೇಯಮನುತ್ತಮಮ್ ।**
**ನಿತ್ಯಂ ಶುದ್ಧಂ ಸದಾ ಶಾಂತಮತೀಂದ್ರಿಯಮನೌಪಮಮ್ ॥ ೮೦ ॥**

**ಆನಂದಮಾತ್ರಮಚಲಂ ವ್ಯಾಪ್ತಾಶೇಷಚರಾಚರಮ್ ।**
**ಚಿಂತಯಾಮಾಸ ತದ್ರೂಪಂ ದೇವದೇವಸ್ಯ ಭಾರ್ಗವಃ ॥ ೮೧ ॥**

**ಸುಚಿರಂ ರಾಜಶಾರ್ದೂಲ ಸೋಽಹಂಭಾವಸಮನ್ವಿತಃ ॥ ೮೨ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಾವಿಂಶತಿತಮೋಽಧ್ಯಾಯಃ**

---

೮೦. ಮತ್ತು ಆ ಐಶ್ವರರೂಪವು ದಿವ್ಯಜ್ಯೋತಿರೂಪವೂ, ಅಚಿಂತ್ಯವೂ, ಯೋಗಿಗಳಿಗೆ ಧ್ಯಾನಗಮ್ಯವೂ, ನಿರುಪಮವೂ, ನಿತ್ಯವೂ, ಶುದ್ಧವೂ, ನಿರ್ವಿಕಾರವೂ, ಇಂದ್ರಿಯಗೋಚರವಾಗದಿರುವುದೂ, ಉತ್ತಮೋತ್ತಮವೂ ಆಗಿರುವುದು.

೮೧. ಆನಂದಮಾತ್ರಘನವೂ, ಶಾಶ್ವತವೂ, ಅಶೇಷ ಚರಾಚರಗಳನ್ನು ವ್ಯಾಪಿಸಿದುದೂ ಆದ ದೇವದೇವನಾದ ಈಶ್ವರನ ಆ ರೂಪವನ್ನು ಭಾರ್ಗವರಾಮನು ಧ್ಯಾನ ಮಾಡಿದನು.

೮೨. ರಾಜಶ್ರೇಷ್ಠನೆ ! ಹಿಂದೆ ಹೇಳಿದ ವಿಶೇಷ ಗುಣಗಳಿಂದ ಕೂಡಿದ ಐಶ್ವರ ರೂಪವನ್ನು ಸೋಽಹಂಭಾವನೆ (ನಾನು ಅವನೇ ಎಂಬ ಭಾವನೆ) ಯಿಂದ ಕೂಡಿ ಚಿರ ಕಾಲ ಧ್ಯಾನಮಾಡಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು.

# ತ್ರಯೋವಿಂಶತಿತಮೋಽಧ್ಯಾಯಃ

ವಸಿಷ್ಠ ಉವಾಚ :—

ತಪಸ್ವಿನಂ ಸದಾ ರಾಮಮೇಕಾಗ್ರಮನಸಂ ಭವೇ ।
ರಹಸ್ಯೇಕಾಂತನಿರತಂ ನಿಯತಂ ಸಂಶಿತವ್ರತಮ್ ॥ ೧ ॥

ಶ್ರುತ್ವಾ ತಮೃಷಯಃ ಸರ್ವೇ ತಪೋನಿರ್ಧೂತಕಲ್ಮಷಾಃ ।
ಜ್ಞಾನಕರ್ಮವಯೋವೃದ್ಧಾ ಮಹಾಂತಃ ಶಂಸಿತವ್ರತಾಃ ॥ ೨ ॥

ದಿದೃಕ್ಷವಃ ಸಮಾಜಗ್ಮುಃ ಕುತೂಹಲಸಮನ್ವಿತಾಃ ।
ಖ್ಯಾಪಯಂತಸ್ತಪಃ ಶ್ರೇಷ್ಠಂ ತಸ್ಯ ರಾಜನ್ ಮಹಾತ್ಮನಃ ॥ ೩ ॥

ಭೃಗ್ವತ್ರಿಕ್ರತುಜಾಬಾಲಿವಾಮದೇವಮೃಕಂಡವಃ ।
ಸಂಭಾವಯಂತಸ್ತೇ ರಾಮಂ ಮುನಯೋ ವೃದ್ಧಸಮ್ಮತಾಃ ॥ ೪ ॥

---

೧. ವಸಿಷ್ಠಮುನಿಯು ಇಂತೆಂದನು :—ಈಶ್ವರನಲ್ಲಿ ಏಕಾಗ್ರವಾದ ಮಾನಸವುಳ್ಳ, ಏಕಾಂತದಲ್ಲಿ ರಹಸ್ಯವಾದ ವಾಸವುಳ್ಳ, ನಿಯಮೋಪೇತವಾದ ಮತ್ತು ತೀವ್ರ ವ್ರತಗಳನ್ನು ಕೈಗೊಂಡಿರುವ ತಪಸ್ವಿಯಾದ ರಾಮನನ್ನು ಮುನಿಜನರು ಕೇಳುವವರಾದರು.

೨. ತಪಸ್ಸಿನಿಂದ ಪಾಪಕಳಂಕವನ್ನು ದೂರಮಾಡಿರುವ, ಜ್ಞಾನ-ಕರ್ಮ-ವಯಸ್ಸು ಎಲ್ಲದರಲ್ಲಿಯೂ ವೃದ್ಧರಾದ, ಪ್ರಶಸ್ತವಾದ ವ್ರತಗಳನ್ನು ಅನುಷ್ಠಾನ ಮಾಡುವ, ಮತ್ತು ಮಹಾತ್ಮರಾದ ಸಕಲ ಋಷಿಗಳು ರಾಮನ ತಪಶ್ಚರ್ಯೆಯನ್ನು ಕೇಳಿದರು.

೩. ರಾಜನೇ! ಮಹಾತ್ಮನಾದ ಭಾರ್ಗವರಾಮನ ಶ್ರೇಷ್ಠ ತಪೋಮಹಿಮೆಯನ್ನು ಪ್ರಖ್ಯಾತಿಗೊಳಿಸಲು ಕುತೂಹಲದಿಂದ ಕೂಡಿ ರಾಮನನ್ನು ನೋಡಬೇಕೆಂಬ ಇಷ್ಟದಿಂದ ಎಲ್ಲರೂ ಬಂದರು.

೪. ಭೃಗು, ಅತ್ರಿ, ಕ್ರತು, ಜಾಬಾಲಿ, ವಾಮದೇವ, ಮೃಕಂಡು ಮುಂತಾದ ವೃದ್ಧರಿಗೆ ಮಾನ್ಯರಾದ ಮಹರ್ಷಿಗಳೆಲ್ಲರೂ ಭಾರ್ಗವರಾಮನನ್ನು ಗೌರವಿಸಲು ರಾಮನ ಸನ್ನಿಧಿಗೆ ಬಂದರು.

ಆಜಗ್ಮುರಾಶ್ರಮಂ ತಸ್ಯ ರಾಮಸ್ಯ ತಪತಸ್ತಪಃ ।
ದೂರಾದೇವ ಮಹಾಂತಸ್ತೇ ಪುಣ್ಯಕ್ಷೇತ್ರನಿವಾಸಿನಃ ॥ ೫ ॥

ಗರೀಯಃ ಸರ್ವಲೋಕೇಷು ತಪ್ರೋಽಗ್ರ್ಯಂ ಜ್ಞಾನಮೇವ ಚ ।
ಪ್ರಶಸ್ಯ ತಸ್ಯ ತೇ ಸರ್ವೇ ಪ್ರಯಯುಃ ಸ್ವಂ ಸ್ವಮಾಶ್ರಮಮ್ ॥ ೬ ॥

ಏವಂ ಪ್ರವರ್ತತಸ್ತಸ್ಯ ರಾಮಸ್ಯ ಭಗವಾನ್ ಶಿವಃ ।
ಪ್ರಸನ್ನಚೇತಾ ನಿತರಾಂ ಬಭೂವ ನೃಪಸತ್ತಮ ॥ ೭ ॥

ಜಿಜ್ಞಾಸುಸ್ತಸ್ಯ ಭಗವಾನ್ ಭಕ್ತಿಮಾತ್ಮನಿ ಶಂಕರಃ ।
ಮೃಗವ್ಯಾಧವಪುರ್ಭೂತ್ವಾ ಯಯೌ ರಾಜಂಸ್ತದಂತಿಕಮ್ ॥ ೮ ॥

ಭಿನ್ನಾಂಜನಚಯಪ್ರಖ್ಯೋ ರಕ್ತಾಂತಾಯತಲೋಚನಃ ।
ಶರಚಾಪಧರಃ ಪ್ರಾಂಶುರ್ವಜ್ರಸಂಹನನೋ ಯುವಾ ॥ ೯ ॥

---

೫. ಪುಣ್ಯಕ್ಷೇತ್ರಗಳಲ್ಲಿ ವಾಸಮಾಡುತ್ತಲಿದ್ದ ಆ ಮಹಾತ್ಮರಾದ ಮುನಿಗಳು ದೂರದಿಂದ ಆ ರಾಮನ ಮಹತ್ತರವಾದ ತಪವನ್ನು ನೋಡಲು ಅವನ ಆಶ್ರಮಕ್ಕೆ ಬಂದರು.

೬. ಸಮಸ್ತ ಲೋಕಗಳಲ್ಲಿಯೂ ಪ್ರಶಸ್ತವೂ ಗಣ್ಯವೂ ಆದ ಆ ರಾಮನ ತಪಸ್ಸನ್ನೂ ಜ್ಞಾನವನ್ನೂ ಪ್ರಶಂಸೆಮಾಡಿ ಅಲ್ಲಿಗೆ ಬಂದಿರುವ ಮುನಿ ಜನರೆಲ್ಲರೂ ತಮ್ಮ ತಮ್ಮ ಆಶ್ರಮಕ್ಕೆ ತೆರಳಿದರು.

೭. ನೃಪತಿ ಶ್ರೇಷ್ಠನೆ! ಈ ರೀತಿಯಾಗಿ ರಾಮನು ಶಂಕರ ಪ್ರಸಾದಕ್ಕೋಸ್ಕರ ತಪವನ್ನು ಆಚರಿಸುತ್ತಿರಲು ಭಗವಂತನಾದ ಶಂಕರನು ಅತಿಶಯವಾಗಿ ರಾಮನ ಮೇಲೆ ಪ್ರಸನ್ನವಾದ ಚಿತ್ತವುಳ್ಳವನಾದನು.

೮. ರಾಜನೇ! ಪೂಜ್ಯನಾದ ಶಂಕರನು ಆ ರಾಮನ ಭಕ್ತಿಯ ಪಾರಮ್ಯವನ್ನು ಪರೀಕ್ಷಿಸಲು ಇಷ್ಟವುಳ್ಳವನಾಗಿ ಮೃಗಬೇಟೆಯನ್ನಾಡುವ ವ್ಯಾಧನ ವಿಗ್ರಹವನ್ನು ಧರಿಸಿ ರಾಮನ ಸಮೀಪಕ್ಕೆ ಬಂದನು.

೯. ಆ ಕೃತ್ರಿಮ ಕಿರಾತ ವಿಗ್ರಹವುಳ್ಳ ಶಂಕರನು ಭೇದಿಸಿದ ಅಂಜನ-ಗಿರಿಯಂತೆ ಕಾಂತಿ, ನೇತ್ರಾಂತದಲ್ಲಿ ವಿಶಾಲವಾದ ರಕ್ತವರ್ಣ, ಪಾಣಿಯಲ್ಲಿ ಬಿಲ್ಲು ಬಾಣಗಳು ಮತ್ತು ಉನ್ನತವೂ ವಜ್ರದಂತೆ ದೃಢವೂ ಆದ ಶರೀರ-ಇವುಗಳಿಂದ ಪ್ರಕಾಶಿಸುತ್ತಿದ್ದನು.

ಉತ್ತುಂಗಹನುಬಾಹ್ವಂಸಃ ಪಿಂಗಲಶ್ಮಶ್ರುಮೂರ್ಧಜಃ ।
ಮಾಂಸವಿಸ್ರವಸಾಗಂಧೀ ಸರ್ವಪ್ರಾಣಿವಿಹಿಂಸಕಃ ॥ ೧೦ ॥

ಸಕಂಟಕಲತಾಸ್ಪರ್ಶಕ್ಷತಾರೂಷಿತವಿಗ್ರಹಃ ।
ಸಾಸೃಕ್ ಸಂಚರ್ವಮಾಣಶ್ಚ ಮಾಂಸಖಂಡಮನೇಕಶಃ ॥ ೧೧ ॥

ಮಾಂಸಭಾರದ್ವಯಾಲಂಬಿವಿಧಾನಾನತಕಂಧರಃ ।
ಆರುಜಂಸ್ತರಸಾ ವೃಕ್ಷಾನೂರುವೇಗೇನ ಸಂಘಶಃ ॥ ೧೨ ॥

ಅಭ್ಯವರ್ತತ ತಂ ದೇಶಂ ಪಾದಚಾರೀವ ಪರ್ವತಃ ।
ಆಸಾದ್ಯ ಸರಸಸ್ತಸ್ಯ ತೀರಂ ಕುಸುಮಿತದ್ರುಮಮ್ ॥ ೧೩ ॥

ನ್ಯದಧಾನ್ಮಾಂಸಭಾರಂ ಚ ಸ ಮೂಲೇ ಕಸ್ಯಚಿತ್ತರೋಃ
ನಿಷಸಾದ ಕ್ಷಣಂ ತತ್ರ ತರುಚ್ಛಾಯಾಮುಪಾಶ್ರಿತಃ ॥ ೧೪ ॥

---

೧೦. ಮತ್ತು ಎತ್ತರವಾದ ಹನು, ಬಾಹು, ಹೆಗಲುಗಳುಳ್ಳವನೂ, ಹೊಂಬಣ್ಣದ ಮೀಸೆ, ಕೂದಲುಗಳುಳ್ಳವನೂ, ಮಾಂಸದ ಮತ್ತು ವಸೆಯ ದುರ್ಗಂಧವುಳ್ಳವನೂ ಮತ್ತು ಸಕಲ ಪ್ರಾಣಿಗಳ ಹಿಂಸೆಯನ್ನು ಉಪಕ್ರಮಿಸಿದವನೂ ಆಗಿದ್ದನು.

೧೧. ವನವನ್ನು ಸಂಚರಿಸುತ್ತಿರಲು ಕಂಟಕಗಳುಳ್ಳ ಲತಾಸ್ಪರ್ಶದಿಂದ ಉಂಟಾದ ವ್ರಣಗಳ ಸಮೂಹದಿಂದ ವ್ಯಾಪ್ತವಾದ ದೇಹವುಳ್ಳವನಾಗಿಯೂ ರಕ್ತವನ್ನು ಸುರಿಸುತ್ತಿರುವ ಮಾಂಸ ಖಂಡಗಳನ್ನು ಮತ್ತೆ ಮತ್ತೆ ಚರ್ವಿಸುವವನಾಗಿಯೂ ಇದ್ದನು.

೧೨. ಮಾಂಸದಿಂದ ತುಂಬಿದ ಎರಡು ಮೂಟೆಗಳನ್ನು ಹೆಗಲಿನ ಮೇಲಿಟ್ಟು ಕೊಂಡಿರುವುದರಿಂದ ಆ ಭಾರದಿಂದ ಬಗ್ಗಿದ ಕತ್ತು ಉಳ್ಳವನೂ, ತೊಡೆಗಳ ವೇಗಭರದಿಂದ ಪಕ್ಕಗಳಲ್ಲಿರುವ ಗಿಡಮರಗಳನ್ನು ಗುಂಪು ಗುಂಪಾಗಿ ಮುರಿದುಹಾಕುವವನೂ ಆಗಿದ್ದನು.

೧೩. ಇಂತಹ ಕಿರಾತನು ಪಾದಚಾರಿಯಾದ ಪರ್ವತದಂತೆ ಆ ಸ್ಥಳಕ್ಕೆ ಬಂದನು. ಮತ್ತು ಅಲ್ಲಿರುವ ಹೂ ಬಿಟ್ಟ ವೃಕ್ಷಗಳಿಂದ ಅಲಂಕರಿಸುವ ಸರೋವರದ ತೀರವನ್ನು ಹೊಂದಿದನು.

೧೪. ಅಲ್ಲಿ ಒಂದು ವೃಕ್ಷದ ಮೂಲದಲ್ಲಿ ತಾನು ತಂದಿರುವ ಮಾಂಸದ ಎರಡು ಗಂಟುಗಳನ್ನು ಇರಿಸಿದನು, ಹಾಗು ವೃಕ್ಷದ ಛಾಯಾ ಸುಖವನ್ನು ಅನುಭವಿಸಿ ಸ್ವಲ್ಪ ಹೊತ್ತು ಅಲ್ಲಿಯೇ ಕುಳಿತುಕೊಂಡನು.

ತಿಷ್ಠಂತಂ ಸರಸಸ್ತೀರೇ ಸೋಽಪಶ್ಯದ್ಭೃಗುನಂದನಮ್ ।
ತತಃ ಸ ಶೀಘ್ರಮುತ್ಥಾಯ ಸಮೀಪಮುಪಸೃತ್ಯ ಚ　　॥ ೧೫ ॥

ರಾಮಾಯ ಸೇಷುಚಾಪಾಭ್ಯಾಂ ಕರಾಭ್ಯಾಂ ವಿದಧೇಽಂಜಲಿಮ್ ।
ಸಜಲಾಂಭೋದಸನ್ನಾದಗಂಭೀರೇಣ ಸ್ವರೇಣ ಚ　　॥ ೧೬ ॥

ಜಗಾದ ಭೃಗುಶಾರ್ದೂಲಂ ಗುಹಾಂತರವಿಸರ್ಪಿಣಾ ।
ತೋಷಪ್ರವರ್ಷವ್ಯಾಧೋಽಹಂ ವಸಾಮ್ಯಸ್ಮಿನ್ ಮಹಾವನೇ　　॥ ೧೭ ॥

ಈಶೋಽಹಮಸ್ಯ ದೇಶಸ್ಯ ಸಪ್ರಾಣಿತರುವೀರುಧಃ ।
ಚರಾಮಿ ಸಮಚಿತ್ತಾತ್ಮಾ ನಾನಾಸತ್ತ್ವಮಿಷಾಶನಃ　　॥ ೧೮ ॥

ಸಮತ್ವಂ ಸರ್ವಭೂತೇಷು ನ ಚ ಪಿತ್ರಾದಯೋಽಪಿ ಮೇ ।
ಅಭಕ್ಷ್ಯಾಗಮ್ಯಪೇಯಾದಿಖಂಡವಸ್ತುಷು ಕುತ್ರಚಿತ್　　॥ ೧೯ ॥

---

೧೫, ಆಗ ಕಿರಾತನು ಸರೋವರದ ತೀರದಲ್ಲಿ ಇದ್ದ ಭೃಗುಪುತ್ರನಾದ ರಾಮನನ್ನು ನೋಡಿದನು. ಆ ಕ್ಷಣದಲ್ಲಿ ಅಲ್ಲಿಂದ ಎದ್ದು ಶೀಘ್ರವಾಗಿ ರಾಮನ ಸಮೀಪ ಪ್ರದೇಶಕ್ಕೆ ಸೇರಿದನು.

೧೬. ಮತ್ತು ಬಿಲ್ಲು ಬಾಣಗಳಿಂದ ಸಹಿತವಾದ ಹಸ್ತಗಳಿಂದ ರಾಮನಿಗೆ ಅಂಜಲಿಯನ್ನು ಕಟ್ಟಿಕೊಂಡು ನಮಸ್ಕರಿಸಿದನು. ಹಾಗು ನೀರಿನಿಂದ ತುಂಬಿರುವ ಮೋಡದ ಗುಡುಗಿನ ಶಬ್ದದಂತೆ ಗಂಭೀರಧ್ವನಿಯಿಂದ ಮಾತನಾಡಿದನು.

೧೭. ಭೃಗೂತ್ತಮನನ್ನು ಕುರಿತು ಸಮೀಪದಲ್ಲಿದ್ದ ಗವಿಗಳಲ್ಲಿ ಹರಡುವ ಉಚ್ಚಧ್ವನಿಯಿಂದ ಮಾತನಾಡಿದನು. ನಾನು ತೋಷಪ್ರವರ್ಷನೆಂಬ ವ್ಯಾಧನು; ನಾನು ಈ ಅರಣ್ಯದಲ್ಲಿ ವಾಸಮಾಡುತ್ತಲಿದ್ದೇನೆ.

೧೮. ಪ್ರಾಣಿ–ವೃಕ್ಷ–ಲತಾ ಮುಂತಾದುವುಗಳಿಂದ ಕೂಡಿದ ಈ ಅರಣ್ಯ ಪ್ರದೇಶಕ್ಕೆ ನಾನು ಪ್ರಭುವಾಗಿರುವೆನು. ಅನೇಕ ಪ್ರಾಣಿಗಳ ಮಾಂಸವನ್ನು ಭುಂಜಿಸುತ್ತ ನಿರ್ವಿಕಾರವಾದ ಚಿತ್ತ–ಆತ್ಮರುಳ್ಳವನಾಗಿ ಇಲ್ಲಿ ಸಂಚರಿಸುತ್ತಿರುವೆನು.

೧೯. ನಾನು ಸರ್ವ ಪ್ರಾಣಿಗಳಲ್ಲಿಯೂ ಸಮತ್ವದಿಂದಿರುವೆನು. ನನಗೆ ತಂದೆ-ತಾಯಿ ಮುಂತಾದವರಾರೂ ಇಲ್ಲ. ಅಭಕ್ಷ್ಯ, ಅಗಮ್ಯ, ಅಪೇಯ ಮುಂತಾದ ವಸ್ತುಸೇವನೆಯಲ್ಲಿ ನಾನು ಸ್ವೇಚ್ಛೆಯಿಂದಿರುವೆನು.

ಕೃತ್ಯಾಕೃತ್ಯವಿಧೌ ಚೈವ ನ ವಿಶೇಷಿತಧೀರಹಮ್ ।
ಪ್ರಪನ್ನೋ ನಾಭಿಗಮನಂ ನಿವಾಸಮಪಿ ಕಸ್ಯಚಿತ್ ॥ ೨೦ ॥

ಶಕ್ರಸ್ಯಾಪಿ ಬಲೇ ನಾಹಮನುಮನ್ಯೇ ನ ಸಂಶಯಃ ।
ಜಾನತೇ ತದ್ಯಥಾ ಸರ್ವೇ ದೇಶೋಽಯಂ ಮದುಪಾಶ್ರಯಃ ॥ ೨೧ ॥

ತಸ್ಮಾನ್ನ ಕಶ್ಚಿದಾಯಾತಿ ಮಮಾತ್ರಾನುಮತಿಂ ವಿನಾ ।
ಇತ್ಯೇಷ ಮಮ ವೃತ್ತಾಂತಃ ಕಾರ್ತ್ಸ್ನ್ಯೇನ ಕಥಿತಸ್ತವ ॥ ೨೨ ॥

ತ್ವಂ ಚ ಮೇ ಬ್ರೂಹಿ ತತ್ತ್ವೇನ ನಿಜವೃತ್ತಮಶೇಷತಃ ।
ಕಸ್ತ್ವಂ ಕಸ್ಮಾದಿಹಾಯಾತಃ ಕಿಮರ್ಥಮಿಹ ಧಿಷ್ಠಿತಃ
ಉದ್ಯತೋಽನ್ಯತ್ರ ವಾ ಗಂತುಂ ಕಿಂ ವಾ ತವ ಚಿಕೀರ್ಷಿತಮ್॥ ೨೩ ॥

---

೨೦. ಕರ್ತವ್ಯ-ಅಕರ್ತವ್ಯವೆಂಬ ವಿಧಿ ನಿಷೇಧಗಳು ನನಗೆ ಒಂದೇ ವಿಧವಾಗಿವೆ. ಅವುಗಳಲ್ಲಿ ವಿಶೇಷ ಬುದ್ಧಿಯು ನನಗೆ ಇಲ್ಲ. ನಾನು ಯಾರೊಬ್ಬರ ನಿವಾಸಭೂಮಿಗೆ ಹೋದವನೂ ಅಲ್ಲ.

೨೧. ಇಂದ್ರನು ವಿಶೇಷವಾಗಿ ಶಕ್ತಿಯಿಂದ ಕೂಡಿದವನು ಎಂಬುದನ್ನು ನಾನು ಒಪ್ಪುವವನಲ್ಲ, ಇದು ನಿಜ. ಈ ದೇಶವೆಲ್ಲವೂ ನನ್ನನ್ನಾಶ್ರಯಿಸಿರುವುದು ಎಂಬುದನ್ನು ಸರ್ವರೂ ತಿಳಿದಿರುತ್ತಾರೆ.

೨೨. ಆದುದರಿಂದ ನನ್ನ ಅನುಮತಿಯನ್ನು ಸ್ವೀಕರಿಸದೆ ಇಲ್ಲಿಗೆ ಯಾರೂ ಬರುವುದಿಲ್ಲ, ಈ ರೀತಿಯಾಗಿ ನನ್ನ ಸಮಾಚಾರವನ್ನು ಸಂಪೂರ್ಣವಾಗಿ ನಿನಗೆ ತಿಳಿಸಿರುವೆನು.

೨೩. ಇನ್ನು ಮುಂದೆ ನೀನು ನಿನ್ನ ಸಂಪೂರ್ಣವೃತ್ತಾಂತವನ್ನು ನನಗೆ ಮರೆಮಾಚದೆ ಸತ್ಯವಾಗಿ ಹೇಳು ; ನೀನು ಯಾರು ? ಇಲ್ಲಿಗೆ ಏಕೆ ಬಂದಿರುವೆ ? ಏಕೆ ಇಲ್ಲಿ ಸ್ಥಿರವಾಗಿ ವಾಸಮಾಡುತ್ತೀ ? ಅಥವಾ ಈ ಮಾರ್ಗವಾಗಿ ಬೇರೊಂದು ಕಡೆ ಪ್ರಯಾಣಮಾಡಲು ಉದ್ಯುಕ್ತನಾಗಿರುತ್ತೀಯೆ ? ನೀನು ಮಾಡಬೇಕೆಂದಿರುವ ಇಷ್ಟವೇನು ?

ವಸಿಷ್ಠ ಉವಾಚ :—

ಇತ್ಯೇವಮುಕ್ತಃ ಪ್ರಹಸನ್ ತೇನ ರಾಮೋ ಮಹಾದ್ಯುತಿಃ ।
ತೂಷ್ಣೀಂ ಕ್ಷಣಮಿವ ಸ್ಥಿತ್ವಾ ದಧ್ಯೌ ಕಿಂಚಿದವಾಙ್ಮುಖಃ ॥ ೨೪ ॥

ಕೋಽಯಮೇವ ದುರಾಧರ್ಷಃ ಸಜಲಾಂಭೋದನಿಸ್ವನಃ ।
ಬ್ರವೀತಿ ಚ ಗಿರೋಽತ್ಯರ್ಥಂ ವಿಸ್ಪಷ್ಟಾರ್ಥಪದಾಕ್ಷರಾಃ ॥ ೨೫ ॥

ಕಿಂ ತು ಮೇ ಮಹತೀಂ ಶಂಕಾಂ ತನುರಸ್ಯ ತನೋತಿ ವೈ ।
ವಿಜಾತಿಸಂಶ್ರಯತ್ವೇನ ರಮಣೀಯಾ ಯಥಾ ನರಾಃ ॥ ೨೬ ॥

ಏವಂ ಚಿಂತಯತಸ್ತಸ್ಯ ನಿಮಿತ್ತಾನಿ ಶುಭಾನಿ ವೈ ।
ಬಭೂವುರ್ಭುವಿ ದೇಹೇ ಚ ಸ್ವಾಭಿಪ್ರೇತಾರ್ಥದಾನ್ಯಲಮ್ ॥ ೨೭ ॥

ತತೋ ವಿಮೃಶ್ಯ ಬಹುಶೋ ಮನಸಾ ಭೃಗುಪುಂಗವಃ ।
ಉವಾಚ ಶನಕೈರ್ವ್ಯಾಧಂ ವಚನಂ ಸೂನೃತಾಕ್ಷರಮ್ ॥ ೨೮ ॥

---

೨೪. ವಸಿಷ್ಠಮುನಿಯು ಇಂತೆಂದನು:– ಆ ಕಿರಾತನಿಂದ ಈ ರೀತಿಯಾಗಿ ಹೇಳಲ್ಪಟ್ಟ ಮಹಾತೇಜೋಮಯನಾದ ರಾಮನು ನಗುತ್ತ ಸ್ವಲ್ಪಹೊತ್ತು ಸುಮ್ಮನೆ ಇದ್ದು ಸ್ವಲ್ಪ ಕೆಳಕ್ಕೆ ಮುಖವನ್ನು ಬಾಗಿಸಿಕೊಂಡು ಚಿಂತಿಸಿದನು.

೨೫. ಮತ್ತೊಬ್ಬರಿಂದ ತಿರಸ್ಕರಿಸಲಾಗದ ಈ ವ್ಯಾಧನು ಯಾರು? ಜಲಭರಿತ ಮೇಘದಂತೆ ಗಂಭೀರ ಧ್ವನಿಯಿಂದ ಪದ-ಅಕ್ಷರಗಳನ್ನು ಸ್ಪಷ್ಟವಾಗಿ ಉಚ್ಚರಿಸಿ ಹೆಚ್ಚಾಗಿ ಮಾತುಗಳನ್ನು ಆಡುತ್ತಿರುವನು.

೨೬. ಆದರೆ ಇವನ ದೇಹಸನ್ನಿವೇಶವು ನನಗೆ ಅನೇಕ ವಿಧದ ಶಂಕೆಯನ್ನು ಉಂಟುಮಾಡುತ್ತಿದೆ. ನರರು ಬೇರೆ ಜಾತಿಯನ್ನು ಅವಲಂಬಿಸಿ ಪ್ರಕಾಶಿಸುವಂತೆ ಇವನ ದೇಹವು ತೋರುತ್ತಿದೆ.

೨೭. ರಾಮನು ಈ ರೀತಿಯಾಗಿ ಚಿಂತಿಸುತ್ತಿರುವಷ್ಟರಲ್ಲಿ ರಾಮನಿಗೆ ಇಷ್ಟಾರ್ಥ ಸಿದ್ಧಿಯನ್ನು ಸೂಚಿಸುವ ಶುಭ ಶಕುನಗಳು ಭೂಮ್ಯಾಕಾಶಗಳಲ್ಲಿ ಅತಿಶಯವಾಗಿ ಉಂಟಾದುವು.

೨೮. ಅನಂತರದಲ್ಲಿ ಭೃಗುನಂದನನಾದ ರಾಮನು ಮನಸ್ಸಿನಲ್ಲಿ ಹೆಚ್ಚಾಗಿ ವಿಮರ್ಶಮಾಡಿ ವ್ಯಾಧನನ್ನು ಕುರಿತು ಪ್ರಿಯವಾದ ಅಕ್ಷರ ಸಂಘಟನೆಯುಳ್ಳ ವಚನವನ್ನು ಮೆಲ್ಲಗೆ ಮಾತನಾಡಿದನು.

ಜಾಮದಗ್ನ್ಯೋಽಸ್ಮಿ ಭದ್ರಂ ತೇ ರಾಮೋ ನಾಮ್ನಾ ತು ಭಾರ್ಗವಃ ।
ತಪಶ್ಚರ್ತುಮಿಹಾಯಾತಃ ಸಾಂಪ್ರತಂ ಗುರುಶಾಸನಾತ್ ॥ ೨೯ ॥

ತಪಸಾ ಸರ್ವಲೋಕೇಶಂ ಭಕ್ತ್ಯಾ ಚ ನಿಯಮೇನ ಚ ।
ಆರಾಧಯಿತುಮಸ್ಮಿಂಸ್ತು ಚಿರಾಯಾಹಂ ಸಮುದ್ಯತಃ ॥ ೩೦ ॥

ತಸ್ಮಾತ್ ಸರ್ವೇಶ್ವರಂ ಸರ್ವಶರಣ್ಯಮಭಯಪ್ರದಮ್ ।
ತ್ರಿನೇತ್ರಂ ಪಾಪದಮನಂ ಶಂಕರಂ ಭಕ್ತವತ್ಸಲಂ । ॥ ೩೧ ॥

ತಪಸಾ ತೋಷಯಿಷ್ಯಾಮಿ ಸರ್ವಜ್ಞಂ ತ್ರಿಪುರಾಂತಕಮ್ ।
ಆಶ್ರಮೇಽಸ್ಮಿನ್ ಸರಸ್ತೀರೇ ನಿಯಮಂ ಸಮುಪಾಶ್ರಿತಃ ॥ ೩೨ ॥

ಭಕ್ತಾನುಕಂಪೀ ಭಗವಾನ್ ಯಾವತ್ ಪ್ರತ್ಯಕ್ಷತಾಂ ಹರಃ ।
ಉಪೈತಿ ತಾವದತ್ರೈವ ಸ್ಥಾಸ್ಯಾಮೀತಿ ಮತಿರ್ಮಮ ॥ ೩೩ ॥

---

೨೯. ವ್ಯಾಧನೆ ! ನಿನಗೆ ಶುಭವಾಗಲಿ. ನಾನು ಜಮದಗ್ನಿ ಪುತ್ರನೂ ಭಾರ್ಗವನೆಂಬ ನಾಮಾಂಕಿತನೂ ಆಗಿರುವೆನು, ನನ್ನ ಗುರುವಿನ ಆಜ್ಞೆಯನ್ನು ಅನುಸರಿಸಿ ತಪಸ್ಸನ್ನು ಆಚರಿಸಲು ಇಲ್ಲಿಗೆ ಬಂದಿರುವೆನು.

೩೦. ತಪಶ್ಚರ್ಯೆ, ಭಕ್ತಿ, ಮತ್ತು ನಿಯಮಾನುಷ್ಠಾನಗಳಿಂದ ಸರ್ವಲೋಕೇಶ್ವರನಾದ ಮಹೇಶ್ವರನನ್ನು ಚಿರಕಾಲ ಆರಾಧಿಸಲು ಈ ವನದಲ್ಲಿ ಉದ್ಯುಕ್ತನಾಗಿರುವೆನು.

೩೧. ಆದುದರಿಂದ ಸರ್ವರಿಗೂ ಈಶ್ವರನೂ, ಜಗತ್ತಿಗೆ ಶರಣಪ್ರದನೂ, ಅಭಯಂಕರನೂ, ತ್ರಿನೇತ್ರನೂ, ಪಾಪಧ್ವಂಸಕನೂ, ಮತ್ತು ಭಕ್ತರಲ್ಲಿ ನಿರವಧಿಯಾದ ವಾತ್ಸಲ್ಯವುಳ್ಳವನೂ ಆದ ಮಹೇಶ್ವರನನ್ನು ಆರಾಧಿಸುತ್ತಿದ್ದೇನೆ.

೩೨. ಈ ಸರೋವರದ ತೀರದಲ್ಲಿರುವ ಈ ಆಶ್ರಮದಲ್ಲಿ ನಿಯಮವನ್ನು ಕೈಗೊಂಡವನಾಗಿ ಸರ್ವಜ್ಞನೂ ತ್ರಿಪುರಸಂಹಾರಕನೂ ಆದ ಪರಮೇಶ್ವರನನ್ನು ತಪಸ್ಸಿನಿಂದ ಸಂತೋಷಪಡಿಸುತ್ತೇನೆ.

೩೩. ಭಕ್ತರಲ್ಲಿ ದಯೆತೋರುವ, ಷಡ್ಗುಣೈಶ್ವರ್ಯಸಂಪನ್ನನಾದ ಈಶ್ವರನು ಪ್ರಸನ್ನನಾಗಿ ಪ್ರತ್ಯಕ್ಷನಾಗಿ ಬರುವವರೆಗೆ ಇಲ್ಲಿಯೇ ತಪಸ್ಸನ್ನು ಆಚರಿಸುತ್ತಿರಬೇಕೆಂಬುದು ನನ್ನ ಇಷ್ಟವು.

ತಸ್ಮಾದಿತಸ್ತ್ವಯಾದ್ಯೈವ ಗಂತುಮನ್ಯತ್ರ ಯುಜ್ಯತೇ ।
ನ ಚೇದ್ಭವತಿ ಮೇ ಹಾನಿಃ ಸ್ವಕೃತೇರ್ನಿಯಮಸ್ಯ ಚ ॥ ೩೪ ॥

ಮಾನನೀಯೋಽಥವಾಹಂ ತೇ ಭಕ್ತ್ಯಾ ದೇಶಾಂತರಾತಿಥಿಃ ।
ಸ್ವನಿವಾಸಮುಪಾಯಾತಸ್ತಪಸ್ವೀ ಚ ತಥಾ ಮುನಿಃ ॥ ೩೫ ॥

ತ್ವತ್ಸನ್ನಿಧೌ ನಿವಾಸೋ ಮೇ ಭವೇತ್ಪಾಪಾಯ ಕೇವಲಮ್ ।
ತವ ಚಾಪ್ಯಸುಖೋದರ್ಕಂ ಮತ್ಸಮೀಪನಿಷೇವಣಮ್ ॥ ೩೬ ॥

ಸ ತ್ವಂ ಮದಾಶ್ರಮೋಪಾಂತೇ ಪರಿಚಂಕ್ರಮಣಾದಿಕಮ್ ।
ಪರಿತ್ಯಜ್ಯ ಸುಖೀ ಭೂಯಾ ಲೋಕಯೋರುಭಯೋರಪಿ ॥ ೩೭ ॥

ವಸಿಷ್ಠ ಉವಾಚ :
ಇತಿ ತಸ್ಯ ವಚಃ ಶ್ರುತ್ವಾ ಸ ಭೂಯೋ ಭೃಗುಪುಂಗವಮ್ ।
ಉವಾಚ ರೋಷತಾಮ್ರಾಕ್ಷಸ್ತಾಮ್ರಾಕ್ಷಮಿದಮುತ್ತರಮ್ ॥ ೩೮ ॥

---

೩೪. ಆದುದರಿಂದ ನೀನು ಈ ದಿನವೇ ಇಲ್ಲಿಂದ ಬೇರೊಂದು ಕಡೆಗೆ ಹೊರಟು ಹೋಗುವುದು ಯುಕ್ತವಾಗಿದೆ. ಹಾಗಿಲ್ಲದಿದ್ದರೆ ನನ್ನ ಅನುಷ್ಠಾನ ಮತ್ತು ನಿಯಮಗಳಿಗೆ ಭಂಗವುಂಟಾಗುವುದು.

೩೫. ದೇಶಾಂತರದಿಂದ ನಿನ್ನ ವಾಸಭೂಮಿಗೆ ಅತಿಥಿಯಾಗಿ ಬಂದಿರುವ ಮತ್ತು ತಪಸ್ವಿ ಮುನಿಯಾದ ನಾನು ಭಕ್ತಿಯಿಂದ ನಿನಗೆ ಅತಿಥಿ ಸತ್ಕಾರದಿಂದ ಮಾನನೀಯನೆಂದಿರುವುದಾದರೆ ಈ ನನ್ನ ಇಷ್ಟವನ್ನು ನೆರವೇರಿಸು.

೩೬. ನೀನು ಇಲ್ಲಿಯೇ ಇದ್ದು ನಿನ್ನ ಸನ್ನಿಧಿಯಲ್ಲಿ ನಾನು ವಾಸಿಸುವುದು ನನಗೆ ಕೇವಲ ಪಾಪವನ್ನುಂಟುಮಾಡುವುದು. ಹಾಗೆ ನನ್ನ ಸಮೀಪವಾಸವು ನಿನಗೂ ಪರಿಣಾಮದಲ್ಲಿ ದುಃಖಕರವಾದುದು.

೩೭. ಅಂತಹ ನೀನು ನನ್ನ ಅಶ್ರಮದ ಸಮೀಪಭೂಮಿಯಲ್ಲಿ ಸಂಚಾರ ಮುಂತಾದುದನ್ನು ಬಿಟ್ಟು ಇಹ ಮತ್ತು ಪರಲೋಕಗಳಲ್ಲಿ ಸುಖಿಯಾಗಿ ಬಾಳು.

೩೮. ವಸಿಷ್ಠಮುನಿಯು ಇಂತೆಂದನು:- ಈ ರೀತಿಯಾಗಿ ನುಡಿದಿರುವ ರಾಮನ ವಚನವನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ವ್ಯಾಧನು ಕೆಂಗಣ್ಣಿನಿಂದ ಭಾರ್ಗವರಾಮನನ್ನು ಕುರಿತು ಮುಂದೆ ಹೇಳುವಂತೆ ಮತ್ತೆ ಮಾತಾಡಿದನು.

ಬ್ರಹ್ಮನ್ ಕಿಮಿದಮತ್ಯರ್ಥಂ ಸಮೀಪೇ ವಸತಿಂ ಮಮ ।
ಪರಿಗರ್ಹಯಸೇ ಯೇನ ಕೃತಘ್ನಸ್ಯೇವ ಸಾಂಪ್ರತಮ್ ॥ ೩೯ ॥

ಕಿಂ ಮಯೋಪಕೃತಂ ಲೋಕೇ ಭವತೋಽನ್ಯಸ್ಯ ವಾ ಕ್ವಚಿತ್ ।
ಅನಾಗಸ್ಕಾರಿಣಂ ದಾಂತಂ ಕೋಽವಮನ್ಯೇತ ನಾಮತಃ ॥ ೪೦ ॥

ಸನ್ನಿಧಿಃ ಪರಿಹರ್ತವ್ಯೋ ಯದಿ ಮೇ ವಿಪ್ರಪುಂಗವ ।
ದರ್ಶನಂ ಸಹ ಸಂವಾಸಃ ಸಂಭಾಷಣಮಥಾಪಿ ಚ ॥ ೪೧ ॥

ಆಯುಷ್ಮತಾಧುನೈವಾಸ್ಮಾದಪಸರ್ತವ್ಯಮಾಶ್ರಮಾತ್ ।
ಸ್ವಸಂಶ್ರಯಂ ಪರಿತ್ಯಜ್ಯ ಕ್ವಾಹಂ ಯಾಸ್ಯೇ ಬುಭುಕ್ಷಿತಃ ॥ ೪೨ ॥

ಸ್ವಾಧಿವಾಸಂ ಪರಿತ್ಯಜ್ಯ ಭವತಾ ಚೋದಿತಃ ಕಥಮ್ ।
ಇತೋಽನ್ಯಸ್ಮಿನ್ ಗಮಿಷ್ಯಾಮಿ ದೂರೇ ನಾಹಂ ವಿಶೇಷತಃ ॥ ೪೩ ॥

---

೩೯. ಬ್ರಹ್ಮಿಷ್ಠನೆ! ಕೃತಘ್ನನ ಸಹವಾಸದಂತೆ ನನ್ನ ಸಮೀಪದಲ್ಲಿ ವಾಸಮಾಡುವುದನ್ನು ಅತಿಯಾಗಿ ಈಗ ನಿಂದಿಸುತ್ತಿರುವೆ, ಇದೇನು ?

೪೦. ನಾನು ಲೋಕದಲ್ಲಿ ನಿನಗಾಗಲಿ ಮತ್ತೊಬ್ಬನಿಗಾಗಲಿ ಎಂದಾದರೂ ಅಪಕಾರವನ್ನು ಮಾಡಿರುತ್ತೇನೆಯೇ ? ನಿರಪರಾಧಿಯೂ ಜಿತೇಂದ್ರಿಯನೂ ಆದ ನನ್ನನ್ನು ಯಾರು ನಾಮಮಾತ್ರದಿಂದಲೇ ಅವಮಾನಮಾಡುವರು ?

೪೧. ವಿಪ್ರೋತ್ತಮನೆ ! ನೀನು ನನ್ನ ಸನ್ನಿಧಿ, ದರ್ಶನ, ಸಹವಾಸ ಮತ್ತು ಸಂಭಾಷಣಗಳನ್ನು ವರ್ಜಿಸಬೇಕೆಂದು ಇಷ್ಟಪಡುತ್ತಿರುವೆಯಲ್ಲವೆ.

೪೨. ಹಾಗಾದರೆ ದೀರ್ಘಾಯುಷ್ಮಂತನಾದ ನೀನು ಈಗಲೇ ಈ ಆಶ್ರಮದಿಂದ ದೂರಹೋಗುವುದು ಉತ್ತಮವು. ಹಸಿಗೊಂಡಿರುವ ನಾನು ನನ್ನ ವಾಸಸ್ಥಳವನ್ನು ಬಿಟ್ಟು ಎಲ್ಲಿಗೆ ಹೋಗಲಿ ?

೪೩. ನನ್ನ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಕೆಂದು ನೀನು ಹೇಳಿದುದು ಹೇಗೆ ಯುಕ್ತವಾದೀತು ! ನಾನು ಈ ಸ್ಥಳದಿಂದ ವಿಶೇಷ ದೂರವಾಗಿ ಬೇರೊಂದು ಕಡೆಗೆ ಹೋಗಲಾರೆನು.

ಗಮ್ಯತಾಂ ಭವತಾನ್ಯತ್ರ ಸ್ಥೀಯತಾಮತ್ರ ವೇಚ್ಛಯಾ ।
ನಾಹಂ ಚಾಲಯಿತುಂ ಶಕ್ಯಃ ಸ್ಥಾನಾದಸ್ಮಾತ್ ಕಥಂ ಚನ ॥ ೪೪ ॥

ವಸಿಷ್ಠ ಉವಾಚ :—
ತಚ್ಛ್ರುತ್ವಾ ವಚನಂ ತಸ್ಯ ಕಿಂಚಿತ್ಕೋಪಸಮನ್ವಿತಃ ।
ತಮುವಾಚ ಪುನರ್ವಾಕ್ಯಮಿದಂ ರಾಜನ್ ಭೃಗೂದ್ವಹಃ ॥ ೪೫ ॥

ವ್ಯಾಧಜಾತಿರಿಯಂ ಕ್ರೂರಾ ಸರ್ವಸತ್ತ್ವಭಯಾವಹಾ ।
ಖಲಕರ್ಮರತಾ ನಿತ್ಯಂ ಧಿಕ್ಕೃತಾ ಸರ್ವಜಂತುಭಿಃ ॥ ೪೬ ॥

ತಸ್ಯಾಂ ಜಾತೋಽಸಿ ಪಾಪೀಯಾನ್ ಸರ್ವಪ್ರಾಣಿವಿಹಿಂಸಕಃ ।
ಸ ಕಥಂ ನ ಪರಿತ್ಯಾಜ್ಯಃ ಸುಜನೈಃ ಸ್ಯಾತ್ತು ದುರ್ಮತೇ ॥ ೪೭ ॥

ತಸ್ಮಾದ್ವಿಹೀನಜಾತೀಯಂ ವಿದಿತ್ವಾತ್ಮಾನಮಪ್ಯಥ ।
ಶೀಘ್ರಮಸ್ಮಾದ್ವ್ರಜಾನ್ಯತ್ರ ನಾತ್ರ ಕಾರ್ಯಾ ವಿಚಾರಣಾ ॥ ೪೮ ॥

---

೪೪. ನೀನು ನಿನ್ನ ಇಷ್ಟಾನುಸಾರವಾಗಿ ಬೇರೆ ಕಡೆಗೆ ಹೋಗು ಅಥವಾ ಇಲ್ಲಿಯೇ ಇರು. ನನ್ನನ್ನು ಮಾತ್ರ ಈ ಸ್ಥಳದಿಂದ ಬೇರೆ ಕಡೆಗೆ ದೂರ ಕಳಿಸಲು ಸಾಧ್ಯವಿಲ್ಲ.

೪೫. ರಾಜನೆ! ವ್ಯಾಧನ ಆ ವಚನವನ್ನು ಕೇಳಿ ಸ್ವಲ್ಪ ಕೋಪದಿಂದ ಕೂಡಿದ ಭೃಗುವಂಶತಿಲಕನಾದ ರಾಮನು ವ್ಯಾಧನನ್ನು ಕುರಿತು ಮತ್ತೆ ಈ ವಚನವನ್ನು ಹೇಳಿದನು.

೪೬. ನಿನ್ನ ಈ ವ್ಯಾಧಜಾತಿಯು ಬಹು ಕ್ರೂರವಾದುದು; ಸರ್ವಪ್ರಾಣಿಗಳಿಗೆ ಭಯವನ್ನು ಕೊಡುವುದು; ಮತ್ತು ದುಷ್ಟರಂತೆ ಹಿಂಸಾಕರ್ಮದಲ್ಲಿ ತತ್ಪರವಾಗಿರುವುದರಿಂದ ಈ ಜಾತಿಯು ಸರ್ವಪ್ರಾಣಿಗಳಿಂದಲೂ ನಿಂದಿತವಾಗಿರುವುದು.

೪೭. ನೀನು ಅಂತಹ ವ್ಯಾಧಜಾತಿಯಲ್ಲಿ ಹುಟ್ಟಿ ಸರ್ವಪ್ರಾಣಿಗಳ ಹಿಂಸೆಯ ವೃತ್ತಿಯನ್ನು ಅವಲಂಬಿಸಿದ ಪಾಪಿಯಾಗಿದ್ದೀ, ದುರ್ಬುದ್ಧಿಯೆ, ಸಾಧು ಜನಗಳಿಂದ ಇಂತಹ ನೀನು ಹೇಗೆ ತಾನೇ ತ್ಯಾಜ್ಯನಲ್ಲ?

೪೮. ಆದ್ದರಿಂದ ನೀನು ನಿನ್ನನ್ನು ಹೀನಜಾತಿಯಲ್ಲಿ ಹುಟ್ಟಿರುವ ಪಾಪಿಯೆಂಬುದನ್ನು ತಿಳಿದು ಶೀಘ್ರವಾಗಿ ಬೇರೆ ಸ್ಥಳಕ್ಕೆ ಹೊರಡು. ಈ ವಿಷಯದಲ್ಲಿ ಇನ್ನೇನೂ ವಿಚಾರಮಾಡುವುದು ಬೇಡ.

ಶರೀರತ್ರಾಣಕಾರುಣ್ಯಾತ್ ಸಮೀಪಂ ನೋಪಸರ್ಪಸಿ ।
ಯಥಾ ತ್ವಂ ಕಂಟಕಾದೀನಾಮಸಹಿಷ್ಣುತಯಾ ವ್ಯಥಾಮ್ ॥ ೪೯ ॥

ತಥಾವೇಹಿ ಸಮಸ್ತಾನಾಂ ಪ್ರಿಯಾಃ ಪ್ರಾಣಾಃ ಶರೀರಿಣಾಮ್ ।
ವ್ಯಥಾ ಚಾಭಿಹತಾನಾಂ ತು ವಿದ್ಯತೇ ಭವತೋ ಯಥಾ ॥ ೫೦ ॥

ಅಹಿಂಸಾ ಸರ್ವಭೂತಾನಾಮಿತಿ ಧರ್ಮಃ ಸನಾತನಃ ।
ಏತದ್ವಿರುದ್ಧಾಚರಣಾನ್ನಿತ್ಯಂ ಸದ್ಭಿರ್ವಿಗರ್ಹಿತಃ ॥ ೫೧ ॥

ಆತ್ಮಪ್ರಾಣಾಭಿರಕ್ಷಾರ್ಥಂ ತ್ವಮಶೇಷಶರೀರಿಣಃ ।
ಹನಿಷ್ಯಸಿ ಕಥಂ ಸತ್ಸು ನಾಪ್ನೋಷಿ ವಚನೀಯತಾಮ್ ॥ ೫೨ ॥

ತಸ್ಮಾಚ್ಛೀಘ್ರಂ ತು ಭೋ ಗಚ್ಛ ತ್ವಮೇವ ಪುರುಷಾಧಮ ।
ತ್ವಯಾ ಮೇ ಕೃತ್ಯದೋಷಸ್ಯ ಹಾನಿಶ್ಚ ನ ಭವಿಷ್ಯತಿ ॥ ೫೩ ॥

---

೪೯. ನೀನು ವನದಲ್ಲಿ ಸಂಚರಿಸುವಾಗ ಮುಳ್ಳು ಚುಚ್ಚಿ ಆಗುವ ವೇದನೆಯನ್ನು ಸಹಿಸಲಾರದೇ ಶರೀರವನ್ನು ರಕ್ಷಿಸಬೇಕೆಂಬ ಕರುಣಾವಿಶೇಷದಿಂದ ಮುಳ್ಳಿನ ಸಮೀಪಕ್ಕೆ ಹೋಗುವುದಿಲ್ಲವಷ್ಟೇ.

೫೦. ಹಾಗೆಯೇ ಎಲ್ಲ ಜಂತುಗಳಿಗೂ ತಮ್ಮ ತಮ್ಮ ಪ್ರಾಣಗಳು ಪ್ರಿಯವಾದುದೆಂದು ತಿಳಿ. ನಿನಗೆ ಏಟಾದರೆ ವ್ಯಥೆಯಾಗುವಂತೆ ಎಲ್ಲ ಪ್ರಾಣಿಗಳಿಗೂ ಏಟಿನಿಂದ ನೋವಾಗುವುದೆಂದು ತಿಳಿ.

೫೧. ಸರ್ವಪ್ರಾಣಿಗಳಿಗೆ ಹಿಂಸೆಮಾಡದಿರುವುದು ಅಹಿಂಸಾ ಎಂಬ ಶ್ರೇಷ್ಠವಾದ ಸನಾತನ ಧರ್ಮವು. ನೀನು ಅದಕ್ಕೆ ವಿರುದ್ಧವಾಗಿ ನಡೆದುಕೊಂಡಿರುವುದರಿಂದ ಸಾಧುಜನರಿಂದ ನಿಂದಿಸಲ್ಪಟ್ಟಿರುತ್ತೀ.

೫೨. ನೀನು ನಿನ್ನ ಪ್ರಾಣಗಳನ್ನು ರಕ್ಷಿಸುವುದಕ್ಕೋಸ್ಕರ ಇತರ ಅನೇಕ ಪ್ರಾಣಿಗಳನ್ನು ಕೊಲ್ಲುತ್ತೀ. ಇತರ ಜಂತುಗಳ ಪ್ರಾಣಗಳಲ್ಲಿ ನಿರ್ದಯನಾಗಿ ನಿನ್ನ ಪ್ರಾಣಗಳ ರಕ್ಷಣದಲ್ಲಿ ತೊಡಗಿರುವ ನೀನು ಹೇಗೆತಾನೆ ನಿಂದಾಸ್ಪದನಾಗಲಾರೆ?

೫೩. ಎಲೆ ಪುರುಷಾಧಮನಾದ ವ್ಯಾಧನೆ, ಈ ಕಾರಣದಿಂದ ನೀನೇ ಶೀಘ್ರವಾಗಿ ಈ ಸ್ಥಳದಿಂದ ದೂರದೇಶಕ್ಕೆ ಹೊರಡು. ಅದರಿಂದ ನನಗೂ ನನ್ನ ಸತ್ಕರ್ಮಾಚರಣಕ್ಕೂ ನಿನ್ನಿಂದ ಒದಗಬಹುದಾದ ಹಾನಿಯೂ ದೂರವಾಗುವುದು.

ನ ಚೇತ್ ಸ್ವಯಮಿತೋ ಗಚ್ಛೇಸ್ತತಸ್ತ್ವ ಬಲಾದಪಿ ।
ಅಪಸರ್ಪಣತಾಬುದ್ಧಿಮಹಮುತ್ಪಾದಯೇ ಸ್ಫುಟಮ್ ॥ ೫೪ ॥

ಕ್ಷಣಾರ್ಧಮಪಿ ತೇ ಪಾಪ ಶ್ರೇಯಸೇ ನೇಹ ಸಂಸ್ಥಿತಿಃ ।
ವಿರುದ್ಧಾಚರಣೋ ನಿತ್ಯಂ ಧರ್ಮದ್ವಿಟ್ ಕೋ ಲಭೇಚ್ಚ ಶಮ್ ॥ ೫೫ ॥

ವಸಿಷ್ಠ ಉವಾಚ :—

ರಾಮಸ್ಯ ವಚನಂ ಶ್ರುತ್ವಾ ಪ್ರೀತೋಽಪಿ ತಮಿದಂ ವಚಃ ।
ಉವಾಚ ಸಂಕ್ರುದ್ಧ ಇವ ವ್ಯಾಧರೂಪೀ ಪಿನಾಕಧೃಕ್ ॥ ೫೬ ॥

ಸರ್ವಮೇತದಹಂ ಮನ್ಯೇ ವ್ಯರ್ಥಂ ವ್ಯವಸಿತಂ ತವ ।
ಕುತಸ್ತ್ವಂ ಪ್ರಥಮೋ ಜ್ಞಾನೀ ಕುತಃ ಶಂಭುಃ ಕುತಸ್ತಪಃ ॥ ೫೭ ॥

ಕುತಸ್ತ್ವಂ ಕ್ಲಿಶ್ಯಸೇ ಮೂಢ ತಪಸಾ ತೇನ ತೇಽಧುನಾ ।
ಧ್ರುವಂ ಮಿಥ್ಯಾಪ್ರವೃತ್ತಸ್ಯ ನ ಹಿ ತುಷ್ಯತಿ ಶಂಕರಃ ॥ ೫೮ ॥

---

೫೪. ನೀನು ನೀನಾಗಿಯೇ ಇಲ್ಲಿಂದ ದೂರ ತೆರಳದೆ ಇರುವ ಪಕ್ಷದಲ್ಲಿ ನಾನು ಬಲಾತ್ಕಾರದಿಂದಲಾದರೂ ನಿನ್ನನ್ನು ಇಲ್ಲಿಂದ ಓಡಿಸಲು ಯತ್ನಿಸುವ ಆಲೋಚನೆಯನ್ನು ಮಾಡುವೆನು. ನಿನ್ನ ಸಹವಾಸವನ್ನು ನಾನು ಎಂದಿಗೂ ಸಹಿಸಲಾರೆನು.

೫೫. ಪಾಪಿಯೆ! ನನ್ನ ಸಂಗಡ ಸಹವಾಸವು ನಿನಗೆ ಅರ್ಧಕ್ಷಣ ಮಾತ್ರವೂ ಕೂಡ ಶ್ರೇಯಸ್ಕರವಾಗಲಾರದು. ಯಾವಾಗಲೂ ವಿಹಿತಮಾರ್ಗಕ್ಕೆ ವಿರುದ್ಧ ಕರ್ಮಜಾಲವನ್ನು ಆಚರಿಸುವ ಧರ್ಮದ್ವೇಷಿಯು ಹೇಗೆತಾನೆ ಸುಖವನ್ನು ಹೊಂದುವನು?

೫೬. ವಸಿಷ್ಠಮುನಿಯು ಇಂತೆಂದನು :—ರಾಮನ ಈ ಧೀರವಚನವನ್ನು ಕೇಳಿ ಬಹು ಸಂತೋಷವುಳ್ಳವನಾಗಿದ್ದರೂ ವ್ಯಾಧರೂಪವನ್ನು ಧರಿಸಿ ಬಂದ ಪಿನಾಕಾಯುಧಧಾರಿಯಾದ ಶಂಕರನು ಕೋಪಗೊಂಡವನಂತೆ ರಾಮನನ್ನು ಕುರಿತು ಈ ಮಾತನ್ನು ಆಡಿದನು.

೫೭. ರಾಮನೆ! ಈ ಎಲ್ಲ ನಿನ್ನ ಉದ್ಯೋಗವನ್ನು ವ್ಯರ್ಥವಾದುದೆಂದು ನಾನು ಅರಿತಿದ್ದೇನೆ. ಈ ವಿಧದ ವ್ಯವಸಾಯವನ್ನು ಕೈಗೊಂಡಿರುವ ಅಪೂರ್ವಜ್ಞಾನಿಯು ನೀನೆಲ್ಲಿ; ಶಂಭು ಎಲ್ಲಿ; ಈ ಕ್ಲೇಶ ಸಾಧ್ಯವಾದ ತಪವೆಲ್ಲಿ.

೫೮. ಮೂರ್ಖನೆ! ವ್ಯರ್ಥವಾಗಿ ಏಕೆ ಕ್ಲೇಶಪಡುತ್ತೀ? ಮಿಥ್ಯಾಚಾರದಲ್ಲಿ ಪ್ರವೃತ್ತನಾದ ನಿನ್ನ ಈ ತಪಸ್ಸಿನಿಂದ ನಿಜವಾಗಿಯೂ ಶಂಕರನು ಪ್ರಸನ್ನನಾಗುವುದಿಲ್ಲ. ಅಂತಹ ನಿನ್ನ ನಂಬುಗೆಯು ವ್ಯರ್ಥವಾದುದು.

ವಿರುದ್ಧಲೋಕಾಚರಣಃ ಶಂಭುಸ್ತಸ್ಯ ವಿತುಷ್ಟಯೇ ।
ಪ್ರತಪತ್ಯಬುಧೋ ಮರ್ತ್ಯಸ್ತ್ವಾಂ ವಿನಾ ಕಃ ಸುದುರ್ಮತೇ ॥ ೫೯ ॥

ಅಥವಾ ಚ ಗತಂ ಮೇಽದ್ಯ ಯುಕ್ತಮೇತದಸಂಶಯಮ್ ।
ಸಂಪೂಜ್ಯಪೂಜಕವಿಧೌ ಶಂಭೋಸ್ತವ ಚ ಸಂಗಮಃ ॥ ೬೦ ॥

ತ್ವಯಾ ಪೂಜಯಿತುಂ ಯುಕ್ತಃ ಸ ಏವ ಭುವನೇ ರತಃ ।
ಸಂಪೂಜಕೋಽಪಿ ತಸ್ಯ ತ್ವಂ ಯೋಗ್ಯೋ ನಾತ್ರ ವಿಚಾರಣಾ ॥ ೬೧ ॥

ಪಿತಾಮಹಸ್ಯ ಲೋಕಾನಾಂ ಬ್ರಹ್ಮಣಃ ಪರಮೇಷ್ಠಿನಃ ।
ಶಿರಶ್ಛಿತ್ವಾ ಪುನಃ ಶಂಭುರ್ಬ್ರಹ್ಮಹತ್ಯಾಮವಾಪ್ತವಾನ್ ॥ ೬೨ ॥

ಬ್ರಹ್ಮಹತ್ಯಾಭಿಭೂತೇನ ಪ್ರಾಯಸ್ತ್ವಂ ಶಂಭುನಾ ದ್ವಿಜ ।
ಉಪದಿಷ್ಟೋಽಸಿ ತತ್ ಕರ್ತುಂ ನೋ ಚೇದೇವಂ ಕಥಂ ಕೃಥಾಃ ॥ ೬೩ ॥

---

೫೯. ಲೋಕದಲ್ಲಿ ಈಶ್ವರನು ಲೋಕವಿರುದ್ಧವಾದ ಚರಿತವುಳ್ಳವನಾಗಿರುವನು. ಅಜ್ಞಾಗ್ರೇಸರನೆ! ಅಂತಹ ಈಶ್ವರನನ್ನು ತೃಪ್ತಿಪಡಿಸಲು ನಿನ್ನಂತಹ ಮೂರ್ಖನನ್ನು ಹೊರತು ಇನ್ನಾವ ಪ್ರಾಜ್ಞನು ತಪವನ್ನು ಆಚರಿಸುವನು ?

೬೦. ಅಥವಾ ವಿರುದ್ಧಾಚರಣಶೀಲವುಳ್ಳ ಶಂಕರನಿಗೂ ಮೂರ್ಖಾಗ್ರೇಸರನಾದ ನಿನಗೂ ಪೂಜ್ಯ-ಪೂಜಕ ಭಾವರೂಪದಿಂದ ಸಂಬಂಧವೇರ್ಪಟ್ಟಿರುವುದು ನಿಸ್ಸಂಶಯವಾಗಿ ಯುಕ್ತವಾದುದೆಂದು ತೋರುವುದು.

೬೧. ನಿನ್ನಿಂದ ಪೂಜೆಯನ್ನು ತೆಗೆದುಕೊಳ್ಳಲು ಲೋಕದಲ್ಲೆಲ್ಲ ಆ ವಿರುದ್ಧಾಚರಣೆಯುಳ್ಳ ಶಂಕರನೇ ಯೋಗ್ಯನು. ಅವನ ಪೂಜೆಯನ್ನು ಮಾಡಲು ಲೋಕದಲ್ಲೆಲ್ಲ ನೀನೇ ಯೋಗ್ಯನು. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದಿಲ್ಲ.

೬೨. ಪರಮಸ್ಥಾನದಲ್ಲಿರುವ ಲೋಕಗಳಿಗೆ ಪಿತಾಮಹನಾದ ಬ್ರಹ್ಮದೇವನ ಶಿರವನ್ನು ಶಂಕರನು ಛೇದಿಸಿ ಬ್ರಹ್ಮಹತ್ಯೆಯೆಂಬ ಮಹಾ ಪಾತಕವನ್ನು ಮಾಡಿರುವನು.

೬೩. ದ್ವಿಜನೇ! ಬ್ರಹ್ಮಹತ್ಯೆಯಿಂದ ಪೀಡಿತನಾದ ಶಂಭುವು ಪ್ರಾಯಕವಾಗಿ ನಿನ್ನ ಬಳಿಗೆ ಬಂದು ಈ ವಿಧವಾಗಿ ಆರಾಧನದಲ್ಲಿ ಉಪದೇಶಮಾಡಿರಬಹುದು, ಹಾಗಿಲ್ಲದಿದ್ದರೆ ಇಂತಹ ವ್ಯರ್ಥಕರ್ಮವನ್ನು ನೀನೇಕೆ ಮಾಡುತ್ತೀ ?

ತಾದಾತ್ಮ್ಯಗುಣಸಂಯೋಗಾನ್ಮನ್ಯೇ ರುದ್ರಸ್ಯ ತೇಽಧುನಾ ।
ತಪಃಸಿದ್ಧಿರನುಪ್ರಾಪ್ತಾ ಕಾಲೇನಾಲ್ಪೀಯಸಾ ಮುನೇ ॥ ೬೪ ॥

ಪ್ರಾಯೋಽದ್ಯ ಮಾತರಂ ಹತ್ವಾ ಸರ್ವೈರ್ಲೋಕೈರ್ನಿರಾಕೃತಃ ।
ತಪೋವ್ಯಾಜೇನ ಗಹನೇ ನಿರ್ಜನೇ ಸಂಪ್ರವರ್ತಸೇ ॥ ೬೫ ॥

ಗುರುಸ್ತ್ರೀಬ್ರಹ್ಮಹತ್ಯೋತ್ಥಪಾತಕಕ್ಷಪಣಾಯ ಚ ।
ತಪಶ್ಚರಸಿ ನಾನೇನ ತಪಸಾ ತತ್ ಪ್ರಣಶ್ಯತಿ ॥ ೬೬ ॥

ಪಾತಕಾನಾಂ ಕಿಲಾನ್ಯೇಷಾಂ ಪ್ರಾಯಶ್ಚಿತ್ತಾನಿ ಸಂತ್ಯಪಿ ।
ಮಾತೃದ್ರುಹಾಮವೇಹಿ ತ್ವಂ ನ ಕ್ವಚಿತ್ ಕಿಲ ನಿಷ್ಕೃತಿಃ ॥ ೬೭ ॥

ಅಹಿಂಸಾಲಕ್ಷಣೋ ಧರ್ಮೋ ಲೋಕೇಷು ಯದಿ ತೇ ಮತಃ ।
ಸ್ವಹಸ್ತೇನ ಕಥಂ ರಾಮ ಮಾತರಂ ಕೃತ್ತವಾನಸಿ ॥ ೬೮ ॥

---

೬೪. ಮುನಿಯೆ! ನಿನ್ನಲ್ಲಿ ಈಗಾಗಲೇ ರುದ್ರನ ತಾದಾತ್ಮ್ಯಗುಣವು ಸಂಭವಿಸಿರುವುದರಿಂದ ನಿನಗೆ ಬಹು ಅಲ್ಪ ಕಾಲದಲ್ಲಿಯೆ ತಪಸ್ಸಿದ್ಧಿಯು ಉಂಟಾಗಿರುವುದೆಂದು ನಾನು ಊಹಿಸುತ್ತೇನೆ.

೬೫. ನೀನು ಈಗ ಪ್ರಾಯಕವಾಗಿ ಜನನಿಯನ್ನು ಕೊಂದು ಇಂತಹ ಕ್ರೂರ ಪಾತಕಿಯಾದ್ದರಿಂದ ಸಮಸ್ತ ಜನರಿಂದಲೂ ನಿರಾಕರಿಸಲ್ಪಟ್ಟವನಾಗಿ ತಪಶ್ಚರ್ಯೆಯ ನೆಪದಿಂದ ನಿರ್ಜನವಾದ ಅರಣ್ಯದಲ್ಲಿ ಪ್ರವರ್ತಿಸಿದ್ದೀಯೆ.

೬೬. ನೀನು ಗುರುಹತ್ಯಾ, ಸ್ತ್ರೀಹತ್ಯಾ, ಮತ್ತು ಬ್ರಹ್ಮಹತ್ಯೆಗಳಿಂದ ಉಂಟಾದ ಪಾತಕಗಳನ್ನು ಕಳೆದುಕೊಳ್ಳಲು ಈ ತಪಶ್ಚರ್ಯೆಯನ್ನು ಕೈಗೊಂಡಿರುವಂತೆ ಇದೆ. ಆದರೆ ಈ ತಪಸ್ಸಿನಿಂದ ಆ ಪಾತಕಗಳು ನಾಶ ಹೊಂದುವುದಿಲ್ಲ.

೬೭. ಒಂದುವೇಳೆ ಇತರ ಮಹಾಪಾತಕಗಳಿಗಾದರೂ ಪ್ರಾಯಶ್ಚಿತ್ತಗಳು ಇದ್ದರೂ ಇರಬಹುದು. ಮಾತೃದ್ರೋಹ ಪಾತಕವನ್ನು ಕಳೆಯುವ ಪ್ರಾಯಶ್ಚಿತ್ತವು ಮಾತ್ರ ಎಲ್ಲಿಯೂ ಇಲ್ಲ.

೬೮. ರಾಮನೇ! ಅಹಿಂಸೆಯೆಂಬುದು ಲೋಕದಲ್ಲಿ ಪರಮಧರ್ಮವೆಂದು ನಿನ್ನ ಮತವಾದರೆ ನಿನ್ನ ಹಸ್ತದಿಂದ ಜನನಿಯನ್ನು ಹೇಗೆ ಕಂಠಚ್ಛೇದನವನ್ನು ಮಾಡಿದೆ?

ಕೃತ್ವಾ ಮಾತೃವಧಂ ಘೋರಂ ಸರ್ವಲೋಕವಿಗರ್ಹಿತಮ್ ।
ತ್ವಂ ಪುನರ್ಧಾರ್ಮಿಕೋ ಭೂತ್ವಾ ಕಾಮತೋಽನ್ಯಾನ್ ವಿನಿಂದಸಿ ॥ ೬೯ ॥

ಪಶ್ಯತಾ ಹಸತಾಮೋಘಮಾತ್ಮದೋಷಮಜಾನತಾ ।
ಅಪರ್ಯಾಪ್ತಮಹಂ ಮನ್ಯೇ ಪರದೋಷವಿಮರ್ಶನಾಮ್ ॥ ೭೦ ॥

ಸ್ವಧರ್ಮಂ ಯದ್ಯಹಂ ತ್ಯಕ್ತ್ವಾ ವರ್ತೇಯಮಕುತೋಭಯಮ್ ।
ತರ್ಹಿ ಗರ್ಹಯ ಮಾಂ ಕಾಮಂ ನಿರೂಪ್ಯ ಮನಸಾ ಸ್ವಯಮ್ ॥ ೭೧ ॥

ಮಾತಾಪಿತೃಸುತಾದೀನಾಂ ಭರಣಾಯೈವ ಕೇವಲಮ್ ।
ಕ್ರಿಯತೇ ಪ್ರಾಣಿಹನನಂ ನಿಜಧರ್ಮತಯಾ ಮಯಾ ॥ ೭೨ ॥

ಸ್ವಧರ್ಮಾದಾಮಿಷೇಣಾಹಂ ಸಕುಟುಂಬೋ ದಿನೇ ದಿನೇ ।
ವರ್ತಾಮಿ ಸಾಪಿ ಮೇ ವೃತ್ತಿರ್ವಿಧಾತ್ರಾ ವಿಹಿತಾ ಪುರಾ ॥ ೭೩ ॥

---

೬೯. ಸಮಸ್ತ ಜನರಿಂದಲೂ ನಿಂದಿತವಾಗಿ ದೂರವರ್ಜಿತವಾದ ಘೋರ ಮಾತೃವಧವನ್ನು ಮಾಡಿ ನೀನು ಪರಮ ಧಾರ್ಮಿಕನಾಗಿ ಸ್ವಚ್ಛಂದವಾಗಿ ಮತ್ತೊಬ್ಬರನ್ನು ಮಾತ್ರ ಹಿಂಸೆಯು ಅಧರ್ಮವೆಂದು ಅಲ್ಲಿಗಳೆಯುತ್ತಿದ್ದೀ.

೭೦. ನಿರವಧಿಯಾದ ನಿನ್ನ ದುಷ್ಟ ಕರ್ಮವನ್ನು ಕಂಡು ನಗುತ್ತಲಿರುವ ಜನಸ್ತೋಮವನ್ನು ನೋಡಿ ನಿನ್ನ ತಪ್ಪನ್ನು ತಿಳಿದುಕೊಳ್ಳದೆ ಪರರಲ್ಲಿರುವ ದೋಷಗಳನ್ನು ವಿಮರ್ಶಮಾಡುವುದು ಅಯುಕ್ತವೆಂದು ನಾನು ತಿಳಿಯುತ್ತೇನೆ.

೭೧. ನಾನು ನಿರ್ಭಯವಾದ ನನ್ನ ಸ್ವಧರ್ಮವನ್ನು ತ್ಯಜಿಸಿ ಇರುವೆನಾದರೆ ಅದನ್ನು ಗಮನವಿಟ್ಟು ವಿಮರ್ಶಮಾಡಿ ನೀನು ನನ್ನನ್ನು ಇಷ್ಟಾನುಸಾರವಾಗಿ ನಿಂದಿಸಬಹುದು.

೭೨. ನಾನು ನನ್ನ ಮಾತಾಪಿತೃಗಳ ಮತ್ತು ಪುತ್ರರ ರಕ್ಷಣಾರ್ಥವಾಗಿ ಮಾತ್ರ ನನ್ನ ನಿಜಧರ್ಮವೆಂದು ಗಣಿಸಿ ಪ್ರಾಣಿಹತ್ಯೆಯನ್ನು ಮಾಡುತ್ತಲಿರುವೆನು. ನನ್ನ ಸ್ವಧರ್ಮವಾದ್ದರಿಂದ ನನ್ನ ಕರ್ಮವು ಪಾತಕವಲ್ಲ.

೭೩. ಸ್ವಧರ್ಮವನ್ನು ಆಚರಿಸಿ ಲಬ್ಧವಾದ ಮಾಂಸದ್ರವ್ಯದಿಂದ ಪ್ರತಿದಿನವೂ ನನ್ನ ಕುಟುಂಬಪೋಷಣಮಾಡುವ ವೃತ್ತಿಯನ್ನು ಅವಲಂಬಿಸಿರುವೆನು. ಈ ವೃತ್ತಿಯು ನನಗೆ ಪೂರ್ವದಲ್ಲಿ ಬ್ರಹ್ಮದೇವನಿಂದ ಕಲ್ಪಿಸಲ್ಪಟ್ಟಿರುವುದು.

ಮಾಂಸೇನ ಯಾವತಾ ಮೇ ಸ್ಯಾನ್ನಿತ್ಯಂ ಪಿತ್ರಾದಿಪೋಷಣಮ್ ।
ಹನಿಷ್ಯೇ ಚೇತ್ತದಧಿಕಂ ತರ್ಹಿ ಯುಜ್ಯೇಯಮೇನಸಾ ॥ ೭೪ ॥

ಯಾವತ್ಪೋಷಣಘಾತೇನ ನ ವಯಂ ಸ್ಯಾಮ ನಿಂದಿತಾಃ
ತದೇತತ್ ಸಂಪ್ರಧಾರ್ಯ ತ್ವಂ ನಿಂದ ವಾ ಮಾಂ ಪ್ರಶಂಸ ವಾ ॥ ೭೫ ॥

ಸಾಧು ವಾಽಸಾಧು ವಾ ಕರ್ಮ ಯಸ್ಯ ಯದ್ವಿಹಿತಂ ಪುರಾ ।
ತದೇವ ತೇನ ಕರ್ತವ್ಯಮಾಪದ್ಯಪಿ ಕಥಂ ಜನ ॥ ೭೬ ॥

ನಿರೂಪಯ ಸ್ವಬುದ್ಧ್ಯಾ ತ್ವಮಾತ್ಮನೋ ಮಮ ಚಾಂತರಮ್ ।
ಅಹಂ ತು ಸರ್ವಭಾವೇನ ಮಿತ್ರಾದಿಭರಣೇ ರತಃ ॥ ೭೭ ॥

ಸಂತ್ಯಜ್ಯ ಪಿತರಂ ವೃದ್ಧಂ ವಿನಿಹತ್ಯ ಚ ಮಾತರಮ್ ।
ಭೂತ್ವಾ ತು ಧಾರ್ಮಿಕಸ್ತ್ವಂ ತು ತಪಶ್ಚರ್ತುಮಿಹಾಗತಃ ॥ ೭೮ ॥

---

೭೪. ಪ್ರತಿದಿನವೂ ಪಿತೃ ಮುಂತಾದವರ ಪೋಷಣಕ್ಕೆ ಎಷ್ಟು ಪರಿಮಾಣದ ಮಾಂಸವು ಅವಶ್ಯವಾಗಿರುವುದೋ, ಅದಕ್ಕಿಂತ ಹೆಚ್ಚು ಮಾಂಸಲೋಭದಿಂದ ಪ್ರಾಣಿ ಹತ್ಯೆಯನ್ನು ಮಾಡಿದ್ದರೆ ನಾನು ಪಾತಕಿಯಾಗುತ್ತಲಿದ್ದೆನು.

೭೫. ಮಾತಾಪಿತೃ ಮುಂತಾದವರ ಪೋಷಣಾರ್ಥವಾಗಿ ಆವಶ್ಯಕವಿರುವಷ್ಟು ಮಾತ್ರ ಮಾಂಸಾರ್ಜನೆಗೆ ಪ್ರಾಣಿಹತ್ಯೆಯನ್ನು ಮಾಡುವುದರಿಂದ ನಾವು ನಿಂದ್ಯರಾಗಿಲ್ಲ. ನೀನು ಈ ವಿಷಯಗಳನ್ನು ಚನ್ನಾಗಿ ತೀರ್ಮಾನಿಸಿ ನನ್ನನ್ನು ನಿಂದಿಸು; ಅಥವಾ ಪ್ರಶಂಸಿಸು.

೭೬. ಸಾಧುವಾಗಲಿ; ಅಸಾಧುವಾಗಲಿ; ಯಾರಿಗೆ ಯಾವ ಕರ್ಮವು ಹಿಂದಿನಿಂದ ವಿಹಿತವಾಗಿ ಇರುವುದೊ ಅವನು ಆಪತ್ಕಾಲದಲ್ಲಿ ಕೂಡ ಆ ಕರ್ಮವನ್ನೇ ತಪ್ಪದೆ ಹೇಗಾದರೂ ಮಾಡಬೇಕಾದ್ದಾಗಿರುವುದು.

೭೭. ನೀನು ನಿನ್ನ ವಿವೇಕಬುದ್ಧಿಯಿಂದ ನನಗೂ ನಿನಗೂ ಇರುವ ತಾರತಮ್ಯವನ್ನು ಪರೀಕ್ಷಿಸು. ನಾನಾದರೊ ಸರ್ವ ಪ್ರಕಾರಗಳಿಂದಲೂ ಮಿತ್ರಾದಿಗಳ ರಕ್ಷಣದಲ್ಲಿ ತತ್ಪರನಾಗಿರುವೆನು.

೭೮. ನೀನು ಮುಪ್ಪಿನಲ್ಲಿರುವ ನಿನ್ನ ತಂದೆಯನ್ನು ಬಿಟ್ಟು, ಜನನಿಯನ್ನು ಕೊಂದುಹಾಕಿ, ಈ ನಿಷಿದ್ಧ ಕರ್ಮಗಳನ್ನಾಚರಿಸಿದರೂ ಧಾರ್ಮಿಕನೆಂಬ ಅಭಿಮಾನದಿಂದ ತಪಸ್ಸನ್ನು ಆಚರಿಸಲು ಇಲ್ಲಿಗೆ ಬಂದಿರುತ್ತೀ.

**ಯೇ ತು ಮೂಲವಿದಸ್ತೇಷಾಂ ವಿಸ್ಪಷ್ಟಂ ಯತ್ರ ದರ್ಶನಮ್ ।**
**ಯಥಾಜಿಹ್ವಂ ಭವೇನ್ನಾತ್ರ ವಚಸಾಪಿ ಸಮೀಹಿತುಮ್ ॥ ೭೯ ॥**

**ಅಹಂ ತು ಸಮ್ಯಗ್ಜಾನಾಮಿ ತವ ವೃತ್ತಮಶೇಷತಃ ।**
**ತಸ್ಮಾದಲಂ ತೇ ತಪಸಾ ನಿಷ್ಫಲೇನ ಭೃಗೂದ್ವಹ ॥ ೮೦ ॥**

**ಸುಖಮಿಚ್ಛಸಿ ಚೇತ್ತ್ಯಕ್ತ್ವಾ ಕಾಯಕ್ಲೇಶಕರಂ ತಪಃ ।**
**ಯಾಹಿ ರಾಮ ತ್ವಮನ್ಯತ್ರ ಯತ್ರ ಮಾ ನ ವಿದುರ್ಜನಾಃ ॥ ೮೧ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ**
**ತ್ರಯೋವಿಂಶತಿತಮೋಽಧ್ಯಾಯಃ**

---

೭೯. ಯಾರು ಧರ್ಮಗಳ ಮೂಲತತ್ವವನ್ನು ಅರಿತಿರುವರೋ ಅವರಿಗೆ ಈ ಅನುಭವವು ಸ್ಪಷ್ಟವಾಗಿರುವುದು. ಧರ್ಮದ ಮೂಲತತ್ವವನ್ನು ಅರಿಯದೆ ಅದರ ವಿಷಯದಲ್ಲಿ ನಾಲಿಗೆಯು ಚಲಿಸುವುದನ್ನನುಸರಿಸಿ ವಾಗಿಂದ್ರಿಯದಿಂದ ಇಷ್ಟಾರ್ಥವನ್ನು ಸಾಧಿಸಲು ಯತ್ನಿಸುವುದು ಅಯುಕ್ತವು.

೮೦. ಭೃಗುವಂಶವರ್ಯನೆ! ನಾನು ನಿನ್ನ ಚರಿತ್ರೆಯನ್ನು ಸಂಪೂರ್ಣವಾಗಿ ಚನ್ನಾಗಿ ಅರಿತಿರುವೆನು, ಆದ್ದರಿಂದ ನೀನು ನಿಷ್ಫಲವಾದ ತಪಸ್ಸನ್ನು ಆಚರಿಸುವುದು ಸಾಕು, ಅದನ್ನು ತ್ಯಜಿಸು.

೮೧. ನೀನು ಸುಖವನ್ನು ಬಯಸುವುದಾದರೆ ಶರೀರಾಯಾಸವನ್ನು ಉಂಟು ಮಾಡುವ ಈ ತಪಶ್ಚರ್ಯೆಯನ್ನು ವರ್ಜಿಸಿ ಜನರು ಸ್ವಲ್ಪವಾದರೂ ಅರಿಯದಿರುವ ಬೇರೊಂದು ನಿರ್ಜನಸ್ಥಳಕ್ಕೆ ಹೊರಟುಹೋಗು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು.

---

## ಚತುರ್ವಿಂಶತಿತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ಇತ್ಯುಕ್ತಸ್ತೇನ ಭೂಪಾಲ ರಾಮೋ ಮತಿಮತಾಂ ವರಃ ।**
**ನಿರೂಪ್ಯ ಮನಸಾ ಭೂಯಸ್ತಮುವಾಚಾಭಿವಿಸ್ಮಿತಮ್ ॥ ೧ ॥**

**ರಾಮ ಉವಾಚ :—**

**ಕಸ್ತ್ವಂ ಬ್ರೂಹಿ ಮಹಾಭಾಗ ನ ವೈ ಪ್ರಾಕೃತಪೂರುಷಃ ।**
**ಇಂದ್ರಸ್ಯೇವಾನುಭಾವೇನ ವಪುರಾಲಕ್ಷ್ಯತೇ ತವ ॥ ೨ ॥**

**ವಿಚಿತ್ರಾರ್ಥಪದೌದಾರ್ಯಗುಣಗಾಂಭೀರ್ಯಜಾತಿಭಿಃ ।**
**ಸರ್ವಜ್ಞಸ್ಯೇವ ತೇ ವಾಣೀ ಶ್ರೂಯತೇಽತಿಮನೋಹರಾ ॥ ೩ ॥**

**ಇಂದ್ರೋ ವಹ್ನಿರ್ಯಮೋ ಧಾತಾ ವರುಣೋ ವಾ ಧನಾಧಿಪಃ ।**
**ಈಶಾನಸ್ತಪನೋ ಬ್ರಹ್ಮಾ ವಾಯುಃ ಸೋಮೋ ಗುರುರ್ಗುಹಃ ॥ ೪ ॥**

---

೧. ವಸಿಷ್ಠ ಮುನಿಯು ಇಂತೆಂದನು :—ಭೂಪತಿಯೆ ! ಬುದ್ಧಿಶಾಲಿಗಳಲ್ಲಿ ಶ್ರೇಷ್ಠನೆನಿಸಿರುವ ಭಾರ್ಗವರಾಮನು ಕಿರಾತನಿಂದ ಈ ರೀತಿಯಾಗಿ ಹೇಳಲ್ಪಟ್ಟವನಾಗಿ ಮನದಲ್ಲಿ ವಿಮರ್ಶೆಮಾಡಿ ಮತ್ತೆ ಅವನನ್ನು ಕುರಿತು ನಗುನಗುತ್ತ ಮಾತನಾಡಿದನು.

೨. ರಾಮನು ಈ ರೀತಿಯಾಗಿ ಹೇಳಿದನು :—ಮಹಾ ಮಹಿಮನೆ, ನೀನು ಯಾರು ? ಹೇಳು ; ನೀನು ಯಾರೋ ಒಬ್ಬ ಪ್ರಾಕೃತಪುರುಷನಾಗಿಲ್ಲ ; ನಿನ್ನ ದೇಹವು ಅನಿರ್ವಚನೀಯವಾದ ಪ್ರಭಾವ ವಿಶೇಷದಿಂದ ಪರಮೇಶ್ವರನ ದೇಹದಂತೆ ತೋರುತ್ತಲಿದೆ.

೩. ವಿಚಿತ್ರವಾದ ಅರ್ಥ ಮತ್ತು ಪದ, ಔದಾರ್ಯ, ಗಾಂಭೀರ್ಯ ಮತ್ತು ಜಾತಿಗುಣಗಳಿಂದ ಕೂಡಿದ ನಿನ್ನ ವಾಣಿಯು ಸರ್ವಜ್ಞನ ವಾಣಿಯಂತೆ ಅತ್ಯಂತ ಮನೋಹರವಾಗಿ ಕೇಳುತ್ತಲಿದೆ.

೪. ಇಂತಹ ನಿರುಪಮ ಗುಣಗಳಿಂದ ಕೂಡಿರುವ ನೀನು ಇಂದ್ರ, ಅಗ್ನಿ, ಯಮ, ಧಾತೃ, ವರುಣ, ಕುಬೇರ, ಈಶಾನ, ವಾಯು, ಸೂರ್ಯ, ಬ್ರಹ್ಮ, ಚಂದ್ರ, ಗುರು ಅಥವಾ ಷಣ್ಮುಖ—ಇವರುಗಳಂತೆ ಇದ್ದೀಯೆ.

ವಿಷಾಮುನ್ಯತಮಃ ಪ್ರಾಯೋ ಭವಾನ್ ಭವಿತುಮರ್ಹತಿ ।
ಅನುಭಾವೇನ ಜಾತಿಸ್ತೇ ಹೃದಿ ಶಂಕಾಂ ತನೋತಿ ಮೇ ॥ ೫ ॥

ಮಾಯಾವೀ ಭಗವಾನ್ ವಿಷ್ಣುಃ ಶ್ರೂಯತೇ ಪುರುಷೋತ್ತಮಃ ।
ಕೋ ವಾ ತ್ವಂ ವಪುಷಾನೇನ ಬ್ರೂಹಿ ಮಾಂ ಸಮುಪಾಗತಃ ॥ ೬ ॥

ಅಥವಾ ಜಗತಾಂ ನಾಥಃ ಸರ್ವಜ್ಞಃ ಪರಮೇಶ್ವರಃ ।
ಪರಮಾತ್ಮಾತ್ಮಸಂಭೂತಿರಾತ್ಮಾರಾಮಃ ಸನಾತನಃ ॥ ೭ ॥

ಸ್ವಚ್ಛಂದಚಾರೀ ಭಗವಾನ್ ಶಿವಃ ಸರ್ವಜಗನ್ಮಯಃ ।
ವಪುಷಾನೇನ ಸಂಯುಕ್ತೋ ಭವಾನ್ ಭವಿತುಮರ್ಹತಿ ॥ ೮ ॥

ನಾನ್ಯಸ್ಯೇದೃಗ್ಭವೇಲ್ಲೋಕೇ ಪ್ರಭಾವಾನುಗತಂ ವಪುಃ ।
ಜಾತ್ಯರ್ಥಸೌಷ್ಠವೋಪೇತಾ ವಾಣೀ ಚೌದಾರ್ಯಶಾಲಿನೀ ॥ ೯ ॥

---

೫. ನೀನು ಇಂದ್ರಾದಿಗಳ ಮಧ್ಯದಲ್ಲಿ ಯಾರಾದರೊಬ್ಬನಾಗಿ ಪ್ರಾಯಕವಾಗಿ ಇರಬಹುದು. ನಿನ್ನ ಪ್ರಭಾವ ವಿಶೇಷವನ್ನು ಕಂಡು ಹೊರಗೆ ಕಾಣುವ ಈ ಪ್ರಾಕೃತ ವ್ಯಾಧಜಾತಿಯು ನನ್ನ ಮನಸ್ಸಿಗೆ ಶಂಕೆಯನ್ನು ಉಂಟುಮಾಡುತ್ತಿದೆ.

೬. ಭಗವಂತನೂ ಪುರುಷೋತ್ತಮನೂ ಆದ ವಿಷ್ಣುವು ಮಹಾಮಾಯಾವಿಯೆಂದು ಕೇಳಿರುತ್ತೇನೆ. ಅವನು ಕೃತ್ರಿಮವೇಷದಿಂದ ಅಲ್ಲಲ್ಲಿ ಬರಬಹುದು. ಈ ದೇಹದಿಂದ ನನ್ನ ಬಳಿಗೆ ಬಂದಿರುವ ನೀನು ಯಾರು? ನಿಜವನ್ನು ಹೇಳು.

೭. ಅಥವಾ ಸಮಸ್ತ ಪ್ರಪಂಚಕ್ಕೆ ಪ್ರಭುವೂ ಸರ್ವಜ್ಞನೂ ಪರಮೇಶ್ವರನೂ ಸ್ವಯಂಭುವೂ ಆತ್ಮಾರಾಮನೂ ಮತ್ತು ಸನಾತನನೂ ಆದ ನೀನು ಮಾಯೆಯಿಂದ ಕೃತ್ರಿಮ ಕಿರಾತರೂಪವನ್ನು ತೆಗೆದುಕೊಂಡು ಬಂದಿರುವೆಯೊ?

೮. ಸ್ವಚ್ಛಂದವಾದ ಸಂಚಾರವುಳ್ಳ ಮತ್ತು ಸರ್ವಜಗನ್ಮಯನಾದ ಭಗವಂತನಾದ ಶಂಕರನು ನಿನ್ನ ಈ ಕಿರಾತ ದೇಹವೇಷದಿಂದ ಕೂಡಿ ಬಂದಿರಬಹುದೆಂಬುದು ನಿಜವಾಗಿ ತೋರುತ್ತಿದೆ.

೯. ಲೋಕದಲ್ಲಿ ಬೇರೊಬ್ಬನಿಗೆ ವಿಶೇಷ ಪ್ರಭಾವದಿಂದ ಕೂಡಿದ ಈ ವಿಧವಾದ ದೇಹವು ಇರಲಾರದು. ಜಾತಿ—ಅರ್ಥಗುಣಗಳ ಸೌಷ್ಠವದಿಂದಲೂ ಔದಾರ್ಯದಿಂದಲೂ ಕೂಡಿದ ಈ ವಿಧವಾದ ವಾಣಿಯು ಬೇರೆ ಯಾರಿಗೂ ಇರಲಾರದು.

**ಮನ್ಯೇಽಹಂ ಭಕ್ತವಾತ್ಸಲ್ಯಾದ್ವಾನೇನ ವಪುಷಾ ಹರಃ ।**
**ಪ್ರತ್ಯಕ್ಷತಾಮುಪಗತೋ ಸಂದೇಹೋಽಸ್ಮತ್ಪರೀಕ್ಷಯಾ ॥ ೧೦ ॥**

**ನ ಕೇವಲಂ ಭವಾನ್ ವ್ಯಾಧಸ್ತೇಷಾಂ ನೇದೃಗ್ವಿಧಾಕೃತಿಃ ।**
**ತಸ್ಮಾತ್ತುಭ್ಯಂ ನಮಸ್ತಸ್ಮೈ ಸುರೂಪಂ ಸಂಪ್ರದರ್ಶಯ ॥ ೧೧ ॥**

**ಆವಿಷ್ಕುರ್ವನ್ ಪ್ರಸೀದಾತ್ಮಮಹಿಮಾನುಗುಣಂ ವಪುಃ ।**
**ಮಮಾನೇಕವಿಧಾಶಂಕಾ ಮುಚ್ಯತೇ ಯೇನ ಮಾನಸೀ ॥ ೧೨ ॥**

**ಪ್ರಸೀದ ಸರ್ವಭಾವೇನ ಬುದ್ಧಿಮೋಹಂ ಮಮಾಧುನಾ ।**
**ಪ್ರಣಾಶಯ ಸ್ವರೂಪಸ್ಯ ಗ್ರಹಣಾದೇವ ಕೇವಲಮ್ ॥ ೧೩ ॥**

**ಪ್ರಾರ್ಥಯೇ ತ್ವಾಂ ಮಹಾಭಾಗ ಪ್ರಣಮ್ಯ ಶಿರಸಾಽಸಕೃತ್ ।**
**ಕಸ್ತ್ವಂ ಮೇ ದರ್ಶಯಾತ್ಮಾನಂ ಬದ್ಧೋಽಯಂ ತೇ ಮಯಾಂಜಲಿಃ ॥ ೧೪ ॥**

---

೧೦. ಈಶ್ವರನು ಭಕ್ತನಾದ ನನ್ನಲ್ಲಿ ಪ್ರೇಮವನ್ನಿಟ್ಟು ನನ್ನ ಭಕ್ತಿ ಪಾರಮ್ಯವನ್ನು ಪರೀಕ್ಷಿಸಿ ಸಂದೇಹವನ್ನು ನಿವಾರಣಮಾಡಲೋಸ್ಕರ ಈ ದೇಹದಿಂದ ಕೂಡಿ ಪ್ರತ್ಯಕ್ಷನಾಗಿ ಬಂದಿರಬಹುದೆಂದು ನಾನು ಊಹಿಸುತ್ತೇನೆ.

೧೧. ನೀನು ನಿಜವಾಗಿ ಕೇವಲ ವ್ಯಾಧಜಾತಿಯವನಲ್ಲ. ವ್ಯಾಧರಿಗೆ ಈ ವಿಧವಾದ ಉತ್ತಮಾಕೃತಿಯು ಇರುವುದಿಲ್ಲ. ಆದ್ದರಿಂದ ಮಹಾನುಭಾವನಾದ ನಿನಗೆ ವಂದಿಸುವೆನು. ನೀನು ನನಗೆ ನಿನ್ನ ನಿಜಸುರೂಪವನ್ನು ತೋರಿಸು.

೧೨. ನೀನು ದಯೆಮಾಡಿ ನನ್ನಲ್ಲಿ ಪ್ರಸನ್ನನಾಗಿ ಮಹಿಮೆಯಿಂದ ಕೂಡಿದ ನಿನ್ನ ನಿಜದೇಹವನ್ನು ತೋರಿಸಿ ನನ್ನ ಮನಸ್ಸಿನಲ್ಲಿ ನಿನ್ನ ವಿಷಯದಲ್ಲಿ ಉಂಟಾದ ಅನೇಕ ಶಂಕೆಗಳನ್ನು ದೂರಮಾಡು.

೧೩. ನೀನು ನನ್ನಲ್ಲಿ ಪ್ರಸನ್ನನಾಗು; ಮತ್ತು ನನ್ನ ಬುದ್ಧಿಯಲ್ಲಿರುವ ಸರ್ವವಿಧವಾದ ಮೋಹವನ್ನು ನಿನ್ನ ಸ್ವಸ್ವರೂಪವನ್ನು ತಿಳಿಸಿ ಹೋಗಲಾಡಿಸು. ನಿನ್ನ ನಿಜಸ್ವರೂಪವನ್ನು ಸಾಕ್ಷಾತ್ಕರಿಸಿ ಕೃತಕೃತ್ಯನಾಗಿ ನನ್ನ ಮೋಹವನ್ನು ಕಳೆದುಕೊಳ್ಳುತ್ತೇನೆ.

೧೪. ಮಹಾಮಹಿಮನೆ! ನಾನು ಅನೇಕಾವರ್ತಿಯಾಗಿ ಶಿರಬಾಗಿಸಿ ನಮಸ್ಕರಿಸಿ ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇನೆ. ನೀನು ಯಾರು? ನಿನ್ನ ಸ್ವರೂಪವನ್ನು ನನಗೆ ತೋರಿಸು. ನಾನು ನಿನಗೆ ಈ ನಮಸ್ಕಾರಾಂಜಲಿಯನ್ನು ಕಟ್ಟಿಕೊಂಡಿರುವೆನು.

ಇತ್ಯುಕ್ತ್ವಾ ತಂ ಮಹಾಭಾಗ ಜ್ಞಾತುಮಿಚ್ಛನ್ ಭೃಗೂದ್ವಹಃ ।
ಉಪವಿಶ್ಯ ತತೋ ಭೂಮೌ ಧ್ಯಾನಮಾಸ್ತೇ ಸಮಾಹಿತಃ ॥ ೧೫ ॥

ಬದ್ಧಪದ್ಮಾಸನೋ ಮೌನೀ ಯತವಾಕ್ಕಾಯಮಾನಸಃ ।
ನಿರುದ್ಧಪ್ರಾಣಸಂಚಾರೋ ದಧ್ಯೌ ಚಿರಮುದಾರಧೀಃ ॥ ೧೬ ॥

ಸನ್ನಿಯಮ್ಯೇಂದ್ರಿಯಗ್ರಾಮಂ ಮನೋ ಹೃದಿ ನಿರುಧ್ಯ ಚ ।
ಚಿಂತಯಾಮಾಸ ದೇವೇಶಂ ಧ್ಯಾನದೃಷ್ಟ್ಯಾ ಜಗದ್ಗುರುಮ್ ॥ ೧೭ ॥

ಅಪಶ್ಯಚ್ಚ ಜಗನ್ನಾಥಮಾತ್ಮಸಂಧಾನಚಕ್ಷುಷಾ ।
ಸ್ವಭಕ್ತಾನುಗ್ರಹಕರಂ ಮೃಗವ್ಯಾಧಸ್ವರೂಪಿಣಮ್ ॥ ೧೮ ॥

ತತ ಉನ್ಮೀಲ್ಯ ನಯನೇ ಶೀಘ್ರಮುತ್ಥಾಯ ಭಾರ್ಗವಃ ।
ದದರ್ಶ ದೇವಂ ತೇನೈವ ವಪುಷಾ ಪುರತಃ ಸ್ಥಿತಮ್ ॥ ೧೯ ॥

---

೧೫. ಮಹಾಶಯನಾದ ರಾಜನೆ! ಭೃಗುವಂಶತಿಲಕನಾದ ರಾಮನು ಈ ರೀತಿಯಾಗಿ ಹೇಳಿ ಅವನ ನಿಜರೂಪವನ್ನು ತಿಳಿಯಲು ಇಷ್ಟವುಳ್ಳವನಾಗಿ ಭೂಮಿಯಲ್ಲಿ ಕುಳಿತುಕೊಂಡು ಮನಸ್ಸಿನ ಏಕಾಗ್ರತೆಯಿಂದ ಧ್ಯಾನಮಾಡಲು ಉಪಕ್ರಮಿಸಿದನು.

೧೬. ಉದಾರವಾದ ಜ್ಞಾನವುಳ್ಳ ರಾಮನು ಪದ್ಮಾಸನವನ್ನು ಕಟ್ಟಿಕೊಂಡು, ದೇಹ-ವಾಗಿಂದ್ರಿಯ-ಮಾನಸಗಳನ್ನು ಜಯಿಸಿ ಮತ್ತು ಪ್ರಾಣ ವಾಯುಸಂಚಾರವನ್ನು ಸ್ತಂಭನಮಾಡಿ ಆಸನ-ಪ್ರಾಣಾಯಾಮಾದಿ ಯೋಗಾಂಗಗಳನ್ನು ನೆರವೇರಿಸಿ ಚಿರ ಕಾಲ ಧ್ಯಾನಾಸಕ್ತನಾದನು.

೧೭. ಇಂದ್ರಿಯ ಸಮೂಹವನ್ನು ನಿಯಮನಮಾಡಿ ಮನಸ್ಸನ್ನು ನಿಶ್ಚಂಚಲವಾಗಿ ಹೃದಯದಲ್ಲಿ ನಿರೋಧಿಸಿ ದೇವೋತ್ತಮನೂ ಜಗದ್ಗುರುವೂ ಆದ ಮಹೇಶ್ವರನನ್ನು ಧ್ಯಾನದೃಷ್ಟಿಯಿಂದ ಚಿಂತಿಸಿದನು.

೧೮. ತನ್ನ ಚಿತ್ತವನ್ನು ಆತ್ಮನಲ್ಲಿ ಸ್ಥಿರಪಡಿಸಿ ಆತ್ಮಾನುಸಂಧಾನವೆಂಬ ದೃಷ್ಟಿಯಿಂದ ಸ್ವಭಕ್ತರಲ್ಲಿ ಅನುಗ್ರಹವನ್ನು ತೋರುವ, ಮೃಗ ವ್ಯಾಧರೂಪದಿಂದ ಬಂದಿರುವ ಜಗನ್ನಾಥನಾದ ಮಹೇಶ್ವರನನ್ನು ಸಾಕ್ಷಾತ್ಕರಿಸಿದನು.

೧೯. ಅನಂತರದಲ್ಲಿ ಭಾರ್ಗವರಾಮನು ಬೇಗ ಕಣ್ಣುಗಳನ್ನು ತೆರೆದು ಮೇಲಕ್ಕೆ ಎದ್ದು ಅದೇ ಕಿರಾತ ದೇಹದಿಂದಲೆ ತನ್ನ ಮುಂಭಾಗದಲ್ಲಿ ನಿಂತಿರುವ ಪರಮೇಶ್ವರನನ್ನು ನೋಡಿದನು.

ಆತ್ಮನೋಽನುಗ್ರಹಾರ್ಥಾಯ ಶರಣ್ಯಂ ಭಕ್ತವತ್ಸಲಮ್ ।
ಆವಿರ್ಭೂತಂ ಮಹಾರಾಜ ದೃಷ್ಟ್ವಾ ರಾಮಃ ಸಸಂಭ್ರಮಮ್ ॥ ೨೦ ॥

ರೋಮಾಂಚೋದ್ಭಿನ್ನಸರ್ವಾಂಗೋ ಹರ್ಷಾಶ್ರುಪ್ಲುತಲೋಚನಃ ।
ಪಪಾತ ಪಾದಯೋರ್ಭೂಮೌ ಭಕ್ತ್ಯಾ ತಸ್ಯ ಮಹಾಮತಿಃ ॥ ೨೧ ॥

ಸಗದ್ಗದಮುವಾಚೈನಂ ಸಂಭ್ರಮಾಕುಲಯಾ ಗಿರಾ ।
ಶರಣಂ ಭವ ಶರ್ವೇತಿ ಶಂಕರೇತ್ಯಸಕೃನ್ನೃಪ ॥ ೨೨ ॥

ತತಃ ಸ್ವರೂಪಧೃಕ್ ಶಂಭುಸ್ತದ್ಭಕ್ತಿಪರಿತೋಷಿತಃ ।
ರಾಮಮುತ್ಥಾಪಯಾಮಾಸ ಪ್ರಣಾಮಾವನತಂ ಭುವಿ ॥ ೨೩ ॥

ಉತ್ಥಾಪಿತೋ ಜಗದ್ಧಾತ್ರಾ ಸ್ವಹಸ್ತಾಭ್ಯಾಂ ಭೃಗೂದ್ವಹಃ ।
ತುಷ್ಟಾವ ದೇವದೇವೇಶಂ ಪುರಃ ಸ್ಥಿತ್ವಾ ಕೃತಾಂಜಲಿಃ ॥ ೨೪ ॥

---

೨೦. ಮಹಾರಾಜನೆ! ರಾಮನು ಶರಣಾಗತಪಾಲಕನೂ ಭಕ್ತವತ್ಸಲನೂ ಆದ ಶಿವನು ತನ್ನನ್ನು ಅನುಗ್ರಹಿಸಲೋಸ್ಕರ ಆವಿರ್ಭವಿಸಿದುದನ್ನು ಬಹು ಸಂಭ್ರಮದಿಂದ ನೋಡಿದನು.

೨೧. ಮತ್ತು ಮಹಾಮತಿಯುಳ್ಳ ರಾಮನು ಸಂತೋಷಾತಿರೇಕದಿಂದ ನಿಖಿಲಾವಯುವಗಳಲ್ಲಿ ರೋಮಾಂಚೋದ್ಭೇದವುಳ್ಳವನೂ ಕಣ್ಣುಗಳಲ್ಲಿ ಆನಂದಬಾಷ್ಪದಿಂದ ಪರಿಪೂರ್ಣನೂ ಆಗಿ ಭಕ್ತಿಯಿಂದ ಅವನ ಪಾದಗಳಲ್ಲಿ ಬಿದ್ದು ನಮಸ್ಕರಿಸಿದನು.

೨೨. ರಾಜನೆ ! ತರುವಾಯ ರಾಮನು ಆ ಮೂರ್ತಿಯನ್ನು ಶರ್ವ, ಶಂಕರ ಎಂದು ಸಂಬೋಧಿಸಿ ನನಗೆ ಶರಣಪ್ರದಾನ ಮಾಡು ಎಂದು ಅನೇಕಾವರ್ತಿಯಾಗಿ ಸಂಭ್ರಮದಿಂದ ವ್ಯಾಕುಲವಾದ ಮಾತಿನಿಂದ ಗದ್ಗದ ಧ್ವನಿಯಿಂದ ಕೇಳಿಕೊಂಡನು.

೨೩. ಅನಂತರದಲ್ಲಿ ನಿಜರೂಪವನ್ನು ತೆಗೆದುಕೊಂಡು ಬಂದ ಶಂಕರನು ರಾಮನ ಭಕ್ತಿಗೆ ಮೆಚ್ಚಿ ಸಂತುಷ್ಟನಾಗಿ ನಮಸ್ಕಾರಮಾಡಿ ನೆಲದಮೇಲೆ ಬಿದ್ದಿರುವ ರಾಮನನ್ನು ಮೇಲಕ್ಕೆ ಎಬ್ಬಿಸಿದನು.

೨೪. ಜಗತ್ತನ್ನು ಉದ್ಧರಿಸುವ ಪರಮೇಶ್ವರನಿಂದ ತನ್ನ ಹಸ್ತಗಳಿಂದ ಮೇಲಕ್ಕೆ ಎಬ್ಬಿಸಲ್ಪಟ್ಟ ಭಾರ್ಗವರಾಮನು ಅಂಜಲಿಬದ್ಧನಾಗಿ ಮುಂದೆ ನಿಂತು ದೇವಾಧಿಪತಿಯಾದ ಪರಮಶಿವನನ್ನು ಸ್ತುತಿಸಿದನು.

ರಾಮ ಉವಾಚ :—

ನಮಸ್ತೇ ದೇವದೇವಾಯ ಶಂಕರಾಯಾದಿಮೂರ್ತಯೇ ।
ನಮಃ ಶರ್ವಾಯ ಶಾಂತಾಯ ಶಾಶ್ವತಾಯ ನಮೋ ನಮಃ ॥ ೨೫ ॥

ನಮಸ್ತೇ ನೀಲಕಂಠಾಯ ನೀಲಲೋಹಿತಮೂರ್ತಯೇ ।
ನಮಸ್ತೇ ಭೂತನಾಥಾಯ ಭೂತವಾಸಾಯ ತೇ ನಮಃ ॥ ೨೬ ॥

ವ್ಯಕ್ತಾವ್ಯಕ್ತಸ್ವರೂಪಾಯ ಮಹಾದೇವಾಯ ಮೀಢುಷೇ ।
ಶಿವಾಯ ಬಹುರೂಪಾಯ ತ್ರಿನೇತ್ರಾಯ ನಮೋ ನಮಃ ॥ ೨೭ ॥

ಶರಣಂ ಭವ ಮೇ ಶರ್ವ ತ್ವದ್ಭಕ್ತಸ್ಯ ಜಗತ್ಪತೇ ।
ಭೂಯೋಽನನ್ಯಾಶ್ರಯಾಣಾಂ ತು ತ್ವಮೇವ ಹಿ ಪರಾಯಣಮ್॥ ೨೮ ॥

ಯನ್ಮಯಾಪಕೃತಂ ದೇವ ದುರುಕ್ತಂ ವಾಪಿ ಶಂಕರ ।
ಅಜಾನತಾ ತ್ವಾಂ ಭಗವನ್ ಮಮ ತತ್ ಕ್ಷಂತುಮರ್ಹಸಿ ॥ ೨೯ ॥

---

೨೫. ರಾಮನು ಈ ರೀತಿಯಾಗಿ ಅರ್ಥಗರ್ಭಿತ ವಚನಗಳಿಂದ ಸ್ತುತಿಸಿದನು:— ದೇವತೆಗಳಿಗೆಲ್ಲ ದೇವತಾಸ್ವರೂಪನೂ, ಆದಿಮೂರ್ತಿಯೂ, ಸುಖಪ್ರದಾಯಕನೂ, ನಿರ್ವಿಕಾರಶಾಂತಸ್ವರೂಪನೂ, ಮತ್ತು ಶಾಶ್ವತನೂ ಆದ ಶಂಕರನಿಗೆ ಅನೇಕ ನಮಸ್ಕಾರಗಳನ್ನು ಅರ್ಪಿಸುವೆನು.

೨೬. ವಿಷಪಾನದಿಂದ ನೀಲವಾದ ಕಂಠವುಳ್ಳವನೂ, ನೀಲ ಮತ್ತು ಲೋಹಿತ ವರ್ಣದ ಮೂರ್ತಿಯುಳ್ಳವನೂ, ಭೂತಗಳ ಅಧಿಪತಿಯೂ ಮತ್ತು ಸರ್ವಪ್ರಾಣಿಗಳಿಗೆ ಸ್ಥಿತಿಪರಿಪಾಲಕನೂ ಆದ ಮಹೇಶ್ವರನಿಗೆ ಅನಂತ ನಮಸ್ಕಾರಗಳು.

೨೭. ವ್ಯಕ್ತ–ಅವ್ಯಕ್ತಗಳೆಂಬ ಸಕಲ ಜಗನ್ಮಯಸ್ವರೂಪವುಳ್ಳವನೂ, ದೇವೋತ್ತಮನೂ, ಭಕ್ತರ ಇಷ್ಟಾರ್ಥಗಳನ್ನು ವರ್ಷಿಸುವವನೂ, ನಾನಾ ರೂಪಧರನೂ, ಮೂರು ಕಣ್ಣುಗಳಿಂದ ಅಲಂಕರಿಸಲ್ಪಟ್ಟವನೂ ಆದ ಶಿವನಿಗೆ ನಮಸ್ಕರಿಸುವೆನು.

೨೮. ಜಗತ್ಪತಿಯೂ, ಆನಂದಪ್ರದನೂ ಆದ ಶಿವನೆ! ಭಕ್ತಿಯೋಗದಿಂದ ಮತ್ತೆ ಮತ್ತೆ ನಿನ್ನನ್ನು ಅವಲಂಬಿಸಿರುವ ನನಗೆ ನೀನು ಶರಣನಾಗು. ಬೇರೊಂದು ಆಶ್ರಯವಿಲ್ಲದ ಅಶರಣರಿಗೆ ನೀನೊಬ್ಬನೆ ಪರಾಯಣನೂ ಮತ್ತು ಶರಣನೂ ಆಗಿದ್ದೀ.

೨೯. ಭಗವಂತನಾದ ಸ್ವಾಮಿಯೆ! ನಾನು ಅಜ್ಞಾನದಿಂದ ನಿನ್ನಲ್ಲಿ ಮಾಡಿರುವ ಅಪಕಾರ ಅಥವಾ ಆಡಿರುವ ಕೆಟ್ಟ ವಚನಗಳನ್ನು ಕ್ಷಮಿಸಬೇಕು, ನಿನ್ನ ಮಹಿಮೆಯನ್ನು ತಿಳಿಯದೆ ಮಾಡಿದ ಕೆಟ್ಟ ನಡತೆಗಳನ್ನು ಕ್ಷಮಿಸುವುದು ಯುಕ್ತವಾದುದು.

ಅನನ್ಯವೇದ್ಯರೂಪಸ್ಯ ಸದ್ಭಾವಮಿಹ ಕಃ ಪುಮಾನ್ ।
ತ್ವಾಮೃತೇ ತವ ಸರ್ವೇಶ ಸಮ್ಯಕ್ ಶಕ್ನೋತಿ ವೇದಿತುಮ್ ॥ ೩೦ ॥

ತಸ್ಮಾತ್ತ್ವಂ ಸರ್ವಭಾವೇನ ಪ್ರಸೀದ ಮಮ ಶಂಕರ ।
ನಾನ್ಯಾಸ್ತಿ ಮೇ ಗತಿಸ್ತುಭ್ಯಂ ನಮೋ ಭೂಯೋ ನಮೋ ನಮಃ
॥ ೩೧ ॥

ವಸಿಷ್ಠ ಉವಾಚ :—

ಇತಿ ಸಂಸ್ತೂಯಮಾನಸ್ತು ಕೃತಾಂಜಲಿಪುಟಂ ಪುರಃ ।
ಶಿಷ್ಯಂತಮಾಹ ಭಗವಾನ್ ಪ್ರಸನ್ನಾತ್ಮಾ ಜಗನ್ಮಯಃ ॥ ೩೨ ॥

ಭಗವಾನುವಾಚ :—

ಪ್ರೀತೋಽಸ್ಮಿ ಭವತೇ ತಾತ ತಪಸಾನೇನ ಸಾಂಪ್ರತಮ್ ।
ಭಕ್ತ್ಯಾ ಚೈವಾನಪಾಯಿನ್ಯಾ ಹ್ಯಪಿ ಭಾರ್ಗವಸತ್ತಮ ॥ ೩೩ ॥

---

೩೦. ಸರ್ವೇಶ್ವರನೆ! ಅನ್ಯರಿಂದ ತಿಳಿಯಲಾಗದ ಅಪ್ರಮೇಯವಾದ ರೂಪವುಳ್ಳ ನಿನ್ನ ಸತ್ಯತ್ವವನ್ನು ನಿನ್ನ ಹೊರತು ಇನ್ನಾವ ಮನುಷ್ಯನು ಸರಿಯಾಗಿ ತಿಳಿಯಲು ಶಕ್ತನಾದಾನು? ನಿನ್ನ ರೂಪವು ನಿನಗೆ ಮಾತ್ರ ವೇದ್ಯವಾದುದು.

೩೧. ಶಂಕರನೆ! ಆದುದರಿಂದ ನೀನು ನನ್ನಲ್ಲಿ ಸಮಸ್ತ ಭಾವಗಳಿಂದಲೂ ಪ್ರಸನ್ನನಾಗು, ನಿನ್ನನ್ನು ಬಿಟ್ಟು ನನಗೆ ಬೇರೊಂದು ಗತಿಯಿಲ್ಲ, ನಿನಗೆ ಮತ್ತೆ ಮತ್ತೆ ಅನಂತ ನಮಸ್ಕಾರಗಳನ್ನು ಅರ್ಪಿಸುವೆನು.

೩೨. ವಸಿಷ್ಠಮುನಿಯು ಈ ರೀತಿಯಾಗಿ ಹೇಳಿದನು :—ರಾಮನಿಂದ ಈ ರೀತಿಯಾಗಿ ಸ್ತುತಿಸಲ್ಪಡುತ್ತಿರುವ ಮತ್ತು ಜಗನ್ಮಯನಾದ ಶಿವನು ಪ್ರಸನ್ನಚಿತ್ತವುಳ್ಳವನಾಗಿ ಮುಂದುಗಡೆಯಲ್ಲಿ ಅಂಜಲಿಬದ್ಧನಾಗಿ ನಿಂತಿರುವ ರಾಮನನ್ನು ಕುರಿತು ಮಾತನಾಡಿದನು.

೩೩. ಭಗವಂತನು ಈ ರೀತಿಯಾಗಿ ಹೇಳಿದನು :—ಭೃಗುವಂಶಪ್ರದೀಪನಾದ ವತ್ಸನೆ! ಈಗ ಉತ್ಕೃಷ್ಟವಾದ ನಿನ್ನ ತಪಸ್ಸಿನಿಂದಲೂ, ಶಾಶ್ವತವಾಗಿ ನೆಲೆಸಿರುವ ಭಕ್ತಿಯಿಂದಲೂ ಕೂಡ ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು.

ದಾಸ್ಯೇ ಚಾಭಿಮತಂ ಸರ್ವಂ ಭವತೇಽಹಂ ತ್ವಯಾ ವೃತಮ್ ।
ಭಕ್ತೋ ಹಿ ಮೇ ತ್ವಮತ್ಯರ್ಥಂ ನಾತ್ರ ಕಾರ್ಯಾ ವಿಚಾರಣಾ ॥ ೩೪ ॥

ಮಯ್ಯೈವಾವಗತಂ ಸರ್ವಂ ಹೃದಿ ಯತ್ತೇಽದ್ಯ ವರ್ತತೇ ।
ತಸ್ಮಾದ್ಬ್ರವೀಮಿ ಯತ್ತ್ವಾಹಂ ತತ್ಕುರುಷ್ವಾವಿಶಂಕಿತಮ್ ॥ ೩೫ ॥

ನಾಸ್ತ್ರಾಣಾಂ ಧಾರಣೇ ವತ್ಸ ವಿದ್ಯತೇ ಶಕ್ತಿರಸ್ತಿ ತೇ ।
ರೌದ್ರಾಣಾಂ ತೇನ ಭೂಯೋಽಪಿ ತಪೋ ಘೋರಂ ಸಮಾಚರ ॥ ೩೬ ॥

ಪರೀತ್ಯ ಪೃಥಿವೀಂ ಸರ್ವಾಂ ಸರ್ವತೀರ್ಥೇಷು ಚ ಕ್ರಮಾತ್ ।
ಸ್ನಾತ್ವಾ ಪವಿತ್ರದೇಹಸ್ತ್ವಂ ಸರ್ವಾಣ್ಯಸ್ತ್ರಾಣ್ಯವಾಪ್ಸ್ಯಸಿ ॥ ೩೭ ॥

ಇತ್ಯುಕ್ತ್ವಾಂತರ್ದಧೇ ದೇವಸ್ತೇನೈವ ವಪುಷಾ ವಿಭುಃ ।
ರಾಮಸ್ಯ ಪಶ್ಯತೋ ರಾಜನ್ ಕ್ಷಣೇನ ಭವಭಾಗಕೃತ್ ॥ ೩೮ ॥

---

೩೪. ನಾನು ನೀನು ಪ್ರಾರ್ಥಿಸಿರುವ ನಿನ್ನ ಸಕಲ ಇಷ್ಟಾರ್ಥಗಳನ್ನೂ ನಿನಗೆ ಕೊಡುವೆನು, ನೀನು ನನಗೆ ಪರಮಭಕ್ತನಾಗಿರುತ್ತೀ, ಈ ವಿಷಯದಲ್ಲಿ ಸಂದೇಹದಿಂದ ವಿಚಾರಮಾಡಬೇಡ.

೩೫. ಈಗ ನಿನ್ನ ಹೃದಯದಲ್ಲಿ ಇರುವುದನ್ನೆಲ್ಲ ನಾನು ತಿಳಿದಿರುವೆನು, ಆದ್ದರಿಂದ ನಾನು ನಿನಗೆ ಹೇಳುವ ವಚನವನ್ನು ಸ್ವಲ್ಪವೂ ಶಂಕಿಸದೇ ಕೇಳಿ ಅದರಂತೆ ಆಚರಿಸು.

೩೬. ವತ್ಸನೆ! ರುದ್ರಸಂಬಂಧಿಯಾದ ಮಹಾಸ್ತ್ರಗಳನ್ನು ಧಾರಣಮಾಡಲು ಬಾಲಕನಾದ ನಿನಗೆ ಈಗ ಶಕ್ತಿಯು ಬಂದಿಲ್ಲ. ಆದ್ದರಿಂದ ಮತ್ತೆ ಇನ್ನು ಘೋರವಾದ ತಪಸ್ಸನ್ನು ಆಚರಿಸು.

೩೭. ನೀನು ಸಮಸ್ತಭೂಮಿಯನ್ನು ಪ್ರದಕ್ಷಿಣಮಾಡಿ ಅಲ್ಲಲ್ಲಿರುವ ಸಮಸ್ತ ಪವಿತ್ರ ತೀರ್ಥಗಳಲ್ಲಿ ಸ್ನಾನಮಾಡಿ ಅದರಿಂದ ಪವಿತ್ರವಾದ ದೇಹವನ್ನು ಧರಿಸಿಕೊಂಡವನಾಗಿ ಸಮಸ್ತ ರೌದ್ರಾಸ್ತ್ರಗಳನ್ನು ಹೊಂದುತ್ತೀ.

೩೮. ರಾಜನೆ! ಈ ರೀತಿಯಾಗಿ ಹೇಳಿ ಪ್ರಭುವಾದ ಮಹೇಶ್ವರನು ಆ ಕಿರಾತ ದೇಹದಿಂದಲೇ ರಾಮನು ನೋಡುತ್ತಿರುವಷ್ಟರಲ್ಲಿ ಒಂದು ನಿಮಿಷದಲ್ಲಿ ಸ್ವಸ್ವರೂಪವನ್ನು ತೆಗೆದುಕೊಂಡು ಅದೃಶ್ಯನಾದನು.

ಅಂತರ್ಹಿತೇ ಜಗನ್ನಾಥೇ ರಾಮೋ ನತ್ವಾ ತು ಶಂಕರಮ್ ।
ಪರೀತ್ಯ ವಸುಧಾಂ ಸರ್ವಾಂ ತೀರ್ಥಸ್ನಾನೇಽಕರೋನ್ಮನಃ　　|| ೩೯ ||

ತತಃ ಸ ಪೃಥಿವೀಂ ಸರ್ವಾಂ ಪರಿಕ್ರಮ್ಯ ಯಥಾಕ್ರಮಮ್ ।
ಚಕಾರ ಸರ್ವತೀರ್ಥೇಷು ಸ್ನಾನಂ ವಿಧಿವದಾತ್ಮವಾನ್　　|| ೪೦ ||

ತೀರ್ಥೇಷು ಕ್ಷೇತ್ರಮುಖ್ಯೇಷು ತಥಾ ದೇವಾಲಯೇಷು ಚ ।
ಪಿತೄನ್ ದೇವಾಂಶ್ಚ ವಿಧಿವದತರ್ಪಯದತಂದ್ರಿತಃ　　|| ೪೧ ||

ಉಪವಾಸತಪೋಹೋಮಜಪಸ್ನಾನಾದಿಸುಕ್ರಿಯಾಃ ।
ತೀರ್ಥೇಷು ವಿಧಿವತ್ಕುರ್ವನ್ ಪರಿಚಕ್ರಾಮ ಮೇದಿನೀಮ್　　|| ೪೨ ||

ಏವಂ ಕ್ರಮೇಣ ತೀರ್ಥೇಷು ಸ್ನಾತ್ವಾ ಚೈವ ವಸುಂಧರಾಮ್ ।
ಪ್ರದಕ್ಷಿಣೀಕೃತ್ಯ ಶನೈಃ ಶುದ್ಧದೇಹೋಽಭವನ್ನೃಪ　　|| ೪೩ ||

---

೩೯. ಹೀಗೆ ಜಗನ್ನಾಥನಾದ ಪರಮಶಿವನು ಅಂತರ್ಧಾನವನ್ನು ಹೊಂದಲು ಭಾರ್ಗವರಾಮನು ಶಂಕರನನ್ನು ನಮಸ್ಕರಿಸಿ ನಿಖಿಲಭೂಮಿಗೆ ಪ್ರದಕ್ಷಿಣ ಬರುತ್ತ ತೀರ್ಥಸ್ನಾನವನ್ನು ಮಾಡಲು ಮನಸ್ಸಿನಲ್ಲಿ ಆಕಾಂಕ್ಷಿಸಿದನು.

೪೦. ತರುವಾಯ ಆ ರಾಮನು ಕ್ರಮವಾಗಿ ನಿಖಿಲಭೂಮಿಯನ್ನು ಪ್ರದಕ್ಷಿಣ ಬಂದು ಅತ್ಯಾದರದಿಂದ ಸಮಸ್ತ ತೀರ್ಥಗಳಲ್ಲಿಯೂ ಯಥಾವಿಧಿಯಾಗಿ ಸ್ನಾನವನ್ನು ಆಚರಿಸಿದನು.

೪೧. ಮತ್ತು ಆಲಸ್ಯವನ್ನು ದೂರಮಾಡಿ ಆಯಾಯ ತೀರ್ಥಗಳಲ್ಲಿಯೂ ಮುಖ್ಯವಾದ ಕ್ಷೇತ್ರಗಳಲ್ಲಿಯೂ ಮತ್ತು ದೇವಾಲಯಗಳಲ್ಲಿಯೂ ಯಥಾವಿಧಿಯಾಗಿ ಪಿತೃ ಮತ್ತು ದೇವತೆಗಳನ್ನು ಆರಾಧಿಸಿ ತೃಪ್ತಿಪಡಿಸಿದನು.

೪೨. ಆಯಾಯ ತೀರ್ಥಕ್ಷೇತ್ರಗಳಲ್ಲಿ ಕರ್ತವ್ಯವಾದ ಉಪವಾಸ, ತಪಸ್ಸು, ಹೋಮ, ಜಪ ಮತ್ತು ಸ್ನಾನ ಮುಂತಾದ ಸತ್ಕರ್ಮಗಳನ್ನು ಯಥಾವಿಧಿಯಾಗಿ ನೆರವೇರಿಸುತ್ತ ಸಮಸ್ತ ಭೂಮಿಯನ್ನು ಪ್ರದಕ್ಷಿಣಮಾಡಿದನು.

೪೩. ರಾಜನೆ! ರಾಮನು ಈ ಕ್ರಮದಿಂದ ಸಮಸ್ತ ತೀರ್ಥಗಳಲ್ಲಿ ಸ್ನಾನ ಮಾಡುತ್ತ ನಿಖಿಲ ಭೂಮಂಡಲವನ್ನು ಪ್ರದಕ್ಷಿಣೆಗೈದು ಮೆಲ್ಲಗೆ ಪವಿತ್ರವಾದ ದೇಹವುಳ್ಳವನಾದನು.

ಪರೀತ್ಯೈವಂ ವಸುಮತೀಂ ಭಾರ್ಗವಃ ಶಂಭುಶಾಸನಾತ್ ।
ಜಗಾಮ ಭೂಯಸ್ತಂ ದೇಶಂ ಯತ್ರ ಪೂರ್ವಮುವಾಸ ಸಃ ॥ ೪೪ ॥

ಗತ್ವಾ ರಾಜನ್ ಸ ತತ್ರೈವ ಸ್ಥಿತ್ವಾ ದೇವಮುಮಾಪತಿಮ್ ।
ಭಕ್ತ್ಯಾ ಸಂಪೂಜಯಾಮಾಸ ತಪೋಭಿರ್ನಿಯಮೈರಪಿ ॥ ೪೫ ॥

ಏತಸ್ಮಿನ್ನೇವ ಕಾಲೇ ತು ದೇವಾನಾಮಸುರೈಃ ಸಹ ।
ಬಭೂವ ಸುಚಿರಂ ರಾಜನ್ ಸಂಗ್ರಾಮೋ ರೋಮಹರ್ಷಣಃ ॥ ೪೬ ॥

ತತೋ ದೇವಾನ್ ಪರಾಜಿತ್ಯ ಯುದ್ಧೇಽತಿಬಲಿನೋಽಸುರಾಃ ।
ಅವಾಪುಃ ಪರೈಶ್ವರ್ಯಮಶೇಷಮಕುತೋಭಯಾಃ ॥ ೪೭ ॥

ಯುದ್ಧೇ ಪರಾಜಿತಾ ದೇವಾಃ ಸಕಲಾ ವಾಸವಾದಯಃ ।
ಶಂಕರಂ ಶರಣಂ ಜಗ್ಮುರ್ಹೃತೈಶ್ವರ್ಯಾ ಹ್ಯರಾತಿಭಿಃ ॥ ೪೮ ॥

---

೪೪. ಆ ಭಾರ್ಗವರಾಮನು ಶಂಕರನ ಆಜ್ಞೆಯನ್ನನುಸರಿಸಿ ಹಾಗೆ ನಿಖಿಲ ಭೂಮಿಯನ್ನು ಭ್ರಮಣಮಾಡಿ ಹಿಂದೆ ತಪವನ್ನು ಆಚರಿಸುತ್ತ ವಾಸಮಾಡಿರುವ ಸ್ಥಳಕ್ಕೆ ಮತ್ತೆ ಬಂದನು.

೪೫. ರಾಜನೆ! ಅಲ್ಲಿಗೆ ಹೋಗಿ ಅಲ್ಲಿಯೇ ನಿಂತು ಪಾರ್ವತೀ ಪತಿಯಾದ ಪರಮೇಶ್ವರನನ್ನು ತಪಸ್ಸು ಮತ್ತು ನಿಯಮಗಳ ಆಚರಣೆಯಿಂದ ಭಕ್ತಿಪೂರ್ವಕವಾಗಿ ಆರಾಧಿಸಿದನು.

೪೬. ಭೂಪತಿಯೆ! ಈ ಸಮಯಕ್ಕೆ ಸರಿಯಾಗಿ ದೇವತೆಗಳಿಗೆ ರಾಕ್ಷಸರ ಸಂಗಡ ಪ್ರೇಕ್ಷಕರಿಗೆ ರೋಮಾಂಚವನ್ನು ಉಂಟುಮಾಡುವಂತಹ ಮಹಾ ಯುದ್ಧವು ಅಕಸ್ಮಾತ್ತಾಗಿ ಪ್ರಾಪ್ತವಾಯಿತು.

೪೭. ತರುವಾಯ ಯುದ್ಧದಲ್ಲಿ ಪ್ರಬಲರಾಗಿ ಜಯಶೀಲರಾದ ಅಸುರರು ದೇವತೆಗಳನ್ನು ಸೋಲಿಸಿ ನಿರ್ಭಯರಾಗಿ ದೇವಭೋಗ್ಯವಾಗಿದ್ದ ಸಂಪೂರ್ಣವಾದ ಐಶ್ವರ್ಯವನ್ನು ಹೊಂದಿದರು.

೪೮. ಯುದ್ಧರಂಗದಲ್ಲಿ ಅಪಜಯವನ್ನು ಹೊಂದಿದ ಇಂದ್ರನೇ ಮೊದಲಾದ ಸಮಸ್ತ ದೇವತೆಗಳು ರಾಕ್ಷಸರಿಂದ ಆಕ್ರಮಿಸಲ್ಪಟ್ಟ ಐಶ್ವರ್ಯವುಳ್ಳವರಾಗಿ ಶಂಕರನನ್ನು ಶರಣ ಹೊಂದಿದರು.

ತೋಷಯಿತ್ವಾ ಜಗನ್ನಾಥಂ ಪ್ರಣಾಮಜಯಸಂಸ್ತವೈಃ ।
ಪ್ರಾರ್ಥಯಾಮಾಸುರಸುರಾನ್ ಹಂತುಂ ದೇವಾಃ ಪಿನಾಕಿನಮ್ ॥ ೪೯ ॥

ತತಸ್ತೇಷಾಂ ಪ್ರತಿಶ್ರುತ್ಯ ದಾನವಾನಾಂ ವಧಂ ನೃಪ ।
ದೇವಾನಾಂ ವರದಃ ಶಂಭುರ್ಮಹೋದರಮುವಾಚ ಹ ॥ ೫೦ ॥

ಹಿಮಾದ್ರೇರ್ದಕ್ಷಿಣೇ ಭಾಗೇ ರಾಮೋ ನಾಮ ಮಹಾತಪಾಃ ।
ಮುನಿಪುತ್ರೋऽತಿತೇಜಸ್ವೀ ಮಾಮುದ್ದಿಶ್ಯ ತಪಸ್ಯತಿ ॥ ೫೧ ॥

ತತ್ರ ಗತ್ವಾ ತ್ವಮದ್ಯೈವ ನಿವೇದ್ಯ ಮಮ ಶಾಸನಮ್ ।
ಮಹೋದರ ತಪಸ್ಯಂತಂ ತಮಿಹಾನಯ ಮಾ ಚಿರಮ್ ॥ ೫೨ ॥

ಇತ್ಯಾಜ್ಞಪ್ತಸ್ತಥೇತ್ಯುಕ್ತ್ವಾ ಪ್ರಣಮ್ಯೇಶಂ ಮಹೋದರಃ ।
ಜಗಾಮ ವಾಯುವೇಗೇನ ಯತ್ರ ರಾಮೋ ವ್ಯವಸ್ಥಿತಃ ॥ ೫೩ ॥

೪೯. ದೇವತೆಗಳು ಎಲ್ಲರೂ ಸೇರಿ ನಮಸ್ಕಾರ ಮತ್ತು ಜಯಘೋಷಪೂರ್ವಕವಾದ ಸ್ತುತಿವಚನಗಳಿಂದ ಪಿನಾಕಾಯುಧಧರನೂ ಜಗನ್ನಾಥನೂ ಆದ ಶಂಕರನನ್ನು ಸಂತೋಷಗೊಳಿಸಿ ಅಸುರರನ್ನು ನಿಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡರು.

೫೦. ನೃಪತಿಯೆ! ದೇವತೆಗಳಲ್ಲಿ ಪ್ರಸನ್ನನಾಗಿ ವರದಾನೋದ್ಯುಕ್ತನಾದ ಶಂಭುವು ಆ ದಾನವರನ್ನು ಸಂಹರಿಸಬೇಕೆಂಬ ಅವರ ಪ್ರಾರ್ಥನೆಯನ್ನು ಅಂಗೀಕರಿಸಿ ತನ್ನ ಗಣಗಳಲ್ಲಿ ಒಬ್ಬನಾದ ಮಹೋದರನನ್ನು ಕುರಿತು ಹೇಳಿದನು.

೫೧. ಹಿಮಾಚಲಪರ್ವತದ ದಕ್ಷಿಣಭಾಗದಲ್ಲಿ ಅತ್ಯಂತ ತೇಜಸ್ವಿಯೂ ಮಹಾತಪಸ್ವಿಯೂ ಆದ ರಾಮನೆಂಬ ಮುನಿಪುತ್ರನು ನನ್ನನ್ನು ಉದ್ದೇಶಿಸಿ ಭಕ್ತಿಯಿಂದ ತಪವನ್ನು ಆಚರಿಸುತ್ತಿರುವನು.

೫೨. ಮಹೋದರನೇ! ನೀನು ಈಗಲೇ ಅಲ್ಲಿಗೆ ಹೋಗಿ ನನ್ನ ಆಜ್ಞೆಯನ್ನು ಅವನಿಗೆ ತಿಳಿಸಿ ತಪಶ್ಚರ್ಯೆಯಲ್ಲಿ ನಿರತನಾದ ಅವನನ್ನು ಶೀಘ್ರವಾಗಿ ಇಲ್ಲಿಗೆ ಕರೆದುಕೊಂಡು ಬಾ.

೫೩. ಮಹೋದರನು ಶಿವನ ಆಜ್ಞೆಯನ್ನು ಹಾಗೆ ಆಗಲೆಂದು ಶಿರಸಾ ವಹಿಸಿ ಈಶ್ವರನನ್ನು ನಮಸ್ಕರಿಸಿ ರಾಮನು ತಪಸ್ಸನ್ನು ಆಚರಿಸುತ್ತ ವಾಸಮಾಡುತ್ತಲಿದ್ದ ಸ್ಥಳಕ್ಕೆ ವಾಯುವೇಗದಿಂದ ಹೋದನು.

ಸಮಾಸಾದ್ಯ ಸ ತಂ ದೇಶಂ ದೃಷ್ಟ್ವಾ ರಾಮಂ ಮಹಾಮುನಿಮ್ ।
ತಪಸ್ಯಂತಮಿದಂ ವಾಕ್ಯಮುವಾಚ ವಿನಯಾನ್ವಿತಃ ॥ ೫೪ ॥

ದ್ರಷ್ಟುಮಿಚ್ಛತಿ ಶಂಭುಸ್ತ್ವಾಂ ಭೃಗುವರ್ಯ ತದಾಜ್ಞಯಾ ।
ಆಗತೋಽಹಂ ತದಾಗಚ್ಛ ತತ್ಪಾದಾಂಬುಜಸನ್ನಿಧಿಮ್ ॥ ೫೫ ॥

ತಚ್ಛ್ರುತ್ವಾ ವಚನಂ ತಸ್ಯ ಶೀಘ್ರಮುತ್ಥಾಯ ಭಾರ್ಗವಃ ।
ತದಾಜ್ಞಾಂ ಶಿರಸಾನಂಮ್ಯ ತಥೇತಿ ಪ್ರತ್ಯಭಾಷತ ॥ ೫೬ ॥

ತತೋ ರಾಮಂ ತ್ವರೋಪೇತಃ ಶಂಭುಪಾರ್ಶ್ವಂ ಮಹೋದರಃ ।
ಪ್ರಾಪಯಾಮಾಸ ಸಹಸಾ ಕೈಲಾಸೇ ನಗಸತ್ತಮೇ ॥ ೫೭ ॥

ಸಹಿತಂ ಸಕಲೈರ್ಭೂತೈರಿಂದ್ರಾದ್ಯೈಶ್ಚ ಸಹಾಮರೈಃ ।
ದದರ್ಶ ಭಾರ್ಗವಶ್ರೇಷ್ಠಃ ಶಂಕರಂ ಭಕ್ತವತ್ಸಲಮ್ ॥ ೫೮ ॥

---

೫೪. ಆ ಮಹೋದರನು ಆ ಸ್ಥಳವನ್ನು ಸೇರಿ ಅಲ್ಲಿ ತಪಸ್ಸನ್ನು ಮಾಡುತ್ತಲಿದ್ದ ಮಹಾ ಮುನಿಯಾದ ರಾಮನನ್ನು ಕಂಡು ವಿನಯದಿಂದ ಕೂಡಿದವನಾಗಿ ರಾಮನನ್ನು ಕುರಿತು ಈ ವಚನವನ್ನು ಹೇಳಿದನು.

೫೫. ಭೃಗುವಂಶ ಪ್ರದೀಪನೆ! ಶಂಭುವು ನಿನ್ನನ್ನು ನೋಡಬೇಕೆಂದು ಸಂಕಲ್ಪಿಸಿರುವನು. ಅದನ್ನು ನಿನಗೆ ತಿಳಿಸಲು ಪ್ರಭುವಿನ ಆಜ್ಞೆಯಂತೆ ನಾನು ಇಲ್ಲಿಗೆ ಬಂದಿರುವೆನು. ಆದ್ದರಿಂದ ನೀನು ಶಂಭುವಿನ ಚರಣಕಮಲಗಳ ಸನ್ನಿಧಿಗೆ ಬಾ.

೫೬. ಭಾರ್ಗವರಾಮನು ಮಹೋದರನ ಆ ವಚನವನ್ನು ಕೇಳಿ ಶೀಘ್ರವಾಗಿ ಮೇಲಕ್ಕೆ ಎದ್ದು ಶಿವನ ಆಜ್ಞೆಯನ್ನು ಗೌರವದಿಂದ ಹಾಗೆ ಆಗಲೆಂದು ಶಿರಸಾ ವಹಿಸಿ ಪ್ರತಿವಚನವನ್ನಿತ್ತನು.

೫೭. ಅನಂತರದಲ್ಲಿ ಮಹೋದರನು ತ್ವರೆಯಿಂದ ಯತ್ನಿಸಿದವನಾಗಿ ಕೈಲಾಸ ವೆಂಬ ಶ್ರೇಷ್ಠಪರ್ವತದಲ್ಲಿರುವ ಶಂಭುವಿನ ಸನ್ನಿಧಿಗೆ ಬಹಳ ಬೇಗ ಕರೆದುಕೊಂಡು ಹೋದನು.

೫೮. ವಿನೀತನಾದ ಭಾರ್ಗವರಾಮನು ಅಲ್ಲಿಗೆ ಹೋಗಿ ಪರಿವಾರವಾದ ಸಮಸ್ತ ಭೂತಗಳಿಂದಲೂ ಇಂದ್ರನೇ ಮುಂತಾದ ನಿಖಿಲ ದೇವತೆಗಳಿಂದಲೂ ಕೂಡಿರುವ ಮತ್ತು ಭಕ್ತರಲ್ಲಿ ವಾತ್ಸಲ್ಯವುಳ್ಳ ಶಂಕರನನ್ನು ನೋಡಿದನು.

ಸಂಸ್ತೂಯಮಾನಂ ಮುನಿಭಿರ್ನಾರದಾದ್ಯೈಸ್ತಪೋಧನೈಃ ।
ಗಂಧರ್ವೈರುಪಗಾಯದ್ಭಿರ್ನೃತ್ಯದ್ಭಿ ಶ್ಚಾಪ್ಸರೋಗಣೈಃ ॥ ೫೯ ॥

ಉಪಾಸ್ಯಮಾನಂ ದೇವೇಶಂ ಗಜಚರ್ಮಧೃತಾಂಬರಮ್ ।
ಭಸ್ಮೋದ್ಧೂಲಿತಸರ್ವಾಂಗಂ ತ್ರಿನೇತ್ರಂ ಚಂದ್ರಶೇಖರಮ್ ॥ ೬೦ ॥

ಧೃತಪಿಂಗಜಟಾಭಾರಂ ನಾಗಾಭರಣಭೂಷಿತಮ್ ।
ಪ್ರಲಂಬಾಷ್ಟಭುಜಂ ಸೌಮ್ಯಂ ಪ್ರಸನ್ನಮುಖಪಂಕಜಮ್ ॥ ೬೧ ॥

ಆಸ್ಥಿತಂ ಕಾಂಚನೇ ಪಟ್ಟೇ ಗೀರ್ವಾಣಸಮಿತೌ ನೃಪ ।
ಉಪಾಸರ್ಪತ್ತು ದೇವೇಶಂ ಭೃಗುವರ್ಯಃ ಕೃತಾಂಜಲಿಃ ॥ ೬೨ ॥

ಶ್ರೀಕಂಠದರ್ಶನೋದ್ಭೂತ ರೋಮಾಂಚಾಂಚಿತವಿಗ್ರಹಃ ।
ಬಾಷ್ಪಾತ್ತು ಸಿಕ್ತಕಾಯೇನ ಸ ತು ಗತ್ವಾ ಹರಾಂತಿಕಮ್ ॥ ೬೩ ॥

---

೫೯. ಅಲ್ಲಿ ನಾರದನೇ ಮುಂತಾದ ತಪಸ್ವಿ ಮುನಿಗಳಿಂದ ಸ್ತುತಿಪ್ರಕಾರದಿಂದಲೂ ಗಾಯಕರಾದ ಗಂಧರ್ವರಿಂದ ಗಾನರೂಪದಿಂದಲೂ ನರ್ತನಕುಶಲರಾದ ಅಪ್ಸರಾಂಗನೆಯರಿಂದ ನರ್ತನ ಕ್ರಮದಿಂದಲೂ ಶಿವನು ಸೇವಿಸಲ್ಪಡುತ್ತಲಿದ್ದನು.

೬೦. ಹೀಗೆ ವಿವಿಧ ಸೇವೆಯನ್ನು ಸ್ವೀಕರಿಸುತ್ತ, ಆನೆಯ ಚರ್ಮರೂಪವಾದ ವಸ್ತ್ರವನ್ನು ಧರಿಸಿರುವ, ಸರ್ವಾವಯವಗಳಲ್ಲಿ ಭಸ್ಮೋದ್ಧೂಲವನ್ನು ಮಾಡಿಕೊಂಡಿರುವ ಮತ್ತು ಮೂರು ಕಣ್ಣು, ಶಿರದಲ್ಲಿ ಚಂದ್ರಕಲೆಗಳಿಂದ ಅಲಂಕರಿಸಲ್ಪಟ್ಟ ಶಿವನನ್ನು ನೋಡಿದನು.

೬೧. ಮತ್ತು ಶಂಕರನು ಹೊಂಬಣ್ಣದ ಜಟಾಭಾರ, ಸರ್ಪಾಭರಣ, ದೀರ್ಘವಾದ ಅಷ್ಟಬಾಹು ಮತ್ತು ಪ್ರಸನ್ನವಾದ ಮುಖಕಮಲಗಳಿಂದ ಶೋಭಿತವಾದ ಸೌಮ್ಯವಾದ ಆಕಾರವನ್ನು ಧರಿಸಿದ್ದನು.

೬೨. ಧೊರೆಯೆ! ದೇವತೆಗಳಿಂದ ತುಂಬಿದ ಆಸ್ಥಾನ ಸಭೆಯಲ್ಲಿ ಸುವರ್ಣಮಯವಾದ ಪಟ್ಟಾಸನದಲ್ಲಿ ಕುಳಿತುಕೊಂಡಿರುವ ದೇವೋತ್ತಮನಾದ ಶಂಭುವಿನ ಸನ್ನಿಧಿಗೆ ಭಾರ್ಗವರಾಮನು ಅಂಜಲಿಬದ್ಧನಾಗಿ ಬಂದನು.

೬೩. ರಾಮನು ಪರಮಶಿವನ ಸನ್ನಿಧಿಗೆ ಹೋಗುತ್ತಿರಲು ಅವನ ದೇಹವು ಆನಂದ ಬಾಷ್ಪದಿಂದ ನೆನೆಯಿತು. ಮತ್ತು ಪರಮಶಿವನ ದರ್ಶನಾನಂದದಿಂದ ಉಂಟಾದ ರೋಮಾಂಚದಿಂದ ಪೂರ್ಣವಾಗಿ ತುಂಬಿ ಹೋಯಿತು.

ಭಕ್ತ್ಯಾ ಸಸಂಭ್ರಮಂ ವಾಚಾ ಹರ್ಷಗದ್ಗದಯಾಸಕೃತ್ ।
ನಮಸ್ತೇ ದೇವದೇವೇತಿ ವ್ಯಾಕುಲಸನ್ನಾಕುಲಾಕ್ಷರಮ್ ॥ ೬೪ ॥

ಪಪಾತ ಸಂಸ್ಪೃಶನ್ ಮೂರ್ಧ್ನಾ ಚರಣೌ ಪುರವಿದ್ವಿಷಃ ।
ಪಶ್ಯತಾಂ ದೇವವೃಂದಾನಾಂ ಮಧ್ಯೇ ಭೃಗುಕುಲೋದ್ವಹಮ್॥ ೬೫ ॥

ತಮುತ್ಥಾಪ್ಯ ಶಿವಃ ಪ್ರೀತಃ ಪ್ರಸನ್ನಮುಖಪಂಕಜಮ್ ।
ರಾಮಂ ಮಧುರಯಾ ವಾಚಾ ಪ್ರಹಸನ್ನಾಹ ಸಾದರಮ್ ॥ ೬೬ ॥

ಇಮೇ ದೈತ್ಯಗಣೈಃ ಕ್ರಾಂತಾಃ ಸ್ವಾಧಿಷ್ಠಾನಾತ್ಪರಿಚ್ಯುತಾಃ ।
ಅಶಕ್ನುವಂತಸ್ತಾನ್ ಹಂತುಂ ಗೀರ್ವಾಣಾ ಮಾಮುಪಾಗತಾಃ ॥ ೬೭ ॥

ತಸ್ಮಾನ್ಮಮಾಜ್ಞಯಾ ರಾಮ ದೇವಾನಾಂ ಚ ಪ್ರಿಯೇಪ್ಸಯಾ ।
ಜಹಿ ದೈತ್ಯಗಣಾನ್ ಸರ್ವಾನ್ ಸಮರ್ಥಸ್ತ್ವಂ ಹಿ ಮೇ ಮತಃ ॥ ೬೮ ॥

---

೬೪. ರಾಮನು ಅತಿಸಂಭ್ರಮದಿಂದ ಕೂಡಿದ ಭಕ್ತಿಯಿಂದಲೂ ಹರ್ಷೋದ್ರೇಕದಿಂದ ಉಂಟಾದ ಗದ್ಗದ ವಾಣಿಯಿಂದಲೂ “ದೇವೋತ್ತಮನೆ! ನಿನಗೆ ನಮಸ್ಕರಿಸುವೆನು” ಎಂದು ಅಕ್ಷರಗಳ ವ್ಯಾಕುಲತೆಯಿಂದ ಅನೇಕಾವರ್ತಿಯಾಗಿ ಹೇಳಿದನು.

೬೫. ರಾಮನು ಹೀಗೆ ಹೇಳುತ್ತ ಪುರಾಸುರ ಸಂಹಾರಿಯಾದ ಪರಮೇಶ್ವರನ ಚರಣಗಳನ್ನು ಶಿರಸ್ಸಿನಿಂದ ಸ್ಪರ್ಶಮಾಡಿ ನಮಸ್ಕರಿಸಿದನು. ಆಗ ಶಿವನು ಸಾಕ್ಷಾತ್ಕರಿಸುತ್ತಲಿದ್ದ ದೇವಸಂಘದ ನಡುವೆ ರಾಮನನ್ನು ಪ್ರೀತಿಸಿದನು.

೬೬. ಸುಪ್ರೀತನಾದ ಶಿವನು ಪ್ರಸನ್ನವಾದ ಮುಖಕಮಲದಿಂದ ಕೂಡಿದ ಆ ರಾಮನನ್ನು ಮೇಲಕ್ಕೆ ಎಬ್ಬಿಸಿ ಆದರದಿಂದ ಕೂಡಿ ನಗುನಗುತ್ತ ಮಧುರವಾದ ವಾಣಿಯಿಂದ ಮಾತನಾಡಿದನು.

೬೭. ರಾಮನೆ! ಈ ದೇವತೆಗಳೆಲ್ಲರೂ ರಾಕ್ಷಸರಿಂದ ಆಕ್ರಮಿಸಲ್ಪಟ್ಟವರಾಗಿ ತಮ್ಮ ಭೋಗಪದವಿಯಿಂದ ಭ್ರಷ್ಟರಾಗಿ ಆ ಅಸುರರನ್ನು ಸಂಹರಿಸಲು ಅಶಕ್ತರಾಗಿ ನನ್ನನ್ನು ಶರಣಹೊಂದಿ ಬಂದಿರುವರು.

೬೮. ರಾಮನೆ! ಆದ್ದರಿಂದ ನನ್ನ ಶಾಸನದಿಂದಲೂ ದೇವತೆಗಳಿಗೆ ಪ್ರಿಯವನ್ನು ಮಾಡಬೇಕೆಂಬ ಉದ್ದೇಶದಿಂದಲೂ ಸಮಸ್ತ ಅಸುರವೃಂದವನ್ನು ಸಂಹರಿಸು. ನೀನು ಅದಕ್ಕೆ ಸಮರ್ಥನೆಂದು ನನ್ನ ಮತವು.

ತತೋ ರಾಮೋಽಬ್ರವೀಚ್ಛರ್ವಂ ಪ್ರಣಿಪತ್ಯ ಕೃತಾಂಜಲಿಃ ।
ಶೃಣ್ವತಾಂ ಸರ್ವದೇವಾನಾಂ ಸಪ್ರಶ್ರಯಮಿದಂ ವಚಃ ॥ ೬೯ ॥

ಸ್ವಾಮಿನ್ನವಿದಿತಂ ಕಿಂ ತೇ ಸರ್ವಜ್ಞಸ್ಯಾಖಿಲಾತ್ಮನಃ ।
ತಥಾಪಿ ವಿಜ್ಞಾಪಯತೋ ವಚನಂ ಮೇಽವಧಾರಯ ॥ ೭೦ ॥

ಯದಿ ಶಕ್ರಾದಿಭಿರ್ದೇವೈರಖಿಲೈರಮರಾರಯಃ ।
ನ ಶಕ್ಯಾ ಹಂತುಮೇಕಸ್ಯ ಶಕ್ಯಾಸ್ಸ್ಯುಸ್ತೇ ಕಥಂ ಮಮ ॥ ೭೧ ॥

ಅನಸ್ತ್ರಜ್ಞೋಽಸ್ಮಿ ದೇವೇಶ ಯುದ್ಧಾನಾಮಕೋವಿದಃ ।
ಕಥಂ ಹನಿಷ್ಯೇ ಸಕಲಾನ್ ಸುರಶತ್ರೂನನಾಯುಧಃ ॥ ೭೨ ॥

ಇತ್ಯುಕ್ತಸ್ತೇನ ದೇವೇಶಃ ಸಿತಂ ಕಾಲಾಗ್ನಿಸಂಪ್ರಭಮ್ ।
ಶೈವಮಸ್ತ್ರಮಯಂ ತೇಜೋ ದದೌ ತಸ್ಮೈ ಮಹಾತ್ಮನೇ ॥ ೭೩ ॥

---

೬೯. ಅನಂತರದಲ್ಲಿ ರಾಮನು ಶಿವನನ್ನು ನಮಸ್ಕರಿಸಿ ಅಂಜಲಿಬದ್ಧನಾಗಿ ಸಮಸ್ತ ದೇವತೆಗಳು ಕೇಳುತ್ತಿರುವ ಹಾಗೆ ವಿನಯಪೂರ್ವಕವಾಗಿ ಈ ವಚನವನ್ನು ಹೇಳಿದನು.

೭೦. ಸ್ವಾಮಿಯೆ! ಸರ್ವಜ್ಞನೂ ಸರ್ವಾತ್ಮಕನೂ ಆದ ನಿನಗೆ ತಿಳಿಯದಿರುವುದು ಏನಿದೆ? ಹಾಗಾದರೂ ವಿನಯದಿಂದ ಅರಿಕೆಮಾಡಿಕೊಳ್ಳುತ್ತಿರುವ ನನ್ನ ವಚನವನ್ನು ಪರಾಂಬರಿಸು.

೭೧. ಇಂದ್ರನೇ ಮೊದಲಾದ ನಿಖಿಲ ದೇವತೆಗಳೆಲ್ಲರೂ ಸೇರಿ ಅಮರ ಶತ್ರುಗಳಾದ ಅಸುರರನ್ನು ಸಂಹರಿಸಲಾರದಿದ್ದರೆ ಏಕಾಕಿಯಾದ ನಾನು ಅವರನ್ನು ಸಂಹರಿಸಲು ಶಕ್ತನಾಗುವುದು ಹೇಗೆ?

೭೨. ದೇವತಾ ಪ್ರಭುವೆ! ನಾನು ಅಸ್ತ್ರವಿದ್ಯೆಯಲ್ಲಿ ಅಜ್ಞನಾಗಿರುವೆನು; ಯುದ್ಧಗಳಲ್ಲಿ ಅನಭ್ಯಾಸಿಯಾಗಿರುವೆನು; ನಿರಾಯುಧನಾದ ನಾನು ದೇವಶತ್ರುಗಳಾದ ಅಸುರರನ್ನು ಎಲ್ಲ ಹೇಗೆ ಸಂಹರಿಸಲಿ?

೭೩. ಈ ರೀತಿಯಾಗಿ ರಾಮನಿಂದ ವಿಜ್ಞಾಪಿಸಲ್ಪಟ್ಟ ದೇವೇಶ್ವರನಾದ ಶಂಕರನು ಶುಭ್ರವೂ, ಪ್ರಲಯಾಗ್ನಿಗೆ ಸಮಾನವಾದ ಕಾಂತಿಯುಳ್ಳದ್ದೂ ಆದ ಶೈವಾಸ್ತ್ರಮಯವಾದ ತೇಜಸ್ಸನ್ನು ಮಹಾತ್ಮನಾದ ರಾಮನಿಗೆ ಅನುಗ್ರಹಿಸಿದನು.

ಆತ್ಮೀಯಂ ಪರಶುಂ ದತ್ತ್ವಾ ಸರ್ವಶಸ್ತ್ರಾಭಿಭಾವಕಮ್ ।
ರಾಮಮಾಹ ಪ್ರಸನ್ನಾತ್ಮಾ ಗೀರ್ವಾಣಾನಾಂ ತು ಶೃಣ್ವತಾಮ್॥ ೭೪ ॥

ಮತ್ಪ್ರಸಾದೇನ ಸಕಲಾನ್ ಸುರಶತ್ರೂನ್ ವಿನಿಘ್ನತಃ ।
ಶಕ್ತಿರ್ಭವತು ತೇ ಸೌಮ್ಯ ಸಮಸ್ತಾರಿದುರಾಸದಾ ॥ ೭೫ ॥

ಅನೇನೈವಾಯುಧೇನ ತ್ವಂ ಗಚ್ಛ ಯುಧ್ಯಸ್ವ ಶತ್ರುಭಿಃ ।
ಸ್ವಯಮೇವ ಚ ವೇತ್ಸಿ ತ್ವಂ ಯಥಾವದ್ಯುದ್ಧಕೌಶಲಮ್ ॥ ೭೬ ॥

ವಸಿಷ್ಠ ಉವಾಚ :—
ಏವಮುಕ್ತಸ್ತತೋ ರಾಮ ಶಂಭುನಾ ತಂ ಪ್ರಣಮ್ಯ ಚ ।
ಜಗ್ರಾಹ ಪರಶುಂ ಶೈವಂ ವಿಬುಧಾರಿವಧೋದ್ಯತಃ ॥ ೭೭ ॥

ತತಃ ಸ ಶುಶುಭೇ ರಾಮೋ ವಿಷ್ಣುತೇಜೋಽಂಶಸಂಭವಃ ।
ರುದ್ರಭಕ್ತ್ಯಾ ಸಮಾಯುಕ್ತೋ ದ್ಯುತ್ಯೇವ ಸವಿತುರ್ಮಹಃ ॥ ೭೮ ॥

---

೭೪. ಶಂಕರನು ಸರ್ವಶಸ್ತ್ರಗಳನ್ನು ತಿರಸ್ಕರಿಸುವ ತನ್ನ ಪರಶುವನ್ನು ಕೊಟ್ಟು ಪ್ರಸನ್ನವಾದ ಅಂತಃಕರಣವುಳ್ಳವನಾಗಿ ಕೇಳುತ್ತಲಿರುವ ದೇವತೆಗಳ ಸಮಕ್ಷದಲ್ಲಿ ರಾಮನನ್ನು ಕುರಿತು ಮಾತನಾಡಿದನು.

೭೫. ಸೌಮ್ಯನಾದ ರಾಮನೆ! ನನ್ನ ಅನುಗ್ರಹಬಲದಿಂದ ಸುರಶತ್ರುಗಳಾದ ನಿಖಿಲ ಅಸುರರನ್ನು ಸಂಹರಿಸಲು ಉದ್ಯುಕ್ತನಾದ ನಿನಗೆ ಸಮಸ್ತ ಶತ್ರುಗಳಿಂದಲೂ ತಿರಸ್ಕರಿಸಲಾಗದ ಅಸಾಧಾರಣವಾದ ಶಕ್ತಿಯು ಉಂಟಾಗಲಿ.

೭೬. ನೀನು ಯುದ್ಧರಂಗವನ್ನಿಳಿದು ಈ ಆಯುಧದಿಂದ ಶತ್ರುಗಳ ಸಂಗಡ ಯುದ್ಧಮಾಡು. ಉತ್ತಮವಾದ ಯುದ್ಧನೈಪುಣ್ಯವನ್ನು ನೀನು ಸ್ವತಂತ್ರವಾಗಿ ಹೊಂದುತ್ತೀ.

೭೭. ವಸಿಷ್ಠಮುನಿಯು ಇಂತೆಂದನು :—ತರುವಾಯ ಶಂಭುವಿನಿಂದ ಈ ರೀತಿಯಾಗಿ ಹೇಳಲ್ಪಟ್ಟ ರಾಮನು ಶಂಕರನನ್ನು ನಮಸ್ಕರಿಸಿ ದೇವಶತ್ರುಗಳ ನಿಗ್ರಹದಲ್ಲಿ ಆಸಕ್ತನಾಗಿ ಶೈವಪರಶುವನ್ನು ಪರಿಗ್ರಹಿಸಿದನು.

೭೮. ತರುವಾಯ ವಿಷ್ಣುವಿನ ಅಂಶದಿಂದ ಹುಟ್ಟಿರುವ ಆ ರಾಮನು ಪ್ರಕಾಶದಿಂದ ಸೂರ್ಯನ ತೇಜಸ್ಸು ಶೋಭಿಸುತ್ತಿರುವಂತೆ ರುದ್ರಭಕ್ತಿಯಿಂದ ಕೂಡಿ ಶೋಭಿಸಿದನು.

ಸೋಽನುಜ್ಞಾತಸ್ತ್ರಿನೇತ್ರೇಣ ದೇವೈಃ ಸರ್ವೈಃ ಸಮನ್ವಿತಃ ।
ಜಗಾಮಹಂ ತು ಮಸುರಾನ್ ಯುದ್ಧಾಯ ಕೃತನಿಶ್ಚಯಃ ॥ ೭೯ ॥

ತತೋಽಭವತ್ ಪುನರ್ಯುದ್ಧಂ ದೇವಾನಾಮಸುರೈಃ ಸಹ ।
ತ್ರೈಲೋಕ್ಯವಿಜಯೋದ್ಯುಕ್ತೈ ರಾಜನ್ನತಿಭಯಂಕರಮ್ ॥ ೮೦ ॥

ಅಥ ರಾಮೋ ಮಹಾಬಾಹುಸ್ತಸ್ಮಿನ್ ಯುದ್ಧೇ ಸುದಾರುಣೇ ।
ಕ್ರುದ್ಧಃ ಪರಶುನಾ ತೇನ ನಿಜಘಾನ ಮಹಾಸುರಾನ್ ॥ ೮೧ ॥

ಪ್ರಹಾರೈರಶನಿಪ್ರಖ್ಯೈರ್ನಿಘ್ನನ್ ದೈತ್ಯಾನ್ ಸಹಸ್ರಶಃ ।
ಚಚಾರ ಸಮರೇ ರಾಮಃ ಕ್ರುದ್ಧಃ ಕಾಲ ಇವಾಪರಃ ॥ ೮೨ ॥

ಹತ್ವಾ ತು ಸಕಲಾನ್ ದೈತ್ಯಾನ್ ದೇವಾನ್ ಸರ್ವಾನಹರ್ಷಯತ್ ।
ಕ್ಷಣೇನ ನಾಶಯಾಮಾಸ ರಾಮಃ ಪ್ರಹರತಾಂ ವರಃ ॥ ೮೩ ॥

---

೭೯. ತ್ರಿನೇತ್ರನಾದ ಶಂಕರನಿಂದ ಆಜ್ಞಾಪಿಸಲ್ಪಟ್ಟ ರಾಮನು ಯುದ್ಧ ಮಾಡಲು ನಿಶ್ಚಯಮಾಡಿದವನಾಗಿ ದೇವಸೇನೆಯಿಂದ ಸುತ್ತುವರಿಯಲ್ಪಟ್ಟವನಾಗಿ ಅಸುರರನ್ನು ಸಂಹರಿಸಲು ಹೊರಟನು.

೮೦. ರಾಜನೆ! ಆಗ ಲೋಕತ್ರಯವನ್ನು ಜಯಿಸಲು ಹೊರಟಿರುವ ಅಸುರರೊಂದಿಗೆ ದೇವತೆಗಳಿಗೆ ಅತಿಭಯಂಕರವಾದ ಯುದ್ಧವು ಮತ್ತೆ ಪ್ರಾರಂಭವಾಯಿತು.

೮೧. ತರುವಾಯ ಮಹಾಬಾಹುಬಲಶಾಲಿಯಾದ ರಾಮನು ಭಯಂಕರವಾದ ಆ ಯುದ್ಧದಲ್ಲಿ ಹೆಚ್ಚಾಗಿ ಕುಪಿತನಾಗಿ ಆ ಪರಶು ಆಯುಧದಿಂದ ಅಸುರರನ್ನು ಕೊಂದು ಹಾಕಿದನು.

೮೨ ಸಿಡಿಲಿನಂತೆ ಇರುವ ಪ್ರಹಾರಗಳಿಂದ ಸಾವಿರಾರು ರಾಕ್ಷಸರ ಗುಂಪನ್ನು ಸಂಹರಿಸುತ್ತ ರಾಮನು ಯುದ್ಧರಂಗದಲ್ಲಿ ಕುಪಿತನಾದ ಮತ್ತೊಬ್ಬ ಯಮನಂತೆ ಭಯಂಕರನಾಗಿ ಸಂಚರಿಸಿದನು.

೮೩. ಶತ್ರುಗಳನ್ನು ಪ್ರಹರಿಸುವುದರಲ್ಲಿ ಅಗ್ರೇಸರನಾದ ರಾಮನು ಸಮಸ್ತ ದೈತ್ಯರನ್ನು ಕ್ಷಣಮಾತ್ರದಿಂದ ಸಂಹರಿಸಿ ಶತ್ರುಶೂನ್ಯವಾಗಿಮಾಡಿ ದೇವತೆಗಳಿಗೆ ಆನಂದವನ್ನು ಉಂಟುಮಾಡಿದನು.

ರಾಮೇಣ ಹನ್ಯಮಾನಾಸ್ತು ಸಮಸ್ತಾ ದೈತ್ಯದಾನವಾಃ ।
ದದೃಶುಃ ಸರ್ವತೋ ರಾಮಂ ಹತಶೇಷಾ ಭಯಾನ್ವಿತಾಃ ॥ ೮೪ ॥

ಹತೇಷ್ವಸುರಸಂಘೇಷು ವಿದ್ರುತೇಷು ಚ ಕೃತ್ಸ್ನಶಃ ।
ರಾಮಮಾಮಂತ್ರ್ಯ ವಿಬುಧಾಃ ಪ್ರಯಯುಸ್ತ್ರಿದಿವಂ ಪುನಃ ॥ ೮೫ ॥

ರಾಮೋಽಪಿ ಹತ್ವಾ ದಿತಿಜಾನಭ್ಯನುಜ್ಞಾಪ್ಯ ಚಾಮರಾನ್ ।
ಸ್ವಮಾಶ್ರಮಂ ಸಮಾಪೇದೇ ತಪಶ್ಚರ್ಯಾಸಕ್ತ ಮಾನಸಃ ॥ ೮೬ ॥

ಮೃಗವ್ಯಾಧಪ್ರತಿಕೃತಿಂ ಕೃತ್ವಾ ಶಂಭೋರ್ಮಹಾಮತಿಃ ।
ಭಕ್ತ್ಯಾ ಸಂಪೂಜಯಾಮಾಸ ಸ ತಸ್ಮಿನ್ ಆಶ್ರಮೇ ವಶೀ ॥ ೮೭ ॥

ಗಂಧೈಃ ಪುಷ್ಪೈಸ್ತಥಾ ಹೃದ್ಯೈರ್ನೈವೇದ್ಯೈರಭಿವಂದನೈಃ ।
ಸ್ತೋತ್ರೈಶ್ಚ ವಿಧಿವದ್ಭಕ್ತ್ಯಾ ಪರಾಂ ಪ್ರೀತಿಮುಪಾನಯತ್ ॥ ೮೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಚತುರ್ವಿಂಶತಿತಮೋಽಧ್ಯಾಯಃ

---

೮೪. ರಾಮನಿಂದ ಸಮಸ್ತ ದೈತ್ಯರೂ ದಾನವರೂ ಕೊಲ್ಲಲ್ಪಡುತ್ತಿರಲಾಗಿ ಹತಶೇಷರಾದ ಕೆಲವು ಅಸುರರು ಭಯದಿಂದ ಮುಗ್ಧರಾಗಿ ಎಲ್ಲೆಲ್ಲಿಯೂ ರಾಮನನ್ನು ಕಂಡರು.

೮೫. ಈರೀತಿಯಾಗಿ ಅಸುರಸಂಘದಲ್ಲಿ ಕೆಲವರು ಸಂಹೃತರಾಗಿ ಮತ್ತೆ ಕೆಲವರು ಸಂಪೂರ್ಣ ಪಲಾಯನಮಾಡಲಾಗಿ ದೇವತೆಗಳು ರಾಮನನ್ನು ಕೇಳಿಕೊಂಡು ತಮ್ಮ ಆವಾಸವಾದ ಸ್ವರ್ಗಕ್ಕೆ ತೆರಳಿದರು.

೮೬. ರಾಮನೂ ಕೂಡ ಸಮಸ್ತ ದೈತ್ಯರನ್ನು ಕೊಂದು ದೇವತೆಗಳ ಅನುಮತಿ ಪಡೆದು ಮತ್ತೆ ತಪಶ್ಚರ್ಯೆಯಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ತನ್ನ ಆಶ್ರಮಕ್ಕೆ ಬಂದನು.

೮೭. ಮಹಾಜ್ಞಾನಿಯಾದ ಆ ರಾಮನು ಜಿತೇಂದ್ರಿಯನಾಗಿ ಮೃಗವ್ಯಾಧ ರೂಪಿಯಾದ ಶಂಭುವಿನ ಪ್ರತಿಮೆಯನ್ನು ಮಾಡಿಕೊಂಡು ಆ ಆಶ್ರಮದಲ್ಲಿ ಭಕ್ತಿಯಿಂದ ಪೂಜಿಸಿದನು.

೮೮. ಪೂಜಾಸಮಯದಲ್ಲಿ ವಿಧಿವತ್ತಾಗಿ ಪರಮಭಕ್ತಿಯಿಂದ ಗಂಧ, ಪುಷ್ಪ, ರುಚಿಕರವಾದ ನೈವೇದ್ಯ, ನಮಸ್ಕಾರ ಮತ್ತು ಸ್ತೋತ್ರರೂಪವಾದ ವಿವಿಧೋಪಚಾರಗಳನ್ನು ಅರ್ಪಿಸಿ ಶಿವನಿಗೆ ಅತಿಶಯ ಪ್ರೀತಿಯನ್ನು ಉಂಟುಮಾಡಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು.